# ಸಂವಾದತರಂಗಿಣಿ

(ಸ್ವಾಮಿ ವಿವೇಕಾನಂದರ ಸಂಭಾಷಣೆ)



# ಪ್ರಸ್ತಾವನೆ

ಸ್ವಾಮಿ ವಿವೇಕಾನಂದರು ಶಿಷ್ಯರೊಡನೆ ಮಾಡಿದ ಸಂಭಾಷಣೆ "ಸಂವಾದತರಂಗಿಣಿ" ಗ್ರಂಥದಲ್ಲಿರುವುದು. ಶಿಷ್ಯರ ಮನಸ್ಸಿನಲ್ಲಿ ಯಾವ ಯಾವ ಸಂದೇಹಗಳು ಮೂಡಿದವೊ, ಅದನ್ನೆಲ್ಲ ಸ್ವಾಮಿ ವಿವೇಕಾನಂದರಲ್ಲಿ ಕೇಳಿಕೊಂಡಿರುವರು. ಅದಕ್ಕೆ ತಕ್ಕ ಉತ್ತರವನ್ನು ಸ್ವಾಮಿ ವಿವೇಕಾನಂದರು ಮನಮುಟ್ಟುವಂತಹ ಭಾಷೆಯಲ್ಲಿ ಹೇಳಿರುವರು. ಯಾವುದು ತಮ್ಮ ಸಂದೇಹವನ್ನು ಪರಿಹರಿಸಿತೊ, ನವಶಕ್ತಿ ಚಿಲುಮೆ ತಮ್ಮ ಹೃದಯದಲ್ಲಿ ಪ್ರವಹಿಸುವಂತೆ ಮಾಡಿತೊ, ಅದೇ ಅಮೃತವನ್ನು ಉಳಿದವರೆಲ್ಲರೂ ಉಂಡು ಧನ್ಯರಾಗಲಿ ಎಂದು ಶಿಷ್ಯರು ವಂಗ ಭಾಷೆಯಲ್ಲಿ ಸಂವಾದವನ್ನು ಬರೆದು ಇಟ್ಟರು. ಈ ಗ್ರಂಥ ಅದರ ಭಾಷಾಂತರ.

ಸ್ವಾಮಿ ವಿವೇಕಾನಂದರ ಶೀಲದ ಬಹುಮುಖತೆಯನ್ನು ನೋಡಿ ಆನಂದಿಸಬೇಕೆನ್ನುವವರಿಗೆ ಈ ಸಂವಾದತರಂಗಿಣಿ ಒಂದು ಅಮೂಲ್ಯ ಗ್ರಂಥ. ಉಪನ್ಯಾಸ ವೇದಿಕೆಯ ಮೇಲೆ ನಿಂತು ಮಾತನಾಡುವಾಗ ಒಬ್ಬನ ಹೃದಯಾಂತರಾಳದಲ್ಲಿರುವ ಭಾವನೆಗಳನ್ನೆಲ್ಲ ಹೊರಗೆಡುವುದಕ್ಕೆ ಆಗುವುದಿಲ್ಲ. ಕೇಳುವ ಬಹುಪಾಲು ಜನರ ಬುದ್ಧಿಶಕ್ತಿಗೆ ನಿಲುಕುವಂತಹ ಕೆಲವು ವಿಷಯಗಳನ್ನು ಮಾತ್ರ ಹೇಳಬಹುದು. ಆದರೆ ತನ್ನ ಅಂತರತಮ ಭಾವನೆಗಳನ್ನೆಲ್ಲ ವ್ಯಕ್ತಗೊಳಿಸಬೇಕಾದರೆ ಅದಕ್ಕೆ ಸರಿಯಾದ ಪಾತ್ರ ಬೇಕಾಗಿದೆ. ಅದಕ್ಕೇ ಉಪನಿಷತ್ತು "ಆಶ್ಚರ್ಯೋವಕ್ತಾ ಕುಶಲೋಽಸ್ಯಲಬ್ಧಾ" ಎನ್ನುವುದು. ಕೇಳುವವನು ಕುಶಾಗ್ರಮತಿಯಾಗಿರಬೇಕು, ಉತ್ಸಾಹಪೂರಿತನಾಗಿರಬೇಕು, ಶ್ರದ್ಧೆ ಭಕ್ತಿಗಳಿಂದ ಪ್ರೇರಿತನಾಗಿರಬೇಕು. ಆಗ ಮಾತ್ರ ಗುರುವಿನ ಹೃದಯದಲ್ಲಿರುವ ಜ್ಞಾನಾಮೃತ ಶಿಷ್ಯನ ಉದ್ಧಾರಕ್ಕೆ ನಿರರ್ಗಳವಾಗಿ ಹರಿಯುವುದು, ಒಲುಮೆಯ ಎಳೆಗರು ತಾಯಿಯ ಕೆಚ್ಚಲನ್ನು ಮುಟ್ಟಿದಾಗ ಹಾಲು ಹರಿಯುವಂತೆ.

ಸ್ವಾಮಿ ವಿವೇಕಾನಂದರು ತಮ್ಮ ಶಿಷ್ಯರ ಮೂಲಕ ಇಡೀ ಭರತ ಖಂಡದ ಉದ್ಧಾರಕ್ಕೆ ಯಾವುದು ಅತ್ಯಾವಶ್ಯಕವೊ ಅದನ್ನೆಲ್ಲ ಸಿಡಿಗುಂಡಿನಂತಹ ಉಜ್ಜ್ವಲ ಭಾಷೆಯಲ್ಲಿ ವಿವರಿಸುವರು. ಧೀರ ವೀರ ದುರ್ದಮ್ಯ

ಸಾಹಸಿ ಪ್ರಚಂಡ ಮೇಧಾವಿ ವಿವೇಕಾನಂದರ ಹೃದಯ ಇಡೀ ಭರತ ಖಂಡಕ್ಕೆ ಹೇಗೆ ಮರುಗುತ್ತಿತ್ತು, ತಮ್ಮ ಮುಕ್ತಿಯನ್ನು ಈಡಾಡಿ ಮಾನವ ಕೋಟಿಗೆ ಅವರು ಎಂತಹ ಅನುಕಂಪ ತೋರುತ್ತಿದ್ದರು ಎಂಬುದನ್ನು ಇಲ್ಲಿ ನೋಡುವೆವು. ಅವರು ಚರ್ಚಿಸದ ಪ್ರಶ್ನೆಯೇ ಇಲ್ಲ ಈ ಸಂವಾದತರಂಗಿಣಿ ಯಲ್ಲಿ. ಚಿತ್ರ, ಸಂಗೀತ, ಸಾಹಿತ್ಯ, ತತ್ತ್ವ, ಭಕ್ತಿ ಮುಕ್ತಿ, ಇಂದಿನ ರಾಜಕಾರಣ ಪಟುಗಳಿಗೂ ತಲೆನೋವು ತರುವಂತಹ ಸಮಾಜ ಸುಧಾರಣೆಗಳು, ಎಲ್ಲದರ ಮೇಲೂ ನುರಿತ ತಮ್ಮ ಅಭಿಪ್ರಾಯವನ್ನು ಕೊಡುವರು. ಸ್ವಾಮಿಜೀ ಅವರದು ಅಧಿಕಾರವಾಣಿ. ಮುಕ್ತಾತ್ಮ ರವರು; ಪ್ರಾಚ್ಯ ಪಾಶ್ಚಾತ್ಯ ಸಂಸ್ಕೃತಿಯ ಹೃದಯಾಂತರಾಳವನ್ನು ಮನ ಗಂಡವರವರು; ವೇದ ಉಪನಿಷತ್ತಿನ ಋಷಿಗಳಿಗೆ ಜನ್ಮವಿತ್ತ ಭರತಖಂಡದ ಜನರಮೇಲೆ ಅಸೀಮ ಪ್ರೀತಿ ವಿಶ್ವಾಸ ಅವರಿಗೆ. ಅವರ ಹೃದಯದಲ್ಲಿ ಕ್ಷುದ್ರ ಜಾತಿ ಮತ ಪಥ ಸಿದ್ಧಾಂತಗಳಿಗೆ ಎಡೆಯಿಲ್ಲ. ಅವರೆದೆ ಮೇಲಿನ ಆಗಸದಷ್ಟು ವಿಶಾಲ, ಕೆಳಗಿನ ಗಂಭೀರ ಸಾಗರದಷ್ಟು ಆಳ. ಇಂತಹ ಮಹಾವ್ಯಕ್ತಿಯ ವದನದಿಂದ ಸಿಡಿವ ಆಲೋಚನೆಯೆಲ್ಲ ಮಾನವ ಕೋಟಿಯ ಹಿತಕ್ಕೆ, ಮಾನವ ಕೋಟಿಯ ಸುಖಕ್ಕೆ.

ಭರತಖಂಡ ಈಗತಾನೆ ಸ್ವರಾಜ್ಯವನ್ನು ಗಳಿಸಿದೆ. ಅಭ್ಯುದಯದ ಶಿಖರದೆಡೆಗೆ ಯಾತ್ರೆ ಹೊರಟಿದೆ. ಮಾರ್ಗದಲ್ಲಿ ಬರುವ ಎಡರು ತೊಡರು ಗಳಿಂದ ಪಾರಾಗಿ, ದೌರ್ಬಲ್ಯ ಸಂದೇಹಗಳನ್ನು ಕಿತ್ತೊಗೆಯಲು ಬೇಕಾಗುವ ಶಕ್ತಿ ಸಂಜೀವಿನಿಯನ್ನು ನೀಡಬಲ್ಲುದು ಯಾತ್ರಿಕರ ತಂಡಕ್ಕೆ ಸಂವಾದತರಂಗಿಣಿಯಲ್ಲಿರುವ ವಿವೇಕಾನಂದರ ವಾಣಿ.

ಪ್ರಕಾಶಕರು,
**ಶ್ರೀ ರಾಮಕೃಷ್ಣಾಶ್ರಮ,**
**ಮೈಸೂರು.**

# ಸಂವಾದತರಂಗಿಣಿ

## ಅಧ್ಯಾಯ ೧

### ಪ್ರಥಮ ದರ್ಶನ

**ಸ್ಥಳ :—ಬಾಗ್ ಬಜಾರ್, ಕಲ್ಕತ್ತ, ಪ್ರಿಯನಾಥ ಮುಖ್ಯೋಪಾಧ್ಯಾಯರ ಮನೆ**
**ಕ್ರಿ. ಶ. ೧೮೯೭.**

ಸ್ವಾಮಿ ವಿವೇಕಾನಂದರು ಮೊದಲು ಸಾರಿ ವಿಲಾಯತಿಯಿಂದ ಹಿಂತಿರುಗಿ ಹಿಂದುಸ್ಥಾನಕ್ಕೆ ಬಂದು ಕಲ್ಕತ್ತೆ ಸೇರಿ ಈಗ ಮೂರುನಾಲ್ಕು ದಿನಗಳಾಗಿವೆ. ಬಹುಕಾಲವಾದ ಬಳಿಕ ಅವರ ಪುಣ್ಯದರ್ಶನವನ್ನು ಪಡೆದ ಶ್ರೀ ರಾಮಕೃಷ್ಣ ಪರಮಹಂಸರ ಭಕ್ತರಿಗೆಲ್ಲಾ ಉಂಟಾಗಿದ್ದ ಆನಂದಕ್ಕೆ ಎಲ್ಲೆಯೆ ಇಲ್ಲ. ಅವರಲ್ಲಿ ಆನುಕೂಲ್ಯವಿದ್ದವರು ಈಗ ಸ್ವಾಮಿಜಿಯನ್ನು ತಮ್ಮ ತಮ್ಮ ಮನೆಗೆ ಭಿಕ್ಷೆಗೆ ಬರಮಾಡಿಕೊಂಡು ತಾವು ಕೃತಕೃತ್ಯರಾದೆವೆಂದು ತಿಳಿಯುತ್ತಿದ್ದರು. ಈ ದಿವಸ ಮಧ್ಯಾಹ್ನ ಬಾಗ್ ಬಜಾರಿನ ರಾಜವಲ್ಲಭ ಮೊಹಲ್ಲದಲ್ಲಿದ್ದ ಶ್ರೀ ರಾಮಕೃಷ್ಣಭಕ್ತರಾದ ಶ್ರೀಯುತ ಪ್ರಿಯನಾಥ ಮುಖ್ಯೋಪಾಧ್ಯಾಯರ ಮನೆಯಿಂದ ಸ್ವಾಮಿಜಿಗೆ ಆಹ್ವಾನ. ಈ ವರ್ತಮಾನವನ್ನು ತಿಳಿದು ಅನೇಕ ಭಕ್ತಜನರು ಅವರ ಮನೆಗೆ ಬಂದಿದ್ದಾರೆ. ಶಿಷ್ಯನೂ ಜನರ ಮೂಲಕ ಈ ಸುದ್ದಿಯನ್ನರಿತು ಮುಖ್ಯೋಪಾಧ್ಯಾಯರ ಮನೆಗೆ ಸುಮಾರು ಎರಡೂವರೆ ಗಂಟೆಯ ಹೊತ್ತಿಗೆ ಹೋಗಿದ್ದಾನೆ. ಸ್ವಾಮಿಜಿಯೊಡನೆ ಇದುವರೆಗೂ ಶಿಷ್ಯನು ಮಾತನಾಡಿದುದಿಲ್ಲ. ಶಿಷ್ಯನ ಜೀವನದಲ್ಲಿ ಸ್ವಾಮಿಜಿ ದರ್ಶನಲಾಭ ಇದೇ ಮೊದಲು.

ಶಿಷ್ಯನು ಬಂದೊಡನೆಯೇ ತುರೀಯಾನಂದ ಸ್ವಾಮಿಗಳು ಅವನನ್ನು ಸ್ವಾಮಿಗಳ ಹತ್ತಿರಕ್ಕೆ ಕರೆದುಕೊಂಡು ಹೋಗಿ ಪರಿಚಯಮಾಡಿಸಿದರು. ಸ್ವಾಮಿಗಳು ಮಠಕ್ಕೆ ಬಂದು ಶಿಷ್ಯರಚಿತವಾದ ಒಂದು ಶ್ರೀ ರಾಮಕೃಷ್ಣ ಸ್ತೋತ್ರವನ್ನು ಓದಿ ಇದಕ್ಕೆ ಹಿಂದೆಯೇ ಅವನ ವಿಷಯವನ್ನು ಕೇಳಿದ್ದರು. ಶ್ರೀ ರಾಮಕೃಷ್ಣಭಗವಾನರ ಭಕ್ತಶ್ರೇಷ್ಠರಾದ ನಾಗಮಹಾಶಯರ ಹತ್ತಿರ ಅವನು ಹೋಗಿ ಬರುತ್ತಿದ್ದನೆಂಬುದೂ ಸ್ವಾಮಿಗಳಿಗೆ ಗೊತ್ತಾಗಿತ್ತು.

ಶಿಷ್ಯನು ಸ್ವಾಮಿಜಿಗೆ ನಮಸ್ಕಾರಮಾಡಿ ಕುಳಿತುಕೊಳ್ಳಲು, ಸ್ವಾಮಿಜಿ ಅವನೊಡನೆ ಸಂಸ್ಕೃತದಲ್ಲಿ ಮಾತನಾಡುತ್ತ, ನಾಗಮಹಾ

ಶಯರ ಯೋಗಕ್ಷೇಮಾದಿಗಳನ್ನು ಕೇಳಿದರು; ಮತ್ತು ಅವರ ಅಸಾಧಾರಣ ತ್ಯಾಗ, ಉದ್ದಾಮ ಭಗವದನುರಾಗ ಮತ್ತು ದೈನ್ಯತೆ ಇವುಗಳ ವಿಷಯ ವನ್ನು ಕುರಿತು ಉಪನ್ಯಾಸಮಾಡುತ್ತ "ವಯಂ ತತ್ತ್ವಾನ್ವೇಷಾತ್ ಹತಾಃ ಮಧುಕರ ತ್ವಂ ಖಲು ಕೃತೀ"* ಎಂದು ಹೇಳಿ ಈ ವಿಷಯಗಳನ್ನೆಲ್ಲಾ ನಾಗಮಹಾಶಯರಿಗೆ ಕಾಗದ ಬರೆದು ತಿಳಿಸುವಹಾಗೆ ಶಿಷ್ಯನಿಗೆ ಅಪ್ಪಣೆ ಮಾಡಿದರು. ಆಮೇಲೆ ಜನರ ಗದ್ದಲದಲ್ಲಿ ಮಾತನಾಡುವುದಕ್ಕೆ ಅನುಕೂಲಿ ಸುವುದಿಲ್ಲವೆಂಬುದನ್ನು ತಿಳಿದು ಅವನನ್ನೂ ತುರೀಯಾನಂದ ಸ್ವಾಮಿ ಗಳನ್ನೂ ಪಶ್ಚಿಮದಿಕ್ಕಿನ ಚಿಕ್ಕ ಮನೆಗೆ ಕರೆದುಕೊಂಡು ಹೋಗಿ ಶಿಷ್ಯನ ಕಡೆಗೆ ತಿರುಗಿ, ವಿವೇಕ ಚೂಡಾಮಣಿಯ ಈ ವಾಕ್ಯಗಳನ್ನು ಹೇಳುವುದಕ್ಕೆ ಮೊದಲು ಮಾಡಿದರು.—

"ಮಾ ಭೈಷ್ಟ ವಿದ್ವಂಸ್ತವ ನಾಸ್ತ್ಯಪಾಯಃ
ಸಂಸಾರಸಿಂಧೋಸ್ತರಣೇಽಸ್ತ್ಯುಪಾಯಃ ।
ಯೇನೈವ ಯಾತಾ ಯತಯೋಽಸ್ಯ ಪಾರಂ
ತಮೇವ ಮಾರ್ಗಂ ತವ ನಿರ್ದಿಶಾಮಿ ॥

"ಎಲೈ ವಿದ್ವಾಂಸನೇ, ಭಯಪಡಬೇಡ, ನಿನಗೆ ಅಪಾಯವಿಲ್ಲ; ಸಂಸಾರ ಸಾಗರವನ್ನು ದಾಟುವುದಕ್ಕೆ ಉಪಾಯವಿದೆ; ಯಾವುದನ್ನು ಅವಲಂಬನಮಾಡಿಕೊಂಡು ಶುದ್ಧಸತ್ತ್ವರಾದ ಯೋಗಿಗಳು ಸಂಸಾರ ಸಾಗರವನ್ನು ದಾಟಿವರೋ ಅದೇ ಉತ್ಕೃಷ್ಟವಾದ ಮಾರ್ಗವನ್ನೇ ನಾನು ತೋರಿಸಿಕೊಡುತ್ತೇನೆ"—

ಶಂಕರಾಚಾರ್ಯರ "ವಿವೇಕಚೂಡಾಮಣಿ" ಎಂಬ ಗ್ರಂಥವನ್ನು ಓದುವಂತೆ ಅವನಿಗೆ ಅಪ್ಪಣೆ ಮಾಡಿದರು.

ಈ ಮಾತುಗಳನ್ನು ಕೇಳಿ ಶಿಷ್ಯನು "ಸ್ವಾಮಿಜಿ ಈ ರೀತಿಯಲ್ಲಿ ಮಂತ್ರದೀಕ್ಷೆಯನ್ನು ಗ್ರಹಣಮಾಡಲು ನನಗೆ ಸೂಚಿಸಿದರೇನು?" ಎಂದು ಯೋಚಿಸುವುದಕ್ಕೆ ಮೊದಲು ಮಾಡಿದನು. ಶಿಷ್ಯನು ಆವಾಗ ತುಂಬ ಆಚಾರಶೀಲ ಮತ್ತು ವೇದಾಂತಮತವಾದಿ. ಗುರುವನ್ನು ಆರಿಸಿಕೊಳ್ಳು ವುದರಲ್ಲಿ ಅವನ ಬುದ್ಧಿ ಇನ್ನೂ ಸ್ಥಿರವಾಗಿರಲಿಲ್ಲ; ಮತ್ತು ಅವನಿಗೆ ವರ್ಣಾಶ್ರಮ ಧರ್ಮದಲ್ಲಿ ತುಂಬ ಪಕ್ಷಪಾತ.

ನಾನಾ ಪ್ರಸ್ತಾಪಗಳು ಬಂದುವು. ಈ ಸಮಯದಲ್ಲಿ ಒಬ್ಬರು

---

* ಅಭಿಜ್ಞಾನ ಶಾಕುಂತಲ.

ಬಂದು "ಮಿರರ್ ಪತ್ರಿಕೆಯ ಸಂಪಾದಕರಾದ ಶ್ರೀಯುಕ್ತ ನರೇಂದ್ರನಾಥ ಸೇನರು ಸ್ವಾಮಿಜಿ ದರ್ಶನ ತೆಗೆದುಕೊಳ್ಳುವುದಕ್ಕೆ ಬಂದಿದ್ದಾರೆ" ಎಂದು ತಿಳಿಸಿದರು. ಸ್ವಾಮಿಜಿ ಈ ವರ್ತಮಾನವನ್ನು ತಂದಿದ್ದವರೊಡನೆ "ಅವರನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದು ಹೇಳಿದರು. ನರೇಂದ್ರ ಬಾಬು ಚಿಕ್ಕಮನೆಗೆ ಬಂದು ಕುಳಿತುಕೊಂಡು ಅಮೇರಿಕಾ ಇಂಗ್ಲೆಂಡ್ ಸಂಬಂಧವಾಗಿ ನಾನಾ ಪ್ರಶ್ನೆಗಳನ್ನು ಹಾಕುತ್ತಿದ್ದರು. ಈ ಪ್ರಶ್ನೋತ್ತರಗಳಲ್ಲಿ ಸ್ವಾಮಿಜಿ ಅಮೆರಿಕಾ ವಾಸಿಗಳಂಥ ಸಹೃದಯರೂ ಉದಾರಚಿತ್ತರೂ ಅತಿಥಿಸತ್ಕಾರ ಪರಾಯಣರೂ ಹೊಸ ಹೊಸ ಭಾವಗಳನ್ನು ಗ್ರಹಿಸುವುದರಲ್ಲಿ ವಿಶೇಷ ಉತ್ಸುಕರೂ ಆದ ಜನರು ಮತ್ತೊಬ್ಬರು ಕಂಡುಬರಲಾರರು– ಎಂದು ಅಭಿಪ್ರಾಯ ಪಟ್ಟಿದ್ದಲ್ಲದೆ, "ಅಮೆರಿಕಾದಲ್ಲಿ ಅಲ್ಪಸ್ವಲ್ಪವಾದರೂ ಕಾರ್ಯವು ಆಗಿರುವುದು ನಮ್ಮ ಸಾಮರ್ಥ್ಯದಿಂದಲ್ಲ; ಅಮೆರಿಕಾದೇಶದ ಜನರು ಅಷ್ಟು ಸಹೃದಯರಾದ್ದರಿಂದಲೇ ವೇದಾಂತದ ಅಭಿಪ್ರಾಯಗಳು ಅವರ ಮನಸ್ಸಿಗೆ ಹಿಡಿದುವು" ಎಂದು ಹೇಳಿದರು. ಇಂಗ್ಲೆಂಡಿನ ವಿಚಾರವನ್ನು ಕುರಿತು ಅವರು ಹೇಳಿದುದೇನೆಂದರೆ:—"ಇಂಗ್ಲಿಷಿನವರಂಥ ಪ್ರಾಚೀನ ರೀತಿ ನೀತಿಗಳ ಮೇಲೆ ಪಕ್ಷಪಾತವಿರುವ ಜನರು ಜಗತ್ತಿನಲ್ಲಿ ಇನ್ನೊಬ್ಬರು ಇಲ್ಲ. ಅವರು ಯಾವ ಹೊಸ ಭಾವವನ್ನೂ ಸುಲಭವಾಗಿ ಗ್ರಹಿಸಲು ಶಕ್ತರಲ್ಲ. ಆದರೆ ಪಟ್ಟು ಹಿಡಿದು ಒಂದು ಸಾರಿ ಯಾವುದಾದರೊಂದು ಅಭಿಪ್ರಾಯವನ್ನು ಅವರಿಗೆ ತಿಳಿಸಿಬಿಟ್ಟರೆ ಆಮೇಲೆ ಏನು ಮಾಡಿದರೂ ಅದನ್ನು ಅವರು ಬಿಡುವುದಿಲ್ಲ. ಇಂಥ ದೃಢ ಪ್ರತಿಜ್ಞತೆ ಮತ್ತಾವ ಜನರಲ್ಲಿಯೂ ದೊರೆಯುವುದಿಲ್ಲ. ಇದಕ್ಕೋಸ್ಕರವೇ ಅವರು ನಾಗರಿಕತೆಯಲ್ಲಿಯೂ ಸಾಮರ್ಥ್ಯದಲ್ಲಿಯೂ ಪ್ರಪಂಚದಲ್ಲಿ ಸರ್ವಶ್ರೇಷ್ಠವಾದ ಸ್ಥಾನವನ್ನು ಪಡೆದು ಅಧಿಕಾರ ಮಾಡುತ್ತಾ ನಿಂತಿದ್ದಾರೆ."

ಆಮೇಲೆ, ಸಮರ್ಥರಾದ ಪ್ರಚಾರಕರು ದೊರಕಿದರೆ ಅಮೆರಿಕಾಕ್ಕಿಂತಲೂ ಇಂಗ್ಲೆಂಡಿನಲ್ಲಿಯೇ ವೇದಾಂತ ಪ್ರಚಾರಕಾರ್ಯ ಸ್ಥಾಯಿಯಾಗಿ ನಿಲ್ಲುವುದು ಹೆಚ್ಚು ಸಂಭವವೆಂದು ತಿಳಿಸಿ, "ನಾನು ಕಾರ್ಯವನ್ನು ಆರಂಭಿಸಿ ಮಾತ್ರ ಬಂದಿದ್ದೇನೆ; ಅಷ್ಟೆ; ಮುಂದೆ ಪ್ರಚಾರಕರು ಇದೇ ಮಾರ್ಗವನ್ನು ಅನುಸರಿಸಿದರೆ, ಸಕಾಲದಲ್ಲಿ ಬಹು ಕೆಲಸ ಆಗುವುದು" ಎಂದರು.

ನರೇಂದ್ರ ಬಾಬು "ಹೀಗೆ ಧರ್ಮ ಪ್ರಚಾರ ಮಾಡುವುದರ ಮೂಲಕ

ಮುಂದೆ ನಮಗೆ ಏನು ಉಪಕಾರ ಆಗಬಹುದು?'' ಎಂದು ಪ್ರಶ್ನೆ ಮಾಡಿದರು.

ಸ್ವಾಮಿಜಿ :—''ನಮ್ಮ ದೇಶದಲ್ಲಿ ಇರುವುದು ಇದೊಂದು ವೇದಾಂತ ಧರ್ಮ ಮಾತ್ರ; ಪಾಶ್ಚಾತ್ಯ ನಾಗರಿಕತೆಯೊಡನೆ ಹೋಲಿಸಿ ನೋಡಿದರೆ ನಮಗೆ ಮತ್ತೇನೂ ಇಲ್ಲವೇ ಇಲ್ಲವೆಂದು ಹೇಳಬಹುದು. ಆದರೆ ಸಕಲ ಮತದ ಮತ್ತು ಸಕಲ ಪಥದ ಜನರಿಗೂ ಧರ್ಮ ಲಾಭದಲ್ಲಿ ಸಮಾನ ಅಧಿಕಾರವನ್ನು ಕೊಡುವ ಈ ಸಾರ್ವಭೌಮಿಕ ವೇದಾಂತವಿದೆಯಲ್ಲಾ, ಇದರ ಪ್ರಚಾರದಿಂದ ಪಾಶ್ಚಾತ್ಯ ನಾಗರಿಕ ಜಗತ್ತಿಗೆ, ಭರತಖಂಡದಲ್ಲಿ ಒಂದಾನೊಂದು ಕಾಲದಲ್ಲಿ ಎಂಥ ಆಶ್ಚರ್ಯಕರವಾದ ಧರ್ಮಭಾವದ ಸ್ಫೂರ್ತಿಯುಂಟಾಗಿತ್ತು ಮತ್ತೂ ಈಗಲೂ ಇದೆ ಎಂಬುದು ಗೊತ್ತಾಗುತ್ತದೆ. ಈ ಮತದ ವಿಚಾರದಿಂದ ಪಾಶ್ಚಾತ್ಯ ಜನರಿಗೆ ನಮ್ಮ ವಿಷಯದಲ್ಲಿ ಆಸಕ್ತಿಯೂ ಸಹಾನುಭೂತಿಯೂ ಉಂಟಾಗುತ್ತವೆ – ಈಗಾಗಲೆ ಎಷ್ಟೊ ಆಗಿದೆ. ಹೀಗೆ ನಿಜವಾದ ಆಸಕ್ತಿಯೂ ಸಹಾನುಭೂತಿಯೂ ಉಂಟಾದರೆ, ಒಂದು ಕಡೆ ನಾವು ಅವರಿಂದ ಐಹಿಕ ಜೀವನಕ್ಕೆ ಬೇಕಾದ ವಿಜ್ಞಾನ ಶಾಸ್ತ್ರಾದಿಗಳನ್ನು ಕಲಿತುಕೊಂಡು ಜೀವನ ಸಂಗ್ರಾಮದಲ್ಲಿ ಹೆಚ್ಚು ಚುರುಕಿನಿಂದ ಕೆಲಸ ಮಾಡುವೆವು. ಮತ್ತೊಂದುಕಡೆ ಅವರು ನಮ್ಮಿಂದ ವೇದಾಂತ ಮತವನ್ನು ಕಲಿತು ಪಾರಮಾರ್ಥಿಕವಾದ ಕಲ್ಯಾಣವನ್ನು ಪಡೆಯುವರು.''

ನರೇಂದ್ರ ಬಾಬು :—''ಈ ಆದಾನ ಪ್ರದಾನಗಳಿಂದ ನಮಗೆ ಯಾವುದಾದರೂ ಒಂದು ವಿಧವಾದ ರಾಜಕೀಯ ಉನ್ನತಿಯುಂಟಾಗುವ ಪ್ರತ್ಯಾಶೆಯುಂಟೆ?'' ಎಂದು ಕೇಳಿದರು.

ಸ್ವಾಮಿಜಿ ಉತ್ತರ ಕೊಟ್ಟದ್ದೇನೆಂದರೆ :—''ಅವರು ಪಾಶ್ಚಾತ್ಯರು ಮಹಾ ಪರಾಕ್ರಮಶಾಲಿಯಾದ ವಿರೋಚನನ ಸಂತಾನರು. ಅವರ ಸಾಮರ್ಥ್ಯದಿಂದ ಪಂಚಭೂತಗಳೂ ಆಟದ ಬೊಂಬೆಗಳಂತೆ ಕೆಲಸ ಮಾಡುತ್ತವೆ; ಅವರೊಡನೆ ಸೇರಿ ಈ ಸ್ಥೂಲ ಪಾಂಚಭೌತಿಕ ಶಕ್ತಿಯನ್ನು ಪ್ರಯೋಗಿಸಿಯೇ ಸ್ವತಂತ್ರರಾಗುತ್ತೇವೆಂದು ನೀವು ತಿಳಿದುಕೊಂಡಿದ್ದರೆ ಅದು ದೊಡ್ಡ ತಪ್ಪು. ಹಿಮಾಲಯದ ಮುಂದೆ ಒಂದು ಸಾಮಾನ್ಯವಾದ ಕಲ್ಲಿನ ಚೂರು ಹೇಗೊ ಈ ಶಕ್ತಿ ಪ್ರಯೋಗ ಕುಶಲತೆಯಲ್ಲಿ ಅವರಿಗೂ ನಮಗೂ ಅಷ್ಟು ಭೇದ. ನನ್ನ ಅಭಿಪ್ರಾಯವೇನು ಬಲ್ಲಿರಾ?—ನಾವು ಈ ರೀತಿಯಲ್ಲಿ ವೇದಾಂತೋಕ್ತ ಧರ್ಮದ ಗೂಢರಹಸ್ಯವನ್ನು ಪಾಶ್ಚಾತ್ಯ ಜಗತ್ತಿನಲ್ಲಿ

ಪ್ರಚಾರಮಾಡಿ ಈ ಮಹಾ ಶಕ್ತಿಧರರ ವಿಶ್ವಾಸವನ್ನೂ ಸಹಾನುಭೂತಿಯನ್ನೂ ಆಕರ್ಷಣೆ ಮಾಡಿಕೊಂಡು ಧಾರ್ಮಿಕ ವಿಚಾರದಲ್ಲಿ ಬಹುಕಾಲ ಅವರಿಗೆ ಗುರುಸ್ಥಾನದಲ್ಲಿರುವೆವು ; ಅವರೂ ಇಹಲೋಕದ ನಾನಾ ವಿಷಯಗಳಲ್ಲಿ ನಮಗೆ ಗುರುಗಳಾಗಿರುವರು. ಧರ್ಮವೆಂಬ ಪದಾರ್ಥವನ್ನು ಅವರ ಕೈಗೆ ಹಾಕಿಬಿಟ್ಟು ಭಾರತೀಯರು ಎಂದು ಪಾಶ್ಚಾತ್ಯರ ಪದತಲದಲ್ಲಿ ಧರ್ಮವನ್ನು ಕಲಿಯುತ್ತ ಕುಳಿತುಕೊಳ್ಳುವರೊ ಅಂದೆ ಈ ಅಧಃಪತಿತರಾದ ಜನರ ಜಾತಿತ್ವವು ಒಟ್ಟಿಗೆ ಹೋಗಿಬಿಡುವುದು. ಹಗಲೂ ಇರುಳೂ ಅರಚುತ್ತ ಅವರನ್ನು 'ಇದುಕೊಡಿ' 'ಅದುಕೊಡಿ' ಎಂದು ಕೇಳುತ್ತಿದ್ದರೆ ಏನೂ ಆಗುವುದಿಲ್ಲ. ಈ ಆದಾನಪ್ರದಾನ ರೂಪವಾದ ಕಾರ್ಯದ ಮೂಲಕ ಯಾವಾಗ ಎರಡು ಪಕ್ಷದವರಲ್ಲಿಯೂ ವಿಶ್ವಾಸವೂ ಸಹಾನುಭೂತಿಯೂ ಪ್ರಬಲವಾಗಿ ನಿಲ್ಲುತ್ತದೋ ಆಗ ಈ ಗದ್ದಲ ನಿಲ್ಲುವುದು. ಅವರು ತಾವೇ ಎಲ್ಲವನ್ನೂ ಮಾಡುವರು. ಹೀಗೆ ಧಾರ್ಮಿಕ ಚರ್ಚೆಯಿಂದಲೂ ವೇದಾಂತ ಧರ್ಮದ ಅತಿಶಯವಾದ ಪ್ರಚಾರದಿಂದಲೂ ಈ ದೇಶ ಪಾಶ್ಚಾತ್ಯ ದೇಶ ಎರಡಕ್ಕೂ ವಿಶೇಷ ಲಾಭವಾಗುವುದೆಂದು ನನ್ನ ನಂಬುಗೆ. ಇದರೊಡನೆ ಹೋಲಿಸಿ ನೋಡಿದರೆ ರಾಜನೀತಿ ವಿಷಯಕವಾದ ಚರ್ಚೆ ಗೌಣ ಮಾರ್ಗವೆಂದು ತೋರುವುದು. ನಾನು ಈ ನಂಬುಗೆಯನ್ನು ಕಾರ್ಯ ರೂಪವಾಗಿ ಪರಿಣಾಮಗೊಳಿಸುವುದರಲ್ಲಿಯೆ ನನ್ನ ಜೀವನವನ್ನು ಅರ್ಪಿಸುವೆನು. ಭರತಖಂಡಕ್ಕೆ ಮತ್ತಾವುದಾದರೂ ವಿಧದಲ್ಲಿ ಮಂಗಳವಾಗುವುದೆಂದು ತಾವು ತಿಳಿದುಕೊಂಡಿದ್ದರೆ ತಾವು ಬೇರೆ ವಿಧದಲ್ಲಿ ಉದ್ಯೋಗ ಮಾಡುತ್ತಹೋಗಿ.''

ನರೇಂದ್ರ ಬಾಬು ಸ್ವಾಮಿಜಿ ಮಾತಿಗೆ ಪ್ರತಿ ಹೇಳದೆ ಒಪ್ಪಿಕೊಂಡು ಸ್ವಲ್ಪ ಹೊತ್ತಿನ ಮೇಲೆ ಎದ್ದು ಹೊರಟು ಹೋದರು. ಶಿಷ್ಯನು ಸ್ವಾಮಿಗಳ ಪೂರ್ವೋಕ್ತವಾದ ಮಾತನ್ನೆಲ್ಲಾ ಕೇಳಿ ಸ್ಥಂಭೀಭೂತನಾಗಿ ಅವರ ದೀಪ್ತವಾದ ಮೂರ್ತಿಯ ಕಡೆಗೆ ಎವೆಯಿಕ್ಕದೆ ನೋಡುತ್ತಿದ್ದನು.

ನರೇಂದ್ರ ಬಾಬುಗಳು ಹೊರಟು ಹೋದ ಮೇಲೆ, ಗೋರಕ್ಷಣೀ ಸಭೆಗಾಗಿ ಕೆಲಸಮಾಡುತ್ತಿದ್ದ ಪ್ರಚಾರಕನೊಬ್ಬನು ಸ್ವಾಮಿಜಿ ದರ್ಶನಕ್ಕಾಗಿ ಬಂದನು. ಆತನ ವೇಷಭೂಷಾದಿಗಳು ಪೂರ್ತಿಯಾಗಿ ಇಲ್ಲದಿದ್ದರೂ ಬಹಳ ಮಟ್ಟಿಗೆ ಸನ್ಯಾಸಿಗಳ ಹಾಗೆ; ತಲೆಗೆ ಕಾವಿಯ ಬಣ್ಣದ ಕುಲಾವಿ; ನೋಡಿದ ಕೂಡಲೇ ಉತ್ತರ ಹಿಂದೂಸ್ಥಾನದವನೆಂದು ಹೇಳಬಹುದು. ಈ ಗೋರಕ್ಷಾ ಪ್ರಚಾರಕನು ಬಂದಿದ್ದ ವರ್ತಮಾನವನ್ನು ಕೇಳಿ ಸ್ವಾಮಿಜಿ

ಹೊರಗಿನ ಮನೆಗೆ ಬಂದರು. ಪ್ರಚಾರಕನು ಸ್ವಾಮಿಜಿಯನ್ನು ಅಭಿವಂದಿಸಿ ಗೋಮಾತೆಯ ಒಂದು ಚಿತ್ರವನ್ನು ಅವರಿಗೆ ಸಮರ್ಪಿಸಿದನು. ಸ್ವಾಮಿಜಿ ಅದನ್ನು ತೆಗೆದುಕೊಂಡು ಹತ್ತಿರದಲ್ಲಿ ಒಬ್ಬರ ಕೈಯಲ್ಲಿ ಕೊಟ್ಟು ಆತನೊಡನೆ ಮುಂದೆ ಹೇಳುವಂತೆ ಸಂಭಾಷಣ ಮಾಡಿದರು.

ಸ್ವಾಮಿಜಿ:—ತಮ್ಮ ಸಭೆಯ ಉದ್ದೇಶವೇನು?

ಪ್ರಚಾರಕ:—ನಮ್ಮ ದೇಶದ ಗೋಮಾತೆಯನ್ನು ಕಟುಕರ ಕೈಯಿಂದ ತಪ್ಪಿಸಿ ಕಾಪಾಡುತ್ತಿದ್ದೇವೆ. ಅಲ್ಲಲ್ಲಿ ದೊಡ್ಡಿಗಳು ಸ್ಥಾಪಿಸಲ್ಪಟ್ಟಿವೆ— ಅವುಗಳಲ್ಲಿ ಖಾಯಿಲೆಯ, ಕೈಲಾಗದ ಮತ್ತು ಕಟುಕರಿಂದ ಕೊಂಡುತಂದ ಗೋಮಾತೆಯನ್ನು ರಕ್ಷಿಸುತ್ತೇವೆ.

ಸ್ವಾಮಿಜಿ:—ಇದು ಬಹು ಒಳ್ಳೆಯ ಕೆಲಸ; ತಮ್ಮ ಸಂಪಾದನೆಗೆ ಮಾರ್ಗ?

ಪ್ರಚಾರಕ:—ದಯಾಪರರಾದ ತಮ್ಮಂಥವರು ಏನಾದರೂ ಕೊಡುತ್ತಾರೆಯಲ್ಲ, ಅದರಿಂದಲೇ ಸಭೆಯ ಈ ಕಾರ್ಯ ನಡೆಯುವುದು.

ಸ್ವಾಮಿಜಿ:—ನಿಮ್ಮ ಹತ್ತಿರ ಮೂಲಧನ ಎಷ್ಟು ರೂಪಾಯಿ ಇದೆ?

ಪ್ರಚಾರಕ:—ಮಾರವಾಡಿ ವರ್ತಕರು ಈ ಕಾರ್ಯಕ್ಕೆ ಒಳ್ಳೆಯ ಪೋಷಕರಾಗಿದ್ದಾರೆ. ಅವರು ಈ ಸತ್ಕಾರ್ಯಕ್ಕಾಗಿ ಬಹು ದ್ರವ್ಯವನ್ನು ಕೊಟ್ಟಿದ್ದಾರೆ.

ಸ್ವಾಮಿಜಿ:—ಮಧ್ಯ ಹಿಂದೂಸ್ಥಾನದಲ್ಲಿ ಇಂಥ ಭಯಂಕರವಾದ ಕ್ಷಾಮ ಬಂದಿದೆ– ಹೊಟ್ಟೆಗಿಲ್ಲದೆ ಒಂದು ಲಕ್ಷ ಜನರು ಸತ್ತು ಹೋದರೆಂದು ಇಂಡಿಯಾ ಸರ್ಕಾರದವರು ಪಟ್ಟಿ ಕೊಟ್ಟಿದ್ದಾರೆ. ನಿಮ್ಮ ಸಭೆ ಈ ದುರ್ಭಿಕ್ಷ ಕಾಲದಲ್ಲಿ ಏನಾದರೂ ಸಹಾಯಮಾಡುವುದಕ್ಕೆ ಏರ್ಪಾಡು ಮಾಡಿದೆಯೇನು?

ಪ್ರಚಾರಕ:—ನಾವು ದುರ್ಭಿಕ್ಷ ಮೊದಲಾದುವುಗಳಲ್ಲಿ ಸಹಾಯ ಮಾಡುವುದಿಲ್ಲ. ಕೇವಲ ಗೋಮಾತೆಯ ರಕ್ಷಣೆಗೆ ಈ ಸಭೆ ಸ್ಥಾಪಿಸಲ್ಪಟ್ಟಿರುವುದು.

ಸ್ವಾಮಿಜಿ:—ಅಣ್ಣ ತಮ್ಮಂದಿರಾದ ನಿಮ್ಮ ದೇಶದ ಜನರು ಲಕ್ಷಗಟ್ಟಲೆ ಮೃತ್ಯುವಿನ ಬಾಯಲ್ಲಿ ಬೀಳುತ್ತಿರಲು, ಕೈಯಲ್ಲಾಗುತ್ತಿದ್ದರೂ ಇಂಥ ಭಯಂಕರವಾದ ದುಷ್ಕಾಲದಲ್ಲಿ ಅವರಿಗೆ ಅನ್ನಕೊಟ್ಟು ಸಹಾಯ ಮಾಡುವುದು ಯುಕ್ತವೆಂಬುದು ಮನಸ್ಸಿಗೆ ತೋರಲಿಲ್ಲವೊ?

ಪ್ರಚಾರಕ:—ಇಲ್ಲ; ಜನರ ಕರ್ಮಫಲದಿಂದ—ಪಾಪದಿಂದ—ಈ ಕ್ಷಾಮ ಬಂದಿದೆ; ಕರ್ಮಕ್ಕೆ ತಕ್ಕ ಫಲವಾಗಿದೆ.

ಪ್ರಚಾರಕನ ಮಾತನ್ನು ಕೇಳಿ ಸ್ವಾಮಿಜಿಯ ಆ ವಿಶಾಲವಾದ ಕಣ್ಣು ಗಳಲ್ಲಿ ಬೆಂಕಿಯ ಕಿಡಿಗಳು ಉದಿರುವಂತೆ ಕಂಡಿತು; ಮುಖ ಕೆಂಪಗಾಯಿತು. ಆದರೆ ಮನಸ್ಸಿನ ಭಾವವನ್ನು ಬಿಗಿ ಹಿಡಿದುಕೊಂಡು ಹೇಳಿದ್ದೇನೆಂದರೆ:— "ಯಾವ ಸಭಾ ಸಮಿತಿಗಳು ಮನುಷ್ಯರಲ್ಲಿ ಸಹಾನುಭೂತಿಯನ್ನು ತೋರಿಸದೆ, ತಮ್ಮ ಅಣ್ಣ ತಮ್ಮಂದಿರು ಹೊಟ್ಟೆಗಿಲ್ಲದೆ ಸಾಯುತ್ತಿದ್ದಾರೆಂದು ನೋಡಿಯೂ ಅವರ ಜೀವವನ್ನು ಉಳಿಸುವುದಕ್ಕಾಗಿ ಒಂದು ತುತ್ತು ಅನ್ನವನ್ನು ಕೊಡದೆ ಪಶುಪಕ್ಷಿಗಳ ರಕ್ಷಣೆಗಾಗಿ ರಾಶಿರಾಶಿ ಅನ್ನವನ್ನು ದಾನಮಾಡುತ್ತವೆಯೋ, ಅವುಗಳೊಡನೆ ನನಗೆ ಸ್ವಲ್ಪವೂ ಸಹಾನುಭೂತಿಯಿಲ್ಲ. ಅವುಗಳಿಂದ ಸಮಾಜಕ್ಕೆ ಹೆಚ್ಚು ಉಪಕಾರವಾಗುತ್ತದೆಂದು ನಾನು ನಂಬುವುದಿಲ್ಲ. ಕರ್ಮಫಲದಿಂದ ಜನರು ಸಾಯುತ್ತಾರೆ. ಹೀಗೆ ಕರ್ಮದ ನೆವವನ್ನು ಹೇಳುವುದಾದರೆ ಜಗತ್ತಿನಲ್ಲಿ ಯಾವ ವಿಷಯದಲ್ಲಿಯೂ ಕೆಲಸ ಮಾಡುವುದೇ ನಿಷ್ಪ್ರಯೋಜನವೆಂದು ಒಟ್ಟಗೆ ನಿಶ್ಚಯಿಸಬಹುದು. ನಿಮ್ಮ ಪಶುರಕ್ಷಣೆಯ ಕೆಲಸವೂ ಆಮೇಲೆ ನಡೆಯುವುದಿಲ್ಲ. ಈ ಕೆಲಸದ ವಿಚಾರದಲ್ಲಿಯೂ "ಗೋಮಾತೆಗಳು ತಮ್ಮತಮ್ಮ ಕರ್ಮಫಲದಿಂದಲೇ ಕಟುಕರ ಕೈಗೆ ಹೋಗುತ್ತವೆ ಮತ್ತು ಸಾಯುತ್ತವೆ; ಆದ್ದರಿಂದ ಅದಕ್ಕೆ ನಾವು ಏನೂ ಮಾಡಬೇಕಾದ ಅವಶ್ಯಕತೆ ಇಲ್ಲ" ಎಂದು ಹೇಳಬಹುದು.

ಪ್ರಚಾರಕನು ಸ್ವಲ್ಪ ಅಪ್ರತಿಭನಾಗಿ ಹೇಳಿದ್ದೇನೆಂದರೆ:—"ತಾವು ಹೇಳುವುದೇನೋ ನಿಜ; ಆದರೆ 'ಹಸು ನಮಗೆ ತಾಯಿ' ಯೆಂದು ಶಾಸ್ತ್ರ ಹೇಳುತ್ತದೆ."

ಸ್ವಾಮಿಜಿ ನಗುತ್ತ ನಗುತ್ತ "ಹಸು ನಮ್ಮ ತಾಯಿಯೆಂಬುದನ್ನು ನಾನು ವಿಲಕ್ಷಣವಾಗಿ ಅರ್ಥ ಮಾಡಿಕೊಂಡಿದ್ದೇನೆ—ಇಲ್ಲದಿದ್ದರೆ ಇಂಥ ಧನ್ಯರಾದ ಪುತ್ರರನ್ನೆಲ್ಲಾ ಇನ್ನು ಯಾರು ಹೆತ್ತಾರು?"

ಆ ಹಿಂದೂಸ್ಥಾನಿ ಪ್ರಚಾರಕನು ಈ ವಿಷಯದಲ್ಲಿ ಮತ್ತೇನನ್ನೂ ಹೇಳದೆ—(ಸ್ವಾಮಿಜಿ ವ್ಯಂಗ್ಯವಾಗಿ ಅಪಹಾಸ್ಯಮಾಡಿದ್ದನ್ನು ಆತನು ಅರ್ಥ ಮಾಡಿಕೊಳ್ಳಲಾರದೆ ಹೋದನೆಂದು ತೋರುತ್ತದೆ)—ಸ್ವಾಮಿಜಿ ಕುರಿತು ಈ ಸಭೆಗಾಗಿ ಅವರಿಂದ ತಾನು ಏನನ್ನಾದರೂ ಭಿಕ್ಷೆಬೇಡುವುದಾಗಿ ತಿಳಿಸಿದನು.

ಸ್ವಾಮಿಜಿ :—ನನ್ನನ್ನು ನೋಡಿದರೆ ಸನ್ಯಾಸಿ; ಭಿಕ್ಷುದವನು; ನಿಮಗೆ ಸಹಾಯಮಾಡುವುದಕ್ಕೆ ನಾನು ಹಣವನ್ನು ಎಲ್ಲಿಂದ ತರಲಿ? ನನ್ನ ಕೈಯಲ್ಲಿ ಏನಾದರೂ ಯಾವಾಗಲಾದರೂ ಹಣವಿದ್ದರೆ ಅದನ್ನು ಮೊದಲು ಮನುಷ್ಯ ಸೇವೆಯಲ್ಲಿ ವೆಚ್ಚಮಾಡುತ್ತೇನೆ; ಮನುಷ್ಯನನ್ನು ಮೊದಲು ಬದುಕಿಸಿಕೊಳ್ಳಬೇಕು—ಅನ್ನದಾನ, ವಿದ್ಯಾದಾನ, ಧರ್ಮದಾನಗಳನ್ನು ಮಾಡಬೇಕು. ಇದೆಲ್ಲವನ್ನೂ ಮಾಡಿ ಹಣ ಮಿಕ್ಕರೆ, ಆಗ ನಿಮ್ಮ ಸಭೆಗೆ ಏನಾದರೂ ಸ್ವಲ್ಪ ಕೊಡುವುದಕ್ಕೆ ಬಂದೇನು."

ಈ ಮಾತನ್ನು ಕೇಳಿ ಪ್ರಚಾರಕ ಮಹಾಶಯನು ಸ್ವಾಮಿಗಳಿಗೆ ನಮಸ್ಕರಿಸಿ ಹೊರಟುಹೋದನು. ಆಗ ಸ್ವಾಮಿಜಿ ನಮಗೆ ಹೇಳುವುದಕ್ಕೆ ಮೊದಲು ಮಾಡಿದರು—"ಆತನು ಹೇಳಿದ್ದೇನು! ಕರ್ಮಫಲದಿಂದ ಮನುಷ್ಯರು ಸತ್ತು ಹೋಗುತ್ತಾರೆ. ಅವರಿಗೆ ದಯೆತೋರಿಸಿದರೆ ಆಗುವುದೇನು?—ಎಂದು ಹೇಳಿದನಲ್ಲವೇ? ದೇಶ ತೀರ ಹೀನಸ್ಥಿತಿಗೆ ಬಂದಿದೆಯೆಂಬುದಕ್ಕೆ ಇದು ದೊಡ್ಡ ಸಾಕ್ಷಿಯಾಗಿದೆ. ನಿಮ್ಮ ಹಿಂದೂ ಧರ್ಮದ ಕರ್ಮವಾದ ಎಲ್ಲಿಗೆ ಬಂದು ನಿಂತುಕೊಂಡಿದೆ ನೋಡಿದೆಯೊ? ಮನುಷ್ಯರ ಕಷ್ಟಕ್ಕಾಗಿ ಅನುಕಂಪದಿಂದ ದುಃಖಿಸದ ಮನುಷ್ಯನಿದ್ದರೆ ಅಂಥವನು ಮನುಷ್ಯನೆ?"—ಈ ಮಾತುಗಳನ್ನು ಆಡುತ್ತ ಆಡುತ್ತ ಸ್ವಾಮಿಜಿಯ ಆದ್ಯಂತ ದೇಹವೂ ಚಿತ್ತಕ್ಷೋಭದಿಂದಲೂ ದುಃಖದಿಂದಲೂ ರೋಮಾಂಚವಾದಂತಾಯಿತು.

ಅನಂತರ ಸ್ವಾಮಿಜಿ ತಂಬಾಕನ್ನು ಸೇದುತ್ತಾ ಶಿಷ್ಯನನ್ನು ಕುರಿತು "ಪುನಃ ಬಂದು ನನ್ನನ್ನು ನೋಡು" ಎಂದು ಹೇಳಿದರು.

ಶಿಷ್ಯ :—ತಾವು ಎಲ್ಲಿರುತ್ತೀರಿ? ಯಾರೋ ದೊಡ್ಡಮನುಷ್ಯರ ಮನೆಯಲ್ಲಿ ಇರುತ್ತೀರಿ ಎಂದು ತೋರುತ್ತದೆ. ಅಲ್ಲಿಗೆಲ್ಲಾ ನಾನು ಬರಬಹುದೆ?

ಸ್ವಾಮಿಜಿ :—ಸದ್ಯದಲ್ಲಿ ನಾನು ಆಲಂಬಜಾರ್ ಮಠದಲ್ಲಿ ಸ್ವಲ್ಪ ಕಾಲವೂ ಗೋಪಾಲ ಲಾಲ ಶೀಲರ ತೋಟದಲ್ಲಿರುವ ಮನೆಯಲ್ಲಿ ಸ್ವಲ್ಪ ಕಾಲವೂ ಇರುತ್ತೇನೆ. ನೀನು ಅಲ್ಲಿಗೆ ಬರಬಹುದು.

ಶಿಷ್ಯ :—ಮಹಾಶಯರೇ, ತಮ್ಮ ಜೊತೆಯಲ್ಲಿ ಯಾರೂ ಇಲ್ಲದಾಗ ಮಾತನಾಡಬೇಕೆಂದು ತುಂಬಾ ಆಶೆಯಿದೆ.

ಸ್ವಾಮಿಜಿ :—ಹಾಗೇ ಆಗಲಿ,— ಒಂದು ದಿನ ರಾತ್ರಿ ಬಂದುಬಿಡು, ಬರಿಯ ವೇದಾಂತ ವಿಚಾರವೇ ಆಗಲಿ!

ಶಿಷ್ಯ :—ಮಹಾಶಯರೇ! ತಮ್ಮೊಡನೆ ಕೆಲವು ಇಂಗ್ಲೀಷ್ ಮತ್ತು ಅಮೆರಿಕನ್ ಜನರು ಬಂದಿದ್ದಾರೆಂದು ಕೇಳಿದೆ; ಅವರು ನಮ್ಮ ವೇಷ ಭೂಷಣಗಳನ್ನೂ ಮಾತು ಕಥೆಗಳನ್ನೂ ನೋಡಿ ಅಸಮಾಧಾನ ಪಟ್ಟು ಕೊಳ್ಳುವುದಿಲ್ಲವಷ್ಟೆ?

ಸ್ವಾಮಿಜಿ :—ಅವರೂ ಎಲ್ಲಾ ಮನುಷ್ಯರೆ; ಅದರಲ್ಲಿಯೂ ವೇದಾಂತ ಧರ್ಮನಿಷ್ಠರು; ನಿನ್ನೊಡನೆ ಮಾತನಾಡುವ ವಿಷಯದಲ್ಲಿ ಅವರಿಗೆ ಸಂತೋಷವೆ.

ಶಿಷ್ಯ :—ಮಹಾಶಯರೇ, ವೇದಾಂತವೆಂಬುದು ಎಲ್ಲಾ ಭಾಗ ದಲ್ಲಿಯೂ ಅಧಿಕಾರಿಗಳಾಗಿರುವವರಿಗೆ ಬರತಕ್ಕದು; ಅದು ನಿಮ್ಮ ಪಾಶ್ಚಾತ್ಯ ಶಿಷ್ಯರಿಗೆ ಬಂದದ್ದು ಹೇಗೆ? ಶಾಸ್ತ್ರದಲ್ಲಿ "ವೇದ ವೇದಾಂತಗಳನ್ನು ವ್ಯಾಸಂಗಮಾಡಿ, ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು, ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳನ್ನು ಆಚರಿಸುತ್ತ, ಆಹಾರ ವಿಹಾರಗಳಲ್ಲಿ ವಿಶೇಷ ವಾಗಿ ಸಂಯತನಾಗಿರುತ್ತ, ಅದರಲ್ಲಿಯೂ ಸಾಧನ ಚತುಷ್ಟಯ ಸಂಪನ್ನ ನಾಗಿದ್ದರೆ ಹೊರತು ವೇದಾಂತಕ್ಕೆ ಅಧಿಕಾರಿಯಾಗುವುದಿಲ್ಲ"—ಎಂದು ಹೇಳಿದೆ. ತಮ್ಮ ಪಾಶ್ಚಾತ್ಯ ಶಿಷ್ಯರಲ್ಲಿ ಪ್ರತಿಯೊಬ್ಬರೂ ಅಬ್ರಾಹ್ಮಣರು; ಆದ್ದರಿಂದ ಆಹಾರ ವಿಹಾರಗಳಲ್ಲಿ ಅನಾಚಾರಿಗಳು; ಅವರು ವೇದಾಂತ ಮತವನ್ನು ತಿಳಿದುಕೊಂಡದ್ದು ಹೇಗೆ?

ಸ್ವಾಮಿಜಿ :—ಅವರೊಡನೆ ಮಾತನಾಡಿ ನೋಡಿದರೆ ಆಗ ಗೊತ್ತಾಗು ತ್ತದೆ. ಅವರು ವೇದಾಂತವನ್ನು ತಿಳಿದುಕೊಂಡಿದ್ದಾರೆಯೊ ಇಲ್ಲವೊ ಎಂಬುದು.

ಪ್ರಾಯಶಃ ಇಷ್ಟುಹೊತ್ತಿಗೆ, ಶಿಷ್ಯನು ಒಬ್ಬ ನಿಷ್ಠಾವಂತನೂ ಆಚಾರ ಶೀಲನೂ ಆದ ಹಿಂದುವೆಂದು ಸ್ವಾಮಿಜಿ ಗ್ರಹಿಸಿದ್ದರು. ಅನಂತರ ಅವರು ಕೆಲವರು ರಾಮಕೃಷ್ಣ ಭಕ್ತರೊಡನೆ ಬಾಗಬಜಾರಿನ ಶ್ರೀಯುಕ್ತ ಬಲರಾಮಬಸು ಮಹಾಶಯರ ಮನೆಗೆ ಹೋದರು. ಶಿಷ್ಯನು ವಟತಲದಲ್ಲಿ ವಿವೇಕಚೂಡಾಮಣಿಯ ಒಂದು ಪ್ರತಿಯನ್ನು ಕೊಂಡುಕೊಂಡು ದರ್ಜಿಯ ಮೊಹಲ್ಲೆಯಲ್ಲಿದ್ದ ತನ್ನ ಮನೆಯ ಕಡೆಗೆ ಹೋದನು.

*

*

## ಅಧ್ಯಾಯ ೨

**ಸ್ಥಳ :—ಕಲ್ಕತ್ತೆಯಿಂದ ಕಾಶೀಪುರಕ್ಕೆ ಹೋಗುವ ದಾರಿ. ಮತ್ತು ಗೋಪಾಲ ಲಾಲಶೀಲರ ತೋಟ. ವರ್ಷ ಕ್ರಿ. ಶ. ೧೮೯೭.**

ಸ್ವಾಮಿಜಿ ಈದಿನ ಶ್ರೀಯುತ ಗಿರೀಶಚಂದ್ರ ಘೋಷ ಮಹಾಶಯರ* ಮನೆಯಲ್ಲಿ ಮಧ್ಯಾಹ್ನ ವಿಶ್ರಮಿಸಿಕೊಳ್ಳುತ್ತಿದ್ದರು. ಶಿಷ್ಯನು ಅಲ್ಲಿಗೆ ಹೋಗಿ ನಮಸ್ಕಾರಮಾಡಿದನು. ನೋಡಲಾಗಿ ಸ್ವಾಮಿಜಿ ಆಗ ಗೋಪಾಲ ಲಾಲಶೀಲರ ಉದ್ಯಾನ ಗೃಹಕ್ಕೆ ಹೋಗುವುದಕ್ಕೆ ಸಿದ್ಧರಾಗಿದ್ದರು. ಗಾಡಿ ಬಂದು ನಿಂತುಕೊಂಡಿತ್ತು. ' ಸ್ವಾಮಿಜಿ ಶಿಷ್ಯನನ್ನು ಕುರಿತು "ನನ್ನ ಜೊತೆಯಲ್ಲಿ ಬಾ ಹೋಗೋಣ" ಎಂದರು. ಶಿಷ್ಯ ಸಮ್ಮತಿಸಲು, ಸ್ವಾಮಿಜಿ ಅವನನ್ನು ಜೊತೆಯಲ್ಲಿ ಕರೆದುಕೊಂಡು ಗಾಡಿಯಲ್ಲಿ ಹತ್ತಿದರು. ಗಾಡಿ ಹೊರಟಿತು. ಚಿತ್ಪುರದ ರಸ್ತೆಗೆ ಬಂದಾಗ ಗಂಗಾದರ್ಶನವಾಗಲು, ಒಡನೆಯೇ ಸ್ವಾಮಿಜಿ ತಮ್ಮಷ್ಟಕ್ಕೆ ತಾವೇ ರಾಗವಾಗಿ "ಗಂಗಾ ತರಂಗ ರಮಣೀಯ ಜಟಾ ಕಲಾಪಂ. . . ." ಎಂಬುದಾಗಿ ಹೇಳುವುದಕ್ಕೆ ಮೊದಲುಮಾಡಿದರು. ಶಿಷ್ಯನು ಬೆರಗಾಗಿ ಆ ಅದ್ಭುತವಾದ ಸ್ವರಲಹರಿಯನ್ನು ನಿಶ್ಶಬ್ದವಾಗಿ ಕೇಳುತ್ತಿದ್ದನು. ಹೀಗೆ ಸ್ವಲ್ಪ ಹೊತ್ತು ಕಳೆದಮೇಲೆ ಒಂದು ರೈಲ್ವೇ ಇನ್‌ಜನ್ ಗಾಡಿ ಚಿತ್ಪುರದ ಹೈಡ್ರಾಲಿಕ್ ಸೇತುವೆಯ ಕಡೆಗೆ ಹೋಗುತ್ತಿದ್ದುದನ್ನು ನೋಡಿ ಸ್ವಾಮಿಜಿ ಶಿಷ್ಯನನ್ನು ಕುರಿತು "ನೋಡಿದೆಯಾ, ಹೇಗೆ ಸಿಂಹದ ಹಾಗೆ ಹೋಗುತ್ತಿದೆ!" ಎಂದರು.

ಶಿಷ್ಯ :—ಅದು ಕೇವಲ ಜಡ, ಅದರ ಹಿಂದೆ ಮನುಷ್ಯನ ಚೇತನ ಶಕ್ತಿ ಕೆಲಸ ಮಾಡದಿದ್ದರೆ ಅದು ನಡೆದೀತೆ? ಅದು ಹೀಗೆ ಹೋಗುವುದರಲ್ಲಿ ತನ್ನ ಮಹತ್ವವೇನಾದರೂ ಇದೆಯೇನು ?

ಸ್ವಾಮಿಜಿ :—ಚೇತನದ ಲಕ್ಷಣವೇನೆಂದು ಹೇಳಬಲ್ಲೆಯಾ?

ಶಿಷ್ಯ :—ಏಕೆ ಮಹಾಶಯರೇ! ಏತರಲ್ಲಿ ಬುದ್ಧಿಪೂರ್ವಕವಾದ ಕಾರ್ಯ ಕಂಡುಬರುತ್ತದೆಯೋ ಅದೇ ಚೇತನ.

---

* ಬಂಗಾಳದಲ್ಲಿ ಸುವಿಖ್ಯಾತ ನಟರೂ ನಾಟಕಕರ್ತರೂ ರಾಮಕೃಷ್ಣ ಭಕ್ತಾಗ್ರಣಿಗಳೂ ಆದ ಗಿರೀಶಚಂದ್ರ ಘೋಷರು.

ಸ್ವಾಮಿಜಿ:—ಯಾವುದು ಪ್ರಕೃತಿಗೆ ವಿರೋಧವಾಗಿ ನಿಂತು ಪ್ರತಿಭಟಿಸುತ್ತದೆಯೋ ಅದೇ ಚೇತನ; ಅದರಲ್ಲಿಯೇ ಚೈತನ್ಯದ ವಿಕಾಸವಿರುತ್ತದೆ. ನೋಡು, ಒಂದು ಸಾಮಾನ್ಯವಾದ ಇರುವೆಯನ್ನು ಕೊಲ್ಲುವುದಕ್ಕೆ ಹೋಗು, ಅದೂ ಜೀವವನ್ನು ಉಳಿಸಿಕೊಳ್ಳುವುದಕ್ಕೆ ಒಂದು ಸಾರಿ ಎದುರು ಬೀಳುತ್ತದೆ. ಎಲ್ಲಿ ಕ್ರಿಯೆ ಅಥವಾ ಪುರುಷಪ್ರಯತ್ನ ಇದೆಯೋ, ಎಲ್ಲಿ ಎದುರುಬೀಳುವಿಕೆ ಇದೆಯೋ, ಅಲ್ಲಿಯೇ ಜೀವದ ಚಿಹ್ನೆ, ಅಲ್ಲಿಯೇ ಚೈತನ್ಯದ ವಿಕಾಸ.

ಶಿಷ್ಯ:—ಮನುಷ್ಯನಿಗೂ ಮತ್ತು ಮನುಷ್ಯ ಜಾತಿಗಳಿಗೂ ಈ ನಿಯಮವು ಅನ್ವಯಿಸುತ್ತದೆಯೆ ಮಹಾಶಯ?

ಸ್ವಾಮಿಜಿ:—ಅನ್ವಯಿಸುತ್ತದೆಯೋ ಇಲ್ಲವೊ ಒಂದು ಸಾರಿ ಜಗತ್ತಿನ ಚರಿತ್ರೆಯನ್ನು ಓದಿನೋಡು; ನಿಮ್ಮನ್ನು ಬಿಟ್ಟು ಮಿಕ್ಕ ಎಲ್ಲಾ ದೇಶದ ಜನರಿಗೂ ಇದು ಅನ್ವಯಿಸುತ್ತದೆ; ನೀವು ಮಾತ್ರ ಪ್ರಪಂಚದಲ್ಲಿ ಈಗ ಜಡರ ಹಾಗೆ ಬಿದ್ದಿದ್ದೀರಿ. ನಿಮ್ಮನ್ನು ಮಂತ್ರ ಮುಗ್ಧರಾಗಿ ಮಾಡಿಬಿಟ್ಟಿದ್ದಾರೆ. ಬಹಳ ಹಿಂದಿನ ಕಾಲದಿಂದಲೂ ಇತರರು ನಿಮಗೆ "ನೀವು ಹೀನರು, ನಿಮಗೆ ಯಾವ ಶಕ್ತಿಯೂ ಇಲ್ಲ" ಎಂದು ಹೇಳುತ್ತ ಬಂದರು; ನೀವೂ ಅದನ್ನೇ ಕೇಳುತ್ತಾ ಈಗ ಒಂದು ಸಾವಿರ ವರ್ಷದಿಂದ "ನಾವು ಹೀನರು, ಯಾವ ಕೆಲಸಕ್ಕೂ ಕೈಲಾಗದವರು" ಎಂದು ಭಾವಿಸಿಕೊಂಡಿರಿ. ಭಾವಿಸಿಕೊಂಡು ಭಾವಿಸಿಕೊಂಡು ಹಾಗೆಯೇ ಆಗಿ ಹೋದಿರಿ. (ತಮ್ಮ ಶರೀರವನ್ನು ತೋರಿಸಿ) ಈ ದೇಹವೂ ನಿಮ್ಮ ದೇಶದ ಮಣ್ಣಿನಿಂದಲೇ ತಾನೇ ಆಗಿದೆ?–ಆದರೆ ನಾನು ಮಾತ್ರ ಯಾವಾಗಲೂ ಹೀಗೆ ಭಾವಿಸಿಕೊಂಡಿಲ್ಲ. ಅದಕ್ಕೇ ನೋಡು ಈಶ್ವರನ ಇಚ್ಛೆಯಿಂದ, ಯಾರು ನನ್ನನ್ನು ಬಹು ದಿವಸದಿಂದಲೂ ಕೀಳಾಗಿ ತಿಳಿಯುತ್ತಿದ್ದರೋ ಅವರೇ ದೇವರನ್ನು ಕಂಡರೆ ಹೇಗೋ ಹಾಗೆ ನನ್ನನ್ನು ಗೌರವ ಮಾಡಿದ್ದಾರೆ ಮತ್ತು ಮಾಡುತ್ತಾರೆ. ನೀವೂ ಹೀಗೆ ನಮ್ಮೊಳಗೆ ಅನಂತಶಕ್ತಿಯೂ, ಅಪಾರ ಜ್ಞಾನವೂ, ಅದಮ್ಯ ಉತ್ಸಾಹವೂ ಇದೆಯೆಂದು ಭಾವಿಸಿಕೊಂಡು ಒಳಗಿರುವ ಈ ಶಕ್ತಿಯನ್ನು ಎಬ್ಬಿಸಲು ಸಮರ್ಥರಾದರೆ ಆಗ ನೀವೂ ನನ್ನ ಹಾಗೆ ಆಗಬಲ್ಲಿರಿ.

ಶಿಷ್ಯ:—ಹೀಗೆ ಭಾವಿಸಿಕೊಳ್ಳುವುದಕ್ಕೆ ಶಕ್ತಿ ಎಲ್ಲಿದೆ ಮಹಾಶಯರೆ? ಬಾಲ್ಯ ಕಾಲದಿಂದಲೂ ಈ ಮಾತುಗಳನ್ನು ಹೇಳಬೇಕು ಮತ್ತು ತಿಳಿಸಿಕೊಡಬೇಕು; ಅಂಥ ಶಿಕ್ಷಕ ಅಥವಾ ಉಪಾಧ್ಯಾಯ ತಾನೆ ಎಲ್ಲಿ

ದ್ದಾನೆ? "ಓದುಬರೆಹಗಳು ಈಗಿನ ಕಾಲದಲ್ಲಿ ಕೇವಲ ನೌಕರಿ ಸಂಪಾದಿಸುವುದಕ್ಕೋಸ್ಕರ"- ಎಂಬ ಈ ಮಾತನ್ನೇ ನಾವು ಎಲ್ಲರಿಂದಲೂ ಕೇಳಿದ್ದೇವೆ ಮತ್ತು ಕಲಿತುಕೊಂಡಿದ್ದೇವೆ.

ಸ್ವಾಮಿಜಿ:—ಅದಕ್ಕೆ ನಾನು ಬಂದಿರುವುದು— ಬೇರೆ ವಿಧವಾಗಿ ಹೇಳಿಕೊಡುವುದಕ್ಕೆ ಮತ್ತು ತೋರಿಸಿಕೊಡುವುದಕ್ಕೆ. ನೀವು ನನ್ನಿಂದ ಈ ತತ್ತ್ವವನ್ನು ಕಲಿತುಕೊಳ್ಳಿ, ತಿಳಿದುಕೊಳ್ಳಿ, ಅನುಭವಕ್ಕೆ ತಂದುಕೊಳ್ಳಿ- ಆಮೇಲೆ ಗ್ರಾಮ ಗ್ರಾಮದಲ್ಲಿಯೂ ಊರು ಊರಿನಲ್ಲಿಯೂ ಹಳ್ಳಿ ಹಳ್ಳಿಯಲ್ಲಿಯೂ ಈ ಅಭಿಪ್ರಾಯವನ್ನು ತೆಗೆದುಕೊಂಡು ಹೋಗಿ ಸ್ಥಾಪಿಸಿ. ಎಲ್ಲರ ಹತ್ತಿರಕ್ಕೂ ಹೋಗಿ, "ಏಳಿ, ಎಚ್ಚರಗೊಳ್ಳಿ, ಇನ್ನು ನಿದ್ದೆ ಮಾಡಬೇಡಿ; ಎಲ್ಲಾ ಅಭಾವಗಳನ್ನೂ ದುಃಖಗಳನ್ನೂ ನೀಗಿಸುವ ಶಕ್ತಿ ನಿಮ್ಮ ಒಳಗೇ ಇದೆ; ಈ ಮಾತನ್ನು ನಂಬಿ; ಹಾಗಾದರೇ ಈ ಶಕ್ತಿ ಉದ್ಬುದ್ಧವಾಗುತ್ತದೆ" ಎಂದು ಹೇಳಿ. ಈ ವಿಷಯವನ್ನು ಎಲ್ಲರಿಗೂ ಹೇಳಿ; ಮತ್ತು ಅದರ ಜೊತೆಗೆ ಸುಲಭವಾದ ಮಾತಿನಲ್ಲಿ ವಿಜ್ಞಾನ, ದರ್ಶನ ಭೂಗೋಳ ಮತ್ತು ಚರಿತ್ರೆಗಳ ಮೂಲ ಸಂಗತಿಗಳನ್ನು ಸಾಧಾರಣ ಜನರ ಮನಸ್ಸಿಗೆ ಅಂಟುವಂತೆ ತಿಳಿಸಿ; ನಾನು ಅವಿವಾಹಿತರಾದ ಯುವಕರನ್ನು ಸೇರಿಸಿ ಒಂದು ಕೇಂದ್ರವನ್ನು ಮಾಡಿಡುತ್ತೇನೆ— ಮೊದಲು ಅವರಿಗೆ ಶಿಕ್ಷಣವನ್ನು ಕೊಟ್ಟು ಆಮೇಲೆ ಅವರ ಮೂಲಕ ಈ ಕೆಲಸವನ್ನು ಮಾಡಿಸುತ್ತೇನೆ- ಇದು ನಾನು ಮಾಡಬೇಕೆಂದಿರುವ ಏರ್ಪಾಡು.

ಶಿಷ್ಯ:—ಆದರೆ, ಮಹಾಶಯ! ಹೀಗೆ ಮಾಡುವುದಕ್ಕೆ ಬಹು ಧನ ಬೇಕಾಗುತ್ತದೆ; ಆ ಹಣವನ್ನು ಎಲ್ಲಿಂದ ತರುವಿರಿ?

ಸ್ವಾಮೀಜಿ:—ಏನು ನೀನು ಹೇಳುವುದು! ಮನುಷ್ಯನಿಂದ ತಾನೇ ರೂಪಾಯಿ ಆಗುವುದು? ರೂಪಾಯಿನಿಂದ ಮನುಷ್ಯನಾಗುತ್ತಾನೆಂಬ ಮಾತನ್ನು ಯಾವಾಗಲಾದರೂ ಯಾರಿಂದಲಾದರೂ ಕೇಳಿದ್ದೀಯೇನು? ನೀವು ಬಾಯಲ್ಲಿ ಆಡುವುದೂ ಮನಸ್ಸಿನಲ್ಲಿ ಯೋಚಿಸುವುದೂ ಒಂದೆ ಆಗುವುದಾದರೆ, ಆಡುವ ಮಾತಿನಲ್ಲಿಯೂ ಮಾಡುವ ಕೆಲಸದಲ್ಲಿಯೂ ಒಂದೆ ಆಗುವುದಾದರೆ, ಆಗ ಹಣವು ತನ್ನಷ್ಟಕ್ಕೆ ತಾನೇ ನೀರಿನಂತೆ ನಿಮ್ಮ ಹತ್ತಿರ ಬಂದು ಸುರಿಯುವುದು.

ಶಿಷ್ಯ:—ಒಳ್ಳೆಯದು ಮಹಾಶಯ! ಹಣ ಬಂತೆಂದು ಒಪ್ಪಿಕೊಳ್ಳೋಣ, ಮತ್ತು ತಾವು ಹಾಗೆ ಸತ್ಕಾರ್ಯವನ್ನು ಕೈಕೊಂಡು ಮಾಡಿದಿ

ರೆಂದೂ ಇಟ್ಟುಕೊಳ್ಳೋಣ; ಅದರಿಂದ ತಾನೇ ಆಗುವುದು ಏನು? ಇದಕ್ಕೆ ಹಿಂದೆಯೂ ಎಷ್ಟೆಷ್ಟೊ ಜನ ಮಹಾಪುರುಷರು ಎಷ್ಟೆಷ್ಟೊ ಒಳ್ಳೆಯದನ್ನು ಮಾಡಿ ಹೋಗಿದ್ದಾರೆ,—ಈಗ ಅದೆಲ್ಲಾ ಎಲ್ಲಿ? ತಾವು ಮಾಡುವ ಕಾರ್ಯಕ್ಕೂ ಕಾಲಾಂತರದಲ್ಲಿ ಇಂಥ ಅವಸ್ಥೆಯೆ ಬರುವುದು; ಇದು ನಿಜ. ಹೀಗಿರಲು ಈ ವಿಧವಾದ ಪ್ರಯತ್ನಕ್ಕೆ ಅವಶ್ಯಕತೆ ಏನು?

ಸ್ವಾಮಿಜಿ:—ಮುಂದೆ ಏನಾಗುತ್ತದೆ ಎಂಬುದನ್ನೇ ಯಾವಾಗಲೂ ಯೋಚಿಸುತ್ತಾ ಅದನ್ನು ನೋಡಿಕೊಂಡೇ ಯಾವ ಕೆಲಸವನ್ನೂ ಮಾಡುವುದಕ್ಕಾಗುವುದಿಲ್ಲ. ಯಾವುದು ಸತ್ಯ, ಸರಿಯೆಂದು ತಿಳಿದುಕೊಂಡಿದ್ದೀಯೊ ಅದನ್ನು ಈಗ ಮಾಡಿ ಹಾಕಿಬಿಡು; ಮುಂದೆ ಏನಾಗುತ್ತದೆ ಏನಾಗುವುದಿಲ್ಲ ಎಂಬುದನ್ನು ಏಕೆ ಯೋಚಿಸಬೇಕು? ಜೀವನವಿರುವುದು ಕೆಲವು ವರ್ಷ—ಅದರಲ್ಲಿ ಫಲಾಫಲಗಳನ್ನು ಎಣಿಸುತ್ತಾ ಯಾವನಾದರೂ ಏನಾದರೂ ಕೆಲಸಮಾಡುವುದು ಸಾಧ್ಯವೆ? ಫಲಾಫಲಗಳನ್ನು ಕೊಡತಕ್ಕವನು ಈಶ್ವರ ಒಬ್ಬನೆ; ಏನು ಬರಬೇಕಾದದ್ದಿದೆಯೊ ಅದನ್ನು ಕೊಡುತ್ತಾನೆ; ಆ ವಿಚಾರವನ್ನು ಕಟ್ಟಿಕೊಂಡು ನಿನಗೆ ಆಗಬೇಕಾದ್ದೇನು? ನೀನು ಆ ಕಡೆಗೆ ದೃಷ್ಟಿ ಇಡದೆ ಸುಮ್ಮನೆ ಕೆಲಸವನ್ನು ಮಾತ್ರ ಮಾಡಿಕೊಂಡು ಹೋಗು.

ಹೀಗೆ ಮಾತನಾಡುತ್ತಿರಲು, ಗಾಡಿ ಉದ್ಯಾನ ಗೃಹಕ್ಕೆ ತಲಪಿತು. ಕಲ್ಕತ್ತೆಯಿಂದ ಅನೇಕ ಜನರು ಸ್ವಾಮಿಜಿ ದರ್ಶನಕ್ಕಾಗಿ ಆ ದಿವಸ ಈ ತೋಟಕ್ಕೆ ಬಂದರು. ಸ್ವಾಮಿಜಿ ಗಾಡಿಯಿಂದ ಇಳಿದು ಮನೆಯೊಳಕ್ಕೆ ಹೋಗಿ ಕುಳಿತರು. ಅವರೊಡನೆ ಮಾತನಾಡುವುದಕ್ಕೆ ತೊಡಗಿದರು. ಸ್ವಾಮಿಜಿ ವಿಲಾಯತಿಯ ಶಿಷ್ಯರಾದ ಗುಡ್‌ವಿನ್ ಸಾಹೇಬರು ಮೂರ್ತಿಮತ್ತಾದ ಸೇವೆಯಂತೆ ಹತ್ತಿರದಲ್ಲಿ ನಿಂತುಕೊಂಡಿದ್ದರು; ಇದಕ್ಕೆ ಮುಂಚೆಯೆ ಅವರೊಡನೆ ಪರಿಚಯವಾಗಿದ್ದದ್ದರಿಂದ ಶಿಷ್ಯನು ಅವರ ಹತ್ತಿರಕ್ಕೆ ಹೋದನು. ಇಬ್ಬರೂ ಸೇರಿ ಸ್ವಾಮಿಜಿ ವಿಷಯವಾಗಿ ನಾನಾ ಮಾತು ಕಥೆಗಳಲ್ಲಿ ಪ್ರವೃತ್ತರಾದರು. ಸಂಜೆಯಾದ ಮೇಲೆ ಸ್ವಾಮಿಜಿ ಶಿಷ್ಯನನ್ನು ಕರೆದು 'ನೀನು ಕಠೋಪನಿಷತ್ತನ್ನು ಬಾಯಿಗೆ ಗಟ್ಟಿಮಾಡಿದ್ದೀಯಾ?' ಎಂದು ಕೇಳಿದರು.

ಶಿಷ್ಯ:—ಇಲ್ಲ, ಮಹಾಶಯ! ಶಂಕರ ಭಾಷ್ಯದೊಡನೆ ಓದಿದ್ದೇನೆ, ಅಷ್ಟೆ.

ಸ್ವಾಮಿಜಿ:—ಉಪನಿಷತ್ತುಗಳಲ್ಲಿ ಇಂಥ ಸುಂದರವಾದ ಗ್ರಂಥ ಮತ್ತೊಂದು ಕಂಡುಬರುವುದಿಲ್ಲ; ಅವನ್ನು ನೀವು ಬಾಯಿಗೆ ಗಟ್ಟಿಮಾಡಿರ ಬೇಕೆಂದು ನನ್ನ ಅಪೇಕ್ಷೆ. ನಚಿಕೇತನ ಹಾಗೆ ಶ್ರದ್ಧಾ ಸಾಹಸ ವಿಚಾರ ಮತ್ತು ವೈರಾಗ್ಯವನ್ನು ಜೀವನದಲ್ಲಿ ಸಂಪಾದಿಸುವ ಪ್ರಯತ್ನಮಾಡಿ; ಸುಮ್ಮನೆ ಓದಿದರೆ ಏನಾಗುತ್ತದೆ?

ಶಿಷ್ಯ:—ಸೇವಕನಿಗೆ ಇವೆಲ್ಲಾ ಅನುಭವಕ್ಕೆ ಬರುವಂತೆ ಕೃಪೆಮಾಡ ಬೇಕು.

ಸ್ವಾಮಿಜಿ:—ಪರಮಹಂಸರ ಮಾತನ್ನು ಕೇಳಿದ್ದೀಯಷ್ಟೆ?–ಅವರು 'ಕೃಪೆಯ ಗಾಳಿ ಬೀಸುತ್ತಲೇ ಇರುತ್ತದೆ, ನೀನು ಮಾತ್ರ ನಿನ್ನ ದೋಣಿಯ ಪಟವನ್ನು ಎತ್ತಿ ಕಟ್ಟಬೇಕು' ಎಂದು ಹೇಳುತ್ತಿದ್ದರು. ಯಾರಾದರೂ ಏನಾದರೂ ಮಾಡಿಕೊಡುವುದಕ್ಕೆ ಸಾಧ್ಯವೇನಪ್ಪಾ? ಅವನವನ ಅದೃಷ್ಟ ಅವನವನ ಕೈಯಲ್ಲಿ—ಗುರು ಇದಿಷ್ಟನ್ನು ಮಾತ್ರ ತಿಳಿಸಿಕೊಡುತ್ತಾನೆ, ಅಷ್ಟೆ. ಬೀಜದ ಶಕ್ತಿಯಿಂದಲೆ ಗಿಡವಾಗುವುದು; ನೀರು ಗಾಳಿ ಇವೆಲ್ಲಾ ಅದಕ್ಕೆ ಸಹಾಯ ಮಾತ್ರ.

ಶಿಷ್ಯ:—ಹೊರಗಿನ ಸಹಾಯದ ಆವಶ್ಯಕತೆಯೂ ಇದೆಯಷ್ಟೆ, ಮಹಾಶಯ!

ಸ್ವಾಮಿಜಿ:–ಅದೇನೋ ಉಂಟು: ಆದರೆ ಏನೆಂದುಕೊಂಡಿದ್ದೀಯೆ?– ಒಳಗೆ ಪದಾರ್ಥವಿಲ್ಲದಿದ್ದರೆ ನೂರಾರು ಸಹಾಯಗಳಿಂದಲೂ ಏನೂ ಆಗು ವುದಿಲ್ಲ. ಆದರೆ ಎಲ್ಲರಿಗೂ ಆತ್ಮಾನುಭವವಾಗುವ ಒಂದೊಂದು ಕಾಲ ಬರುತ್ತದೆ; ಏಕೆಂದರೆ ಎಲ್ಲರೂ ಬ್ರಹ್ಮ. ಮೇಲು ಕೀಳು ಎಂದು ವಿಭಾಗ ಮಾಡುವುದು ಕೇವಲ ಈ ಬ್ರಹ್ಮವಿಕಾಸದ ತಾರತಮ್ಯದಿಂದಲೇ; ಸಕಾಲ ದಲ್ಲಿ ಎಲ್ಲರಲ್ಲಿಯೂ ಪೂರ್ಣವಿಕಾಸವಾಗುತ್ತದೆ. ಅದನ್ನೇ ಶಾಸ್ತ್ರ "ಕಾಲೇನಾತ್ಮನಿ ವಿಂದತಿ" ಎಂದು ಹೇಳಿದೆ.

ಶಿಷ್ಯ:—ಹಾಗಾದರೆ ಹೀಗೆ ಆಗುವುದು ಯಾವಾಗ, ಮಹಾಶಯ? ಎಷ್ಟೋ ಜನ್ಮಗಳನ್ನು ಅಜ್ಞಾನದಲ್ಲಿ ಕಳೆದುಬಿಟ್ಟಿದ್ದೇವೆಂದು ಶಾಸ್ತ್ರ ಮುಖ ದಿಂದ ಕೇಳಿದ್ದೇನೆ.

ಸ್ವಾಮಿಜಿ:—ಭಯವೇನು? ಯಾವಾಗ ಇಲ್ಲಿ ಬಂದು ಬಿದ್ದೆಯೊ ಆಗ ಈ ಸಲವೆ ಆಗುತ್ತದೆ. ಮುಕ್ತಿ—ಸಮಾಧಿ—ಇವೆಲ್ಲಾ ಬ್ರಹ್ಮ ಪ್ರಕಾಶದ ಮಾರ್ಗದಲ್ಲಿರುವ ಪ್ರತಿಬಂಧಕಗಳನ್ನು ನಿವಾರಣೆ ಮಾಡಿಕೊಡು

ತ್ತವೆ, ಅಷ್ಟೆ; ಆತ್ಮನು ಮಾತ್ರ ಸೂರ್ಯನ ಹಾಗೆ ಯಾವಾಗಲೂ ಪ್ರಜ್ವಲಿಸುತ್ತ ಇದ್ದಾನೆ. ಅಜ್ಞಾನಮೇಘ ಅದನ್ನು ಮುಚ್ಚಿಕೊಂಡಿದೆ,—ಆ ಮೇಘವನ್ನು ತಳ್ಳಿಬಿಟ್ಟರೆ ಸೂರ್ಯನ ಪ್ರಕಾಶ ಗೋಚರಿಸುತ್ತದೆ; ಆಗ "ಭಿದ್ಯತೇ ಹೃದಯಗ್ರಂಥಿಃ" ಮುಂತಾದ ಸ್ಥಿತಿ ಬರುತ್ತದೆ. ಎಷ್ಟು ಮತಗಳನ್ನು ಬೇಕಾದರೂ ನೋಡು, ಅವು ಈ ಮಾರ್ಗದಲ್ಲಿ ಬರುವ ಪ್ರತಿಬಂಧಕಗಳನ್ನು ದೂರಮಾಡುವಂತೆ ಉಪದೇಶಿಸುತ್ತವೆ. ಯಾರು ಯಾವ ಭಾವದಲ್ಲಿ ಆತ್ಮಾನುಭವಮಾಡಿಕೊಂಡರೊ ಅವರು ಆ ಭಾವವನ್ನೆ ಉಪದೇಶಿಸಿಬಿಟ್ಟಿದ್ದಾರೆ. ಆದರೆ ಎಲ್ಲರ ಉದ್ದೇಶವೂ ಆತ್ಮಜ್ಞಾನವೆ–ಆತ್ಮದರ್ಶನವೆ. ಇದಕ್ಕೆ ಎಲ್ಲಾ ಜಾತಿಗೆ ಎಲ್ಲಾ ಪ್ರಾಣಿಗಳಿಗೂ ಸಮಾನವಾದ ಅಧಿಕಾರ. ಇದೆ ಸರ್ವವಾದಿ ಸಮ್ಮತವಾದ ಮತ.

ಶಿಷ್ಯ:—ಮಹಾಶಯ! ಶಾಸ್ತ್ರದ ಈ ಮಾತನ್ನು ಕೇಳಿದಾಗ ಅಥವಾ ಓದಿದಾಗ, ಇನ್ನೂ ಆತ್ಮವಸ್ತುವಿನ ಪ್ರತ್ಯಕ್ಷವಾಗಿಲ್ಲವಲ್ಲಾ ಎಂದುಕೊಂಡು ಮನಸ್ಸು ವ್ಯಥೆಪಡುವುದು.

ಸ್ವಾಮಿಜಿ:—ಇದಕ್ಕೆ ವ್ಯಾಕುಲತೆಯೆಂದು ಹೆಸರು. ಇದು ಎಷ್ಟೆಷ್ಟು ಬೆಳೆಯುತ್ತ ಹೋಗುತ್ತದೆಯೋ ಪ್ರತಿಬಂಧರೂಪವಾದ ಆ ಮೇಘ ಅಷ್ಟಷ್ಟು ಕಳೆಯುತ್ತ ಹೋಗುತ್ತದೆ. ಆಗಲೇ ಶ್ರದ್ಧೆ ದೃಢವಾಗುತ್ತದೆ ಮತ್ತು ಕ್ರಮಃವಾಗಿ ಆತ್ಮನು ಕರತಲಾಮಲಕದ ಹಾಗೆ ಪ್ರತ್ಯಕ್ಷನಾಗುತ್ತಾನೆ. ಅನುಭವವೇ ಧರ್ಮದ ಜೀವ. ಕೆಲವು ಆಚಾರ ನಿಯಮಗಳನ್ನು ಎಲ್ಲರೂ ನಡೆಸಿಕೊಂಡು ಹೋಗಬಹುದು, ಕೆಲವು ವಿಧಿನಿಷೇಧಗಳನ್ನೂ ಎಲ್ಲರೂ ನಡೆಸಿಕೊಂಡು ಹೋಗಬಹುದು. ಆದರೆ ಅನುಭವಕ್ಕೋಸ್ಕರ ಎಷ್ಟು ಜನ ವ್ಯಾಕುಲರಾಗುತ್ತಾರೆ? ವ್ಯಾಕುಲತೆ–ಈಶ್ವರಲಾಭ ಅಥವಾ ಆತ್ಮಜ್ಞಾನಕ್ಕೋಸ್ಕರ ಹುಚ್ಚು ಹಿಡಿದಂತಾಗುವುದು—ಇದೆ ಧರ್ಮದ ಯಥಾರ್ಥ ಪ್ರಾಣ.

ಶ್ರೀಕೃಷ್ಣ ಪರಮಾತ್ಮನಿಗೋಸ್ಕರ ಗೋಪಿಗಳಿಗೆ ಯಾವ ವಿಧವಾದ ಉದ್ದಾಮ ಉನ್ಮತ್ತತೆಯುಂಟಾಗಿತ್ತೊ ಆತ್ಮದರ್ಶನಕ್ಕಾಗಿ ಆ ವಿಧವಾದ ವ್ಯಾಕುಲತೆ ಬೇಕು. ಗೋಪಿಗಳ ಮನಸ್ಸಿನಲ್ಲಿಯೂ ಸ್ವಲ್ಪ ಸ್ವಲ್ಪ ಹೆಂಗಸು ಗಂಡಸು ಎಂಬ ಭೇದವಿತ್ತು. ನಿಜವಾದ ಆತ್ಮಜ್ಞಾನವಾದರೆ ಸ್ತ್ರೀ ಪುರುಷರೆಂಬ ಲಿಂಗಭೇದ ಪೂರ್ತಿ ಅಳಿಸಿಹೋಗುವುದು.

ಹೀಗೆಂದು ಹೇಳುತ್ತ ಹೇಳುತ್ತ 'ಗೀತಗೋವಿಂದ'ದ ಪ್ರಸ್ತಾಪ ವನ್ನೆತ್ತಿಕೊಂಡು ಸ್ವಾಮಿಜಿ ಹೀಗೆಂದು ಹೇಳಿದರು:—

"ಜಯದೇವನೇ ಸಂಸ್ಕೃತ ಭಾಷೆಯಲ್ಲಿ ಕೊನೆಯ ಕವಿ. ಆದರೆ ಜಯದೇವನು ಅನೇಕ ಸ್ಥಳಗಳಲ್ಲಿ ಭಾವಕ್ಕಿಂತಲೂ ಕಿವಿಗೆ ಇಂಪಾದ ವಾಕ್ಯ ವಿನ್ಯಾಸಗಳ ಕಡೆಗೆ ಹೆಚ್ಚು ಲಕ್ಷ್ಯವನ್ನು ಕೊಟ್ಟಿದ್ದಾನೆ. ಗೀತಗೋವಿಂದದ "ಪತತಿ ಪತತ್ರೇ ...." ಎಂಬ ಶ್ಲೋಕದಲ್ಲಿ ಅನುರಾಗ ಮತ್ತು ವ್ಯಾಕುಲತೆಯ ಎಂಥ ಪರಾಕಾಷ್ಠತೆಯನ್ನು ಕವಿ ತೋರಿಸಿದ್ದಾನೆ ನೋಡಿ ದೆಯಾ? ಆತ್ಮದರ್ಶನಕ್ಕೋಸ್ಕರ ಈ ವಿಧವಾದ ಅನುರಾಗ ಉಂಟಾಗ ಬೇಕು. ಜೀವದಲ್ಲಿ ವಿಲವಿಲನೆ ಒದೆದಾಟ ಉಂಟಾಗಬೇಕು. ಹಾಗೆ, ಬೃಂದಾವನ ಲೀಲೆಯ ಪ್ರಸ್ತಾಪವನ್ನು ಬಿಟ್ಟುಬಂದರೆ ಕುರುಕ್ಷೇತ್ರದ ಕೃಷ್ಣನು ಎಷ್ಟು ಮನೋಹರವಾಗಿದ್ದಾನೆ, ಅದನ್ನೂ ನೋಡು — ಅಂಥ ಭಯಂಕರವಾದ ಯುದ್ಧ ಕೋಲಾಹಲದಲ್ಲಿಯೂ ಕೃಷ್ಣನು ಎಷ್ಟು ಸ್ಥಿರ, ಗಂಭೀರ, ಶಾಂತ! ಯುದ್ಧರಂಗದಲ್ಲಿಯೇ ಅರ್ಜುನನಿಗೆ ಗೀತೆಯನ್ನು ಹೇಳಿದನು!— ಕ್ಷತ್ರಿಯ ಧರ್ಮದಲ್ಲಿಯೇ ಯುದ್ಧವನ್ನು ಮಾಡುವಂತೆ ಮಾಡಿಬಿಟ್ಟನು! ಇಂಥ ಭಯಂಕರವಾದ ಯುದ್ಧಕ್ಕೆ ಪ್ರವರ್ತಕನಾದರೂ ಶ್ರೀಕೃಷ್ಣನು ತಾನು ಮಾತ್ರ ಹೇಗೆ ಕರ್ಮಹೀನನಾಗಿದ್ದ ಅಸ್ತ್ರವನ್ನು ಹಿಡಿಯಲಿಲ್ಲ. ಯಾವ ಕಡೆಯಿಂದ ನೋಡಿದರೂ ಶ್ರೀಕೃಷ್ಣಚರಿತ್ರೆ ಸರ್ವಾಂಗ ಸಂಪೂರ್ಣವಾಗಿ ಕಂಡುಬರುತ್ತದೆ. ಅವನು ಜ್ಞಾನ ಕರ್ಮ ಭಕ್ತಿ ಯೋಗ ಇವುಗಳ ಮೂರ್ತಿಮತ್ತಾದ ವಿಗ್ರಹವೊ ಎಂಬಂತಿದ್ದಾನೆ. ಶ್ರೀಕೃಷ್ಣನ ಈ ಭಾವವನ್ನೆ ಈಗಿನ ಕಾಲದಲ್ಲಿ ವಿಶೇಷವಾಗಿ ಭಾವಿಸ ಬೇಕು; ಈಗ ಬೃಂದಾವನದಲ್ಲಿ ಕೊಳಲನ್ನೂದುವ ಕೃಷ್ಣನನ್ನೆ ನೋಡಿ ಕೊಂಡು ಕುಳಿತರೆ ನಡೆಯುವುದಿಲ್ಲ, ಅದರಿಂದ ಜೀವನು ಉದ್ಧಾರ ನಾಗುವುದಿಲ್ಲ. ಈಗಿನ ಕಾಲಕ್ಕೆ ಬೇಕಾದದ್ದು ಗೀತಾ ರೂಪದಲ್ಲಿ ಸಿಂಹ ನಾದ ಮಾಡುತ್ತಿರುವ ಶ್ರೀಕೃಷ್ಣನ ಪೂಜೆ! ಧನುರ್ಧಾರಿಯಾದ ರಾಮ, ಮಹಾವೀರ, ಕಾಳೀಮಾತೆ ಇವರ ಪೂಜೆ! ಹಾಗಾದರೆ ಜನರು ವಿಶೇಷ ವಾಗಿ ಉದ್ಯಮಶೀಲರೂ ಕರ್ಮಶೀಲರೂ ಆಗಿ ಶಕ್ತಿವಂತರಾಗಿ ಎದ್ದು ನಿಲ್ಲುವರು. ನಾನು ಚೆನ್ನಾಗಿ ನೋಡಿ ಬಿಟ್ಟಿದ್ದೇನೆ. ಈ ದೇಶದಲ್ಲಿ ಈಗ ಯಾರು 'ಧರ್ಮ, ಧರ್ಮ' ಎನ್ನುತ್ತಿದ್ದಾರೆಯೋ ಅವರಲ್ಲಿ ಅನೇಕರು ದುರ್ಬಲರಾದ ರೋಗಿಗಳು, ಹುಳುಕು ಮೆದಳಿನವರು ಅಥವಾ ವಿಚಾರ

ಶೂನ್ಯರಾದ ಹುಂಬರು—ಈಗ ಮಹಾ ರಜೋಗುಣವು ಉದ್ದೀಪ್ತವಾದ ಹೊರತು ನಿಮಗೆ ಇಹವೂ ಇಲ್ಲ, ಪರವೂ ಇಲ್ಲ. ದೇಶ ಘೋರವಾದ ತಮೋಗುಣದಿಂದ ಮುಚ್ಚಿದೆ. ಇದರ ಪರಿಣಾಮ—ಇಹಜೀವನದಲ್ಲಿ ದಾಸತ್ವ, ಪರಲೋಕದಲ್ಲಿ ನರಕ!

ಶಿಷ್ಯ:—ಪಾಶ್ಚಾತ್ಯದೇಶೀಯರ ರಜೋ ಭಾವವನ್ನು ನೋಡಿ ತಮಗೆ ಏನು ಪ್ರತ್ಯಾಶೆಯುಂಟಾಗುತ್ತದೆ? ಅವರು ಕ್ರಮವಾಗಿ ಸಾತ್ತ್ವಿಕ ರಾಗುತ್ತಾರೆಯೆ?

ಸ್ವಾಮಿಜಿ:—ನಿಜ; ಮಹಾ ರಜೋಗುಣ ಸಂಪನ್ನರಾದ ಅವರು ಈಗ ಭೋಗದ ಕೊನೆಯ ಅಂತಸ್ತಿಗೆ ಹತ್ತಿಬಿಟ್ಟಿದ್ದಾರೆ. ಅವರಿಗೇನು ಯೋಗ ಪ್ರಾಪ್ತಿಯಾಗದೆ ಹೊಟ್ಟೆಯ ಚಾಪಲ್ಯವಿರುವ ನಿಮಗಾಗುವುದೆಂದು ಭಾವಿಸಿದಿರಾ? ಅವರ ಉತ್ಕೃಷ್ಟ ಭೋಗವನ್ನು ನೋಡಿದರೆ ನನಗೆ ಮೇಘದೂತದ "ವಿದ್ಯುತ್ವಂತಂ ಲಲಿತವನಿತಾಃ......" ಎಂಬ ಚಿತ್ರ ಮನಸ್ಸಿಗೆ ಗೋಚರವಾಗುತ್ತದೆ. ಅಲ್ಲದೆ, ಅವರ ಭೋಗದಲ್ಲಿರುವುದೇನು?—ಜೌಗುನೆಲದ ಮನೆಗಳಲ್ಲಿ ಚಿಂದಿಗಳ ಮೇಲೆ ಮಲಗಿಕೊಂಡು ವರ್ಷ ವರ್ಷವೂ ಹಂದಿಗಳ ಹಾಗೆ ವಂಶವೃದ್ಧಿಮಾಡುವುದಲ್ಲ! ಹೊಟ್ಟೆಗಿಲ್ಲದೆ ಸಾಯುತ್ತಿರುವ ತಿರುಕನನ್ನೂ ಗುಲಾಮರನ್ನೂ ಪಡೆಯುವುದು ಅಲ್ಲ. ಅದಕ್ಕೆ ಈಗ ಜನರಲ್ಲಿ ರಜೋಗುಣವನ್ನು ಉದ್ದೀಪನಗೊಳಿಸಿ ಅವರನ್ನು ಕರ್ಮಪ್ರಾಣರನ್ನಾಗಿ ಮಾಡಬೇಕಾಗಿದೆಯೆಂದು ಹೇಳಿದ್ದು. ಕರ್ಮ, ಕರ್ಮ, ಕರ್ಮ. ಈಗ "ನಾನ್ಯಃ ಪಂಥಾ ವಿದ್ಯತೇಽಯನಾಯ," ಅದನ್ನು ಬಿಟ್ಟರೆ ಉದ್ಧಾರವಾಗುವುದಕ್ಕೆ ಬೇರೆ ಮಾರ್ಗವೇ ಇಲ್ಲ.

ಶಿಷ್ಯ:—ಮಹಾಶಯ! ನಮ್ಮ ಪೂರ್ವಿಕರೇನು ರಜೋಗುಣ ಸಂಪನ್ನರಾಗಿದ್ದರೆ?

ಸ್ವಾಮಿಜಿ:—ಇರಲಿಲ್ಲವೆ? ಚರಿತ್ರೆ ಹೇಳುತ್ತದೆ. ಅವರು ಎಷ್ಟೋ ದೇಶಗಳಲ್ಲಿ ಉಪನಿವೇಶಗಳನ್ನು ಸ್ಥಾಪನೆ ಮಾಡಿದರು. ತಿಬೆಟ್, ಚೀನಾ, ಸುಮಾತ್ರ, ಬಹು ದೂರದಲ್ಲಿರುವ ಜಪಾನ್‌ವರೆಗೂ ಧರ್ಮ ಪ್ರಚಾರಕರನ್ನು ಕಳುಹಿಸಿದರು. ರಜೋಗುಣದ ಮೂಲಕವಲ್ಲದೆ ಉನ್ನತಿಯುಂಟಾಗುವ ಸಂಭವವುಂಟೆ?

ಹೀಗೆ ಮಾತನಾಡುತ್ತ ಮಾತನಾಡುತ್ತ ರಾತ್ರಿಯಾಯಿತು. ಇಷ್ಟು ಹೊತ್ತಿಗೆ ಮಿಸ್ ಮುಲ್ಲರ್ ಬಂದಳು. ಆಕೆ ಒಬ್ಬ ಇಂಗ್ಲಿಷ್ ಹೆಂಗಸು;

ಸ್ವಾಮಿಗಳಲ್ಲಿ ತುಂಬ ಶ್ರದ್ಧಾಭಕ್ತಿಯುಳ್ಳವಳು. ಸ್ವಾಮಿಜಿ ಶಿಷ್ಯನಿಗೆ ಆಕೆಯ ಪರಿಚಯವನ್ನು ಮಾಡಿಕೊಟ್ಟರು. ಸ್ವಲ್ಪ ಹೊತ್ತು ಮಾತನಾಡಿದ ಬಳಿಕ ಆಕೆ ಮೇಲಕ್ಕೆ ಹೊರಟುಹೋದಳು.

ಸ್ವಾಮಿಜಿ:—ನೋಡಿದೆಯೊ ಎಂಥ ವೀರ ಜಾತಿಯವರು ಇವರು? ಮನೆ ಮಠ ಇರುವುದೆಲ್ಲಿ? ಸಾಲದ್ದಕ್ಕೆ ದೊಡ್ಡ ಮನುಷ್ಯರ ಮನೆ ಹೆಂಗಸು. ಆದರೂ ಧರ್ಮಲಾಭದ ಆಶೆಯನ್ನಿಟ್ಟುಕೊಂಡು ಬಂದಿರುವುದು ಎಲ್ಲಿಗೆ!

ಶಿಷ್ಯ:—ಹೌದು ಮಹಾಶಯ! ಆದರೆ ತಮ್ಮ ಕಾರ್ಯಕಲಾಪಗಳು ಇನ್ನೂ ಅದ್ಭುತವಾದವು. ಎಷ್ಟು ಸಾಹೇಬ ಹೆಂಗಸರು ತಮ್ಮ ಸೇವೆಗಾಗಿ ಸರ್ವದಾ ಸಿದ್ಧರಾಗಿದ್ದಾರೆ! ಈ ಕಾಲದಲ್ಲಿ ಇದು ನಿಜವಾಗಿಯೂ ತುಂಬ ಆಶ್ಚರ್ಯಕರವಾದ ವಿಷಯ!

ಸ್ವಾಮಿಜಿ:—(ತಮ್ಮ ದೇಹವನ್ನು ತೋರಿಸಿ) ಈ ಶರೀರ ಇದ್ದರೆ ಇನ್ನೂ ಎಷ್ಟೊ ನೋಡುವೆ; ಉತ್ಸಾಹಿಗಳೂ ಅಭಿಮಾನಶಾಲಿಗಳೂ ಆದ ಕೆಲವು ಯುವಕರು ಸಿಕ್ಕಿದರೆ ನಾನು ದೇಶವನ್ನು ಅಲ್ಲೋಲ ಕಲ್ಲೋಲ ಮಾಡಿಬಿಟ್ಟೇನು. ಮದ್ರಾಸಿನಲ್ಲಿ ಕೆಲವು ಜನರಿದ್ದಾರೆ; ಆದರೆ ನನಗೆ ಬಂಗಾಳದಲ್ಲಿ ಪ್ರತ್ಯಾಶೆ ಬಹಳ. ಇಂಥ ಪರಿಷ್ಕಾರವಾದ ಬುದ್ಧಿ ಪ್ರಾಯಶಃ ಮತ್ತಾರಿಗೂ ಲಭ್ಯವಾಗಿಲ್ಲ. ಆದರೆ ಇವರ ಮಾಂಸಖಂಡಗಳಲ್ಲಿ ಶಕ್ತಿಯಿಲ್ಲ. ಮೆದಳು ಮತ್ತು ಮಾಂಸಖಂಡಗಳು ಇವೆರಡೂ ಸಮನಾಗಿ ಪೂರ್ಣ ವಿಕಾಸ ಉಳ್ಳವು ಆಗಬೇಕು. ದೃಢಬದ್ಧವಾದ ಶರೀರವೂ ವಿಶೇಷವಾದ ಬುದ್ಧಿಯೂ ಇದ್ದರೆ ಸಾಕು—ಜಗತ್ತೆ ಬಂದು ನಮ್ಮ ಕಾಲಿಗೆ ಬೀಳುತ್ತದೆ.

ಸ್ವಾಮಿಜಿ ಭೋಜನಕ್ಕೆ ಎಲ್ಲವೂ ಸಿದ್ಧವಾಗಿದೆಯೆಂದು ವರ್ತಮಾನ ಬಂತು. ಸ್ವಾಮಿಜಿ ಶಿಷ್ಯನನ್ನು ಕುರಿತು "ಬಾ! ನಾನು ಊಟಮಾಡುವುದನ್ನು ನೋಡುವೆಯಂತೆ" ಎಂದು ಹೇಳಿದರು. ಊಟಮಾಡುತ್ತ "ಎಣ್ಣೆ, ಕೊಬ್ಬು ಇವುಗಳನ್ನೆಲ್ಲಾ ಅತಿ ತಿನ್ನುವುದು ಒಳ್ಳೆಯದಲ್ಲ; ಪೂರಿಗಿಂತಲೂ ರೊಟ್ಟಿ ಒಳ್ಳೆಯದು. ಪೂರಿ ಕಾಯಿಲೆಯವರ ಆಹಾರ; ಹೊಸದಾಗಿರುವ ಕಾಯಿಪಲ್ಯಗಳನ್ನು ತಿನ್ನು, ಸೀ ಪದಾರ್ಥವನ್ನು ಕಡಿಮೆಮಾಡು" ಎಂದರು. ಹೀಗೆ ಮಾತನಾಡುತ್ತ ಆಡುತ್ತ "ಏನಯ್ಯಾ ಎಷ್ಟು ರೊಟ್ಟಿ ತಿಂದೆ? ಇನ್ನೂ ತಿನ್ನ ಬೇಕೇನು?" ಎಂದು ಕೇಳಿದರು—ಎಷ್ಟು ತಿಂದಿದ್ದರೊ ಅದು ಗೊತ್ತಿಲ್ಲ, ಇನ್ನೂ ಹಸಿವು ಇತ್ತೊ ಇಲ್ಲವೊ ಅದನ್ನೂ ತಿಳಿದು

ಕೊಳ್ಳಲಾರದವರಾಗಿದ್ದರು! ಮಾತನಾಡುತ್ತ ಆಡುತ್ತ ಅವರಿಗೆ ಶರೀರದ ಬುದ್ಧಿ ಅಷ್ಟು ಕಡಿಮೆಯಾಗಿ ಹೋಗಿತ್ತು.

ಇನ್ನೊಂದುಸ್ವಲ್ಪ ತಿಂದುಬಿಟ್ಟು ಸ್ವಾಮಿಜಿ ಊಟವನ್ನು ಮುಗಿಸಿದರು. ಶಿಷ್ಯನೂ ಅಪ್ಪಣೆಯನ್ನು ಪಡೆದು ಕಲ್ಕತ್ತೆಗೆ ಹಿಂತಿರುಗಿದನು. ಗಾಡಿ ಸಿಕ್ಕದೆ ಇದ್ದದ್ದರಿಂದ ನಡೆದುಕೊಂಡೆ ಹೋಗಬೇಕಾಯಿತು. ಹೋಗುತ್ತ ಹೋಗುತ್ತ ಮರುದಿನ ಮತ್ತೆ ಸ್ವಾಮಿಗಳನ್ನು ನೋಡುವುದಕ್ಕೆ ಯಾವಾಗ ಬರಬೇಕೆಂದು ಯೋಚನೆ ಮಾಡಿಕೊಂಡನು.

---

## ಅಧ್ಯಾಯ ೩

**ಸ್ಥಳ:—ಕಾಶೀಪುರ: ಗೋಪಾಲ ಲಾಲ ಶೀಲರ ತೋಟ. ವರ್ಷ—ಕ್ರಿ. ಶ. ೧೮೯೭.**

ಸ್ವಾಮಿಜಿ ಮೊದಲುಸಾರಿ ವಿಲಾಯತಿಯಿಂದ ಹಿಂತಿರುಗಿ ಬಂದು ಕೆಲವು ದಿವಸ ಕಾಶೀಪುರದ ಗೋಪಾಲ ಲಾಲ ಶೀಲರ ತೋಟದಲ್ಲಿ ಇದ್ದರು. ಶಿಷ್ಯನು ಆಗ ಪ್ರತಿನಿತ್ಯವೂ ಅಲ್ಲಿಗೆ ಹೋಗಿ ಬರುತ್ತಿದ್ದನು. ಶಿಷ್ಯನೇ ಏಕೆ, ಬಹುಜನ ಉತ್ಸಾಹಶಾಲಿಗಳಾದ ಯುವಕರು ಆಗ ಸ್ವಾಮಿಜಿ ದರ್ಶನ ಮಾಡಬೇಕೆಂದು ಅಲ್ಲಿಗೆ ಬಂದು ಗುಂಪು ಸೇರುತ್ತಿದ್ದರು. ಮಿಸ್‌ಮುಲ್ಲರ್ ಸ್ವಾಮಿಗಳ ಜೊತೆಯಲ್ಲಿ ಬಂದು ಇಲ್ಲಿಯೆ ಮೊದಲು ಉಳಿದುಕೊಂಡಿದ್ದಳು. ಶಿಷ್ಯನ ಗುರುಭ್ರಾತೃವಾದ ಗುಡ್‌ವಿನ್ ಸಾಹೇಬರೂ ಈ ತೋಟದಲ್ಲಿಯೆ ಸ್ವಾಮಿಯುವರೊಡನೆ ಇರುತ್ತಿದ್ದರು.

ಸ್ವಾಮಿಜಿ ಪ್ರಖ್ಯಾತಿ ಆಗ ಭರತಖಂಡದ ಒಂದು ತುದಿಯಿಂದ ಮತ್ತೊಂದು ತುದಿಯವರೆಗೂ ಪ್ರತಿಧ್ವನಿತವಾಗುತ್ತಿತ್ತು. ಆದ್ದರಿಂದ ಕೆಲವರು ಕುತೂಹಲ ಪರವಶರಾಗಿಯೂ, ಕೆಲವರು ತತ್ತ್ವಾನ್ವೇಷಿಗಳಾಗಿಯೂ, ಮತ್ತೆ ಕೆಲವರು ಸ್ವಾಮಿಗಳ ಜ್ಞಾನ ಮಹತ್ವವನ್ನು ಪರೀಕ್ಷೆ ಮಾಡುವುದಕ್ಕಾಗಿಯೂ, ಆಗ ಸ್ವಾಮಿಗಳ ಹತ್ತಿರಕ್ಕೆ ಬರುತ್ತಿದ್ದರು. ಶಿಷ್ಯನು ನೋಡುತ್ತಿದ್ದ ಹಾಗೆಯೇ, ಪ್ರಶ್ನೆಮಾಡುವವರು ಸ್ವಾಮಿಗಳ ಶಾಸ್ತ್ರ ವ್ಯಾಖ್ಯಾನವನ್ನು ಕೇಳಿ ಬೆರಗಾಗಿ ಹೋಗುತ್ತಿದ್ದರು, ಮತ್ತು ಅವರ ಅಸಾಧಾರಣ ಪ್ರತಿಭೆಯನ್ನು ನೋಡಿ ದೊಡ್ಡ ದೊಡ್ಡ ದಾರ್ಶನಿಕರೂ,

ವಿಶ್ವವಿದ್ಯಾನಿಲಯದ ಪ್ರಸಿದ್ಧ ಪಂಡಿತರೂ ಮಂಕುಬಡಿದು ಕುಳಿತುಕೊಳ್ಳು ತ್ತಿದ್ದರು. ಸ್ವಾಮಿಗಳ ಕಂಠದಲ್ಲಿ ಸರಸ್ವತಿ ಸರ್ವದಾ ಇರುತ್ತಿದ್ದಳೆಂದು ತೋರುತ್ತದೆ. ಈ ತೋಟದಲ್ಲಿ ಇದ್ದಾಗಲೇ ಅವರ ಅಲೌಕಿಕವಾದ ಯೋಗ ದೃಷ್ಟಿಯ ಪರಿಚಯವು ಆಗಾಗ್ಗೆ ಉಂಟಾಗುತ್ತಿತ್ತು*.

ಕಲ್ಕತ್ತೆಯ ಬಡೊಬಾಜಾರಿನಲ್ಲಿ ಬಹು ಪಂಡಿತರು ವಾಸಿಸುವರು. ಹಣವಂತರಾದ ಮಾರವಾಡಿ ವರ್ತಕರ ಅನ್ನದಿಂದ ಇವರು ಪೋಷಿತರು. ಈ ವೇದಶಾಸ್ತ್ರಜ್ಞರಾದ ಪಂಡಿತರೆಲ್ಲಾ ಈ ಕಾಲದಲ್ಲಿ ಸ್ವಾಮಿಗಳ ಕೀರ್ತಿ ಯನ್ನು ಕೇಳಿದ್ದರು. ಅವರಲ್ಲಿ ಕೆಲವರು ದೊಡ್ಡ ಪಂಡಿತರು ಸ್ವಾಮಿ ಗಳೊಡನೆ ವಾಕ್ಯಾರ್ಥಮಾಡುವ ಅಭಿಲಾಷೆಯಿಂದ ಒಂದುದಿನ ಈ ತೋಟಕ್ಕೆ ಬಂದರು. ಶಿಷ್ಯನು ಆ ದಿವಸ ಅಲ್ಲಿಗೆ ಹೋಗಿದ್ದನು.

ಬಂದಿದ್ದ ಪಂಡಿತರೆಲ್ಲಾ ಸಂಸ್ಕೃತ ಭಾಷೆಯಲ್ಲಿ ನಿರರ್ಗಳವಾಗಿ ಮಾತಾಡುವ ಸಾಮರ್ಥ್ಯವುಳ್ಳವರಾಗಿದ್ದರು. ಅವರು ಬಂದಕೂಡಲೆ ಗುಂಪಿ ನಿಂದ ಸುತ್ತುವರಿಯಲ್ಪಟ್ಟಿದ್ದ ಸ್ವಾಮಿಗಳನ್ನು ಮಾತನಾಡಿಸಿ ಅವರೊಡನೆ ಸಂಸ್ಕೃತದಲ್ಲಿ ಮಾತು ಮೊದಲುಮಾಡಿದರು. ಸ್ವಾಮಿಜಿ ಸಂಸ್ಕೃತದಲ್ಲಿಯೆ ಅವರಿಗೆ ಉತ್ತರಕೊಡುತ್ತಿದ್ದರು. ಯಾವ ವಿಷಯವನ್ನು ಕುರಿತು ಸ್ವಾಮಿಜಿಯೊಡನೆ ಆ ದಿನ ಪಂಡಿತರು ವಾಕ್ಯಾರ್ಥಮಾಡಿದರೊ ಅದು ಈಗ ಶಿಷ್ಯನಿಗೆ ಜ್ಞಾಪಕವಿಲ್ಲ. ಆದರೆ ಇಷ್ಟುಮಾತ್ರ ಜ್ಞಾಪಕವಿದೆ, ಏನೆಂದರೆ—ಪಂಡಿತರೆಲ್ಲರೂ ಸಾಮಾನ್ಯವಾಗಿ ಒಟ್ಟಿಗೆ ಗದ್ದಲಮಾಡಿ ಸ್ವಾಮಿಜಿಗೆ ದರ್ಶನಗಳ ಕೂಟ ಪ್ರಶ್ನೆಗಳನ್ನು ಹಾಕುತ್ತಿದ್ದರು. ಸ್ವಾಮಿಜಿ ಪ್ರಶಾಂತ ಗಂಭೀರಭಾವದಿಂದ ನಿದಾನವಾಗಿ ಈ ವಿಷಯಗಳಲ್ಲಿ ತಮ್ಮ ವಿಚಾರ ಪೂರ್ವಕವಾದ ಸಿದ್ಧಾಂತವನ್ನು ಹೇಳುತ್ತಿದ್ದರು. ಮತ್ತು ಒಂದು ಅಂಶ ಚನ್ನಾಗಿ ಜ್ಞಾಪಕವಿದೆ, ಅದೇನೆಂದರೆ—ಸ್ವಾಮಿಜಿಯ ಸಂಸ್ಕೃತ ಮಾತು ಪಂಡಿತರ ಮಾತಿಗಿಂತಲೂ ಕಿವಿಗೆ ಇಂಪಾಗಿಯೂ ಸುಲಲಿತ ವಾಗಿಯೂ ಇತ್ತು. ಪಂಡಿತರು ಆಮೇಲೆ ಇದನ್ನು ಒಪ್ಪಿಕೊಂಡರು.

---

* ಇದೇ ತೋಟದಲ್ಲಿರುವಾಗ ಸ್ವಾಮಿಜಿ ಒಂದು ದಿನ ತಲೆಯಿಲ್ಲದ ಒಂದು ಪ್ರೇತವನ್ನು ನೋಡಿದರು. ಅದು ಆಗತಾನೇ ಒದಗಿದ್ದ ಮೃತ್ಯುವಿನ ದೆಸೆಯಿಂದ ದೀನಸ್ವರದಲ್ಲಿ ಪ್ರಾಣಭಿಕ್ಷೆಯನ್ನು ಬೇಡಿಕೊಳ್ಳುವಂತಿತ್ತು. ವಿಚಾರಮಾಡಲು, ನಿಜವಾಗಿಯೂ ಈ ತೋಟದಲ್ಲಿ ಯಾವನೋ ಒಬ್ಬ ಬ್ರಾಹ್ಮಣನು ಹತನಾಗಿ ಸತ್ತು ಹೋಗಿದ್ದನೆಂದು ಆಮೇಲೆ ಗೊತ್ತಾಯಿತು. ಈ ಘಟನೆಯನ್ನು ಅವರು ಆಮೇಲೆ ತಮ್ಮ ಗುರುಭ್ರಾತೃಗಳೊಡನೆ ಹೇಳಿದರು.

ಸಂಸ್ಕೃತ ಭಾಷೆಯಲ್ಲಿ ಸ್ವಾಮಿಜಿ ಹೀಗೆ ನಿರರ್ಗಳವಾಗಿ ಮಾತಾಡುವುದನ್ನು ನೋಡಿ ಅವರ ಗುರು ಭ್ರಾತೃಗಳೂ ಆದಿನ ಸ್ತಂಭಿತರಾಗಿದ್ದರು. ಏಕೆಂದರೆ, ಇದಕ್ಕೆ ಹಿಂದೆ ಆರುವರ್ಷಕಾಲ ಯೂರೋಪ್ ಮತ್ತು ಅಮೆರಿಕಾದಲ್ಲಿ ಇರುವಾಗ ಸಂಸ್ಕೃತವನ್ನು ಮಾತನಾಡುವುದಕ್ಕೆ ಸ್ವಾಮಿಜಿಗೆ ಅಷ್ಟು ಅವಕಾಶ ದೊರೆತಿರಲಿಲ್ಲವೆಂಬುದು ಅವರಿಗೆ ಗೊತ್ತಿತ್ತು. ಶಾಸ್ತ್ರವನ್ನು ತಿಳಿದ ಈ ಪಂಡಿತ ಸಮೂಹದೊಡನೆ ಹೀಗೆ ವಾಕ್ಯಾರ್ಥ ಮಾಡಿದ್ದರಿಂದ, ಸ್ವಾಮಿಗಳಲ್ಲಿ ಅದ್ಭುತಶಕ್ತಿ ಸ್ಫುರಿಸಿತ್ತೆಂದು ಅವರು ತಿಳಿದುಕೊಂಡರು. ಆದಿನ ಈ ಸಭೆಯಲ್ಲಿ ರಾಮಕೃಷ್ಣಾನಂದ, ಯೋಗಾನಂದ, ನಿರ್ಮಲಾನಂದ, ತುರೀಯಾನಂದ ಮತ್ತು ಶಿವಾನಂದ ಸ್ವಾಮಿಗಳೂ ಇದ್ದರು.

ಸ್ವಾಮಿಜಿ ಪಂಡಿತರೊಡನೆ ವಾದಮಾಡುವಾಗ ಸಿದ್ಧಾಂತ ಪಕ್ಷವನ್ನು ಹಿಡಿದಿದ್ದರು; ಪಂಡಿತರು ಪೂರ್ವ ಪಕ್ಷ ವಹಿಸಿದ್ದರು. ಶಿಷ್ಯನಿಗೆ ಒಂದು ವಿಷಯ ಜ್ಞಾಪಕಕ್ಕೆ ಬಂತು; ಏನೆಂದರೆ, ಬಹಳ ಹೊತ್ತಿನ ಮೇಲೆ ಸ್ವಾಮಿಜಿ ಒಂದು ಕಡೆ 'ಸ್ವಸ್ತಿ' ಎಂದು ಹೇಳಬೇಕಾಗಿದ್ದಾಗ 'ಅಸ್ತಿ' ಎನ್ನಲು, ಪಂಡಿತರು ನಗುವುದಕ್ಕೆ ತೊಡಗಿದರು. ಅದನ್ನು ನೋಡಿ ಸ್ವಾಮಿಜಿ ಆ ಕ್ಷಣವೇ "ಪಂಡಿತಾನಾಂ ದಾಸೋಹಂ ಕ್ಷಂತವ್ಯಮೇತತ್ ಸ್ಖಲನಂ" (ನಾನು ಪಂಡಿತರ ದಾಸ; ನನ್ನ ಈ ವ್ಯಾಕರಣದ ತಪ್ಪನ್ನು ಕ್ಷಮಿಸಬೇಕು) ಎಂದರು. ಪಂಡಿತರೂ ಸ್ವಾಮಿಗಳ ಈ ವಿಧವಾದ ನಮ್ರತೆಯನ್ನು ನೋಡಿ ಬೆರಗಾಗಿ ಹೋದರು. ಬಹಳ ಹೊತ್ತು ವಾದಾನುವಾದಗಳಾದ ಮೇಲೆ ಸಿದ್ಧಾಂತ ಪಕ್ಷವನ್ನು ಹಿಡಿದು ವಿಚಾರಮಾಡಿದ್ದು ಸಮರ್ಪಕವಾಯಿತೆಂದು ಪಂಡಿತರು ಒಪ್ಪಿಕೊಂಡು, ಸಂತೋಷದಿಂದ ಮಾತನಾಡಿ ಹೊರಡುವುದಕ್ಕೆ ಸಿದ್ಧರಾದರು. ಅಲ್ಲಿಗೆ ಬಂದಿದ್ದ ನಾಲ್ಕೈದು ಜನ ದೊಡ್ಡ ಮನುಷ್ಯರು ಆಗ ಅವರ ಹಿಂದೆ ಹೋಗಿ "ಮಹಾಶಯರೆ, ಸ್ವಾಮಿಜಿ ವಿಷಯವಾಗಿ ತಾವೇನು ತಿಳಿದುಕೊಳ್ಳೋಣವಾಯಿತು?" ಎಂದು ಕೇಳಿದರು. ಅದಕ್ಕೆ ಅವರಲ್ಲಿ ಎಲ್ಲರಿಗಿಂತಲೂ ಹೆಚ್ಚು ವಯಸ್ಸಾಗಿದ್ದ ಪಂಡಿತರು "ವ್ಯಾಕರಣದಲ್ಲಿ ಗಂಭೀರವಾದ ವ್ಯುತ್ಪತ್ತಿ ಇಲ್ಲದಿದ್ದರೂ ಸ್ವಾಮಿಗಳು ಶಾಸ್ತ್ರದ ಗೂಢಾರ್ಥವನ್ನು ಬಲ್ಲವರು; ವಾಕ್ಯಾರ್ಥ ಮಾಡುವುದರಲ್ಲಿ ಅದ್ವಿತೀಯರು; ಮತ್ತು ತಮ್ಮ ಪ್ರತಿಭಾಬಲದಿಂದ ಖಂಡನೆ ಮಾಡುತ್ತಾ ಅದ್ಭುತ ಪಾಂಡಿತ್ಯವನ್ನು ತೋರಿಸಿದ್ದಾರೆ" ಎಂದು ಉತ್ತರಕೊಟ್ಟರು.

ಸ್ವಾಮಿಜಿಮೇಲೆ ಅವರ ಗುರು ಭ್ರಾತೃಗಳಿಗೆ ಯಾವಾಗಲೂ ಎಂಥ ಅದ್ಭುತವಾದ ಪ್ರೀತಿಯು ಇರುತ್ತಿತ್ತು! ಪಂಡಿತರೊಡನೆ ಸ್ವಾಮಿಗಳಿಗೆ ಜಟಿಲ ವಿಚಾರ ಹತ್ತಿಕೊಂಡಿದ್ದಾಗ, ಅವರು ಕುಳಿತಿದ್ದ ತೊಟ್ಟಿಗೆ ಉತ್ತರ ದಲ್ಲಿದ್ದ ಕೊಠಡಿಯಲ್ಲಿ ರಾಮಕೃಷ್ಣಾನಂದ ಸ್ವಾಮಿಗಳು ಜಪಮಾಡು ತ್ತಿದ್ದದ್ದು ಶಿಷ್ಯನ ಕಣ್ಣಿಗೆ ಬಿತ್ತು. ಪಂಡಿತರೆಲ್ಲರೂ ಹೊರಟು ಹೋದಮೇಲೆ ಇದರ ಕಾರಣವನ್ನು ವಿಚಾರಮಾಡಲಾಗಿ, ಸ್ವಾಮಿಗಳಿಗೆ ವಿಜಯವಾಗುವು ದಕ್ಕಾಗಿಯೆ ಒಂದೇ ಮನಸ್ಸಿನಿಂದ ಪರಮಹಂಸರ ಪಾದಪದ್ಮದಲ್ಲಿ ಅವರು ಪ್ರಾರ್ಥನೆಮಾಡುತ್ತಿದ್ದರೆಂದು ತಿಳಿಯಬಂತು!

ಪಂಡಿತರು ಹೊರಟು ಹೋದಮೇಲೆ, ಪೂರ್ವಪಕ್ಷ ಮಾಡುತ್ತಿದ್ದ ಆ ಪಂಡಿತರು ಪೂರ್ವ ಮೀಮಾಂಸ ಶಾಸ್ತ್ರದಲ್ಲಿ ದೊಡ್ಡ ವಿದ್ವಾಂಸರೆಂದು, ಶಿಷ್ಯನು ಸ್ವಾಮಿಗಳಿಂದ ತಿಳಿದುಕೊಂಡನು. ಸ್ವಾಮಿಜಿ ಉತ್ತರ ಮೀಮಾಂಸಾ ಪಕ್ಷವನ್ನು ಹಿಡಿದು ಅವರಿಗೆ ಜ್ಞಾನಕಾಂಡದ ಶ್ರೇಷ್ಠತೆ ಯನ್ನು ತೋರಿಸಿದರು. ಪಂಡಿತರೂ ಸ್ವಾಮಿಜಿ ಸಿದ್ಧಾಂತವನ್ನು ಒಪ್ಪಿ ಕೊಳ್ಳಲೇ ಬೇಕಾಯಿತು.

ವ್ಯಾಕರಣದ ಒಂದು ತಪ್ಪನ್ನು ಹಿಡಿದುಕೊಂಡು ಪಂಡಿತರು ಸ್ವಾಮಿ ಗಳನ್ನು ಹಾಸ್ಯಮಾಡಿದರಷ್ಟೆ, ಆ ವಿಚಾರದಲ್ಲಿ ಸ್ವಾಮಿಜಿ "ಬಹು ವರ್ಷ ಗಳಿಂದಲೂ ಸಂಸ್ಕೃತದಲ್ಲಿ ಮಾತು ಕಥೆಗಳನ್ನಾಡದೆ ಇದ್ದದ್ದರಿಂದ ಹೀಗೆ ತಪ್ಪು ಬಂದು ಬಿಟ್ಟಿತು" ಎಂದು ಹೇಳಿದರು. ಪಂಡಿತರನ್ನು ಇದಕ್ಕಾಗಿ ಅವರು ಸ್ವಲ್ಪವೂ ಆಕ್ಷೇಪಣೆ ಮಾಡಲಿಲ್ಲ. ಆದರೆ ಈ ವಿಷಯವಾಗಿ ಸ್ವಾಮಿ ಗಳು ಈ ಒಂದು ಅಂಶವನ್ನೇನೊ ಹೇಳಿದರು; ಏನೆಂದರೆ–ಪಾಶ್ಚಾತ್ಯ ದೇಶದಲ್ಲಿ ವಾದ ಮಾಡುತ್ತಿರುವಾಗ ಮೂಲ ವಿಷಯವನ್ನು ಬಿಟ್ಟು ಹೀಗೆ ಭಾಷೆಯ ಸಾಮಾನ್ಯವಾದ ಒಂದು ದೋಷವನ್ನು ಹಿಡಿಯುವುದು ಪ್ರತಿ ಪಕ್ಷದವರ ಮಹಾ ಅಸೌಜನ್ಯವನ್ನು ಸೂಚಿಸುತ್ತದೆ: ಸಭ್ಯ ಸಮಾಜ ಇಂಥ ಸ್ಥಳಗಳಲ್ಲಿ ಅಭಿಪ್ರಾಯವನ್ನು ಗ್ರಹಣ ಮಾಡುತ್ತದೆ. ಭಾಷೆಯ ಕಡೆಗೆ ಲಕ್ಷ್ಯವನ್ನೇ ಕೊಡುವುದಿಲ್ಲ. "ನಿಮ್ಮ ದೇಶದಲ್ಲಿಯಾದರೋ ಹೊಟ್ಟೆ ಗಾಗಿಯೇ ಹೊಡೆದಾಟವಾಗುತ್ತದೆ–ಒಳಗಿರುವ ತಿರುಳನ್ನು ಕೇಳುವವನೇ ಇಲ್ಲ"–ಎಂದು ಹೇಳಿ ಸ್ವಾಮಿಜಿ ಶಿಷ್ಯನೊಡನೆ ಆ ದಿವಸ ಸಂಸ್ಕೃತದಲ್ಲಿ ಮಾತನಾಡುವುದಕ್ಕೆ ಮೊದಲು ಮಾಡಿದರು. ಶಿಷ್ಯನೂ ಹರಕು ಮುರುಕು ಸಂಸ್ಕೃತದಲ್ಲಿ ಉತ್ತರ ಕೊಡುತ್ತಿದ್ದನು. ಅಂದಿನಿಂದ ಶಿಷ್ಯನು ಸ್ವಾಮಿಜಿ

ಇಷ್ಟದಂತೆ ಅವರೊಡನೆ ಸಾಮಾನ್ಯವಾಗಿ ಆಗಾಗ್ಯೆ ದೇವ ಭಾಷೆಯಲ್ಲಿ (ಸಂಸ್ಕೃತದಲ್ಲಿ) ಮಾತನಾಡುತ್ತಿದ್ದನು.

"ನಾಗರಿಕತೆ" ಎಂಬುದು ಯಾವುದು? ಎಂಬ ಪ್ರಶ್ನೆಗೆ ಉತ್ತರವಾಗಿ ಅಂದು ಸ್ವಾಮಿಜಿ ಹೇಳಿದ್ದೇನೆಂದರೆ:—ಯಾವ ಸಮಾಜ ಅಥವಾ ಜಾತಿ ಆಧ್ಯಾತ್ಮಿಕ ಭಾವದಲ್ಲಿ ಎಷ್ಟೆಷ್ಟು ಮುಂದಾಗಿದೆಯೊ ಆ ಸಮಾಜ ಮತ್ತು ಜಾತಿ ಅಷ್ಟಷ್ಟು ನಾಗರಿಕ. ನಾನಾ ಕಾರ್ಖಾನೆಗಳನ್ನು ಇಟ್ಟು ಕೊಂಡು ಐಹಿಕಜೀವನದ ಸುಖಸ್ವಾಚ್ಛಂದ್ಯಗಳನ್ನು ಹೆಚ್ಚಿಸಿಕೊಂಡು ಬಿಟ್ಟ ಮಾತ್ರದಿಂದಲೆ ಯಾವುದಾದರೊಂದು ಜಾತಿಯು ನಾಗರಿಕವಾಯಿತೆಂದು ಹೇಳುವುದಕ್ಕಾಗುವುದಿಲ್ಲ. ಈಗಿನ ಪಾಶ್ಚಾತ್ಯ ನಾಗರಿಕತೆ ಜನರ ಹಾಹಾಕಾರವನ್ನೂ ಅಭಾವವನ್ನೂ ದಿನೇ ದಿನೇ ಹೆಚ್ಚಿಸುತ್ತಿದೆ. ಆದರೆ ಭಾರತೀಯ ಪ್ರಾಚೀನ ನಾಗರಿಕತೆ ಸರ್ವಸಾಧಾರಣರಿಗೂ ಆಧ್ಯಾತ್ಮಿಕ ಉನ್ನತಿಯ ಮಾರ್ಗವನ್ನು ತೋರಿಸುತ್ತಾ, ಜನಗಳ ಐಹಿಕ ಅಭಾವವನ್ನು ಒಟ್ಟಿಗೆ ಹೋಗಲಾಡಿಸಲಾರದಿದ್ದರೂ ಬಹಳಮಟ್ಟಿಗೆ ಅದನ್ನು ಕಡಿಮೆ ಮಾಡುತ್ತಾ ಇತ್ತು; ಅದಕ್ಕೆ ಸಂದೇಹವಿಲ್ಲ. ಈಗಿನ ಕಾಲದಲ್ಲಿ ಈ ಎರಡು ವಿಧವಾದ ನಾಗರಿಕತೆಯನ್ನೂ ಒಂದು ಕಡೆ ಸೇರಿಸುವುದಕ್ಕೇ ಭಗವಾನ್ ಶ್ರೀ ರಾಮಕೃಷ್ಣಪರಮಹಂಸರು ಅವತಾರಮಾಡಿದರು. ಈಗಿನ ಕಾಲದಲ್ಲಿ ಜನರು ಒಂದು ಕಡೆಯಲ್ಲಿ ಹೇಗೆ ಕರ್ಮತತ್ಪರರಾಗಬೇಕೊ, ಹಾಗೆ ಮತ್ತೊಂದು ಕಡೆಯಲ್ಲಿ ಗಂಭೀರವಾದ ಆಧ್ಯಾತ್ಮಿಕ ಜ್ಞಾನವನ್ನು ಸಂಪಾದಿಸಬೇಕು. ಹೀಗೆ ಭಾರತೀಯ ಮತ್ತು ಪಾಶ್ಚಾತ್ಯ ನಾಗರಿಕತೆಯ ಪರಸ್ಪರ ಸಮ್ಮಿಶ್ರಣದಿಂದ ಜಗತ್ತಿನಲ್ಲಿ ಹೊಸ ಯುಗ ಆರಂಭವಾಗುತ್ತದೆಂಬ ವಿಷಯವನ್ನೂ ಆ ದಿನ ಸ್ವಾಮಿಜಿ ವಿಶೇಷವಾಗಿ ತಿಳಿಸಿದರು. ಇದನ್ನು ತಿಳಿಸುತ್ತ ತಿಳಿಸುತ್ತ ಸ್ವಾಮಿಜಿ ಒಂದು ಕಡೆ ಹೇಳಿದ್ದೇನೆಂದರೆ:—"ಮತ್ತೊಂದು ವಿಷಯ—ಧರ್ಮ ಪರಾಯಣರಾದಷ್ಟು ಅವರು ಹೊರಗಿನ ಆಚಾರ ವ್ಯವಹಾರಗಳಲ್ಲಿ ಅಷ್ಟು ಗಂಭೀರರಾಗಬೇಕೆಂದು ಆ ದೇಶದ ಜನರ ಭಾವನೆ; ಬಾಯಲ್ಲಿ ಬೇರೇ ಮಾತೇ ಬರುವುದಿಲ್ಲ. ಒಂದು ಕಡೆಯಲ್ಲಿ ನನ್ನ ಬಾಯಿನಿಂದ ಉದಾರವಾದ ಧಾರ್ಮಿಕ ವಿಷಯಗಳನ್ನು ಕೇಳಿ ಆ ದೇಶದ ಧರ್ಮಪ್ರಚಾರಕರು ಹೇಗೆ ಬೆರಗಾಗುತ್ತಿದ್ದರೊ, ಉಪನ್ಯಾಸವಾದ ಮೇಲೆ ಇಷ್ಟ ಮಿತ್ರರೊಡನೆ ನಾನು ತಿಂಡಿ ತೀರ್ಥಗಳನ್ನು ಮಾಡುವುದನ್ನು ನೋಡಿ ಅಷ್ಟು ಬೆರಗಾಗುತ್ತಿದ್ದರು. ಬಾಯಿಬಿಟ್ಟು

ಕೆಲವು ಸಾರಿ 'ಸ್ವಾಮಿಜಿ! ತಾವು ಧರ್ಮಪ್ರಚಾರಕರು; ಸಾಧಾರಣ ಜನರಂತೆ ಹೀಗೆ ಹಾಸ್ಯ ಪರಿಹಾಸ್ಯಗಳನ್ನು ಮಾಡುವುದು ತಮಗೆ ಯೋಗ್ಯ ವಲ್ಲ, ಈ ವಿಧವಾದ ಚಪಲತೆ ತಮಗೆ ಗೌರವ ಜನಕವಲ್ಲ' ಎಂದು ಹೇಳಿಯೂ ಬಿಡುತ್ತಿದ್ದರು. ಅದಕ್ಕೆ ನಾನು 'ನಾವು ಬ್ರಹ್ಮಾನಂದದ ಮಕ್ಕಳು, ಮುಖವನ್ನೇಕೆ ಜೋಲು ಬಿಟ್ಟುಕೊಂಡಿರಬೇಕು?' ಎಂದು ಉತ್ತರಕೊಡುತ್ತಿದ್ದೆನು. ಈ ಮಾತನ್ನು ಕೇಳಿ ಅವರು ಅದರ ಗೂಢಾರ್ಥ ವನ್ನು ಗ್ರಹಿಸುತ್ತಿದ್ದರೊ ಇಲ್ಲವೊ ಸಂದೇಹ."

ಆ ದಿನ ಸ್ವಾಮಿಜಿ ಭಾವ ಸಮಾಧಿ ಮತ್ತು ನಿರ್ವಿಕಲ್ಪ ಸಮಾಧಿ ಗಳ ವಿಚಾರವಾಗಿಯೂ ನಾನಾ ವಿಷಯಗಳನ್ನು ಹೇಳಿದರು. ಸಾಧ್ಯ ವಾದಷ್ಟು ಮಟ್ಟಿಗೆ ಅದು ಮುಂದೆ ನಿರೂಪಿಸಲ್ಪಟ್ಟಿದೆ.—

"ಒಬ್ಬನು ಹನುಮಂತನ ಹಾಗೆ ಭಕ್ತಿಭಾವದಲ್ಲಿ ಸಾಧನೆಯನ್ನು ಮಾಡುತ್ತಿದ್ದಾನೆಂದುಕೊ! ಭಾವನೆ ಹೇಗೆ ಹೇಗೆ ಗಾಢವಾಗುತ್ತ ಹೋಗು ತ್ತದೆಯೊ, ಹಾಗೆ ಹಾಗೆ ಆ ಸಾಧಕನ ನಡೆನುಡಿ ಭಾವ ಭಂಗಿ—ಅಷ್ಟೆ ಏಕೆ?—ದೇಹದ ಅಂಗಾಂಗ ರಚನೆಯೂ ಆಗುತ್ತದೆ. "ಜಾತ್ಯಂತರ ಪರಿಣಾಮವು" ಹೀಗೆಯೆ ಆಗುವುದು. ಹೀಗೆ ಒಂದು ಭಾವವನ್ನು ಹಿಡಿದು ಸಾಧಕನು ಕ್ರಮವಾಗಿ ಅದೇ ರೂಪವಾಗಿ ಪರಿಣಮಿಸಿ ಬಿಡುವನು. ಯಾವುದಾದರೂ ಒಂದು ವಿಧವಾದ ಭಾವದ ಕೊನೆಯ ಅವಸ್ಥೆಗೇ 'ಭಾವ ಸಮಾಧಿ' ಎಂದು ಹೆಸರು. ಆಮೇಲೆ 'ನಾನು ದೇಹವಲ್ಲ,' 'ಮನಸ್ಸಲ್ಲ' 'ಬುದ್ಧಿಯಲ್ಲ,' ಎಂದು 'ನೇತಿ' 'ನೇತಿ' ಮಾರ್ಗವನ್ನು ಅನುಸರಿಸಿ ಜ್ಞಾನಿಯಾದ ಸಾಧಕನು ಚಿನ್ಮಾತ್ರ ಸ್ಥಿತಿಯಲ್ಲಿ ಇದ್ದುಬಿಟ್ಟರೆ, ನಿರ್ವಿಕಲ್ಪ ಸಮಾಧಿಯುಂಟಾಗುತ್ತದೆ. ಒಂದೊಂದೇ ಭಾವವನ್ನು ತೆಗೆದುಕೊಂಡು ಅದರಲ್ಲಿ ಸಿದ್ಧನಾಗಬೇಕಾದರೆ—ಅಥವಾ ಆ ಭಾವದ ಕೊನೆಯ ಅವಸ್ಥೆಗೆ ಹೋಗಬೇಕಾದರೆ—ಎಷ್ಟೋ ಜನ್ಮಗಳು ಹಿಡಿಯುತ್ತವೆ. ಹೀಗಿರಲು ಭಾವರಾಜ್ಯದ ರಾಜರಾದ ನಮ್ಮ ಪರಮಹಂಸರಾದರೊ ಹದಿನೆಂಟು ಭಾವಗಳಲ್ಲಿ ಸಿದ್ಧಿಯನ್ನು ಪಡೆದರು! ಭಾವ ಮುಖದಲ್ಲಿ ಇಲ್ಲದೆ ಇದ್ದರೆ ಅವರ ಶರೀರ ನಿಲ್ಲುತ್ತಿರಲಿಲ್ಲ—ಎಂದೂ ಅವರು ಹೇಳುತ್ತಿದ್ದರು.

ಆ ಮಾತು ಈ ಮಾತಿನ ಮೇಲೆ ಶಿಷ್ಯನು ಆ ದಿವಸ "ಮಹಾಶಯ! ಆ ದೇಶದಲ್ಲಿ ಊಟ ಉಪಚಾರಾದಿಗಳನ್ನು ಹೇಗೆ ಮಾಡುತ್ತಿದ್ದಿರಿ?" ಎಂದು ಕೇಳಿದನು.

ಸ್ವಾಮಿಜಿ:—ಆ ದೇಶದವರಂತೆಯೆ ಮಾಡುತ್ತಿದ್ದೆ; ನಾನು ಸನ್ಯಾಸಿ; ನನಗೆ ಯಾತರಿಂದಲೂ ಜಾತಿ ಹೋಗುವುದಿಲ್ಲ.

ಈ ದೇಶದಲ್ಲಿ ಅವರು ಮುಂದೆ ಯಾವ ರೀತಿ ಕಾರ್ಯ ಮಾಡಬೇಕೆಂದಿದ್ದರೊ ಆ ವಿಷಯವಾಗಿಯೂ ಆ ದಿನ ಸ್ವಾಮಿಜಿ ಹೀಗೆಂದರು:—

"ಮದ್ರಾಸು ಮತ್ತು ಕಲ್ಕತ್ತ ಇವೆರಡನ್ನೂ ಕೇಂದ್ರ ಸ್ಥಾನಗಳನ್ನಾಗಿ ಮಾಡಿಕೊಂಡು ಸಮಸ್ತ ವಿಧವಾದ ಲೋಕ ಕಲ್ಯಾಣಕ್ಕೋಸ್ಕರ ಹೊಸ ಪರಿಯ ಸಾಧು ಸನ್ಯಾಸಿಗಳನ್ನು ಸಿದ್ಧಪಡಿಸುತ್ತೇನೆ. ಮತ್ತೊಂದು ವಿಷಯವೇನೆಂದರೆ, ಧ್ವಂಸದ ಮೂಲಕ-ಅಥವಾ ಪ್ರಾಚೀನ ರೀತಿನೀತಿಗಳನ್ನು ತಲೆಕೆಳಗುಮಾಡಿ-ಸಮಾಜದ ಅಥವಾ ದೇಶದ ಉನ್ನತಿಯನ್ನು ಸಾಧಿಸುವುದಕ್ಕಾಗುವುದಿಲ್ಲ. ಎಲ್ಲಾ ಕಾಲಗಳಲ್ಲಿಯೂ ಉನ್ನತಿಯು ನಿರ್ಮಾಣ ಮಾರ್ಗದ ಮೂಲಕ, ಎಂದರೆ, ಪ್ರಾಚೀನರೀತಿ ಮುಂತಾದ್ದನ್ನು ಹೊಸ ವಿಧದಲ್ಲಿ ಬದಲಾಯಿಸಿಕೊಂಡೇ ಬಂದಿರುವುದು. ಭರತಖಂಡದ ಧರ್ಮ ಪ್ರಚಾರಕರು ಮಾತ್ರವೆ ಹಿಂದಿನ ಕಾಲಗಳಲ್ಲಿ ಹೀಗೆ ಮಾಡಿದ್ದಾರೆ. ಬುದ್ಧದೇವನ ಧರ್ಮ ಒಂದು ಮಾತ್ರ ಪ್ರಾಚೀನ ರೀತಿ ನೀತಿಗಳನ್ನು ಧ್ವಂಸ ಪಡಿಸತಕ್ಕದ್ದು ಆಗಿತ್ತು. ಅದಕ್ಕೋಸ್ಕರವೆ ಈ ಮತ ಭರತಖಂಡದಲ್ಲಿ ನಿರ್ನಾಮವಾಗಿ ಹೋಗಿದೆ."

ಸ್ವಾಮಿಜಿ ಈ ರೀತಿಯಲ್ಲಿ ಮಾತನಾಡುತ್ತ ಆಡುತ್ತ ಮತ್ತೊಂದು ವಿಷಯವನ್ನು ಹೇಳುತ್ತಿದ್ದದ್ದು ಶಿಷ್ಯನಿಗೆ ಜ್ಞಾಪಕವಿದೆ-ಒಬ್ಬ ಮನುಷ್ಯನಲ್ಲಿ ಬ್ರಹ್ಮವಿಕಾಸವಾದರೆ ಸಾವಿರಾರು ಜನರು ಅದರ ಬೆಳಕಿನಲ್ಲಿ ದಾರಿಯನ್ನು ಕಂಡುಕೊಂಡು ಮುಂದುವರಿಯುತ್ತಾರೆ. ಬ್ರಹ್ಮಜ್ಞ ಪುರುಷರು ಮಾತ್ರವೆ ಲೋಕ ಗುರುಗಳು; ಈ ವಿಷಯವು ಸರ್ವಶಾಸ್ತ್ರ ಮತ್ತು ಯುಕ್ತಿಗಳಿಂದ ಸಾಧಿಸಲ್ಪಟ್ಟಿದೆ. ಅವೈದಿಕವೂ ಅಶಾಸ್ತ್ರೀಯವೂ ಆದ ಕುಲಗುರು ಪದ್ಧತಿಯನ್ನು ಸ್ವಾರ್ಥಪರರಾದ ಬ್ರಾಹ್ಮಣರೆ ಈ ದೇಶದಲ್ಲಿ ಪ್ರಚಾರಕ್ಕೆ ತಂದಿದ್ದಾರೆ. ಇದರಿಂದಲೆ ಸಾಧನ ಮಾಡಿದರೂ ಜನರು ಈಗ ಸಿದ್ಧರು ಅಥವಾ ಬ್ರಹ್ಮಜ್ಞರು ಆಗಲಾರದವರಾಗಿದ್ದಾರೆ. ಧರ್ಮದ ಈ ಗ್ಲಾನಿಯನ್ನೆಲ್ಲಾ ದೂರಮಾಡುವುದಕ್ಕೇ ಶ್ರೀ ರಾಮಕೃಷ್ಣ ಪರಮಹಂಸರು ದೇಹಧಾರಣೆಮಾಡಿ ಈಗ ಪ್ರಪಂಚದಲ್ಲಿ ಅವತಾರ ಮಾಡಿದರು. ಅವರು ತೋರಿಸಿಕೊಟ್ಟಿರುವ ಸಾರ್ವಭೌಮಿಕ ಮತ ಜಗತ್ತಿನಲ್ಲಿ ಪ್ರಚಾರಕ್ಕೆ ಬಂದರೆ ಜಗತ್ತಿಗೂ ಜನರಿಗೂ ಮಂಗಳವಾಗುತ್ತದೆ. ಇಂಥ ಅದ್ಭುತ

ಮಹಾ ಸಮನ್ವಯಾಚಾರ್ಯರು ಯಾರು ಅನೇಕ ಶತಮಾನಗಳಿಂದ ಈಚೆಗೆ ಭರತಖಂಡದಲ್ಲಿ ಅವತಾರ ಮಾಡಿರಲಿಲ್ಲ.

ಸ್ವಾಮಿಜಿ ಗುರುಭ್ರಾತೃಗಳಲ್ಲಿ ಒಬ್ಬರು ಈ ಸಮಯದಲ್ಲಿ "ನೀವು ಆ ದೇಶದಲ್ಲಿ ಯಾವಾಗಲೂ ಎಲ್ಲರೆದುರಿಗೂ ಪರಮಹಂಸರು ಅವತಾರ ಪುರುಷರೆಂದು ಏಕೆ ಪ್ರಚಾರಮಾಡಲಿಲ್ಲ?" ಎಂದು ಕೇಳಿದರು.

ಸ್ವಾಮಿಜಿ:—ಅವರು ದರ್ಶನ ವಿಜ್ಞಾನಗಳನ್ನು ದೊಡ್ಡದು ಮಾಡಿ ಮುಂದೆ ತಂದಿಡುತ್ತಾರೆ. ಆದ್ದರಿಂದ ಯುಕ್ತಿ ತರ್ಕ ದರ್ಶನ ವಿಜ್ಞಾನ ಇವುಗಳ ಮೂಲಕವೆ ಅವರ ಜ್ಞಾನ ಗೌರವವನ್ನು ಪುಡಿಪುಡಿ ಮಾಡದಿದ್ದರೆ, ಯಾವ ವಿಧವಾದ ಮರ್ಯಾದೆಯೂ ಬರುವುದಿಲ್ಲ. ಯುಕ್ತಿ ತರ್ಕಗಳಿಗೆ ಸೋತು ನಿಜವಾಗಿ ತತ್ತ್ವಾನ್ವೇಷಿಗಳಾಗಿ ಯಾರು ನನ್ನ ಹತ್ತಿರಕ್ಕೆ ಬರುತ್ತಿದ್ದರೊ ಅವರಿಗೆ ಪರಮಹಂಸರ ವಿಚಾರವನ್ನು ಹೇಳುತ್ತಿದ್ದೆ. ಹಾಗಲ್ಲದೆ ಥಟ್ಟನೆ ಅವತಾರದ ವಿಷಯವನ್ನು ಹೇಳುತ್ತಿದ್ದರೆ ಅವರು "ಅದೇನು ಹೊಸವಿಷಯ ನೀವು ಹೇಳುವುದು?—ನಮ್ಮ ಪ್ರಭು ಏಸು ಕ್ರಿಸ್ತನೂ ಇದ್ದಾನೆ" ಎಂದು ಬಿಡುತ್ತಿದ್ದರು.

ಮೂರು ನಾಲ್ಕು ಗಂಟೆಯ ಹೊತ್ತು ಹೀಗೆ ಆತ್ಮಾನಂದದಲ್ಲಿ ಕಳೆದು ಶಿಷ್ಯನು ಆದಿನ ಅಲ್ಲಿಗೆ ಬಂದಿದ್ದ ಇತರ ಜನರೊಡನೆ ಕಲ್ಕತ್ತೆಗೆ ಹಿಂತಿರುಗಿದನು.

---

## ಅಧ್ಯಾಯ ೪

**ಸ್ಥಳ:—ಶ್ರೀ ನವಗೋಪಾಲ ಘೋಷರ ಮನೆ, ರಾಮಕೃಷ್ಣಪುರ, ಹೌರಾ.**
**ವರ್ಷ—ಕ್ರಿ. ಶ. ೧೮೯೭.**

ಶ್ರೀ ಶ್ರೀರಾಮಕೃಷ್ಣ ಪರಮಹಂಸರ ಪರಮಭಕ್ತರಾದ ಶ್ರೀಯುಕ್ತ ಬಾಬೂ ನವಗೋಪಾಲ ಘೋಷಜಾ ಮಹಾಶಯರು ಭಾಗೀರಥಿಯ ಪಶ್ಚಿಮ ದಡದಲ್ಲಿದ್ದ ಹೌರಾಕ್ಕೆ ಸೇರಿದ ರಾಮಕೃಷ್ಣಪುರದಲ್ಲಿ ಹೊಸದಾಗಿ ಒಂದು ಮನೆಯನ್ನು ಕಟ್ಟಿಸಿದ್ದರು. ಈ ಮನೆಗಾಗಿ ಸ್ಥಳವನ್ನು ಕೊಂಡುಕೊಳ್ಳುವಾಗ ಆ ಭಾಗಕ್ಕೆ 'ರಾಮಕೃಷ್ಣಪುರ' ವೆಂದು ಹೆಸರಿರುವುದಾಗಿ ತಿಳಿದು

ಅವರಿಗೆ ತುಂಬಾ ಸಂತೋಷವಾಯಿತು. ಏಕೆಂದರೆ ಈ ಗ್ರಾಮದ ಹೆಸರು ಹೇಳಿದರೆ ತಮ್ಮ ಇಷ್ಟದೇವತೆಯ ಜ್ಞಾಪಕ ಬರುವುದು. ಮನೆ ಕಟ್ಟಿ ಮುಗಿದ ಸ್ವಲ್ಪ ದಿನಕ್ಕೆ ಸ್ವಾಮಿಜಿ ಮೊದಲನೆಯ ಸಲ ವಿಲಾಯತಿಯಿಂದ ಕಲ್ಕತ್ತೆಗೆ ಹಿಂತಿರುಗಿ ಬಂದರು. ಆದ್ದರಿಂದ ಘೋಷಜರಿಗೂ ಮತ್ತು ಅವರ ಹೆಂಡತಿಗೂ, ಸ್ವಾಮಿಜಿಯಿಂದ ಆ ಮನೆಯಲ್ಲಿ ರಾಮಕೃಷ್ಣ ವಿಗ್ರಹವನ್ನು ಪ್ರತಿಷ್ಠೆಮಾಡಿಸಬೇಕೆಂಬುದೊಂದು ದೊಡ್ಡ ಅಪೇಕ್ಷೆಯಾಗಿತ್ತು. ಘೋಷ ಜರು ಮಠಕ್ಕೆ ಹೋಗಿ ಕೆಲವುದಿನ ಮುಂಚೆ ಈ ಪ್ರಸ್ತಾಪವನ್ನು ಎತ್ತಿದ್ದರು. ಸ್ವಾಮಿಜಿ ಅದಕ್ಕೆ ಸಮ್ಮತಿಯನ್ನು ಕೊಟ್ಟಿದ್ದರು. ನವಗೋಪಾಲ ಬಾಬುಗಳ ಮನೆಯಲ್ಲಿ ಇಂದು ಆ ಸಂಬಂಧವಾದ ಉತ್ಸವ– ಮಠಕ್ಕೆ ಸೇರಿದ ಸನ್ಯಾಸಿ ಗಳೂ ಪರಮಹಂಸರ ಗೃಹಸ್ಥ ಭಕ್ತರೂ ಎಲ್ಲರೂ ಇಂದು ಅಲ್ಲಿಗೆ ವಿಶ್ವಾಸ ಪೂರ್ವಕವಾಗಿ ಕರೆಯಲ್ಪಟ್ಟಿದ್ದರು. ಮನೆ ಈಗ ತಳಿರುತೋರಣಗಳಿಂದ ಪರಿಶೋಭಿತವಾಗಿದೆ– ಮುಂಬಾಗಿಲಿನಲ್ಲಿ ಪೂರ್ಣಕುಂಭ, ಬಾಳೆಯಕಂಬ, ದೇವದಾರು ಪತ್ರದ ತೋರಣ, ಮಾವಿನಕೊನೆಯ ಮತ್ತು ಹುವ್ವಿನ ಗೊಂಚಲಿನ ಸಾಲು. "ಜಯರಾಮಕೃಷ್ಣ!" ಎಂಬ ಶಬ್ದದಿಂದ ರಾಮ ಕೃಷ್ಣಪುರ ಈದಿನ ಅನುರಣಿತವಾಗುತ್ತಿದೆ.

ಮಠದಿಂದ ಮೂರು ದೋಣಿಗಳನ್ನು ಬಾಡಿಗೆಗೆ ಗೊತ್ತುಮಾಡಿ ಕೊಂಡು ಸ್ವಾಮಿಗಳೊಡನೆ ಮಠದ ಸನ್ಯಾಸಿಗಳು ಬ್ರಹ್ಮಚಾರಿಗಳು ಎಲ್ಲರೂ ರಾಮಕೃಷ್ಣಪುರದ ಘಾಟಿಗೆ ಬಂದು ತಲಪಿದರು. ಸ್ವಾಮಿಗಳ ಪೋಷಾ ಕೆಲ್ಲಾ ಕಾವಿಯ ರಂಗಿನ ಧೋತ್ರ ತಲೆಗೆ ಒಂದು ಕುಲಾವಿ, ಇಷ್ಟೆ–ಕಾಲಿ ನಲ್ಲಿ ಏನೂ ಇಲ್ಲ. ರಾಮಕೃಷ್ಣಪುರದ ಘಾಟಿಯಿಂದ ಅವರು ಯಾವ ದಾರಿಯಲ್ಲಿ ನವಗೋಪಾಲ ಬಾಬುಗಳ ಮನೆಗೆ ಹೋಗುವವರಾಗಿದ್ದರೊ ಆ ದಾರಿಯ ಎರಡು ಕಡೆಯಲ್ಲಿಯೂ ಲೆಕ್ಕಿಸಲಾರದಷ್ಟು ಜನರು ಅವರ ದರ್ಶನಾಕಾಂಕ್ಷಿಗಳಾಗಿ ನಿಂತಿದ್ದರು. ಘಾಟಿಯಲ್ಲಿ ಇಳಿಯುತ್ತಿದ್ದ ಹಾಗೆಯೆ ಸ್ವಾಮಿಜಿ "ದುಃಖಿನೀ ಬ್ರಾಹ್ಮಣೀ ಕೋಲೇ ಕೇ ಶುಯೇಛೆ ಆಲೋ ಕ'ರೇ, ಕೇರೇ ಜರೇ ದಿಗಂಬರ ಏಸೇಛೆ ಕುಟಿರ ಘರೆ" ಎಂಬ ಕೀರ್ತನವನ್ನು ಆರಂಭಿಸಿ ತಾವೇ ಮೃದಂಗವನ್ನು ಬಾರಿಸುತ್ತ ಮುಂದೆ ಹೊರಟರು. ಇನ್ನಿಬ್ಬರು ಮೂರು ಜನರೂ ಮೃದಂಗವನ್ನು ಜೊತೆಯಲ್ಲಿ ಬಾರಿಸಲು ಮೊದಲು ಮಾಡಿದರು; ಮತ್ತು ಅಲ್ಲಿ ಸೇರಿದ್ದ ಭಕ್ತರೆಲ್ಲರೂ ಸಮಸ್ವರದಲ್ಲಿ ಆ ಕೀರ್ತನೆಯನ್ನು ಹಾಡುತ್ತ ಅವರ ಹಿಂದೆ ಹಿಂದೆ ಹೊರ

ಟರು. ಉದ್ದಾಮನೃತ್ಯದಿಂದಲೂ ಮೃದಂಗ ಧ್ವನಿಯಿಂದಲೂ ರಸ್ತೆಯೂ ಘಾಟಿಯೂ ಮುಖರಿತವಾಗುತ್ತಿತ್ತು. ಹೋಗುತ್ತ ಹೋಗುತ್ತ ಈ ಗುಂಪು ಶ್ರೀಯುಕ್ತ ರಾಮಲಾಲ ಡಾಕ್ಟರ್ ಬಾಬುಗಳ ಹತ್ತಿರ ಸ್ವಲ್ಪ ಹೊತ್ತು ನಿಂತು ಕೊಂಡಿತು. ರಾಮಲಾಲ ಬಾಬುಗಳೂ ಬಹುಬೇಗ ಮನೆಯಿಂದ ಹೊರಕ್ಕೆ ಓಡಿಬಂದು ಜೊತೆಯಲ್ಲಿ ಹೊರಟರು. ಜನರು ಮನಸ್ಸಿನಲ್ಲಿ ಮಾಡಿ ಕೊಂಡಿದ್ದದ್ದೇನೆಂದರೆ – ಸ್ವಾಮಿಜಿ ಎಷ್ಟೋ ವೇಷಭೂಷಗಳಿಂದಲಂಕೃತ ರಾಗಿ ಆಡಂಬರದಿಂದ ಹೋಗುತ್ತಾರೆಂದು. ಆದರೆ, ಅವರು ಮಠದ ಇತರ ಸನ್ಯಾಸಿಗಳಂತೆಯೆ ಸಾಮಾನ್ಯವಾದ ಉಡುಪಿನಲ್ಲಿಯೂ ಬರಿಯ ಕಾಲಿ ನಲ್ಲಿಯೂ ಮೃದಂಗವನ್ನು ಬಾರಿಸುತ್ತ ಬಾರಿಸುತ್ತ ಬಂದದ್ದನ್ನು ನೋಡಿ, ಅನೇಕರಿಗೆ ಮೊದಲು ಅವರ ಗುರುತು ಹಿಡಿಯುವುದಕ್ಕೆ ಆಗದೆ ಆಮೇಲೆ ಇತರರನ್ನು ಕೇಳಿ ತಿಳಿದುಕೊಂಡು "ಇವರೇಯೆ ಪ್ರಪಂಚವನ್ನೆ ಗೆದ್ದ ವಿವೇಕಾನಂದ ಸ್ವಾಮಿಗಳು!" ಎನ್ನುವುದಕ್ಕೆ ಮೊದಲುಮಾಡಿದರು. ಸ್ವಾಮಿಜಿಯ ಈ ಅಮಾನುಷಿಕವಾದ ನಮ್ರತೆಯನ್ನು ನೋಡಿ ಎಲ್ಲರೂ ಅವರನ್ನು ಒಟ್ಟಿಗೆ ಹೊಗಳುವುದಕ್ಕೂ, "ಜಯ ರಾಮಕೃಷ್ಣ" ಧ್ವನಿಯಿಂದ ಹೋಗುತ್ತಿದ್ದ ದಾರಿಯನ್ನು ನಡುಗಿಸುವುದಕ್ಕೂ ಮೊದಲು ಮಾಡಿದರು.

ಗೃಹಸ್ಥರಿಗೆ ಆದರ್ಶಸ್ವರೂಪರಾದ ನವಗೋಪಾಲ ಬಾಬುಗಳ ಹೃದಯ ಇಂದು ಆನಂದದಿಂದ ತುಂಬಿಹೋಗಿದೆ. ಅವರು ಪರಮ ಹಂಸರ ಮತ್ತು ಅವರಿಗೆ ಸಂಬಂಧಪಟ್ಟ ಎಲ್ಲಾ ಜನರ ಪೂಜೆಗೋಸ್ಕರ ಯಥೇಷ್ಟವಾಗಿ ಸಾಮಾನುಗಳನ್ನು ಸಿದ್ಧಪಡಿಸಿಕೊಂಡು ನಾಲ್ಕೂ ಕಡೆಗೆ ಸಡಗರದಿಂದ ಓಡಿಯಾಡುತ್ತ ವಿಚಾರಣೆಯನ್ನು ತೆಗೆದುಕೊಳ್ಳುತ್ತ ಮಧ್ಯೆ ಮಧ್ಯೆ ಉಲ್ಲಾಸದಿಂದ 'ಜಯರಾಮ್!' 'ಜಯರಾಮ್' ಎಂದು ಉದ್ಘೋಷಿಸುತ್ತ ಇದ್ದರು.

ಕ್ರಮವಾಗಿ ಗುಂಪು ನವಗೋಪಾಲ ಬಾಬುಗಳ ಮನೆಯ ಬಾಗಿಲಿಗೆ ಬಂದ ಕೂಡಲೆ ಮನೆಯ ಒಳಗೆ ಶಂಖಧ್ವನಿಯೂ ಆಯಿತು. ಸ್ವಾಮಿಜಿ ಮೃದಂಗವನ್ನು ಕೆಳಗಿಟ್ಟು ಬೈಠಕ್ ಖಾನೆಯಲ್ಲಿ ಸ್ವಲ್ಪಕಾಲ ವಿಶ್ರಮಿಸಿ ಕೊಂಡು ಅನಂತರ ಪೂಜಾಗೃಹವನ್ನು ನೋಡಲು ಮೇಲಕ್ಕೆ ಹೋದರು. ಪೂಜಾಗೃಹವು ಅಮೃತಶಿಲೆಯಿಂದ ರಚಿತವಾಗಿತ್ತು. ಮಧ್ಯದಲ್ಲಿ ಸಿಂಹಾಸನ; ಅದರಮೇಲೆ ಪರಮಹಂಸರ ಪೋರ್ಸಲೇನಿನ ಮೂರ್ತಿ. ಹಿಂದೂಗಳ ದೇವರ ಪೂಜೆಗೆ ಯಾವ ಯಾವ ಉಪಕರಣಗಳು ಬೇಕೋ

ಅವೆಲ್ಲವೂ ಸಿದ್ಧವಾಗಿದ್ದುವು– ಯಾವ ಭಾಗದಲ್ಲಿಯೂ ಏನೂ ಕಡಿಮೆ ಯಾಗಿರಲಿಲ್ಲ. ಸ್ವಾಮಿಜಿ ಇದನ್ನು ನೋಡಿ ಬಹುವಾಗಿ ಸಂತುಷ್ಟ ರಾದರು.

ನವಗೋಪಾಲ ಬಾಬುಗಳ ಪತ್ನಿ ಇತರ ಹೆಂಗಸರೊಡನೆ ಸ್ವಾಮಿ ಗಳಿಗೆ ಸಾಷ್ಟಾಂಗ ಪ್ರಣಾಮಮಾಡಿ ಬೀಸಣಿಗೆಯನ್ನು ತೆಗೆದುಕೊಂಡು ಅವರಿಗೆ ಗಾಳಿ ಹಾಕುವುದಕ್ಕೆ ಮೊದಲು ಮಾಡಿದರು.

ಸ್ವಾಮಿಜಿ ಬಾಯಿಂದ ಎಲ್ಲಾ ವಿಚಾರಗಳ ಪ್ರಶಂಸೆಯನ್ನೂ ಕೇಳಿ ಮನೆಯ ಯಜಮಾನಿಯು ಅವರನ್ನು ಸಂಬೋಧಿಸಿ ಹೀಗೆಂದು ಹೇಳಿ ದರು:– "ನಾವು ಪರಮಹಂಸರ ಸೇವೆ ಮಾಡುವ ಅಧಿಕಾರವನ್ನು ಪಡೆಯುವುದೆಂದರೇನು?– ಸಾಮಾನ್ಯವಾದ ಮನೆ, ಸಾಮಾನ್ಯವಾದ ಸಂಪತ್ತು. ತಾವು ಈ ದಿವಸ ಸ್ವಂತ ನಿಂತುಕೊಂಡು ಕೃಪೆಮಾಡಿ ಪರಮ ಹಂಸರ ಪ್ರತಿಷ್ಠೆಯನ್ನು ಮಾಡಿಸಿ ನಮ್ಮನ್ನು ಧನ್ಯರನ್ನಾಗಿ ಮಾಡಬೇಕು."

ಸ್ವಾಮಿಗಳು ಅದಕ್ಕೆ ಉತ್ತರವಾಗಿ ಪರಿಹಾಸ್ಯ ಮಾಡುತ್ತ, "ನಿಮ್ಮ ಪರಮಹಂಸರು ಇಂಥ ಅಮೃತ ಶಿಲೆಯ ಮಹಡಿಯ ಮನೆಯಲ್ಲಿ ಹದಿ ನಾಲ್ಕು ತಲೆಗಳಿಂದ ವಾಸಮಾಡಿಕೊಂಡು ಬರಲಿಲ್ಲ. ಹುಟ್ಟಿದ್ದು ಒಂದು ಹಳ್ಳಿಯ ಗುಡಿಸಲಲ್ಲಿ; ಹಾಗೂ ಹೀಗೂ ದಿನಗಳನ್ನು ಕಳೆದದ್ದಾಯಿತು. ಇಲ್ಲಿ, ಇಂಥ ಉತ್ತಮವಾದ ಸೇವೆಯಲ್ಲಿ, ಇರದಿದ್ದರೆ ಮತ್ತೆಲ್ಲಿ ಇರು ವರು?" ಎಂದರು. ಎಲ್ಲರೂ ಸ್ವಾಮಿಗಳ ಮಾತನ್ನು ಕೇಳಿ ನಗುವುದಕ್ಕೆ ಮೊದಲು ಮಾಡಿದರು. ಈಗ ವಿಭೂತಿ ಭೂಷಿತಾಂಗರಾದ ಸ್ವಾಮಿಜಿ ಸಾಕ್ಷಾತ್ ಮಹಾದೇವನಹಾಗೆ ಪೂಜಕನ ಆಸನದಲ್ಲಿ ಕುಳಿತು ಪರಮ ಹಂಸರನ್ನು ಆವಾಹನ ಮಾಡುವುದಕ್ಕೆ ಹೊರಟರು.

ಪ್ರಕಾಶಾನಂದ ಸ್ವಾಮಿಗಳು ಸ್ವಾಮಿಜಿ ಹತ್ತಿರ ಕುಳಿತುಕೊಂಡು ಮಂತ್ರ ಮುಂತಾದುವುಗಳನ್ನು ಹೇಳುತ್ತಿದ್ದರು. ಪೂಜೆಯ ನಾನಾ ಅಂಗಗಳು ಕ್ರಮವಾಗಿ ಮುಗಿದುವು. ಮಂಗಳಾರತಿಗಾಗಿ ಶಂಖ ಗಂಟೆ ಗಳ ಧ್ವನಿ ಮೊದಲಾಯಿತು. ಪ್ರಕಾಶಾನಂದ ಸ್ವಾಮಿಗಳೆ ಅದನ್ನು ಬಾರಿಸಿದರು.

ಮಂಗಳಾರತಿಯಾದಮೇಲೆ ಸ್ವಾಮಿಗಳು ಪೂಜಾಗೃಹದಲ್ಲಿ ಕುಳಿತು ಕೊಂಡಿದ್ದ ಹಾಗೆಯೆ ಶ್ರೀರಾಮಕೃಷ್ಣದೇವರಿಗೆ ನಮಸ್ಕಾರಮಾಡುವ ಮಂತ್ರವನ್ನು ಬಾಯಲ್ಲಿಯೆ ರಚಿಸಿ ಹೀಗೆ ಹೇಳಿಬಿಟ್ಟರು:—

"ಸ್ಥಾಪಕಾಯ ಚ ಧರ್ಮಸ್ಯ ಸರ್ವಧರ್ಮ ಸ್ವರೂಪಿಣೇ ।
ಅವತಾರವರಿಷ್ಠಾಯ ರಾಮಕೃಷ್ಣಾಯ ತೇ ನಮಃ ॥"

ಸಕಲರೂ ಈ ಮಂತ್ರವನ್ನು ಹೇಳಿ ಪರಮಹಂಸರಿಗೆ ನಮಸ್ಕಾರ ಮಾಡಲು ಶಿಷ್ಯನು ಪರಮಹಂಸರ ಮೇಲಣ ಒಂದು ಸ್ತೋತ್ರವನ್ನು ಓದಿದನು. ಹೀಗೆ ಪೂಜೆ ಮುಗಿಯಿತು. ಭಕ್ತಮಂಡಲಿಯು ಕೆಳಗೆ ಇಳಿದು ಬಂದು ಸ್ವಲ್ಪ ಫಲಾಹಾರಮಾಡಿ ಭಜನೆಗೆ ಆರಂಭ ಮಾಡಿತು. ಸ್ವಾಮಿಜಿ ಮೇಲೆಯೆ ಇದ್ದರು. ಮನೆಯಲ್ಲಿದ್ದ ಹೆಂಗಸರು ಸ್ವಾಮಿಜಿಗೆ ನಮಸ್ಕಾರ ಮಾಡಿ ನಾನಾ ಧಾರ್ಮಿಕ ವಿಚಾರಗಳನ್ನು ಕೇಳಿ ತಿಳಿದುಕೊಳ್ಳುತ್ತಲೂ ಆಶೀರ್ವಾದವನ್ನು ಪಡೆಯುತ್ತಲೂ ಇದ್ದರು.

ಆ ಪರಿವಾರದಲ್ಲಿದ್ದವರೆಲ್ಲರೂ ರಾಮಕೃಷ್ಣ ಪರಮಹಂಸರಲ್ಲಿ ಪ್ರಾಣವನ್ನು ಇಟ್ಟುಕೊಂಡಿದ್ದದ್ದನ್ನು ನೋಡಿ ಶಿಷ್ಯ ಬೆರಗಾಗಿ ನಿಂತು ಅವರ ಸಹವಾಸದಿಂದ ತನ್ನ ಮನುಷ್ಯ ಜನ್ಮ ಸಾರ್ಥಕವಾಯಿತೆಂದು ಭಾವಿಸಿಕೊಂಡನು.

ಅನಂತರ ಭಕ್ತಾದಿಗಳು ಪ್ರಸಾದವನ್ನು ಸ್ವೀಕರಿಸಿ ಕೈತೊಳೆದುಕೊಂಡು ಕೆಳಗೆ ಹೋಗಿ ಸ್ವಲ್ಪ ವಿಶ್ರಾಂತಿಯನ್ನು ತೆಗೆದುಕೊಂಡರು. ಕ್ರಮವಾಗಿ ಸಾಯಂಕಾಲವಾಗಲು ಅವರೆಲ್ಲರೂ ಸಣ್ಣ ಸಣ್ಣ ಗುಂಪಾಗಿ ತಮ್ಮ ತಮ್ಮ ಮನೆಗೆ ಹಿಂತಿರುಗಿ ಹೊರಟರು. ಶಿಷ್ಯನೂ ಸ್ವಾಮಿಗಳ ಸಂಗಡ ಗಾಡಿಯಲ್ಲಿ ಕುಳಿತುಕೊಂಡು ಹೋಗಿ ರಾಮಕೃಷ್ಣಪುರದ ಘಾಟಿಯಲ್ಲಿ ದೋಣಿಯನ್ನು ಹತ್ತಿ ಆನಂದದಿಂದ ನಾನಾ ಮಾತುಗಳನ್ನಾಡುತ್ತ ಬಾಗ್ ಬಜಾರಿನ ಕಡೆಗೆ ಹೋದನು.

---

## ಅಧ್ಯಾಯ ೫

**ಸ್ಥಳ:—ದಕ್ಷಿಣೇಶ್ವರದ ಕಾಳೀ ದೇವಸ್ಥಾನ, ಆಲಂಬಜಾರಿನ ಮಠ. ವರ್ಷ—ಕ್ರಿ. ಶ. ೧೮೯೭ನೆಯ ಮಾರ್ಚಿ.**

ಸ್ವಾಮಿಜಿ ಇಂಗ್ಲೆಂಡಿನಿಂದ ಮೊದಲುಸಾರಿ ಹಿಂತಿರುಗಿ ಬಂದಾಗ ಆಲಂಬಜಾರಿನಲ್ಲಿ ರಾಮಕೃಷ್ಣ ಮಠ ಪ್ರತಿಷ್ಠಿತವಾಗಿತ್ತು. ಈ ಮಠದ

ಮನೆಯನ್ನು ಜನರು "ಭೂತದ ಮನೆ" ಎಂದು ಕರೆಯುತ್ತಿದ್ದರು. ಆದರೆ ಸನ್ಯಾಸಿಗಳ ಸಂಸರ್ಗದಿಂದ ಈ ಭೂತದ ಮನೆ ರಾಮಕೃಷ್ಣ ಯಾತ್ರಾಸ್ಥಳ ವಾಗಿ ಪರಿಣಮಿಸಿತು. ಅಲ್ಲಿ ಎಷ್ಟು ಸಾಧನೆ ಭಜನೆಗಳು ಎಷ್ಟು ಜಪತಪ ಗಳು ಎಷ್ಟು ಶಾಸ್ತ್ರಪ್ರಸಂಗಗಳು ಎಷ್ಟು ನಾಮ ಕೀರ್ತನಗಳು ನಡೆದುವೊ ಅವಕ್ಕೆ ಎಲ್ಲೆ ಇಲ್ಲ. ಕಲ್ಕತ್ತೆಯಲ್ಲಿ ರಾಜಯೋಗ್ಯವಾದ ಸ್ವಾಗತವನ್ನು ಪಡೆದು ಸ್ವಾಮಿಗಳು ಈ ಮುರುಕುಮಠದಲ್ಲಿಯೇ ಇರುತ್ತಿದ್ದರು. ಕಲ್ಕತ್ತೆಯ ಜನರು ಅವರಲ್ಲಿ ಶ್ರದ್ಧಾಭಕ್ತಿಯುಳ್ಳವರಾಗಿ ಒಂದು ತಿಂಗಳು ಇರಬೇಕೆಂದು ಅವರಿಗೋಸ್ಕರ ಕಲ್ಕತ್ತೆಯ ಉತ್ತರಕ್ಕೆ ಕಾಶೀಪುರದಲ್ಲಿ ಗೋಪಾಲಲಾಲ ಶೀಲರ ತೋಟದ ಮನೆಯಲ್ಲಿ ಸ್ಥಾನವನ್ನು ಗೊತ್ತುಮಾಡಿ ಕೊಟ್ಟಿದ್ದರಷ್ಟೆ. ಅಲ್ಲಿಗೂ ಮಧ್ಯೆ ಮಧ್ಯೆ ಹೋಗುತ್ತ ಇರುತ್ತ ದರ್ಶ ನೋತ್ಸುಕರಾದ ಜನಸಂಘದೊಡನೆ ಧರ್ಮಾಲಾಪಾದಿಗಳನ್ನು ಮಾಡಿ ಅವರ ಹೃದಯಾಕಾಂಕ್ಷೆಯನ್ನು ಪೂರ್ಣಮಾಡುತ್ತಿದ್ದರು.

ಶ್ರೀ ರಾಮಕೃಷ್ಣ ಪರಮಹಂಸರ ಜನ್ಮೋತ್ಸವ ಹತ್ತಿರಕ್ಕೆ ಬಂತು. ದಕ್ಷಿಣೇಶ್ವರದಲ್ಲಿರುವ ರಾಣೀರಾಸಮಣಿಯ ಕಾಳೀ ದೇವಸ್ಥಾನದಲ್ಲಿ ಈ ಸಾರಿ ಉತ್ಸವಕ್ಕಾಗಿ ಅಗಾಧವಾದ ಏರ್ಪಾಡು ನಡೆಯುತ್ತಿದೆ. ರಾಮ ಕೃಷ್ಣ ಸೇವಕರ ಮಾತು ಹಾಗಿರಲಿ, ಧರ್ಮ ಪಿಪಾಸುಗಳಾದ ಜನ ಸಾಮಾನ್ಯಕ್ಕೆ ಆನಂದ ಉತ್ಸಾಹಗಳು ಮೇರೆಯಿಲ್ಲದಂತಿದ್ದವು. ಏಕೆಂದರೆ ವಿಶ್ವವಿಜಯಿಗಳಾದ ಸ್ವಾಮೀಜಿ ಶ್ರೀ ರಾಮಕೃಷ್ಣರ ಭವಿಷ್ಯ ವಾಣಿಯನ್ನು ಸಫಲಮಾಡಿ ಈವರ್ಷ ಹಿಂತಿರುಗಿ ಬಂದಿದ್ದಾರೆ. ಅವರ ಗುರು ಭ್ರಾತೃಗಳು ಇಂದು ಅವರನ್ನು ಪಡೆದು ಶ್ರೀ ರಾಮಕೃಷ್ಣ ಸಂಗಸುಖವನ್ನು ಅನುಭವಿಸು ವಂತೆ ತೋರುತ್ತಿದ್ದರು. ಕಾಳೀಮಂದಿರದ ದಕ್ಷಿಣಭಾಗದ ದೊಡ್ಡ ಪಾಕ ಶಾಲೆಯಲ್ಲಿ ಅಡಿಗೆಯಾಗುತ್ತಿದೆ. ಸ್ವಾಮಿಜಿ ಅವರ ಕೆಲವು ಗುರುಭ್ರಾತೃ ಗಳೊಡನೆ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಬಂದರು. ಬರಿಯ ಕಾಲು; ತಲೆಗೆ ಕಾವಿಯ ಬಣ್ಣದ ಪಾಗು. ಜನಸಂಘ ಅವರನ್ನು ನೋಡುತ್ತಾ ಅಲ್ಲಿಂದಿಲ್ಲಿಗೆ ಓಡಿಯಾಡುತ್ತಿದೆ. ಅವರ ಆ ಅನಿಂದಿತವಾದ ರೂಪವನ್ನು ದರ್ಶನ ಮಾಡೋಣ, ಆ ಪಾದಪದ್ಮವನ್ನು ಸ್ಪರ್ಶ ಮಾಡೋಣ, ಮತ್ತು ಅವರ ಬಾಯಿಂದ ಜ್ವಲಿಸುತ್ತಿರುವ ಅಗ್ನಿಯ ಜ್ವಾಲೆಯಂತಿರುವ ಮಾತನ್ನು ಕೇಳಿ ಧನ್ಯರಾಗೋಣ ಎಂದು ಜನ ಕುತೂಹಲಿಗಳಾಗಿರುವರು. ಅದರಿಂದಲೆ ಸ್ವಾಮಿಜಿಗೆ ಈ ದಿವಸ ಒಂದು ನಿಮಿಷ ಅವಕಾಶವೂ ಇಲ್ಲ.

ಕಾಳೀ ಮಾತೆಯ ಮಂದಿರದ ಮುಂದೆ ಅಸಂಖ್ಯವಾದ ಜನ. ಸ್ವಾಮಿಜಿ ಜಗನ್ಮಾತೆಗೆ ನೆಲದಮೇಲೆ ಉದ್ದಕ್ಕೆ ಪ್ರಣಾಮ ಮಾಡಿದರು. – ಜೊತೆಯಲ್ಲಿಯೆ ಸಾವಿರಾರು ತಲೆಗಳು ಬಗ್ಗಿದುವು. ಆಮೇಲೆ ರಾಧಾಕಾಂತ ಸ್ವಾಮಿಗೆ ಪ್ರಣಾಮಮಾಡಿ ಅವರು ಪರಮಹಂಸರ ವಾಸಗೃಹಕ್ಕೆ ಬಂದರು, ಆ ತೊಟ್ಟಿಯಲ್ಲಿ ಈಗ ಒಂದು ಎಳ್ಳುಹಾಕಿದರೆ ಹಿಡಿಸುವಷ್ಟು ಜಾಗವೂ ಇಲ್ಲ. 'ಜಯರಾಮಕೃಷ್ಣ!' ಎಂಬ ಧ್ವನಿಯಿಂದ ಕಾಳೀ ದೇವಸ್ಥಾನದ ದಿಕ್ಕುಗಳೆಲ್ಲವೂ ಮುಖರಿತವಾಗುತ್ತಿವೆ. ಸಾವಿರಾರು ನೋಟಕರನ್ನು ಕೂರಿಸಿಕೊಂಡು ಹೋರ್‌ಮಿಲರ್ ಕಂಪೆನಿಯ ಜಹಜು ಬಾರಿಬಾರಿಗೂ ಕಲ್ಕತ್ತೆಯಿಂದ ಓಡಿಯಾಡುತ್ತಿದೆ. ನಗಾರಿ ನೌಪತ್ತಿನ ವಾದ್ಯಧ್ವನಿಯಿಂದ ಗಂಗಾನದಿ ನರ್ತನಮಾಡುತ್ತಿದೆ. ಉತ್ಸಾಹ ಆಕಾಂಕ್ಷೆ ಧರ್ಮಪಿಪಾಸೆ ಮತ್ತು ಅನುರಾಗ ಇವು ಮೂರ್ತಿಮತ್ತಾಗಿ ಶ್ರೀರಾಮಕೃಷ್ಣ ಭಕ್ತರೂಪದಲ್ಲಿ ಅಲ್ಲಲ್ಲಿ ಬೆಳಗುತ್ತಿವೆ. ಈಸಲದ ಈ ಉತ್ಸವ ಹೃದಯದಲ್ಲಿ ಅನುಭವ ಮಾಡಿಕೊಳ್ಳಬೇಕಾದ ವಿಷಯ – ಮಾತಿನಲ್ಲಿ ವ್ಯಕ್ತಪಡಿಸಲು ಅಸಾಧ್ಯ.

ಸ್ವಾಮಿಜಿಯೊಡನೆ ಬಂದಿದ್ದ ಇಬ್ಬರು ಇಂಗ್ಲಿಷ್ ಸ್ತ್ರೀಯರೂ ಉತ್ಸವಕ್ಕೆ ಬಂದಿದ್ದರು. ಶಿಷ್ಯನಿಗೆ ಅವರೊಡನೆ ಇನ್ನೂ ಪರಿಚಯವಾಗಿರಲಿಲ್ಲ. ಸ್ವಾಮಿಜಿ ಅವರನ್ನು ಜೊತೆಯಲ್ಲಿ ಕರೆದುಕೊಂಡುಹೋಗಿ ಪವಿತ್ರವಾದ ಪಂಚವಟಿ ಮತ್ತು ಬಿಲ್ವಮೂಲಗಳನ್ನು ದರ್ಶನಮಾಡಿಸುತ್ತಿದ್ದರು. ಸ್ವಾಮಿಜಿಯೊಡನೆ ಈಗಲೂ ಅಷ್ಟೊಂದು ವಿಶೇಷ ಪರಿಚಯವಿಲ್ಲದಿದ್ದರೂ ಶಿಷ್ಯನು ಅವರ ಹಿಂದೆ ಹಿಂದೆ ಹೋಗಿ ಈ ಉತ್ಸವದ ಸಂಬಂಧವಾಗಿ ತಾನು ರಚಿಸಿದ ಒಂದು ಸಂಸ್ಕೃತ ಸ್ತೋತ್ರವನ್ನು ಸ್ವಾಮಿಜಿ ಕೈಗೆ ಕೊಟ್ಟನು. ಸ್ವಾಮಿಜಿ ಅದನ್ನು ಓದುತ್ತ ಓದುತ್ತ ಪಂಚವಟಿಯ ಕಡೆಗೆ ಹೊರಟರು. ಹೋಗುತ್ತ ಹೋಗುತ್ತ ಶಿಷ್ಯನ ಕಡೆಗೆ ಒಂದುಸಾರಿ ತಿರುಗಿ ನೋಡಿ "ಚೆನ್ನಾಗಿದೆ, ಇನ್ನೂ ಬರಿ" ಎಂದು ಹೇಳಿದರು.

ಪಂಚವಟಿಯ ಒಂದು ಕಡೆಯಲ್ಲಿ ಪರಮಹಂಸರ ಗೃಹಸ್ಥ ಭಕ್ತರು ಇಳಿದುಕೊಂಡಿದ್ದರು. ಗಿರಿಶ ಬಾಬುಗಳು ಪಂಚವಟಿಯ ಉತ್ತರದಲ್ಲಿ ಗಂಗೆಯ ಕಡೆಗೆ ತಿರುಗಿಕೊಂಡು ಕುಳಿತಿದ್ದರು. ಮತ್ತು ಅವರನ್ನು ಸುತ್ತಿಕೊಂಡು ಮಿಕ್ಕ ಭಕ್ತ ಜನರು ಶ್ರೀ ರಾಮಕೃಷ್ಣ ಗುಣಗಾನದಲ್ಲಿಯೂ ಕಥಾ ಪ್ರಸಂಗದಲ್ಲಿಯೂ ವಿಸ್ಮೃತರಾಗಿ ಕುಳಿತುಕೊಂಡಿದ್ದರು. ಈ ಸಮಯದಲ್ಲಿ ಸ್ವಾಮಿಜಿ ಬಹು ಜನರೊಡನೆ ಗಿರಿಶ ಬಾಬುಗಳ ಹತ್ತಿರಕ್ಕೆ ಬಂದು

"ಏನ್ರೀ–ಘೋಷಜರೆ!" ಎನ್ನುತ್ತ ಗಿರೀಶ ಬಾಬುಗಳಿಗೆ ನಮಸ್ಕಾರ ಮಾಡಿದರು. ಗಿರಿಶ ಬಾಬುಗಳೂ ಅವರಿಗೆ ಕೈ ಜೋಡಿಸಿ ಪ್ರತಿ ನಮಸ್ಕಾರ ಮಾಡಿದರು. ಸ್ವಾಮಿಜಿ ಗಿರಿಶ ಬಾಬುಗಳಿಗೆ ಹಿಂದಿನ ವೃತ್ತಾಂತವನ್ನು ಜ್ಞಾಪಿಸಿ "ಘೋಷಜರೆ, ಅದೆ ಒಂದುಕಾಲ" ಎಂದರು. ಗಿರಿಶ ಬಾಬುಗಳೂ ಸ್ವಾಮಿಜಿ ಮಾತಿಗೆ ಸಮ್ಮತಿಸಿ "ಅದೇನೊ ನಿಜ; ಆದರೆ ಈಗಲೂ ಅದನ್ನೆ ಇನ್ನೂ ಹೆಚ್ಚಾಗಿ ನೋಡಬೇಕೆಂದು ಮನಸ್ಸು ಹಂಬಲಿಸುತ್ತದೆ" ಎಂದರು.

ಹೀಗೆ ಅವರಿಬ್ಬರಿಗೂ ಏನು ಮಾತು ನಡೆಯಿತೊ ಅದರ ಮರ್ಮವನ್ನು ಹೊರಗಿನ ಜನರನೇಕರು ಅರ್ಥಮಾಡಿಕೊಳ್ಳಲಾರದೆ ಹೋದರು. ಸ್ವಲ್ಪಹೊತ್ತು ಮಾತುಕಥೆ ನಡೆದ ಮೇಲೆ ಸ್ವಾಮಿಜಿ ಪಂಚವಟಿಯ ಈಶಾನ್ಯದಲ್ಲಿರುವ ಬಿಲ್ವವೃಕ್ಷದ ಕಡೆಗೆ ಹೊರಟರು. ಸ್ವಾಮಿಜಿ ಹೊರಟು ಹೋದಮೇಲೆ ಗಿರಿಶ ಬಾಬುಗಳು ಬಂದಿದ್ದ ಭಕ್ತಮಂಡಲಿಯನ್ನು ಸಂಬೋಧಿಸಿ ಹೀಗೆಂದು ಹೇಳಿದರು:–"ಒಂದು ದಿನ ಹರಮೋಹನ ಮಿತ್ರರು, ವರ್ತಮಾನ ಪತ್ರಿಕೆಯನ್ನು ನೋಡಿಕೊಂಡೊ ಏನೊ, ಬಂದು ಅಮೆರಿಕಾದಲ್ಲಿ ಸ್ವಾಮಿಗಳ ವಿಚಾರವಾಗಿ ಅಪಯಶಸ್ಸು ಹರಡಿಕೊಂಡಿತ್ತೆಂದು ಹೇಳಿದರು. ಆಗ ನಾನು ಅವರಿಗೆ–'ನರೇನನು * ಏನಾದರೂ ಕೆಟ್ಟದ್ದು ಮಾಡಿದ್ದನ್ನು ನನ್ನ ಕಣ್ಣಿನಿಂದಲೆ ನೋಡಿದಡೂ ಆಗ ಅದು ನನ್ನ ಕಣ್ಣಿನ ದೋಷವೆಂದು ಹೇಳಿಬಿಡುತ್ತೇನೆ–ಕಣ್ಣಿನಮೇಲೆ ಹಾಕಿ ಬಿಡುತ್ತೇನೆ. ಅವರು ಹೊತ್ತು ಹುಟ್ಟುವುದಕ್ಕಿಂತ ಮುಂಚೆ ತೆಗೆದಬೆಣ್ಣೆ; ಅವರು ನೀರಿನಲ್ಲಿ ಕರಗಿ ಹೋಗುತ್ತಾರೆಯೇನು? ಅವರಲ್ಲಿ ಯಾರಾದರೂ ಯಾವುದಾದರೂ ದೋಷವನ್ನು ಎತ್ತಿಯಾಡಿದರೆ ಅಂಥವರಿಗೆ ನರಕ ಪ್ರಾಪ್ತಿಯಾಗುತ್ತದೆ.' ಎಂದು ಹೇಳಿದೆನು." ಹೀಗೆ ಮಾತು ಕಥೆಗಳು ನಡೆಯುತ್ತಿದ್ದುವು. ಆಗ ನಿರಂಜನಾನಂದ ಸ್ವಾಮಿಗಳು ಗಿರಿಶಘೋಷ ಮಹಾಶಯರಿದ್ದೆಡೆಗೆ ಬಂದರು. ಒಂದು ಹುಕ್ಕವನ್ನೂ ತೆಗೆದುಕೊಂಡು ತಂಬಾಕನ್ನು ಸೇವಿಸುತ್ತ ಸೇವಿಸುತ್ತ, ಕೊಲಂಬೋವಿನಿಂದ ಕಲ್ಕತ್ತೆಗೆ ಹಿಂತಿರುಗಿ ಬರುವವರೆಗೆ ಹಿಂದೂಸ್ಥಾನದ ಬೇರೆ ಬೇರೆ ಸ್ಥಳಗಳಲ್ಲಿ ಸಾಧಾರಣ ಜನರು ಸ್ವಾಮಿಗಳಿಗೆ ಎಷ್ಟು ಅಪೂರ್ವವಾದ ಆದರಾಭ್ಯರ್ಥನಗಳನ್ನು ಮಾಡಿದರು, ಮತ್ತು ಸ್ವಾಮಿಜಿ ಅವರೆಲ್ಲರಿಗೂ ಉಪನ್ಯಾಸಗಳ

* ವಿವೇಕಾನಂದ ಸ್ವಾಮಿಗಳು.

ಮೂಲಕ ಅಮೂಲ್ಯವಾದ ಉಪದೇಶವನ್ನು ಕೊಟ್ಟರು ಎಂಬುದನ್ನು ತಿಳಿಸಿ ಅವುಗಳಲ್ಲಿ ಕೆಲವನ್ನು ವರ್ಣಿಸುತ್ತಿದ್ದರು. ಗಿರಿಶ ಬಾಬುಗಳು ಅದನ್ನು ಕೇಳುತ್ತ ಕೇಳುತ್ತ ಸ್ತಂಭಿತರಾಗಿ ಕುಳಿತುಕೊಂಡುಬಿಟ್ಟರು.

ಆ ದಿನ ದಕ್ಷಿಣೇಶ್ವರದ ದೇವಾಲಯದಲ್ಲಿ ಎಲ್ಲೆಲ್ಲಿಯೂ ಹೀಗೆ ಒಂದು ದಿವ್ಯಭಾವದ ಪ್ರವಾಹ ಹರಿಯುತ್ತಿತ್ತು. ಈಗ ಜನಸ್ತೋಮ ಸ್ವಾಮಿಜಿ ಉಪನ್ಯಾಸವನ್ನು ಕೇಳುವುದಕ್ಕೆ ಉತ್ಸುಕವಾಗಿ ನಿಂತುಕೊಂಡಿದೆ-ಆದರೆ ಬಹು ಪ್ರಯತ್ನಮಾಡಿದರೂ ಸ್ವಾಮಿಜಿ ಜನರ ಗುಜು ಗುಜು ಶಬ್ದವನ್ನು ಮೀರುವಷ್ಟು ಗಟ್ಟಿಯಾಗಿ ಮಾತನಾಡಲಾರದೆ ಹೋದರು. ವಿಧಿಯಿಲ್ಲದೆ, ಉಪನ್ಯಾಸದ ಪ್ರಯತ್ನವನ್ನು ನಿಲ್ಲಿಸಿ ಅವರು ತಮ್ಮೊಡನೆ ಇಬ್ಬರು ಇಂಗ್ಲಿಷ್ ಸ್ತ್ರೀಯರನ್ನು ಜೊತೆಯಲ್ಲಿ ಕರೆದುಕೊಂಡು ಪರಮಹಂಸರ ಸಾಧನ ಸ್ಥಾನವನ್ನು ತೋರಿಸುತ್ತಲೂ ಪರಮಹಂಸರ ಮುಖ್ಯ ಭಕ್ತರ ಮತ್ತು ಅಂತರಂಗದ ಜನರೊಡನೆ ಮಾತಾಡುತ್ತಲೂ ಇದ್ದುಬಿಟ್ಟರು. ಇಂಗ್ಲಿಷ್ ಸ್ತ್ರೀಯರು ಧರ್ಮ ಶಿಕ್ಷಣಕ್ಕಾಗಿ ಅವರೊಡನೆ ದೂರದೇಶದಿಂದ ಬಂದಿದ್ದನ್ನು ನೋಡಿ ಪ್ರೇಕ್ಷಕರಲ್ಲಿ ಕೆಲವರು ಆಶ್ಚರ್ಯಯುಕ್ತರಾಗಿ ಸ್ವಾಮಿಜಿಯ ಅದ್ಭುತಸಾಮರ್ಥ್ಯದ ವಿಚಾರವಾಗಿ ಮಾತನಾಡಿಕೊಳ್ಳುವುದಕ್ಕೆ ತೊಡಗಿದರು.

ಮೂರು ಗಂಟೆಯಾದ ಮೇಲೆ ಸ್ವಾಮಿಜಿ ಶಿಷ್ಯನನ್ನು ಕುರಿತು "ಒಂದು ಬಂಡಿಯನ್ನು ನೋಡು-ಮಠಕ್ಕೆ ಹೋಗಬೇಕು" ಎಂದರು. ಅನಂತರದಲ್ಲಿ ಆಲಂಬಜಾರಿನವರೆಗೂ ಹೋಗುವುದಕ್ಕೆ ಎರಡಾಣೆ ಬಾಡಿಗೆಯನ್ನು ನಿಷ್ಕರ್ಷೆಮಾಡಿ ಶಿಷ್ಯನು ಒಂದು ಗಾಡಿಯನ್ನು ತೆಗೆದುಕೊಂಡು ಬರಲು ಸ್ವಾಮಿಗಳು ಗಾಡಿಯಲ್ಲಿ ತಾವು ಒಂದು ಕಡೆ ಕುಳಿತುಕೊಂಡು ನಿರಂಜನಾನಂದ ಸ್ವಾಮಿಗಳನ್ನೂ ಶಿಷ್ಯನನ್ನೂ ಮತ್ತೊಂದು ಕಡೆ ಕೂರಿಸಿಕೊಂಡು ಆಲಂಬಜಾರಿನ ಮಠದಕಡೆಗೆ ಸಂತೋಷದಿಂದ ಹೊರಟರು. ಹೋಗುತ್ತ ಹೋಗುತ್ತ ಶಿಷ್ಯನನ್ನು ಕುರಿತು ಹೀಗೆಂದರು:— "ಜೀವನದಲ್ಲಿಯೂ ಕಾರ್ಯದಲ್ಲಿಯೂ ಪರಿಣತವಾಗದ ಭಾವವನ್ನು ಹಿಡಿದುಕೊಂಡು ಕುಳಿತರೆ ಏನಾಗುತ್ತದೆ? ಈ ಉತ್ಸವ ಮೊದಲಾದವುಗಳೂ ಬೇಕು. ಅವು ಇದ್ದರೆ ತಾನೆ ಕ್ರಮವಾಗಿ ಈ ಭಾವಗಳೆಲ್ಲ ಜನಸಾಮಾನ್ಯರ ಮನಸ್ಸಿಗೆ ಹತ್ತುತ್ತವೆ. ಹಿಂದೂಗಳಲ್ಲಿ ಹನ್ನೆರಡು ತಿಂಗಳಿಗೆ ಹದಿಮೂರು ಹಬ್ಬಗಳುಂಟಷ್ಟೆ-ಇವುಗಳ ನಡೆಸುವಿಕೆಯೆ ಧರ್ಮದ ದೊಡ್ಡ ದೊಡ್ಡ ಭಾವಗಳು

ಕ್ರಮೇಣ ಜನರಲ್ಲಿ ಪ್ರವೇಶಿಸುವಂತೆ ಮಾಡುವುದು. ಅವುಗಳಲ್ಲಿ ಒಂದು ದೋಷವೂ ಇದೆ. ಸಾಧಾರಣ ಜನರು ಇವುಗಳ ಪ್ರಕೃತಭಾವವನ್ನು ತಿಳಿದುಕೊಳ್ಳದೆ ಇವುಗಳಲ್ಲಿಯೆ ಮೈಮರೆತು ಹೋಗುತ್ತಾರೆ. ಮತ್ತು ಈ ಉತ್ಸವಾಮೋದಗಳು ನಿಂತುಹೋದರೆ ಆಮೇಲೆ ಎಂದಿನಂತೆಯೆ ಇದ್ದುಬಿಡುತ್ತಾರೆ. ಆದ್ದರಿಂದ ಅವು ಧರ್ಮದ ಬಹಿರಾವರಣವೆಂಬುದೂ ಪ್ರಕೃತ ಧರ್ಮ ಮತ್ತು ಆತ್ಮಜ್ಞಾನಗಳನ್ನು ಮುಚ್ಚಿಕೊಂಡಿರುತ್ತವೆ ಯೆಂಬುದೂ ನಿಜ.

"ಆದರೆ ಯಾರು ಧರ್ಮವೆಂದರೇನು, ಆತ್ಮವೆಂದರೇನು" ಎಂಬುದನ್ನೆಲ್ಲಾ ಸ್ವಲ್ಪವೂ ತಿಳಿದುಕೊಳ್ಳಲಾರರೊ—ಅವರು ಈ ಉತ್ಸವಾಮೋದಗಳಿಂದ ಕ್ರಮೇಣ ಧರ್ಮವನ್ನು ತಿಳಿದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತಾರೆ. ನೋಡು, ಇಂದು ಪರಮಹಂಸರ ಜನ್ಮೋತ್ಸವ ನಡೆಯಿತಷ್ಟೆ, ಇದಕ್ಕೆ ಯಾರು ಯಾರು ಬಂದಿದ್ದಾರೊ ಅವರು ಪರಮಹಂಸರ ವಿಷಯವಾಗಿ ಒಂದು ಸಾರಿಯಾದರೂ ಯೋಚಿಸುವರು. ಯಾರ ಹೆಸರಿನಲ್ಲಿ ಇಷ್ಟು ಜನರು ಒಂದು ಕಡೆ ಸೇರಿದ್ದರು, ಆತನು ಯಾರು, ಆತನ ಹೆಸರಿನಲ್ಲಿ ಇಷ್ಟು ಜನ ಏಕೆ ಬಂದರು—ಎಂಬ ಅಂಶ ಅವರ ಮನಸ್ಸಿಗೆ ಹೊಳೆಯುತ್ತದೆ. ಯಾರಿಗೆ ಅದೂ ಇಲ್ಲವೊ, ಅಂಥವರೂ ಕೂಡ ಭಜನೆಯನ್ನು ಕೇಳುವುದಕ್ಕೆ ಮತ್ತು ಪ್ರಸಾದವನ್ನು ತೆಗೆದುಕೊಳ್ಳುವುದಕ್ಕೆ ಕೊನೆಯಪಕ್ಷ ವರ್ಷಕ್ಕೊಂದುಸಾರಿಯಾದರೂ ಬರುತ್ತಾರೆ; ಬಂದು ಪರಮಹಂಸ ಭಕ್ತರ ದರ್ಶನಮಾಡುತ್ತಾರೆ; ಅದರಿಂದ ಅವರಿಗೆ ಉಪಕಾರ ಹೊರತು ಅಪಕಾರವಾಗುವುದಿಲ್ಲ.

ಶಿಷ್ಯ:—ಆದರೆ, ಮಹಾಶಯರೆ, ಈ ಉತ್ಸವ ಕೀರ್ತನೆಗಳೆ ಸಾರವೆಂದು ಯಾರಾದರೂ ತಿಳಿದುಕೊಂಡುಬಿಟ್ಟರೆ, ಅಂಥವರು ಮುಂದಕ್ಕೆ ಹೋಗಬಲ್ಲರೆ? ನಮ್ಮ ದೇಶದಲ್ಲಿ ಷಷ್ಠಿಯ ಪೂಜೆ ಮಂಗಳಗೌರಿಯ ಪೂಜೆ ಮುಂತಾದವು ಹೇಗೆ ನಿತ್ಯನೈಮಿತ್ತಿಕಗಳಾಗಿದ್ದುಬಿಟ್ಟವೆಯೊ ಹಾಗೆಯೆ ಇದೂ ಒಂದು ಆಗುತ್ತದೆ. ಸಾಯುವ ತನಕ ಜನರು ಇವುಗಳನ್ನೆಲ್ಲಾ ಮಾಡುತ್ತಿರುತ್ತಾರೆ, ಆದರೆ ಎಲ್ಲಿಯೂ ಇಂಥ ಪೂಜೆಗಳನ್ನು ಮಾಡುತ್ತ ಮಾಡುತ್ತ ಅವರು ಬ್ರಹ್ಮಜ್ಞರಾಗಿರುವುದನ್ನು ನಾನು ನೋಡಿಲ್ಲ.

ಸ್ವಾಮಿಜಿ:—ಏಕೆ? ಹಿಂದೂಸ್ಥಾನದಲ್ಲಿ ಎಷ್ಟೋಜನ ಧರ್ಮವೀರರು ಹುಟ್ಟಿದ್ದಾರೆ—ಅವರೆಲ್ಲರೂ ಇವನ್ನು ಅನುಸರಿಸಿಯೆ ಮುಂದರಿದು

ಹೋಗಿ ಅಷ್ಟು ದೊಡ್ಡವರಾಗಿದ್ದಾರಲ್ಲಾ ? ಇವನ್ನು ಅನುಸರಿಸಿ ಸಾಧನೆ ಮಾಡುತ್ತ ಮಾಡುತ್ತ ಆತ್ಮಸಾಕ್ಷಾತ್ಕಾರವನ್ನು ಪಡೆಯಲು ಆಗ ಅವುಗಳ ಸಂಬಂಧ ತಪ್ಪಿಹೋಗುತ್ತದೆ. ಆದರೂ ಅವತಾರಸಮಾನರಾದ ಮಹಾ ಪುರುಷರು ಲೋಕಸಂಗ್ರಹಾರ್ಥವಾಗಿ ಇವನ್ನು ನಡೆಸಿಕೊಂಡು ಹೋಗುತ್ತಾರೆ.

ಶಿಷ್ಯ :— ಲೋಕಸಂಗ್ರಹಾರ್ಥವಾಗಿ ನಡೆಸಿಕೊಂಡು ಹೋಗುತ್ತಾರೆ. ಆದರೆ ಆತ್ಮಜ್ಞಾನಿಗೆ ಯಾವಾಗ ಈ ಸಂಸಾರ ಇಂದ್ರಜಾಲದಂತೆ ಮಿಥ್ಯೆಯೆಂದು ತಿಳಿವಳಿಕೆಯುಂಟಾಗುತ್ತದೆಯೊ ಆಗ ಅವರಿಗೆ ಪುನಃ ಈ ಬಾಹ್ಯ ಲೋಕವ್ಯವಹಾರಗಳೆಲ್ಲವೂ ಸತ್ಯವೆಂದು ತೋರುವುದು ಸಾಧ್ಯವೆ ?

ಸ್ವಾಮಿಜಿ :– ಏಕೆ ಸಾಧ್ಯವಲ್ಲ ? ನಾವು ಯಾವುದನ್ನು ಸತ್ಯವೆಂದು ತಿಳಿದುಕೊಂಡಿದ್ದೇವೆಯೊ ಅದೂ ದೇಶ ಕಾಲ ಪಾತ್ರಭೇದಗಳಿಂದ ಬೇರೆ ಬೇರೆಯಾಗಿವೆ ತಾನೆ ? ಅದ್ದರಿಂದಲೆ, ಅಧಿಕಾರಿಭೇದದಮೇಲೆ, ಸಮಸ್ತ ವಿಧವಾದ ವ್ಯವಹಾರಗಳಿಗೂ ಆವಶ್ಯಕತೆಯುಂಟಾಗಿರುವುದು. ಪರಮಹಂಸರು "ತಾಯಿಯಾದವಳು ಒಬ್ಬ ಹುಡುಗನಿಗೆ ಪುಲಾವನ್ನು ಬೇಯಿಸಿ ಕೊಡುತ್ತಾಳೆ; ಮತ್ತೊಬ್ಬ ಹುಡುಗನಿಗೆ ಸೀಮೆ ಅಕ್ಕಿಯ ಗಂಜಿಯನ್ನು ಮಾಡಿಕೊಡುತ್ತಾಳೆ" ಎಂದು ಹೇಳುತ್ತಿದ್ದರಲ್ಲ, ಹಾಗೆ.

ಶಿಷ್ಯನು ವಿಷಯವನ್ನು ಇಷ್ಟು ಹೊತ್ತಿಗೆ ತಿಳಿದುಕೊಂಡು ಸ್ಥಿರನಾದನು. ನೋಡುತ್ತ ನೋಡುತ್ತ ಗಾಡಿಯು ಆಲಂಬಜಾರಿನ ಮಠಕ್ಕೆ ಬಂತು. ಶಿಷ್ಯನು ಗಾಡಿಯ ಬಾಡಿಗೆಯನ್ನು ಕೊಟ್ಟು ಸ್ವಾಮಿಜಿ ಜೊತೆಯಲ್ಲಿ ಮಠದೊಳಕ್ಕೆ ಹೋಗಿ, ಸ್ವಾಮಿಜಿಗೆ ಬಾಯಾರಿಕೆಯಾಗಲು ನೀರನ್ನು ತಂದುಕೊಟ್ಟನು. ಸ್ವಾಮಿಜಿ ನೀರನ್ನು ಕುಡಿದು ಕವಚವನ್ನು ಬಿಚ್ಚಿಹಾಕಿದರು. ಮತ್ತು ನೆಲದ ಮೇಲೆ ಹಾಸಿದ್ದ ಜಂಖಾನದ ಮೇಲೆ ಅರ್ಧ ಶಾಯಿತ ಅವಸ್ಥೆಯಲ್ಲಿ ಕುಳಿತುಕೊಂಡರು. ನಿರಂಜನಾನಂದ ಸ್ವಾಮಿಗಳು ಪಕ್ಕದಲ್ಲಿ ಕುಳಿತುಕೊಂಡು–"ಉತ್ಸವಕ್ಕೆ ಇಷ್ಟುಗುಂಪು ಯಾವಾಗಲೂ ಸೇರಿರಲಿಲ್ಲ, ಕಲ್ಕತ್ತೆಗೆ ಕಲ್ಕತೆಯೆ ಬಂದು ಬಿಟ್ಟಿದ್ದಂತಿತ್ತು" ಎಂದರು.

ಸ್ವಾಮಿಜಿ :— ಆಗುವುದು ಅಷ್ಟೇಅಲ್ಲ ! ಇನ್ನೂ ಮುಂದೆ ಆಗುವುದು ಎಷ್ಟೊ ?

ಶಿಷ್ಯ :— ಮಹಾಶಯರೆ, ಪ್ರತಿಯೊಂದು ಧರ್ಮಸಂಪ್ರದಾಯದಲ್ಲಿಯೂ ಒಂದಲ್ಲದಿದ್ದರೆ ಮತ್ತೊಂದು ಬಾಹ್ಯ ಉತ್ಸವ ಅಥವಾ ಆಮೋ

ದವು ಇದ್ದೇ ಇರುತ್ತದೆ, ಆದರೆ ಯಾರ ಜೊತೆಗೆ ಯಾರೂ ಸೇರುವುದಿಲ್ಲ; ಮುಹಮ್ಮದನ ಮತ ಇಂಥ ಉದಾರವಾದ ಮತ! ಅದರಲ್ಲಿಯೂ ಷಿಯಾ ಸುನ್ನಿಗಳಿಗೆ ಢಾಕಾ ಪಟ್ಟಣದಲ್ಲಿ ಮಾರಾಮಾರಿಯಾದದ್ದನ್ನು ನೋಡಿದ್ದೇನೆ.

ಸ್ವಾಮಿಜಿ :— ಸಂಪ್ರದಾಯ (ಪಂಗಡ) ಹುಟ್ಟಿದರೆ ಸ್ವಲ್ಪ ಹೆಚ್ಚು ಕಡಿಮೆ ಹೀಗೆಲ್ಲ ಆಗುತ್ತವೆ. ಆದರೆ ಇಲ್ಲಿಯ ಭಾವವೇನು ಗೊತ್ತೊ?— ಸಂಪ್ರದಾಯ ವಿಹೀನತೆ! ನಮ್ಮ ಪರಮಹಂಸರು ಇದನ್ನೇ ತೋರಿಸು ವುದಕ್ಕೆ ಅವತಾರಮಾಡಿದ್ದು. ಅವರು ಎಲ್ಲಕ್ಕೂ ಗೌರವ ಕೊಡುತ್ತಿದ್ದರು. ಮತ್ತೆ "ಬ್ರಹ್ಮಜ್ಞಾನದ ಕಡೆಯಿಂದ ನೋಡಿದರೆ ಇವೆಲ್ಲಾ ಮಿಥ್ಯಾ ಮಾಯಾಮಾತ್ರ" ಎಂದು ಹೇಳುತ್ತಿದ್ದರು.

ಶಿಷ್ಯ :— ಮಹಾಶಯರೆ, ತಮ್ಮ ಮಾತು ನನಗೆ ಅರ್ಥವಾಗಲಿಲ್ಲ; ಮಧ್ಯ ಮಧ್ಯದಲ್ಲಿ ನನ್ನ ಮನಸ್ಸಿಗೆ ಎನ್ನಿಸುತ್ತದೆ– ತಾವೂ ಹೀಗೆ ಉತ್ಸವ ಪ್ರಚಾರಾದಿಗಳನ್ನು ಮಾಡಿ ಪರಮಹಂಸರ ಹೆಸರಿಟ್ಟು ಒಂದು ಸಂಪ್ರ ದಾಯವನ್ನು ಆರಂಭಿಸುತ್ತೀರಿ ಎಂದು. ನಾನು ನಾಗ ಮಹಾಶಯರ ಬಾಯಿನಿಂದ, ಪರಮಹಂಸರು ಯಾವಪಂಗಡಕ್ಕೂ ಸೇರಿರಲಿಲ್ಲವೆಂದೂ ಅವರು ಶಾಕ್ತ ವೈಷ್ಣವ ಬ್ರಹ್ಮಜ್ಞಾನಿ, ಮುಸಲ್ಮಾನ, ಕ್ರೈಸ್ತ ಇವರೆಲ್ಲರ ಮತಕ್ಕೂ ಗೌರವ ಕೊಡುತ್ತಿದ್ದರೆಂದೂ ಕೇಳಿದ್ದೇನೆ.

ಸ್ವಾಮಿಜಿ :—ನಾನು ಸಕಲ ಧರ್ಮಗಳನ್ನೂ ಹಾಗೆ ಗೌರವಿಸುವು ದಿಲ್ಲವೆಂತ ನೀನು ಹೇಗೆ ತಿಳಿದುಕೊಂಡೆ?

ಹೀಗೆಂದು ಹೇಳಿ ಸ್ವಾಮಿಜಿ ನಿರಂಜನ ಮಹಾರಾಜನನ್ನು ಕುರಿತು ನಗುತ್ತ ನಗುತ್ತ, "ಏನಯ್ಯಾ, ಈ ಬಂಗಳನು (ಪೂರ್ವ ಬಂಗಾಳ ದವನು) ಹೇಳುತ್ತಿರುವುದೇನು?" ಎಂದು ಕೇಳಿದರು.

ಶಿಷ್ಯ :— ಮಹಾಶಯರೆ, ದಯೆಯಿಟ್ಟು ಈ ವಿಷಯವನ್ನು ನನಗೆ ತಿಳಿಸಿಕೊಡಬೇಕು.

ಸ್ವಾಮಿಜಿ :— ನೀನು ನನ್ನ ಉಪನ್ಯಾಸಗಳನ್ನು ಓದಿದ್ದೀಯಷ್ಟೆ; ಹೇಳು ನೋಡೋಣ, ನಾನು ಎಲ್ಲಿ ಪರಮಹಂಸರ ಹೆಸರನ್ನು ಎತ್ತಿದ್ದೇನೆ? ಶುದ್ಧ ಉಪನಿಷದ್ಧರ್ಮವನ್ನೆ ಹೇಳುತ್ತ ಜಗತ್ತಿನಲ್ಲಿ ಸಂಚಾರಮಾಡಿ ದ್ದೇನೆ.

ಶಿಷ್ಯ :— ಅದೇನೋ ನಿಜ, ಆದರೆ ತಮ್ಮೊಡನೆ ಪರಿಚಿತನಾಗಿ ನೋಡಿದ್ದೇನೆ– ತಾವು ರಾಮಕೃಷ್ಣಗತಪ್ರಾಣರು. ಪರಮಹಂಸರನ್ನು

ತಾವು ದೇವರೆಂದು ತಿಳಿದುಕೊಂಡಿದ್ದರೆ ಇತರ ಜನರಿಗೂ ಅದನ್ನು ಒಟ್ಟಿಗೆ ಹೇಳಿ ಬಿಡಬಾರದೇಕೆ ?

ಸ್ವಾಮಿಜಿ :—ನಾನು ಏನು ತಿಳಿದುಕೊಂಡಿದ್ದೇನೆಯೊ ಅದನ್ನು ಹೇಳುತ್ತೇನೆ. ನೀನು ಅದ್ವೈತ ವೇದಾಂತ ಮತವನ್ನು ಸರಿಯಾದ ಧರ್ಮವೆಂದು ತಿಳಿದುಕೊಂಡಿದ್ದರೆ, ಜನರಿಗೆ ಅದನ್ನೇ ತಿಳಿಸಬಾರದೇಕೆ ?

ಶಿಷ್ಯ :—ಮೊದಲು ಅನುಭವಕ್ಕೆ ತಂದುಕೊಳ್ಳುತ್ತೇನೆ, ಆಮೇಲೆ ತಿಳಿಸುತ್ತೇನೆ; ಈ ಮತವನ್ನು ನಾನು ಸುಮ್ಮನೆ ಓದಿದ್ದೇನೆ ಅಷ್ಟೆ.

ಸ್ವಾಮಿಜಿ :—ಹಾಗಾದರೆ ಮೊದಲು ಅನುಭವಕ್ಕೆ ತಂದುಕೊ, ಆಮೇಲೆ ಜನರಿಗೆ ತಿಳಿಸುವೆಯಂತೆ. ಈಗ ಜನರಲ್ಲಿ ಪ್ರತಿಯೊಬ್ಬನೂ ಒಂದೊಂದು ಮತವನ್ನು ನಂಬಿಕೊಂಡು ಹೋಗುತ್ತಿದ್ದಾನೆ–ಆದ್ದರಿಂದ ಹೇಳುವುದಕ್ಕೆ ನಿನಗೂ ಯಾವ ಅಧಿಕಾರವೂ ಇಲ್ಲ. ಏಕೆಂದರೆ, ನೀನೂ ಈಗ ಅವರ ಹಾಗೆ ಒಂದು ಧರ್ಮ ಮತವನ್ನು ನಂಬಿಕೊಂಡು ಹೋಗುತ್ತಿದ್ದೀಯೆ ಹೊರತು ಮತ್ತೆ ಬೇರೆ ಅಲ್ಲ.

ಶಿಷ್ಯ :—ಹೌದು–ನಾನೂ ಒಂದನ್ನು ನಂಬಿಕೊಂಡೆ ಹೋಗುತ್ತಿದ್ದೇನೆ ನಿಜ; ಆದರೆ ನನ್ನದು ಪ್ರಮಾಣ–ಶಾಸ್ತ್ರ. ನಾನು ಶಾಸ್ತ್ರಕ್ಕೆ ವಿರೋಧಿಯಾದ ಮತಕ್ಕೆ ಗೌರವ ಕೊಡುವುದಿಲ್ಲ.

ಸ್ವಾಮಿಜಿ :—ಶಾಸ್ತ್ರಕ್ಕೆ ಗೌರವ ಕೊಡುತ್ತೀಯೊ ? ಉಪನಿಷತ್ತು ಪ್ರಮಾಣವಾದರೆ, ಬೈಬಲ್, ಜೆಂದವಸ್ತುಗಳು ಏಕೆ ಪ್ರಮಾಣವಾಗ ಬಾರದು ?

ಶಿಷ್ಯ :—ಈ ಗ್ರಂಥಗಳಿಗೆ ಪ್ರಮಾಣ್ಯವನ್ನು ಒಪ್ಪಿಕೊಂಡರೂ ವೇದದ ಹಾಗೆ ಅವು ಪ್ರಾಚೀನ ಗ್ರಂಥಗಳಲ್ಲ. ಮತ್ತು ಆತ್ಮತತ್ತ್ವವಿಚಾರ ವೇದದಲ್ಲಿ ಎಷ್ಟರಮಟ್ಟಿಗಿದೆಯೊ ಅಷ್ಟರಮಟ್ಟಿಗೆ ಮತ್ತೆಲ್ಲಿಯೂ ಇಲ್ಲ.

ಸ್ವಾಮಿಜಿ :—ನಿನ್ನ ಮಾತನ್ನು ಒಪ್ಪಿಕೊಂಡರೂ ವೇದವನ್ನು ಬಿಟ್ಟು ಮತ್ತೆಲ್ಲಿಯೂ ಸತ್ಯವು ಇಲ್ಲವೆಂದು ಹೇಳುವುದಕ್ಕೆ ನಿನಗೇನು ಅಧಿಕಾರ ?

ಶಿಷ್ಯ :—ವೇದವನ್ನು ಬಿಟ್ಟು ಇತರ ಧರ್ಮಗ್ರಂಥಗಳಲ್ಲಿ ಸತ್ಯವಿರಬಹುದು; ಆ ವಿಷಯದಲ್ಲಿ ವಿರುದ್ಧವಾಗಿ ನಾನು ಏನೂ ಹೇಳುವುದಿಲ್ಲ. ಆದರೆ ನಾನು ಉಪನಿಷತ್ತಿನ ಮತವನ್ನೆ ಅನುಸರಿಸಿಕೊಂಡು ಹೋಗುತ್ತೇನೆ; ನನಗೆ ಅದರಲ್ಲಿ ತುಂಬ ನಂಬಿಕೆ.

ಸ್ವಾಮಿಜಿ :—ಹಾಗೆ ಮಾಡು; ಆದರೆ ಮತ್ತಾರಿಗಾದರೂ ಹೀಗೆ

ಯಾವುದಾದರೂ ಮತದಲ್ಲಿ ತುಂಬ ನಂಬಿಕೆ ಇದ್ದರೆ ಅವರೂ ಆ ನಂಬಿಕೆ ಯಿಂದಲೆ ಮುಂದುವರಿಯುವುದಕ್ಕೆ ಅವಕಾಶ ಕೊಡು. ಆಮೇಲೆ ನೀನೂ ಆತನೂ ಒಂದುಕಡೆಯಲ್ಲಿ ಸೇರುವಿರೆಂಬುದು ಗೊತ್ತಾಗುತ್ತದೆ. ಶಿವ ಮಹಿಮ್ನ ಸ್ತೋತ್ರವನ್ನು ಓದಿಲ್ಲವೆ?—"ತ್ವಮಸಿ ಪಯಸಾಮರ್ಣವ ಇವ"

---

## ಅಧ್ಯಾಯ ೭

**ಸ್ಥಳ:**—ಆಲಂಬಜಾರಿನ ಮಠ, ಕಲ್ಕತ್ತ, **ವರ್ಷ:**—ಕ್ರಿ. ಶ. ೧೮೯೭ನೆಯ ಮೇ ತಿಂಗಳು.

ಸ್ವಾಮಿಜಿ ಡಾರ್ಜಿಲಿಂಗ್‌ನಿಂದ ಕಲ್ಕತ್ತೆಗೆ ಹಿಂತಿರುಗಿ ಬಂದಿದ್ದಾರೆ. ಆಲಂಬಜಾರಿನ ಮಠದಲ್ಲಿಯೆ ಇರುತ್ತಿದ್ದಾರೆ. ಗಂಗಾತೀರದಲ್ಲಿರುವ ಯಾವುದಾದರೊಂದು ಕಡೆಗೆ ಮಠವನ್ನು ತೆಗೆದುಕೊಂಡು ಹೋಗುವ ಪ್ರಸ್ತಾಪ ನಡೆಯುತ್ತಿದೆ. ಶಿಷ್ಯನು ಈಗ ಮಠದಲ್ಲಿ ಅವರ ಹತ್ತಿರಕ್ಕೆ ವಿಶೇಷವಾಗಿ ಹೋಗಿ ಬರುತ್ತಿದ್ದಾನೆ ಮತ್ತು ಮಧ್ಯೆ ಮಧ್ಯೆ ರಾತ್ರಿ ಅಲ್ಲಿಯೆ ಇದ್ದುಬಿಡುತ್ತಾನೆ. ಶಿಷ್ಯನ ಜೀವನದಲ್ಲಿ ಪ್ರಥಮ ಮಾರ್ಗದರ್ಶಕರಾದ ನಾಗ ಮಹಾಶಯರು ಅವನಿಗೆ ಮಂತ್ರ ದೀಕ್ಷೆಯನ್ನು ಕೊಡಲಿಲ್ಲ; ಮತ್ತು ಮಂತ್ರೋಪದೇಶದ ಮಾತು ಬಂದಾಗ ಸ್ವಾಮಿಜಿ ಪ್ರಸ್ತಾಪ ಬಂದು "ಸ್ವಾಮಿಗಳೆ ಜಗತ್ತಿಗೆ ಗುರುವಾಗುವುದಕ್ಕೆ ಯೋಗ್ಯರು!" ಎಂದು ಅವ ನಿಗೆ ಹೇಳುತ್ತಿದ್ದರು. ದೀಕ್ಷಾ ಗ್ರಹಣದಲ್ಲಿ ಕೃತಸಂಕಲ್ಪನಾಗಿ ಶಿಷ್ಯನು ಇದಕ್ಕೋಸ್ಕರವೆ ಡಾರ್ಜಿಲಿಂಗಿಗೆ ಸ್ವಾಮಿಜಿಗೆ ಒಂದು ಕಾಗದ ಬರೆದು ತಿಳಿ ಸಿದ್ದನು. ಸ್ವಾಮಿಜಿ ಅದಕ್ಕೆ ಉತ್ತರವಾಗಿ "ನಾಗಮಹಾಶಯರ ಆಕ್ಷೇ ಪಣೆ ಇಲ್ಲದಿದ್ದರೆ ನಿನಗೆ ಅತ್ಯಾನಂದದಿಂದ ದೀಕ್ಷೆಯನ್ನು ಕೊಡುತ್ತೇನೆ" ಎಂದು ಬರೆದರು. ಆ ಕಾಗದ ಶಿಷ್ಯನ ಹತ್ತಿರದಲ್ಲಿ ಈಗಲೂ ಇದೆ.

೧೩೦೩ನೆಯ ಬಂಗಾಳಿ ಸಂವತ್ಸರದ ೧೯ನೆಯ ವೈಶಾಖ. ಸ್ವಾಮಿಜಿ ಈ ದಿನ ಶಿಷ್ಯನಿಗೆ ದೀಕ್ಷೆಯನ್ನು ಕೊಡುತ್ತೇನೆಂದು ಮಾತು ಕೊಟ್ಟಿದ್ದಾರೆ. ಈ ದಿನ ಶಿಷ್ಯನ ಜೀವನದಲ್ಲಿ ಅತ್ಯಂತ ವಿಶೇಷ ದಿನ! ಶಿಷ್ಯನು ಬೆಳಗ್ಗೆ

ಹೊತ್ತಿಗೆ ಮುಂಚೆ ಗಂಗೆಯಲ್ಲಿ ಸ್ನಾನಮಾಡಿ ಲಿಚಿ ಹಣ್ಣು ಮತ್ತು ಇತರ ಪದಾರ್ಥಗಳನ್ನೂ ಕೊಂಡು ಸುಮಾರು ಎಂಟು ಗಂಟೆಯ ಹೊತ್ತಿಗೆ ಆಲಂಬಜಾರಿನ ಮಠಕ್ಕೆ ಬಂದಿದ್ದಾನೆ. ಶಿಷ್ಯನನ್ನು ನೋಡಿ ಸ್ವಾಮಿಜಿ ಗೋಪ್ಯವಾಗಿ "ಇಂದು ನಿನ್ನನ್ನು 'ಬಲಿ' ಕೊಡಬೇಕು.—ಅಲ್ಲವೆ?" ಎಂದರು.

ಸ್ವಾಮಿಜಿ ಶಿಷ್ಯನಿಗೆ ಈ ಮಾತನ್ನು ಹೇಳಿ ಮತ್ತೆ ನಗು ನಗುತ್ತ ಎಲ್ಲರೊಡನೆಯೂ ಅಮೆರಿಕಾದ ನಾನಾ ಪ್ರಸ್ತಾಪಗಳನ್ನು ಕುರಿತು ಮಾತನಾಡತೊಡಗಿದರು. ಧಾರ್ಮಿಕ ಜೀವನವನ್ನು ಬೆಳೆಸಬೇಕಾದರೆ ಹೇಗೆ ಏಕನಿಷ್ಠನಾಗಿರಬೇಕು, ಗುರುವಿನಲ್ಲಿ ಹೇಗೆ ಅಚಲವಾದ ನಂಬಿಕೆ ಮತ್ತು ದೃಢವಾದ ಭಕ್ತಿ ಭಾವವನ್ನು ಇಟ್ಟಿರಬೇಕು, ಗುರುವಾಕ್ಯದಲ್ಲಿ ಹೇಗೆ ಪ್ರಾಣವನ್ನು ಕೊಡುವುದಕ್ಕೂ ಸಿದ್ಧನಾಗಿರಬೇಕು ಈ ಮಾತು ಗಳೆಲ್ಲಾ ಜೊತೆಯಲ್ಲಿ ಬಂದುವು. ಅನಂತರದಲ್ಲಿ ಶಿಷ್ಯನಿಗೆ ಕೆಲವು ಪ್ರಶ್ನೆ ಗಳನ್ನು ಹಾಕಿ ಅವನ ಹೃದಯವನ್ನು ಪರೀಕ್ಷಿಸುವುದಕ್ಕೆ ಮೊದಲು ಮಾಡಿ ದರು—"ನಾನು ನಿನಗೆ ಯಾವಾಗ ಯಾವ ಕೆಲಸವನ್ನು ಮಾಡು ಎಂದು ಹೇಳುತ್ತೇನೆಯೊ ಆವಾಗ ಅದನ್ನು ಸಾಧ್ಯವಾದಷ್ಟು ಮಾಡುತ್ತೀಯೊ? ಗಂಗೆಯಲ್ಲಿ ಧುಮುಕಿದರೆ ಅಥವಾ ಮನೆಯ ಮೇಲಿನ ಛಾವಣಿಯಿಂದ ಕೆಳಕ್ಕೆ ಹಾರಿಬಿದ್ದರೆ ನಿನಗೆ ಮಂಗಳವಾಗುವುದೆಂದು ತಿಳಿದುಕೊಂಡು ಅದನ್ನೇ ಮಾಡು ಎಂದು ಹೇಳಿದರೆ ಅದನ್ನೂ ಹಿಂದು ಮುಂದು ನೋಡದೆ ಮಾಡಬಲ್ಲೆಯೊ? ಈಗಲೂ ಯೋಚಿಸಿನೋಡು; ಇಲ್ಲದಿದ್ದರೆ ಗುರು ಹೇಳಿದ್ದನ್ನು ಚಟ್ಟನೆ ಗ್ರಹಿಸಲಾರೆ."—ಹೀಗೆ ಕೆಲವು ಪ್ರಶ್ನೆಗಳನ್ನು ಹಾಕಿ ಸ್ವಾಮಿಜಿ ಶಿಷ್ಯನ ಮನಸ್ಸಿನಲ್ಲಿದ್ದ ನಂಬಿಕೆಯ ದಾರ್ಢ್ಯವನ್ನು ತಿಳಿದು ಕೊಂಡರು. ಶಿಷ್ಯನು ತಲೆಯನ್ನು ಬಗ್ಗಿಸಿ "ಮಾಡಬಲ್ಲೆ" ಎಂದು ಪ್ರತಿಯೊಂದು ಪ್ರಶ್ನೆಗೂ ಉತ್ತರ ಕೊಡುತ್ತ ಬಂದನು.

ಸ್ವಾಮಿಜಿ ಹೇಳುವುದಕ್ಕೆ ಮೊದಲುಮಾಡಿದರು.—"ಯಾರು ಈ ಸಂಸಾರ–ಮಾಯೆಯಿಂದ ಹೊರಕ್ಕೆ ಕರೆದುಕೊಂಡು ಹೋಗಿ ಬಿಡುವನೊ, ಯಾರು ಕೃಪೆಮಾಡಿ ಸಮಸ್ತ ಮಾನಸಿಕ ಆಧಿವ್ಯಾಧಿಗಳನ್ನೂ ಹೋಗ ಲಾಡಿಸುವನೊ ಅವನೆ ನಿಜವಾದ ಗುರು. ಮೊದಲು ಶಿಷ್ಯರು ಸಮಿತ್ತನ್ನು ಹಿಡಿದುಕೊಂಡು ಗುರುವಿನ ಆಶ್ರಮಕ್ಕೆ ಹೋಗುತ್ತಿದ್ದರು. ಗುರುವಿಗೆ ಅಧಿಕಾರಿಯೆಂದು ತಿಳಿದರೆ ಆತನು ಅಂಥವನಿಗೆ ದೀಕ್ಷೆ ಕೊಟ್ಟು ವೇದವನ್ನು

ಹೇಳಿ ಮನೋವಾಕ್ಕಾಯ ದಂಡನ ರೂಪವಾದ ವ್ರತಕ್ಕೆ ಚಿಹ್ನೆಗಾಗಿ ಮೂರು ಸುತ್ತು ಮೌಂಜಿ ಮೇಖಲೆಯನ್ನು ಅವನ ಸೊಂಟದಲ್ಲಿ ಕಟ್ಟುತ್ತಿದ್ದನು. ಆ ಮೌಂಜಿ ಮೇಖಲೆಗೆ ಬದಲಾಗಿ ಆಮೇಲೆ ಯಜ್ಞಸೂತ್ರ ಅಥವಾ ಯಜ್ಞೋಪವೀತವನ್ನು ಹಾಕಿಕೊಳ್ಳುವ ಪದ್ಧತಿ ಬಂತು.''

ಶಿಷ್ಯ:—ಹಾಗಾದರೇನು, ಮಹಾಶಯರೆ, ನಮ್ಮಹಾಗೆ ದಾರದ ಯಜ್ಞೋಪವೀತವನ್ನು ಹಾಕಿಕೊಳ್ಳುವುದು ವೇದೋಕ್ತ ಮಾರ್ಗವಲ್ಲವೆ?

ಸ್ವಾಮಿಜಿ:—ವೇದದಲ್ಲಿ ಎಲ್ಲಿಯೂ ಯಜ್ಞೋಪವೀತಸೂತ್ರದ ಪ್ರಸ್ತಾಪವಿಲ್ಲ. ಸ್ಮಾರ್ತ ಭಟ್ಟಾಚಾರ್ಯರಾದ ರಘುನಂದನರೂ "ಅಸ್ಮಿನ್ನೇವ ಸಮಯೇ ಯಜ್ಞಸೂತ್ರಂ ಪರಿಧಾಪಯೇತ್" ಎಂದು ಬರೆದಿದ್ದಾರೆ. ಯಜ್ಞೋಪವೀತಸೂತ್ರದ ಪ್ರಸ್ತಾಪವು ಗೋಭಿಲ ಗೃಹ್ಯ ಸೂತ್ರದಲ್ಲಿಯೂ ಇಲ್ಲ. ಗುರುವಿನ ಹತ್ತಿರ ಆಗುವ ಈ ಮೊದಲನೆಯ ವೈದಿಕ ಸಂಸ್ಕಾರವೆ "ಉಪನಯನ" ವೆಂದು ಶಾಸ್ತ್ರದಲ್ಲಿ ಉಕ್ತವಾಗಿರುವುದು; ಆದರೆ ಈಗಿನ ಕಾಲದಲ್ಲಿ ದೇಶಕ್ಕೆ ಎಂಥ ದುರವಸ್ಥೆಯುಂಟಾಗಿ ಹೋಗಿದೆ! ಶಾಸ್ತ್ರೋಕ್ತ ಮಾರ್ಗವನ್ನು ಬಿಟ್ಟು ಕೇವಲ ಕೆಲವು ದೇಶಾಚಾರ, ಲೋಕಾಚಾರ, ಮತ್ತು ಹೆಂಗಸರ ಆಚಾರಗಳಲ್ಲಿ ದೇಶ ಮುಳುಗಿಹೋಗಿದೆ. ಆದ್ದರಿಂದಲೇ ನೀವು, ಪ್ರಾಚೀನ ಕಾಲದಂತೆ ಶಾಸ್ತ್ರಮಾರ್ಗವನ್ನನುಸರಿಸಿ ಹೋಗಿರೆಂದು ನಿಮಗೆ ಹೇಳುತ್ತೇನೆ; ನೀವು ಶ್ರದ್ಧಾವಂತರಾಗಿ ದೇಶದಲ್ಲಿಯೂ ಶ್ರದ್ಧೆಯನ್ನು ಉಂಟುಮಾಡಿ ನಚಿಕೇತನಿಗಿದ್ದಂತೆ ಶ್ರದ್ಧೆಯನ್ನು ಹೃದಯದಲ್ಲಿ ತಂದುಕೊಳ್ಳಿ. ನಚಿಕೇತನಹಾಗೆ ಯಮಲೋಕಕ್ಕೆ ಹೊರಟುಹೋಗಿ—ಆತ್ಮತತ್ತ್ವವನ್ನು ತಿಳಿದುಕೊಳ್ಳುವುದಕ್ಕೋಸ್ಕರ, ಆತ್ಮೋದ್ಧಾರಕ್ಕೋಸ್ಕರ, ಈ ಜನನಮರಣ ಸಮಸ್ಯೆಯ ವಿಚಾರಕ್ಕೋಸ್ಕರ, ಯಮನ ಬಾಯಿಗೆ ಹೋದರೆ ತತ್ತ್ವ ತಿಳಿದುಬರುವ ಹಾಗಿದ್ದಪಕ್ಷದಲ್ಲಿ ಅದಕ್ಕೋಸ್ಕರ ನಿರ್ಭಯಹೃದಯರಾಗಿ ಯಮನ ಬಾಯಿಗೆ ಹೋಗಿ ಬೀಳಬೇಕು. ಭಯವೇ ಮೃತ್ಯು. ಭಯದ ಆಚೆಯ ದಡಕ್ಕೆ ಹೋಗಬೇಕು. ಇಂದಿನಿಂದ ಭಯರಹಿತನಾಗು. ನಡೆ, ಹೊರಡು–ನಿನ್ನ ಮೋಕ್ಷಕ್ಕೋಸ್ಕರವೂ ಪರಪ್ರಯೋಜನಕ್ಕಾಗಿಯೂ ದೇಹವನ್ನು ಕೊಡುವುದಕ್ಕೆ ಆಗುವುದೇನು! ಕೆಲವು ರಕ್ತ ಮೂಳೆ ಮಾಂಸಗಳ ಮುದ್ದೆಗಳನ್ನು ಹೊತ್ತುಕೊಂಡು ಏನು ಪ್ರಯೋಜನ? ಈಶ್ವರಾರ್ಥವಾಗಿ ಸರ್ವಸ್ವತ್ಯಾಗರೂಪವಾದ ಮಂತ್ರದೀಕ್ಷೆಯನ್ನು ಪಡೆದು ದಧೀಚಿ ಮುನಿಯ ಹಾಗೆ ಪರರಿಗೋಸ್ಕರ ಮೂಳೆ ಮಾಂಸ

ಗಳನ್ನು ದಾನಮಾಡು. ಯಾರು ವೇದ ವೇದಾಂತಗಳನ್ನು ವ್ಯಾಸಂಗ ಮಾಡಿರುವನೊ ಯಾರು ಬ್ರಹ್ಮಜ್ಞನೊ ಯಾರು ಪರರನ್ನು ಅಭಯದ ತೀರಕ್ಕೆ ಕರೆದುಕೊಂಡು ಹೋಗಲು ಸಮರ್ಥನೊ, ಅವನೆ ನಿಜವಾದ ಗುರು; ಅಂಥವನ ಹತ್ತಿರವೆ ದೀಕ್ಷೆಯನ್ನು ಪಡೆಯಬೇಕು–"ನಾತ್ರ ಕಾರ್ಯಾ ವಿಚಾರಣಾ" ಈಗ ಅದು ಏನಾಗಿದೆ ಬಲ್ಲೆಯಾ?–"ಅಂಧೇನೈವ ನೀಯಮಾನಾ ಯಥಾಂಧಾಃ"

ಹೊತ್ತು ಸುಮಾರು ಒಂಬತ್ತು ಗಂಟೆಯಾಗಿದೆ. ಸ್ವಾಮಿಜಿ ಇಂದು ಗಂಗೆಗೆ ಹೋಗದೆ ಮನೆಯಲ್ಲಿಯೆ ಸ್ನಾನಮಾಡಿದ್ದಾರೆ. ಸ್ನಾನವಾದ ಮೇಲೆ ಒಂದು ಮಡಿ ಕಾವಿಯ ಬಟ್ಟೆಯನ್ನು ಉಟ್ಟುಕೊಂಡು ಮೆಲ್ಲಗೆ ದೇವರ ಮನೆಗೆ ಹೋಗಿ ಪೂಜಾಸನದಲ್ಲಿ ಕುಳಿತುಕೊಂಡರು. ಶಿಷ್ಯನು ದೇವರ ಮನೆಗೆ ಹೋಗದೆ ಹೊರಗೆ ಕಾದುಕೊಂಡಿದ್ದನು—ಸ್ವಾಮಿಜಿ ಕರೆದರೆ ಆಮೇಲೆ ಹೋಗೋಣವೆಂದು. ಈಗ ಸ್ವಾಮಿಜಿ ಧ್ಯಾನ ಮಗ್ನರಾದರು; ಮುಕ್ತ ಪದ್ಮಾಸನ; ಕಣ್ಣುಗಳು ಅರ್ಧ ಮುಚ್ಚಿವೆ. ದೇಹ ಮನಸ್ಸು ಪ್ರಾಣ ಇವೆಲ್ಲಾ ನಿಶ್ಚಲವಾಗಿ ಹೋಗಿರುವಂತಿವೆ. ಧ್ಯಾನ ಮುಗಿದಮೇಲೆ ಸ್ವಾಮಿಜಿ ಶಿಷ್ಯನನ್ನು "ಬಾಪ್ಪಾ!" ಎಂದು ಕರೆದರು. ಶಿಷ್ಯನು ಸ್ವಾಮಿಜಿ ಅಂತಃಕರಣ ಪೂರ್ವಕವಾದ ಕರೆಗೆ ಮುಗ್ಧನಾಗಿ ದೇವರ ಮನೆಯೊಳಕ್ಕೆ ಹೋದನು. ದೇವರ ಮನೆಯೊಳಕ್ಕೆ ಪ್ರವೇಶ ಮಾಡುತ್ತಿದ್ದ ಹಾಗೆಯೆ "ಬಾಗಿಲ ಚಿಲಕವನ್ನು ಹಾಕಿಬಿಡು" ಎಂದು ಶಿಷ್ಯನಿಗೆ ಹೇಳಿದರು. ಹಾಗೆ ಮಾಡಿದ ಕೂಡಲೆ "ಸ್ಥಿರವಾಗಿ ನನ್ನ ಎಡಭಾಗದಲ್ಲಿ ಕುಳಿತುಕೊ" ಎಂದರು. ಸ್ವಾಮಿಗಳ ಆಜ್ಞೆಯನ್ನು ಶಿರಸಾವಹಿಸಿ ಶಿಷ್ಯನು ಆಸನದಲ್ಲಿ ಕುಳಿತುಕೊಂಡನು. ಅವನ ಹೃತ್ಪಿಂಡವು ಆಗ ಒಂದು ವಿಧವಾದ ಅನಿರ್ವಚನೀಯವಾದ ಅಪೂರ್ವ ಭಾವದಲ್ಲಿ ಡವಡವನೆ ಬಡಿದುಕೊಳ್ಳುತ್ತಿತ್ತು. ಅನಂತರದಲ್ಲಿ ಸ್ವಾಮಿಜಿ ತಮ್ಮ ಕರಕಮಲವನ್ನು ಶಿಷ್ಯನ ತಲೆಯ ಮೇಲೆ ಇಟ್ಟು ಶಿಷ್ಯನನ್ನು ಕೆಲವು ಗೋಪ್ಯವಾದ ವಿಷಯಗಳನ್ನು ಕೇಳಿದರು, ಮತ್ತು ಶಿಷ್ಯನು ಈ ವಿಷಯಗಳಿಗೆ ಸಾಧ್ಯವಾಗುವ ಮಟ್ಟಿಗೆ ಉತ್ತರವನ್ನು ಕೊಟ್ಟಮೇಲೆ ಮಹಾ ಬೀಜ ಮಂತ್ರವನ್ನು ಅವನ ಕಿವಿಯಲ್ಲಿ ಮೂರು ಸಾರಿ ಉಚ್ಚರಿಸಿದರು, ಆಮೇಲೆ ಅದನ್ನು ಮೂರು ಸಾರಿ ಶಿಷ್ಯನಿಂದ ಹೇಳಿಸಿದರು. ಅನಂತರ ಸಾಧನದ ವಿಚಾರವಾಗಿ ಸಾಮಾನ್ಯ ಉಪದೇಶವನ್ನು ಕೊಟ್ಟು ಸ್ಥಿರರಾಗಿ ಬಿಡುಗಣ್ಣಿನಿಂದ ಸ್ವಲ್ಪ ಹೊತ್ತು ಶಿಷ್ಯನ ಕಣ್ಣು

ಗಳನ್ನು ದುರುಗುಟ್ಟಿಕೊಂಡು ನೋಡುತ್ತಿದ್ದರು. ಶಿಷ್ಯನ ಮನಸ್ಸು ಈಗ ಸ್ತಬ್ಧವಾಗಿ ಏಕಾಗ್ರವಾಗಲು ಅವನು ಒಂದು ಅನಿರ್ವಚನೀಯವಾದ ಭಾವದಲ್ಲಿ ಸ್ಥಿರನಾಗಿ ಕುಳಿತುಕೊಂಡನು. ಎಷ್ಟು ಹೊತ್ತು ಹೀಗೆ ಕಳೆಯಿತೊ ಅದನ್ನು ಸ್ವಲ್ಪವೂ ತಿಳಿಯುವುದಕ್ಕೆ ಸಾಧ್ಯವಾಗಲಿಲ್ಲ. ಆಮೇಲೆ ಸ್ವಾಮಿಜಿ "ಗುರುದಕ್ಷಿಣೆಯನ್ನು ಕೊಡು" ಎಂದರು. ಶಿಷ್ಯನು "ಏನು ಕೊಡಲಿ" ಎಂದು ಕೇಳಿದನು. ಅದನ್ನು ಕೇಳಿ ಸ್ವಾಮಿಜಿ "ಹೋಗು, ಉಗ್ರಾಣದಿಂದ ಯಾವುದಾದರೂ ಹಣ್ಣನ್ನು ತೆಗೆದುಕೊಂಡು ಬಾ" ಎಂದು ಆಜ್ಞಾಪಿಸಿದರು. ಶಿಷ್ಯನು ಉಗ್ರಾಣಕ್ಕೆ ಓಡಿಹೋಗಿ ಹತ್ತು ಹದಿನೈದು ಲಿಚಿ ಹಣ್ಣುಗಳನ್ನು ತೆಗೆದುಕೊಂಡು ಬಂದನು. ಸ್ವಾಮಿಜಿ ಕೈಗೆ ಅವನ್ನು ಇನ್ನೂ ಕೊಡುತ್ತಿದ್ದಹಾಗೆಯೆ ಅವರು ಅವುಗಳನ್ನೆಲ್ಲಾ ಒಂದೊಂದಾಗಿ ತಿಂದುಬಿಟ್ಟು "ನೀನು ಗುರುದಕ್ಷಿಣೆಯನ್ನು ಕೊಟ್ಟು ಆಯಿತು ನಡೆ!" ಎಂದರು. ಶಿಷ್ಯನು ದೇವರ ಮನೆಯಲ್ಲಿ ದೀಕ್ಷೆಯನ್ನು ಪಡೆದಾಗ ಮಠಕ್ಕೆ ಸೇರಿದ ಮತ್ತೊಬ್ಬ ವ್ಯಕ್ತಿಯೂ ತಟ್ಟನೆ ದೀಕ್ಷೆ ಪಡೆಯಬೇಕೆಂದು ಸಂಕಲ್ಪ ಮಾಡಿಕೊಂಡು ಬಾಗಿಲ ಹತ್ತಿರ ನಿಂತುಕೊಂಡಿದ್ದನ್ನು ಶುದ್ಧಾನಂದ ಸ್ವಾಮಿಗಳು ಆಗ ಬ್ರಹ್ಮಚಾರಿಯಾಗಿ ಮಠದಲ್ಲಿ ಸೇರಿದ್ದರೂ ಇದಕ್ಕೆ ಹಿಂದೆ ಶಾಸ್ತ್ರೀಯ ದೀಕ್ಷೆಯನ್ನು ಪಡೆದಿರಲಿಲ್ಲ. ಶಿಷ್ಯನು ಈ ದಿವಸ ಹೀಗೆ ದೀಕ್ಷೆ ಪಡೆದದ್ದನ್ನು ನೋಡಿ ಅವರೂ ಈಗ ಈ ವಿಚಾರದಲ್ಲಿ ಉತ್ಸಾಹಿತರಾಗಿ, ಶಿಷ್ಯನು ದೀಕ್ಷೆ ಪಡೆದು ದೇವರ ಮನೆಯಿಂದ ಹೊರಗೆ ಹೊರಡುತ್ತಿದ್ದ ಹಾಗೆ, ಆ ಮನೆಯೊಳಗೆ ಸ್ವಾಮಿಗಳ ಹತ್ತಿರಕ್ಕೆ ಹೋಗಿ ತಮ್ಮ ಅಭಿಪ್ರಾಯವನ್ನು ವಿಜ್ಞಾಪಿಸಿಕೊಂಡರು. ಸ್ವಾಮಿಜಿ ಶುದ್ಧಾನಂದರ ಅತಿಶಯವಾದ ಆಸಕ್ತಿಯನ್ನು ನೋಡಿ ಅದಕ್ಕೆ ಒಪ್ಪಿಕೊಂಡು ಪುನಃ ಪೂಜಾಸನದಲ್ಲಿ ಕುಳಿತುಕೊಂಡರು.

ಅನಂತರದಲ್ಲಿ ಶುದ್ಧಾನಂದರಿಗೆ ದೀಕ್ಷೆಯನ್ನು ಕೊಟ್ಟು ಸ್ವಾಮಿಜಿ ಸ್ವಲ್ಪ ಹೊತ್ತಿನಮೇಲೆ ಹೊರಗೆ ಬಂದರು. ಊಟವಾದಮೇಲೆ ಮಲಗಿ ಸ್ವಲ್ಪ ವಿಶ್ರಾಂತಿಯನ್ನು ಪಡೆದರು. ಶಿಷ್ಯನೂ ಈ ಮಧ್ಯೆ ಶುದ್ಧಾನಂದರೊಡನೆ ಸ್ವಾಮಿಜಿಯ ಭುಕ್ತಶೇಷವನ್ನು ಆನಂದದಿಂದ ಸ್ವೀಕರಿಸಿ ಬಂದು ಅವರ ಪದತಲದಲ್ಲಿ ಕುಳಿತುಕೊಂಡು ಮೆಲ್ಲ ಮೆಲ್ಲಗೆ ಅವರ ಕಾಲುಗಳನ್ನು ಒತ್ತುತ್ತಿದ್ದನು.

ವಿಶ್ರಾಂತಿಯಾದಮೇಲೆ ಸ್ವಾಮಿಜಿ ಮೇಲಿನ ಬೈಠಕ್ ಖಾನೆಗೆ

ಬಂದು ಕುಳಿತುಕೊಂಡರು. ಶಿಷ್ಯನು ಈ ಸಮಯದಲ್ಲಿ ಅವಕಾಶವನ್ನು ಮಾಡಿಕೊಂಡು ಅವರನ್ನು ಕುರಿತು "ಮಹಾಶಯರೆ, ಪಾಪಪುಣ್ಯಗಳ ಭಾವ ಎಲ್ಲಿಂದ ಬಂತು?" ಎಂದು ಕೇಳಿದನು.

ಸ್ವಾಮಿಜಿ:— ಬಹುತ್ವ ಭಾವದಿಂದಲೇ ಇದೆಲ್ಲಾ ಬಂದಿದೆ. ಮನುಷ್ಯ ಏಕತ್ವದ ಕಡೆಗೆ ಎಷ್ಟೆಷ್ಟು ಮುಂದುವರಿಯುತ್ತಾನೆಯೊ ಧರ್ಮಾಧರ್ಮ ದ್ವಂದ್ವಭಾವಗಳಿಗೆಲ್ಲಾ ಕಾರಣವಾದ "ನಾನು ನೀನು" ಎಂಬ ಭಾವವು ಅಷ್ಟಷ್ಟು ಕಡಿಮೆಯಾಗುತ್ತ ಹೋಗುತ್ತದೆ. ನನಗಿಂತ ಇವನು ಬೇರೆ-ಎಂಬ ಭಾವ ಮನಸ್ಸಿಗೆ ಬಂದರೆ, ಆಗ ಇತರ ದ್ವಂದ್ವ ಭಾವಗಳೆಲ್ಲಾ ವಿಕಾಸವನ್ನು ಪಡೆಯುತ್ತ ಹೋಗುತ್ತವೆ; ಮತ್ತು ಏಕತ್ವದ ಸಂಪೂರ್ಣವಾದ ಅನುಭವವಾದರೆ ಮನುಷ್ಯನಿಗೆ ಆಮೇಲೆ ಶೋಕ ಮೋಹಗಳು ಇರುವುದಿಲ್ಲ- "ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ?"

ಯಾವುದಾದರೂ ವಿಧವಾದ ದೌರ್ಬಲ್ಯಕ್ಕೆ ಪಾಪವೆಂದು ಹೆಸರು ಈ ದೌರ್ಬಲ್ಯದಿಂದಲೆ ಹಿಂಸಾ ದ್ವೇಷಾದಿಗಳು ಹುಟ್ಟುವುವು. ಆ ದೌರ್ಬಲ್ಯದ ಹೆಸರೆ ಪಾಪ. ಒಳಗೆ ಆತ್ಮ ಸರ್ವದಾ ಧಗಧಗನೆ ಪ್ರಜ್ವಲಿಸುತ್ತಿದೆ. ಆ ಕಡೆಗೆ ದೃಷ್ಟಿಕೊಡದೆ ಈ ವಿಕಾರಸ್ವರೂಪಿನ ಅಸ್ಥಿಮಾಂಸ ಪಂಜರವಾದ ಜಡಶರೀರದ ಕಡೆಗೇ ಎಲ್ಲರೂ ದೃಷ್ಟಿಕೊಟ್ಟು 'ನಾನು' 'ನಾನು' ಎನ್ನುವರು. ಇದೇ ಸಕಲ ವಿಧವಾದ ದೌರ್ಬಲ್ಯಕ್ಕೂ ಮೂಲ. ಈ ಅಭ್ಯಾಸದಿಂದಲೆ ಜಗತ್ತಿನಲ್ಲಿ ವ್ಯಾವಹಾರಿಕ ಭಾವವುಂಟಾಗಿದೆ. ಪಾರಮಾರ್ಥಿಕ ಭಾವವು ಈ ದ್ವಂದ್ವದ ಹೊರಗೆ ಇರುವುದು.

ಶಿಷ್ಯ:— ಹಾಗಾದರೆ ಈ ವ್ಯಾವಹಾರಿಕ ಸತ್ತೆ (ಸ್ಥಿತಿ) ಯೆಲ್ಲಾ ಸತ್ಯವಾದುದ್ದಲ್ಲವೆ?

ಸ್ವಾಮಿಜಿ:— ಎಷ್ಟು ಹೊತ್ತು 'ಅಹಂ' ನ ಜ್ಞಾನವಿರುತ್ತದೆಯೊ ಅಷ್ಟು ಹೊತ್ತು ಸತ್ಯ. ಮತ್ತೆ ಯಾವಾಗ ನಾನು 'ಆತ್ಮಾ' ಎಂಬ ಅನುಭವವಿರುತ್ತದೆಯೊ ಆಗಲೆ ಈ ವ್ಯಾವಹಾರಿಕ ಸತ್ತೆಯು ಮಿಥ್ಯೆ. ಜನರು ಯಾವುದನ್ನು ಪಾಪ ಪಾಪವೆಂದು ಹೇಳುತ್ತಾರೆಯೊ ಅದು ದೌರ್ಬಲ್ಯದ ಫಲ- 'ನಾನು ದೇಹ' ಎಂಬುವದು ಅಹಂಭಾವದ ರೂಪಾಂತರ. ಯಾವಾಗ ನಾನು ಆತ್ಮಾ ಎಂಬ ಭಾವದಲ್ಲಿ ಮನಸ್ಸು ನಿಶ್ಚಲವಾಗುತ್ತದೆಯೊ, ಆಗ ನೀನು ಪಾಪ ಪುಣ್ಯ ಧರ್ಮಾಧರ್ಮಗಳನ್ನು

ದಾಟಿ ಹೋಗುವೆ. ಪರಮಹಂಸರು "ನಾನು" ಸತ್ತರೆ ತೊಂದರೆಯೆಲ್ಲಾ ಪರಿಹಾರವಾಗುತ್ತದೆ ಎಂದು ಹೇಳುತ್ತಿದ್ದರು.

ಶಿಷ್ಯ:— ಮಹಾಶಯರೆ 'ಅಹಂ' ಎನ್ನುವುದನ್ನು ಸಾಯಿಸಿದರೂ ಸಾಯುವುದಿಲ್ಲ. ಇದನ್ನು ಸಾಯಿಸುವುದು ತುಂಬ ಕಷ್ಟ.

ಸ್ವಾಮಿಜಿ:— ಒಂದು ವಿಧದಲ್ಲಿ ತುಂಬ ಕಷ್ಟ ಮತ್ತೊಂದು ವಿಧದಲ್ಲಿ ತುಂಬ ಸುಲಭ. 'ಅಹಂ' ಪದಾರ್ಥ ಎಲ್ಲಿದೆ ಎಂದು ತಿಳಿದುಕೊಂಡಿದ್ದೀಯೆ? ಯಾವ ಪದಾರ್ಥ ಇಲ್ಲವೆ ಇಲ್ಲವೊ ಅದನ್ನು ಸಾಯಿಸುವುದೇನು? 'ಅಹಂ' ರೂಪದ ಒಂದು ಮಿಥ್ಯಾ ಭಾವದಲ್ಲಿ ಮನುಷ್ಯನು ಮಂತ್ರ ಮುಗ್ಧನಾಗಿದ್ದಾನೆ; ಅಷ್ಟೆ. ಈ ಭೂತ ಬಿಟ್ಟುಹೋದರೆ ಸ್ವಪ್ನವೆಲ್ಲಾ ಕಳೆದುಹೋಗಿ ಒಂದೆ ಆತ್ಮ ಆಬ್ರಹ್ಮಸ್ತಂಬಪರ್ಯಂತವಾಗಿ ಎಲ್ಲದರಲ್ಲಿಯೂ ಇರುವುದು ಗೊತ್ತಾಗುತ್ತದೆ. ಇದನ್ನೇ ತಿಳಿದುಕೊಳ್ಳಬೇಕು— ಪ್ರತ್ಯಕ್ಷ ಮಾಡಿಕೊಳ್ಳಬೇಕು. ಸಾಧನ ಭಜನ ಎಷ್ಟಿವೆಯೊ ಅವೆಲ್ಲಾ ಈ ಆವರಣವನ್ನು ಕತ್ತರಿಸಿ ಹಾಕುವುದಕ್ಕೋಸ್ಕರ. ಅದು ಹೋದರೇಯೆ ಚಿತ್ಸೂರ್ಯನು ತನ್ನ ಪ್ರಭೆಯಲ್ಲಿ ತಾನು ಪ್ರಜ್ವಲಿಸುತ್ತಿರುವುದನ್ನು ನೋಡಲು ಸಮರ್ಥವಾಗುವೆ. ಏಕೆಂದರೆ ಆತ್ಮ ಒಂದೇ ಸ್ವಯಂ ಜ್ಯೋತಿಃ—ಸ್ವಸಂವೇದ್ಯ. ಯಾವ ವಸ್ತು ಸ್ವಸಂವೇದ್ಯವೊ ಅದನ್ನು ಮತ್ತಾವುದಾದರೊಂದರ ಸಹಾಯದಿಂದ ತಿಳಿದುಕೊಳ್ಳುವುದು ಹೇಗೆ? ಶ್ರುತಿ ಅದನ್ನೇ ಹೇಳುವುದು—"ವಿಜ್ಞಾತಾರಮರೇ ಕೇನ ವಿಜಾನೀಯಾತ್" ನೀನು ಏನು ಅಲ್ಪ ಸ್ವಲ್ಪ ತಿಳಿದುಕೊಂಡಿದ್ದೀಯೊ ಅದು ಮನೋರೂಪವಾದ ಕಾರಣದ ಸಹಾಯದಿಂದ. ಮನಸ್ಸು ಜಡ; ಅದರ ಹಿಂದೆ ಶುದ್ಧ ಆತ್ಮಾ ಇರುವುದರಿಂದಲೆ ಮನಸ್ಸಿನ ಮೂಲಕ ಕಾರ್ಯ ನಡೆಯುತ್ತದೆ. ಆದ್ದರಿಂದ ಮನಸ್ಸಿನ ಮೂಲಕ ಆ ಆತ್ಮವನ್ನು ಹೇಗೆ ತಿಳಿಯುವಿ? ಆದರೆ ಇಷ್ಟುಮಾತ್ರ ತಿಳಿಯುತ್ತದೆ ಏನೆಂದರೆ, ಮನಸ್ಸು ಶುದ್ಧ ಆತ್ಮದ ಹತ್ತಿರ ಹೋಗಲಾರದು, ಬುದ್ಧಿಯೂ ಹೋಗಲಾರದು. ತಿಳಿದುಕೊಳ್ಳುವುದು ಇಲ್ಲಿಯವರೆಗೆ ಮಾತ್ರ. ಅದರಮೇಲೆ, ಯಾವಾಗ ಮನಸ್ಸು ನಿರ್ವಿಕಲ್ಪ ಅಥವಾ ವೃತ್ತಿ ಹೀನವಾಗುತ್ತದೆಯೊ ಆಗಲೆ ಮನಸ್ಸು ಲುಪ್ತವಾಗುತ್ತದೆ, ಆಗಲೆ ಆತ್ಮ ಪ್ರತ್ಯಕ್ಷವಾಗುವುದು. ಈ ಸ್ಥಿತಿಯನ್ನೆ ಭಾಷ್ಯಕಾರರಾದ ಶಂಕರಾಚಾರ್ಯರು "ಅಪರೋಕ್ಷಾನುಭೂತಿ" ಯೆಂದು ವರ್ಣಿಸಿದ್ದಾರೆ.

ಶಿಷ್ಯ:—ಆದರೆ, ಮಹಾಶಯರೆ, ಮನಸ್ಸೆ 'ಅಹಂ.' ಆ ಮನಸ್ಸು ಲುಪ್ತವಾದರೆ ಆಮೇಲೆ 'ಅಹಂ' ಎಂಬುದೂ ಇರುವುದಿಲ್ಲ.

ಸ್ವಾಮಿಜಿ:—ಆಗ ಯಾವಸ್ಥಿತಿ ಇರುತ್ತದೆಯೊ ಅದೆ ನಿಜವಾದ 'ಅಹಂ' ಸ್ವರೂಪ. ಆಗ ಯಾವ ಅಹಂ ಇರುತ್ತದೆಯೊ ಅದು ಸರ್ವ ಭೂತಸ್ಥ ಸರ್ವಗತ—ಸರ್ವಾಂತರಾತ್ಮಾ. ಘಟಾಕಾಶ ಹೋಗಿ ಮಹಾ ಕಾಶವಿದ್ದ ಹಾಗೆ—ಘಟ ಒಡೆದು ಹೋದರೆ ಅದರ ಒಳಗಿರುವ ಆಕಾಶವೂ ನಾಶವಾಗಿ ಬಿಡುವುದೆ? ಯಾವ ಕ್ಷುದ್ರ ಅಹಂಕಾರವನ್ನು ನೀನು ದೇಹ ಬದ್ಧವೆಂದು ತಿಳಿದುಕೊಂಡಿದ್ದೀಯೊ ಅದೇ ವಿಸ್ತೃತವಾಗಿ ಹೀಗೆ ಸರ್ವಗತ ಅಹಂಕಾರ ಅಥವಾ ಆತ್ಮರೂಪದಲ್ಲಿ ಪ್ರತ್ಯಕ್ಷವಾಗುತ್ತದೆ, ಆದ್ದರಿಂದ ಮನಸ್ಸು ಇದ್ದರೆ ಅಥವಾ ಹೋದರೆ ಅದರಿಂದ ಯಥಾರ್ಥವಾದ 'ಅಹಂ' ಅಥವಾ ಆತ್ಮಕ್ಕೆ ಆಗುವುದೇನು?

ನಾನು ಹೇಳುವುದು ಸಕಾಲದಲ್ಲಿ ಪ್ರತ್ಯಕ್ಷವಾಗುವುದು.—"ಕಾಲೇ ನಾತ್ಮನಿ ವಿಂದತಿ" ಶ್ರವಣ ಮನನಗಳನ್ನು ಮಾಡುತ್ತ ಮಾಡುತ್ತ ಇದ್ದರೆ ಕಾಲಕ್ರಮೇಣ ಈ ವಿಷಯ ತಾನೆ ಅರ್ಥವಾಗುವುದು—ಮತ್ತು ನೀನು ಮನಸ್ಸಿನ ಆಚೆಗೆ ಹೋಗುವೆ. ಆಗ ಮತ್ತೆ ಈ ಪ್ರಶ್ನೆಯನ್ನು ಮಾಡುವ ಆವಶ್ಯಕತೆ ಇರುವುದಿಲ್ಲ.

ಶಿಷ್ಯನು:— ಇದನ್ನು ಕೇಳಿ ಸ್ಥಿರವಾಗಿ ಕುಳಿತುಕೊಂಡಿದ್ದನು. ಸ್ವಾಮಿಜಿ ಮೆಲ್ಲಗೆ ಧೂಮಪಾನ ಮಾಡುತ್ತ ಮಾಡುತ್ತ ಪುನಃ ಹೀಗೆಂದರು: "ಈ ಸಹಜವಾದ ವಿಷಯವನ್ನು ತಿಳಿಸುವುದಕ್ಕೆ ಎಷ್ಟೆಷ್ಟು ಶಾಸ್ತ್ರಗಳು ಬರೆಯಲ್ಪಟ್ಟಿವೆ, ಆದರೂ ಜನರು ತಿಳಿದುಕೊಳ್ಳಲಾರರು! ಮೇಲೆ ಮೇಲೆ ಮಧುರವಾಗಿರುವ ಕೆಲವು ಬೆಳ್ಳಿಯ ನಾಣ್ಯಗಳನ್ನೂ ಹೆಂಗಸರ ಕ್ಷಣ ಭಂಗುರವಾದ ರೂಪವನ್ನೂ ಕಟ್ಟಿಕೊಂಡು ಈ ದುರ್ಲಭವಾದ ಮಾನುಷ ಜನ್ಮವನ್ನು ಹೇಗೆ ಕಳೆದುಬಿಡುತ್ತಾರೆ! ಮಹಾ ಮಾಯೆಯ ಆಶ್ಚರ್ಯಕರ ವಾದ ಪ್ರಭಾವ! ಅಮ್ಮಮ್ಮ!!

# ಅಧ್ಯಾಯ ೭

**ಸ್ಥಳ:—ಕಲ್ಕತ್ತ. ವರ್ಷ—೧೮೯೭.**

ಸ್ವಾಮಿಜಿ ಕೆಲವು ದಿನಗಳಿಂದ ಬಾಗಬಜಾರಿನ ಬಲರಾಮ ಬಾಬುಗಳ ಮನೆಯಲ್ಲಿ ಇದ್ದರು. ಇಂದು ಅವರು ಪರಮಹಂಸರ ಗೃಹಸ್ಥ ಭಕ್ತರಿಗೆ ಒಂದುಕಡೆ ಸೇರುವಂತೆ ಹೇಳಿ ಕಳುಹಿಸಿದ್ದದ್ದರಿಂದ ಮೂರುಗಂಟೆಯ ಮೇಲೆ ಸಾಯಂಕಾಲದ ಹೊತ್ತಿಗೆ ಪರಮಹಂಸರ ಬಹುಭಕ್ತರು ಈ ಮನೆಯಲ್ಲಿ ಸೇರಿದ್ದಾರೆ. ಯೋಗಾನಂದ ಸ್ವಾಮಿಗಳೂ ಅಲ್ಲಿಗೆ ಬಂದಿದ್ದಾರೆ. ಸ್ವಾಮಿಜಿ ಉದ್ದೇಶ ಒಂದು ಸಮಿತಿಯನ್ನು ಏರ್ಪಡಿಸಬೇಕೆಂಬುದು. ಎಲ್ಲರೂ ಕುಳಿತುಕೊಂಡಮೇಲೆ ಸ್ವಾಮಿಜಿ ಹೀಗೆಂದರು.—

''ನಾನಾ ದೇಶಗಳನ್ನು ಸುತ್ತಿ ನನಗೆ ದೃಢವಾಗಿ ನಂಬುಗೆ ಹುಟ್ಟಿಹೋಗಿದೆ ಏನೆಂದರೆ—ಸಂಘವಿಲ್ಲದೆ ಯಾವ ದೊಡ್ಡ ಕಾರ್ಯವೂ ನಡೆಯಲಾರದು. ಆದರೆ ನಮ್ಮದರಂಥ ದೇಶಗಳಲ್ಲಿ ಮೊದಲಿನಿಂದಲೂ ಸಾಧಾರಣ ರೀತಿಯಲ್ಲಿ ಸಂಘವನ್ನು ಏರ್ಪಡಿಸುವುದು ಅಥವಾ ಸಾಧಾರಣ ಜನರ ಸಮ್ಮತಿಯನ್ನು ತೆಗೆದುಕೊಂಡು ಕೆಲಸಮಾಡುವುದು ಅಷ್ಟು ಸುಲಭವೆಂದು ತೋರುವುದಿಲ್ಲ. ಪಾಶ್ಚಾತ್ಯ ನರನಾರಿಯರು ಸುಶಿಕ್ಷಿತರಾಗಿದ್ದಾರೆ—ನಮ್ಮ ಹಾಗೆ ದ್ವೇಷಪರಾಯಣರಲ್ಲ; ಅವರು ಗುಣಕ್ಕೆ ಗೌರವ ಕೊಡುವುದನ್ನು ಕಲಿತುಕೊಂಡಿದ್ದಾರೆ. ಇದನ್ನು ನೋಡುವುದಿಲ್ಲವೇನು! ನಾನು ಒಬ್ಬ ಲೆಕ್ಕಕ್ಕಿಲ್ಲದ ಮನುಷ್ಯ, ನನ್ನನ್ನು ಆ ದೇಶದಲ್ಲಿ ಎಷ್ಟು ಆದರಿಸುತ್ತಾರೆ! ಈ ದೇಶದಲ್ಲಿ ಶಿಕ್ಷಣ ಪ್ರಸರಿಸಿ ಅದರಿಂದ ಯಾವಾಗ ಮಿಕ್ಕ ಸಾಮಾನ್ಯ ಜನರೂ ಹೆಚ್ಚು ಸಹೃದಯರಾಗುತ್ತಾರೆಯೊ—ಯಾವಾಗ ಮತಗಿತಗಳ ಕಿಷ್ಕಿಂಧವಾದ ಮೇರೆಗಳ ಹೊರಗೆ ಮನಸ್ಸು ಕೊಡುವುದನ್ನು ಕಲಿಯುತ್ತಾರೆಯೊ ಆಗ ಸಾಧಾರಣವನ್ನನುಸರಿಸಿ ಸಂಘದ ಕೆಲಸವು ನಡೆಯಬಲ್ಲದು. ಅದಕ್ಕೋಸ್ಕರವೆ ಈ ಸಂಘಕ್ಕೆ ಒಬ್ಬ ಪ್ರಧಾನ ಪರಿಚಾಲಕನು ಇರಬೇಕು. ಎಲ್ಲರೂ ಆತನ ಆಜ್ಞೆಗೆ ಗೌರವ ಕೊಟ್ಟುಕೊಂಡು ಹೋಗಬೇಕು. ಆಮೇಲೆ ಕ್ರಮೇಣ ಎಲ್ಲರ ಮತವನ್ನೂ ತಿಳಿದುಕೊಂಡು ಕಾರ್ಯವನ್ನು ಮಾಡಬಹುದು. ''ನಾನು ಯಾರ ಹೆಸರಿನಲ್ಲಿ ಸನ್ಯಾಸಿಯಾಗಿದ್ದೇನೆಯೊ, ತಾವು ಯಾರನ್ನು ಜೀವನಕ್ಕೆ ಆದರ್ಶವನ್ನಾಗಿಟ್ಟುಕೊಂಡು ಸಂಸಾರಾಶ್ರಮವನ್ನು

ಸ್ವೀಕರಿಸಿ ಕಾರ್ಯಕ್ಷೇತ್ರದಲ್ಲಿರುವಿರೊ, ಯಾರ ಪುಣ್ಯನಾಮವೂ ಅದ್ಭುತ ಜೀವನವೂ ದೇಹಾವಸಾನವಾದ ಇಪ್ಪತ್ತುವರ್ಷಗಳ ಒಳಗೆ ಪ್ರಾಚ್ಯ ಮತ್ತು ಪಾಶ್ಚಾತ್ಯ ಜಗತ್ತಿನಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ಪ್ರಸಾರಿತ ವಾಯಿತೊ ಆತನ ಹೆಸರಿನಲ್ಲಿಯೆ ಈ ಸಂಘ ಪ್ರತಿಷ್ಠಿತವಾಗುವುದಾಗಿದೆ. ನಾನು ಪ್ರಭುವಿನ ದಾಸ. ತಾವು ಈ ಕಾರ್ಯದಲ್ಲಿ ಸಹಾಯ ಮಾಡ ಬೇಕು.'' ಶ್ರೀಯುತ ಗಿರೀಶಚಂದ್ರ ಘೋಷರೆ ಮುಂತಾಗಿ ಅಲ್ಲಿ ಬಂದಿದ್ದ ಗೃಹಸ್ಥರು ಈ ಪ್ರಸ್ತಾಪವನ್ನು ಅನುಮೋದಿಸಲು, ರಾಮಕೃಷ್ಣಸಂಘದ ಮುಂದಿನ ಕಾರ್ಯಕ್ರಮ ಆಲೋಚನೆಗೆ ಬಂತು. ಸಂಘಕ್ಕೆ ರಾಮಕೃಷ್ಣ ಪ್ರಚಾರ ಅಥವಾ ರಾಮಕೃಷ್ಣಮಿಷನ್ ಎಂದು ಹೆಸರಿಟ್ಟದ್ದಾಯಿತು. ಅದರ ಉದ್ದೇಶ ಮುಂತಾದುವನ್ನು ಅದರ ಮುದ್ರಿತ ವಿಜ್ಞಾಪನ ಪತ್ರಿಕೆ ಯಿಂದ ತೆಗೆದು ಇಲ್ಲಿ ಕೊಟ್ಟದ್ದೇವೆ.

ಉದ್ದೇಶ:— ಮಾನವಹಿತಾರ್ಥವಾಗಿ ಶ್ರೀರಾಮಕೃಷ್ಣ ಪರಮ ಹಂಸರು ಯಾವ ತತ್ತ್ವಗಳನ್ನು ವಿವರಿಸಿದರೊ ಮತ್ತು ತಮ್ಮ ಜೀವನ ದಲ್ಲಿ ಕಾರ್ಯರೂಪವಾಗಿ ಉದಾಹರಿಸಿದರೊ ಅವುಗಳ ಪ್ರಚಾರವೂ, ಮತ್ತು ಈ ತತ್ತ್ವಗಳನ್ನು ಅನುಭವಕ್ಕೆ ತಂದುಕೊಳ್ಳಲು ಸಹಕಾರಿಗಳಾದ ಮನುಷ್ಯನ ದೈಹಿಕ ಮಾನಸಿಕ ಮತ್ತು ಪಾರಮಾರ್ಥಿಕ ಉನ್ನತಿಗಳಲ್ಲಿ ಸಹಾಯಮಾಡುವುದೂ ಈ ಮಿಷನ್ನಿನ ಉದ್ದೇಶ.

ವ್ರತ:— ಜಗತ್ತಿನ ಎಲ್ಲಾ ಧರ್ಮಮತಗಳೂ ಒಂದು ಅಕ್ಷಯ ಸನಾತನ ಧರ್ಮದ ರೂಪಾಂತರ ಮಾತ್ರ ಎಂಬ ಜ್ಞಾನದಿಂದ ಸಕಲ ಧರ್ಮಾನುಯಾಯಿಗಳಲ್ಲಿಯೂ ಆತ್ಮೀಯತೆಯನ್ನು ಇರಿಸುವುದಕ್ಕೋಸ್ಕರ ಶ್ರೀ ಶ್ರೀ ರಾಮಕೃಷ್ಣ ಪರಮಹಂಸರು ಯಾವ ಕಾರ್ಯವನ್ನು ಆರಂಭಿಸಿ ದರೊ ಅದರ ಪರಿಚಾಲನವೆ ಈ ಮಿಷನ್ನಿನ ವ್ರತ.

ಕಾರ್ಯಕ್ರಮ:— ಮನುಷ್ಯನ ಸಾಂಸಾರಿಕ ಮತ್ತು ಆಧ್ಯಾತ್ಮಿಕ ಉನ್ನತಿಗೋಸ್ಕರ ವಿದ್ಯೆಯನ್ನು ದಾನ ಮಾಡುವುದಕ್ಕೆ ಉಪಯೋಗವಾಗು ವಂತೆ ಜನರನ್ನು ಶಿಕ್ಷಣಕೊಟ್ಟು ತಯಾರುಮಾಡುವುದು. ಕುಶಲ ಕಲೆ ಗಳಲ್ಲಿಯೂ ಕಷ್ಟಪಟ್ಟು ಕೆಲಸಮಾಡಬೇಕಾದ ಕಸಬುಗಳಲ್ಲಿಯೂ ಉತ್ಸಾಹ ವನ್ನು ಹೆಚ್ಚಿಸುವುದು, ಮತ್ತು ವೇದಾಂತ ಮತ್ತು ಇತರ ಧರ್ಮಭಾವ ಗಳು ಶ್ರೀರಾಮಕೃಷ್ಣಜೀವನದಲ್ಲಿ ಹೇಗೆ ವಿವರಿಸಲ್ಪಟ್ಟುವೊ ಅವುಗಳನ್ನು ಜನಸಮಾಜದಲ್ಲಿ ಪ್ರವರ್ತಿಸುವಂತೆ ಮಾಡುವುದು.

ಭರತಖಂಡದಲ್ಲಿನ ಕಾರ್ಯ:— ಭರತಖಂಡದ ಪ್ರತಿನಗರದಲ್ಲಿಯೂ ಬೋಧಕರಾಗಲು ಇಚ್ಛಿಸುವ ಗೃಹಸ್ಥ ಅಥವಾ ಸನ್ಯಾಸಿಗಳಿಗೆ ಶಿಕ್ಷಣ ಕೊಡುವುದಕ್ಕೋಸ್ಕರ ಆಶ್ರಮವನ್ನು ಸ್ಥಾಪಿಸುವುದು ಮತ್ತು ಅವರು ಯಾವ ರೀತಿಯಲ್ಲಿ ದೇಶದೇಶಾಂತರಗಳಿಗೆ ಹೋಗಿ ಜನಗಳನ್ನು ಶಿಕ್ಷಿತರನ್ನಾಗಿ ಮಾಡಲು ಸಾಧ್ಯವೊ ಅದನ್ನು ಅನುಸರಿಸುವುದು.

ವಿದೇಶಿಯ ಕಾರ್ಯ ವಿಭಾಗ:— ಭರತಖಂಡದ ಹೊರಗೆ ಇರುವ ಪ್ರದೇಶಗಳಲ್ಲಿ (ಜನರನ್ನು) ''ವ್ರತಧಾರಿ'' ಗಳಾಗುವಂತೆ ಪ್ರೇರೇಪಿಸುವುದು ಮತ್ತು ಆಯಾ ದೇಶಗಳಲ್ಲಿ ಸ್ಥಾಪಿಸಲ್ಪಟ್ಟ ಆಶ್ರಮಗಳೊಡನೆ ಭಾರತೀಯ ಆಶ್ರಮಗಳಿಗೆ ನಿಕಟ ಸಂಬಂಧವೂ ಸಹಾನುಭೂತಿಯೂ ಬೆಳೆಯುವಂತೆ ಮಾಡುವುದು ಮತ್ತು ಹೊಸ ಹೊಸ ಆಶ್ರಮಗಳನ್ನು ಸ್ಥಾಪಿಸುವುದು.

ಸ್ವಾಮಿಜಿ ತಾವೇ ಮೇಲೆ ಹೇಳಿದ ಸಮಿತಿಯ ಸಾಧಾರಣ ಸಭಾಪತಿಗಳಾದರು. ಬ್ರಹ್ಮಾನಂದಸ್ವಾಮಿಗಳು ಕಲ್ಕತ್ತಾ ಕೇಂದ್ರಕ್ಕೆ ಸಭಾಪತಿಗಳೂ ಮತ್ತು ಯೋಗಾನಂದ ಸ್ವಾಮಿಗಳು ಅವರ ಸಹಕಾರಿಗಳೂ ಆದರು. ಅಟಾರ್ನಿ ಬಾಬು ನರೇಂದ್ರನಾಥ ಮಿತ್ರರು ಇದರ ಕಾರ್ಯದರ್ಶಿಗಳಾಗಿಯೂ ಡಾಕ್ಟರ್ ಶಶಿಭೂಷಣ ಘೋಷರು ಮತ್ತು ಶರಚ್ಚಂದ್ರ ಸರಕಾರರು ಉಪಕಾರ್ಯದರ್ಶಿಗಳಾಗಿಯೂ ಶಿಷ್ಯನು ಶಾಸ್ತ್ರಪಾಠಕನಾಗಿಯೂ ಚುನಾಯಿಸಲ್ಪಟ್ಟರು. ಇದರ ಜೊತೆಯಲ್ಲಿ ಪ್ರತಿ ಭಾನುವಾರವೂ ನಾಲ್ಕು ಗಂಟೆಯ ಮೇಲೆ ಬಲರಾಮ ಬಾಬುಗಳ ಮನೆಯಲ್ಲಿ ಸಮಿತಿ ಸೇರಬೇಕೆಂಬ ಮತ್ತೊಂದು ನಿಯಮವೂ ಮಾಡಲ್ಪಟ್ಟಿತು. ಹಿಂದೆ ಹೇಳಿದ ಸಭೆಯು ಏರ್ಪಾಡಾದನಂತರ ಮೂರು ವರ್ಷಗಳ ಕಾಲ ಬಲರಾಮವಸು ಅವರ ಮನೆಯಲ್ಲಿ ಸಮಿತಿಯ ಅಧಿವೇಶನವು ನಡೆಯಿತು. ಮತ್ತೆ ವಿಲಾಯತಿಗೆ ಹೋಗುವತನಕ ಅನುಕೂಲವಾದಾಗ ಸಮಿತಿಯ ಕೂಟಕ್ಕೆ ಬರುತ್ತ ಆಗಾಗ್ಗೆ ಉಪದೇಶಮಾಡುತ್ತಲೂ ಅಥವಾ ಕಿನ್ನರಕಂಠದಲ್ಲಿ ಗಾನಮಾಡುತ್ತ ಶ್ರೋತೃಗಳನ್ನು ಮೋಹಿತರನ್ನಾಗಿ ಮಾಡುತ್ತಲೂ ಇದ್ದರೆಂದು ಹೇಳಬೇಕಾಗಿಲ್ಲ. ಸಭೆ ಮುಗಿದಕೂಡಲೆ ಸಭಿಕರೆಲ್ಲರೂ ಹೊರಟುಹೋಗಲು ಸ್ವಾಮಿಜಿ ಯೋಗಾನಂದಸ್ವಾಮಿಗಳನ್ನು ಕುರಿತು ''ಕಾರ್ಯವೇನೊ ಹೀಗೆ ಆರಂಭವಾಗಿ ಹೋಯಿತು; ಈಗ ನೋಡು. ಪರಮಹಂಸರ ದಯೆಯಿಂದ ಕಾರ್ಯವು ಎಷ್ಟುದೂರ ಮುಂದುವರಿಯುವುದು'' ಎಂದು ಹೇಳಿದರು.

ಸ್ವಾಮಿಯೋಗಾನಂದ :— ನಿಮ್ಮ ಈ ಏರ್ಪಾಡು ಎಲ್ಲಾ ವಿದೇಶೀಯ ರೀತಿಯಲ್ಲಿ ಮಾಡಲ್ಪಟ್ಟಿದೆ. ಪರಮಹಂಸರ ಉಪದೇಶವೇನು ಈ ರೂಪವಾಗಿತ್ತೆ ?

ಸ್ವಾಮಿಜಿ :— ಇದೆಲ್ಲಾ ಪರಮಹಂಸರ ಅಭಿಪ್ರಾಯವಾಗಿರಲಿಲ್ಲವೆಂದು ನೀನು ಹೇಗೆ ತಿಳಿದುಕೊಂಡೆ? ಅನಂತಭಾವಮಯರಾದ ಪರಮಹಂಸರನ್ನು ನೀವು ನಿಮ್ಮ ಎಲ್ಲೆಗಳಲ್ಲಿ ಕಟ್ಟಿಹಾಕಲಿಚ್ಛಿಸುವಿರೆಂದು ತೋರುತ್ತದೆ. ನಾನು ಈ ಎಲ್ಲೆಯನ್ನು ಒಡೆದುಹಾಕಿ ಅವರ ಭಾವ ಜಗತ್ತಿನಲ್ಲೆಲ್ಲಾ ವ್ಯಾಪಿಸುವಂತೆ ಬಿಡುತ್ತೇನೆ. ಪರಮಹಂಸರು ತಮ್ಮ ಪೂಜೆಯನ್ನೂ ಪಾಠ ಪ್ರವಚನವನ್ನೂ ಮಾಡಬೇಕೆಂದು ನನಗೆ ಯಾವಾಗಲೂ ಉಪದೇಶ ಕೊಡಲಿಲ್ಲ. ಅವರು ಸಾಧನ ಭಜನ ಧ್ಯಾನ ಧಾರಣ ಮತ್ತು ಇತರ ಉಚ್ಚಧರ್ಮಭಾವಗಳಿಗೆ ಸಂಬಂಧಪಟ್ಟ ಯಾವ ಯಾವ ಉಪದೇಶಗಳನ್ನು ಕೊಟ್ಟು ಹೋದರೊ ಅವುಗಳನ್ನೆ ಪಡೆದುಕೊಂಡು ಜೀವರಿಗೆ ಶಿಕ್ಷಣವನ್ನು ಕೊಡಬೇಕು. ಅನಂತ ಮತ ಅನಂತ ಪಥ. ಸಂಪ್ರದಾಯಗಳಿಂದ ತುಂಬಿಹೋಗಿರುವ ಜಗತ್ತಿನಲ್ಲಿ ಮತ್ತೊಂದು ನೂತನ ಸಂಪ್ರದಾಯವನ್ನು ಕಲ್ಪಿಸುವುದಕ್ಕೆ ಹೋಗುವುದು ನನ್ನ ಜನ್ಮದಲ್ಲಿಯೆ ಆಗಲಾರದು. ಪ್ರಭುದೇವನ ಪದತಲದಲ್ಲಿ ಆಶ್ರಯವನ್ನು ಪಡೆದು ನಾನು ಧನ್ಯನಾಗಿದ್ದೇನೆ. ಮೂರು ಜಗತ್ತಿನ ಜನರಿಗೂ ಅವರ ಭಾವಗಳನ್ನು ಕೊಡುವುದಕ್ಕೆ ನಾನು ಹುಟ್ಟಿರುವುದು.

ಯೋಗಾನಂದಸ್ವಾಮಿಗಳು ಈ ಮಾತಿಗೆ ಬದಲು ಹೇಳದೆ ಇದ್ದದ್ದರಿಂದ ಸ್ವಾಮಿಜಿ ಮತ್ತೂ ಹೇಳತೊಡಗಿದರು :— "ಪ್ರಭುವಿನ ದಯೆಗೆ ನಿದರ್ಶನವನ್ನು ಮೇಲಿಂದ ಮೇಲೆ ಈ ಜೀವನದಲ್ಲಿ ಪಡೆದಿದ್ದೇನೆ. ಆತನು ಹಿಂದೆ ನಿಂತುಕೊಂಡೆ ಈ ಕೆಲಸವನ್ನೆಲ್ಲಾ ಮಾಡಿಸುತ್ತಾನೆ. ಯಾವಾಗ ಹಸಿವಿನಿಂದ ಬಳಲಿ ಬೇಸತ್ತು ಮರದಕೆಳಗೆ ಬಿದ್ದಿರುತ್ತಿದ್ದೆನೊ, ಯಾವಾಗ ಕೌಪೀನ ಹಾಕಿಕೊಳ್ಳುವುದಕ್ಕೂ ಬಟ್ಟೆಯಿಲ್ಲದೆ ಇದ್ದೆನೊ, ಯಾವಾಗ ಒಂದು ಕುರುಡ ಕವಡೆಯೂ ಇಲ್ಲದೆ ಭೂಸಂಚಾರ ಮಾಡಬೇಕೆಂದು ನಿಶ್ಚಯಿಸಿಕೊಂಡೆನೊ ಆವಾಗಲೂ ಪರಮಹಂಸರ ದಯೆಯಿಂದ ಎಲ್ಲಾ ವಿಧದಲ್ಲಿಯೂ ಸಹಾಯವನ್ನು ಪಡೆದಿದ್ದೇನೆ. ಮತ್ತು ಯಾವಾಗ ಇದೇ ವಿವೇಕಾನಂದನನ್ನು ದರ್ಶನಮಾಡಬೇಕೆಂದು ಚಿಕಾಗೋವಿನ ರಸ್ತೆಯಲ್ಲಿ ಬಡಿದಾಟಗಳಾಗುತ್ತಿದ್ದುವೊ, ಯಾವ ಆ ಸನ್ಮಾನದ ನೂರರಲ್ಲಿ ಒಂದು

ಭಾಗವನ್ನು ಪಡೆದರೂ ಸಾಧಾರಣ ಮನುಷ್ಯನು ಉನ್ಮತ್ತನಾಗಿಬಿಡುವನೊ ಅಂಥ ಸನ್ಮಾನವನ್ನೂ ಆಗ ಪರಮಹಂಸರ ದಯೆಯಿಂದ ಸುಲಭವಾಗಿ ಅರಗಿಸಿಕೊಂಡಿದ್ದೇನೆ. ಪ್ರಭುವಿನ ಇಚ್ಛೆಯಿಂದ ಎಲ್ಲೆಲ್ಲಿಯೂ ವಿಜಯ. ಈಗ ಈ ದೇಶದಲ್ಲಿ ಸ್ವಲ್ಪ ಕಾರ್ಯವನ್ನು ಮಾಡುವುದಕ್ಕೆ ಹೊರಟಿದ್ದೇನೆ; ನೀವು ಸಂಶಯವನ್ನು ಬಿಟ್ಟು ನನ್ನ ಕಾರ್ಯದಲ್ಲಿ ಸಹಾಯಮಾಡಿ; ಅವರ ಇಚ್ಛೆಯಿಂದ ಎಲ್ಲಾ ಕೈಗೂಡುತ್ತದೆಂಬುದನ್ನು ನೀವೇ ನೋಡುವಿರಿ."

ಯೋಗಾನಂದ:—ನೀವು ಯಾವುದನ್ನು ಮನಸ್ಸಿನಲ್ಲಿ ತರುತ್ತೀರೊ ಅದೇ ಆಗುತ್ತದೆ. ನಾವಾದರೊ ಚಿರಕಾಲ ನಿಮ್ಮ ಆಜ್ಞಾನುವರ್ತಿಗಳು. ಪರಮಹಂಸರು ನಿಮ್ಮ ಮೂಲಕ ಇದೆಲ್ಲವನ್ನೂ ಮಾಡಿಸುತ್ತಾರೆಂಬುದನ್ನು ಮಧ್ಯೆ ಮಧ್ಯೆ ನಾನು ಚೆನ್ನಾಗಿ ಕಂಡುಕೊಂಡಿದ್ದೇನೆ. ಆದರೆ ಪರಮಹಂಸರ ಕೆಲಸಕಾರ್ಯಗಳು ಬೇರೆ ವಿಧವಾಗಿದ್ದುದನ್ನು ನೋಡಿರಲಿಲ್ಲವೆ ಎಂಬುದಾಗಿ ಮಧ್ಯೆ ಮಧ್ಯೆ ಎಂಥ ಸಂಶಯವು ಬಂದುಬಿಡುತ್ತದೆ! ಅದಕ್ಕೋಸ್ಕರವೆ ನಾವು ಶಿಕ್ಷಣವನ್ನು ಬಿಟ್ಟು ಬೇರೆ ಮಾರ್ಗದಲ್ಲಿ ಹೋಗುತ್ತಿದ್ದೇವೆಯೇನೊ ಎನ್ನಿಸುತ್ತದೆ. ಅದಕ್ಕೋಸ್ಕರವೆ ನಿಮಗೆ ಪ್ರತಿ ಹೇಳಿ ಎಚ್ಚರಿಕೆ ಕೊಟ್ಟೆ.

ಸ್ವಾಮಿಜಿ:—ನೀನು ಏನು ತಿಳಿದುಕೊಂಡಿದ್ದೀಯೆ? ಸಾಧಾರಣ ಭಕ್ತರು ಪರಮಹಂಸರನ್ನು ಎಷ್ಟು ತಿಳಿದುಕೊಂಡಿದ್ದಾರೆಯೊ ಅವರು ನಿಜವಾಗಿ ಇರುವುದು ಅಷ್ಟೇ ಅಲ್ಲ. ಅವರು ಅನಂತಭಾವಮಯರಾದವರು. ಬ್ರಹ್ಮಜ್ಞಾನಕ್ಕಾದರೂ ಎಲ್ಲೆಯುಂಟು. ಪ್ರಭುವಿನ ದುಜ್ಞೇಯವಾದ ಭಾವಕ್ಕೆ ಎಲ್ಲೆಯಿಲ್ಲ. ಅವರ ಕೃಪಾಕಟಾಕ್ಷದಿಂದ ಲಕ್ಷ ವಿವೇಕಾನಂದರು ಈಗ ತಯಾರಾಗಬಲ್ಲರು. ಆದರೆ ಅವರು ಹಾಗೆ ಮಾಡದೆ, ಬೇಕೆಂದು ನನ್ನನ್ನು ಯಂತ್ರರೂಪವಾಗಿ ಮಾಡಿಕೊಂಡು ನನ್ನ ಮೂಲಕ ಹೀಗೆ ಮಾಡಿಸುತ್ತಿದ್ದಾರೆ–ಅದಕ್ಕೆ ನಾನೇನು ಮಾಡಲಿ ಹೇಳು!

ಹೀಗೆಂದು ಹೇಳಿ ಸ್ವಾಮಿಜಿ ಬೇರೆ ಕೆಲಸಕ್ಕಾಗಿ ಮತ್ತೆಲ್ಲಿಗೊ ಹೋದರು. ಯೋಗಾನಂದ ಸ್ವಾಮಿಗಳು ಶಿಷ್ಯನನ್ನು ಕುರಿತು "ಆಹಾ! ವಿವೇಕಾನಂದ ಸ್ವಾಮಿಗಳ ನಂಬಿಕೆಯನ್ನು ಕೇಳಿದೆಯೊ? ಪರಮಹಂಸರ ಕೃಪಾಕಟಾಕ್ಷದಿಂದ ಲಕ್ಷ ವಿವೇಕಾನಂದರು ತಯಾರು ಆಗ ಬಲ್ಲರೆಂದು ಹೇಳಿದರಲ್ಲವೆ! ಏನು ಗುರುಭಕ್ತಿ! ನಮಗೆ ಅದರ ನೂರರಲ್ಲಿ ಒಂದು ಭಾಗ ಭಕ್ತಿ ಇದ್ದರೂ ಧನ್ಯರಾದೇವು" ಎಂದು ಹೇಳಿದರು.

ಶಿಷ್ಯ:—ಮಹಾಶಯರೆ, ಸ್ವಾಮಿಗಳ ವಿಚಾರವಾಗಿ ಪರಮಹಂಸರು ಏನು ಹೇಳುತ್ತಿದ್ದರು?

ಯೋಗಾನಂದ:—"ಇಂಥ ಆಧಾರವು ಈ ಯುಗದಲ್ಲಿ ಜಗತ್ತಿನಲ್ಲಿ ಮತ್ತಾವಾಗಲೂ ಬಂದಿರಲಿಲ್ಲ" ವೆಂದು ಹೇಳುತ್ತಿದ್ದರು. ಕೆಲವು ವೇಳೆ ನರೇನನು ಪುರುಷ ತಾವು ಪ್ರಕೃತಿ—ನರೇನನು ತಮ್ಮ ಮಾವನ ಮನೆಯೆಂದು ಹೇಳುತ್ತಿದ್ದರು. ಕೆಲವು ವೇಳೆ "ಅಖಂಡವರ್ಗ" ಎಂದು ಹೇಳುತ್ತಿದ್ದರು. ಮತ್ತೆ ಕೆಲವುವೇಳೆ "ಅಖಂಡದ ಗೃಹದಲ್ಲಿ-ಎಲ್ಲಿ ದೇವ ದೇವಿಯರೆಲ್ಲಾ ಬ್ರಹ್ಮನಿಂದ ತಮ್ಮ ತಮ್ಮ ಅಸ್ತಿತ್ವವನ್ನು ಬೇರೆಯಾಗಿಟ್ಟು ಕೊಳ್ಳಲು ಆಗುತ್ತಿರಲಿಲ್ಲವೊ, ಅದರಲ್ಲಿಯೆ ಲೀನರಾಗಿ ಹೋಗಿಬಿಡುತ್ತಿದ್ದರೊ ಅಲ್ಲಿ-ಏಳು ಜನ ಋಷಿಗಳು ತಮ್ಮ ತಮ್ಮ ಅಸ್ತಿತ್ವವನ್ನು ಬೇರೆ ಇಟ್ಟುಕೊಂಡು ಧ್ಯಾನದಲ್ಲಿ ನಿಮಗ್ನರಾಗಿದ್ದುದ್ದನ್ನು ನೋಡಿದೆ; ನರೇನನು ಅವರಲ್ಲಿ ಒಬ್ಬರ ಅಂಶಾವತಾರ" ಎಂದು ಹೇಳುತ್ತಿದ್ದರು. ಮತ್ತೆ ಕೆಲವುವೇಳೆ "ಜಗತ್ಪಾಲಕನಾದ ನಾರಾಯಣನು ನರ ಮತ್ತು ನಾರಾಯಣ ನೆಂಬ ಹೆಸರಿನಿಂದ ಯಾವ ಎರಡು ಋಷಿರೂಪಗಳನ್ನು ಧಾರಣಮಾಡಿ ಲೋಕ ಕಲ್ಯಾಣಕ್ಕೋಸ್ಕರ ತಪಸ್ಸು ಮಾಡಿದನೊ ನರೇನನು ಅದೇ ಆ ನರ ಋಷಿಯ ಅವತಾರ" ಎಂದು ಹೇಳುತ್ತಿದ್ದರು. ಮತ್ತೆ ಕೆಲವು ವೇಳೆ "ಶುಕದೇವನ ಹಾಗೆ; ಮಾಯೆಯು ಅವನನ್ನು ಮುಟ್ಟಲಾರದೆ ಹೋಯಿತು" ಎಂದು ಹೇಳುತ್ತಿದ್ದರು.

ಶಿಷ್ಯ:—ಈ ಮಾತುಗಳು ನಿಜವೆ? ಅಥವಾ— ಪರಮಹಂಸರು ಭಾವಮುಖದಲ್ಲಿ ಒಂದೊಂದು ಸಮಯದಲ್ಲಿ ಒಂದೊಂದು ವಿಧವಾಗಿ ಹೇಳುತ್ತಿದ್ದರೊ?

ಯೋಗಾನಂದ:—ಅವರ ಮಾತೆಲ್ಲಾ ನಿಜ. ಅವರ ಶ್ರೀಮುಖದಲ್ಲಿ ಭ್ರಾಂತಿಯಿಂದಲೂ ಸುಳ್ಳು ಯಾವಾಗಲೂ ಬರುತ್ತಿರಲಿಲ್ಲ.

ಶಿಷ್ಯ:—ಹಾಗಾದರೆ ಹೀಗೆ ಒಂದೊಂದು ಸಮಯದಲ್ಲಿ ಒಂದೊಂದು ವಿಧವಾಗಿ ಏಕೆ ಹೇಳಿದರು?

ಯೋಗಾನಂದ:—ನಿನಗೆ ತಿಳಿದುಕೊಳ್ಳುವುದಕ್ಕಾಗಲಿಲ್ಲ. ಅವರು ನರೇನನನ್ನು ಇವರೆಲ್ಲರ ಸಮಷ್ಟಿಪ್ರಕಾಶವೆಂದು ಹೇಳುತ್ತಿದ್ದರು. ನರೇನನಲ್ಲಿ ಋಷಿಯ ವೇದಜ್ಞಾನ ಶಂಕರನ ತ್ಯಾಗ ಬುದ್ಧನ ಹೃದಯ ಶುಕದೇವನ ಮಾಯಾರಾಹಿತ್ಯ ಮತ್ತು ಬ್ರಹ್ಮಜ್ಞಾನದ ಪೂರ್ಣವಿಕಾಸ ಇವೆ

ಲ್ಲವೂ ಒಟ್ಟಿಗೆ ಇರುವುದನ್ನು ನೋಡಲಾರದೆ ಹೋದೆಯೇನು? ಪರಮ ಹಂಸರು ಅದನ್ನೆ ಮಧ್ಯೆ ಮಧ್ಯೆ ಹೀಗೆ ವಿಧವಿಧವಾಗಿ ಹೇಳುತ್ತಿದ್ದರು. ಏನು ಹೇಳುತ್ತಿದ್ದರೊ ಅದೆಲ್ಲಾ ಸತ್ಯ.

ಶಿಷ್ಯನು ಕೇಳಿ ಮಾತು ಹೊರಡದೆ ಬೆರಗಾಗಿದ್ದನು. ಈ ಮಧ್ಯೆ ಸ್ವಾಮಿಜಿ ಹಿಂತಿರುಗಿಬಂದು ಶಿಷ್ಯನನ್ನು "ನಿಮ್ಮ ಆ ದೇಶದಲ್ಲಿ ಪರಮ ಹಂಸರ ಹೆಸರನ್ನು ವಿಶೇಷವಾಗಿ ಜನರು ಕೇಳಿ ಬಲ್ಲರೆ?" ಎಂದು ಪ್ರಶ್ನೆ ಮಾಡಿದರು.

ಶಿಷ್ಯ:—ಮಹಾಶಯರೆ, ನಾಗಮಹಾಶಯರು ಒಬ್ಬರು ಮಾತ್ರ ಆ ದೇಶದಿಂದ ಪರಮಹಂಸರ ಹತ್ತಿರಕ್ಕೆ ಬಂದಿದ್ದರು. ಅವರಿಂದ ಕೇಳಿ ಈಗ ಅನೇಕರಿಗೆ ಪರಮಹಂಸರ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಕುತೂಹಲವುಂಟಾಗಿದೆ. ಆದರೆ ಪರಮಹಂಸರು ಈಶ್ವರನ ಅವತಾರ ವೆಂಬ ವಿಷಯವನ್ನು ಆ ದೇಶದ ಜನರು ಇನ್ನೂ ತಿಳಿದುಕೊಂಡಿಲ್ಲ, ಅದನ್ನು ಕೇಳಿದರೂ ಕೆಲವರು ನಂಬುವುದಿಲ್ಲ.

ಸ್ವಾಮಿಜಿ:—ಆ ವಿಷಯವನ್ನು ನಂಬುವುದೇನು ಸುಲಭವಾದ ಕೆಲಸವೊ? ನಾನು ಅವರನ್ನು ಕೈಯಾರ ಪರೀಕ್ಷಿಸಿ ನೋಡಿದ್ದೇನೆ. ಅವರ ಬಾಯಿನಿಂದಲೆ, ಈ ಮಾತನ್ನು ಆಗಾಗ್ಯೆ ಕೇಳಿದ್ದೇನೆ, ಇಪ್ಪತ್ತು ನಾಲ್ಕು ಗಂಟೆಯು ಹೊತ್ತು ಅವರ ಜೊತೆಯಲ್ಲಿ ಕುಳಿತು ನಿಂತು ನೋಡಿ ದ್ದೇನೆ, ಆದರೂ ಮಧ್ಯೆ ಮಧ್ಯೆ ನನಗೂ ಸಂದೇಹವು ಬರುತ್ತದೆ. ಹೀಗಿರಲು ಮತ್ತೊಬ್ಬರ ವಿಚಾರವಾಗಿ ಹೇಳಬೇಕಾದದ್ದೇನು?

ಶಿಷ್ಯ:—ಮಹಾಶಯರೇ ಪರಮಹಂಸರು ತಾವು ಪೂರ್ಣ ಬ್ರಹ್ಮ ಭಗವಂತನೆಂಬ ವಿಷಯವನ್ನು ಅವರೆ ತಮ್ಮ ಸ್ವಂತ ಬಾಯಿಯಿಂದಲೆ ತಮಗೆ ಯಾವಾಗಲಾದರೂ ಹೇಳಿದ್ದಾರೆಯೇನು?

ಸ್ವಾಮಿಜಿ:—ಎಷ್ಟೋಸಲ ಹೇಳಿದ್ದಾರೆ. ನಮ್ಮೆಲ್ಲರಿಗೂ ಹೇಳಿ ದ್ದಾರೆ. ಅವರು ಕಾಶಿಪುರದ ತೋಟದಲ್ಲಿ–ಇನ್ನೇನು ದೇಹ ಬಿದ್ದು ಹೋಗಬೇಕು ಎನ್ನುವಹಾಗೆ ಇದ್ದಾಗ ಅವರ ಹಾಸಿಗೆಯ ಪಕ್ಕದಲ್ಲಿ ಕುಳಿತು ಕೊಂಡು ಒಂದುದಿನ ಈ ಸಮಯದಲ್ಲಿ 'ನಾನು ದೇವರು' ಎಂದು ನೀವು ಹೇಳಬಲ್ಲಿರಾದರೆ ನೀವು ನಿಜವಾಗಿಯೂ ದೇವರು ಎಂದು ನಂಬುವೆನು ಎಂದು ಮನಸ್ಸಿನಲ್ಲಿಯೆ ಮಾಡಿಕೊಂಡೆನು. ಆವಾಗ ದೇಹ ಹೋಗುವು ದಕ್ಕೆ ಎರಡು ದಿನ ಮಾತ್ರ ಮಿಕ್ಕಿತ್ತು. ಪರಮಹಂಸರು ಆಗ ಹಠಾತ್ತಾಗಿ

ನನ್ನ ಕಡೆಗೆ ತಿರುಗಿಕೊಂಡು "ಯಾರು ರಾಮನೊ ಯಾರು ಕೃಷ್ಣನೊ– ಅವನೆ ಈಗ ಈ ಶರೀರದಲ್ಲಿ ರಾಮಕೃಷ್ಣ–ನಿಮ್ಮ ವೇದಾಂತ ದೃಷ್ಟಿ ಯಿಂದಲ್ಲ" ಎಂದು ಹೇಳಿಬಿಟ್ಟರು. ಇದನ್ನು ಕೇಳಲು ನನಗೆ ಮಾತು ಅಡಗಿಹೋಯಿತು. ಪ್ರಭುವಿನ ಶ್ರೀಮುಖದಲ್ಲಿ ಪದೆ ಪದೆ ಕೇಳಿದ್ದರೂ ನನಗೇ ಅಲ್ಲಿಯವರೆಗೆ ಪೂರ್ಣವಾದ ನಂಬುಗೆ ಬಂದಿತ್ತೊ ಇಲ್ಲವೊ ಸಂದೇಹ; ನಿರಾಶೆಯಲ್ಲಿ ಮನಸ್ಸು ಮಧ್ಯೆ ಮಧ್ಯೆ ಅಲ್ಲಾಡುತ್ತಿತ್ತು–ಇತ ರರ ವಿಚಾರವನ್ನು ಮತ್ತೆ ಹೇಳುವುದೇನು? ನಮ್ಮ ಹಾಗೆ ದೇಹವುಳ್ಳ ಒಬ್ಬ ವ್ಯಕ್ತಿಯನ್ನು ದೇವರೆಂದು ಹೇಳುವುದೂ ನಂಬುವುದೂ ತುಂಬ ಕಷ್ಟ ವಾದ ಕೆಲಸ. ಸಿದ್ಧರು ಬ್ರಹ್ಮಜ್ಞರು–ಎಂದು ಹೇಳುವಷ್ಟು ನಮ್ಮ ಮನಸ್ಸು ಹೋಗುವುದು. ಅವರ ವಿಚಾರದಲ್ಲಿ ಅದು ಯಾವುದನ್ನೂ ಹೇಳ ದಿರಲಿ ಭಾವಿಸದಿರಲಿ. ಮಹಾಪುರುಷರೆನ್ನಲ್ಲಿ, ಬ್ರಹ್ಮಜ್ಞರೆನ್ನಲಿ ಅದರಿಂದ ಏನೂ ಬರುವುದಿಲ್ಲ. ಆದರೆ ಪರಮಹಂಸರಂಥ ಪುರುಷಶ್ರೇಷ್ಠರು ಜಗತ್ತಿ ನಲ್ಲಿ ಈ ಹಿಂದೆ ಮತ್ತೆ ಯಾವಾಗಲೂ ಬಂದಿರಲಿಲ್ಲ. ಸಂಸಾರದ ಘೋರಾಂಧ ಕಾರದಲ್ಲಿ ಈಗ ಈ ಮಹಾಪುರುಷರೆ ಜ್ಯೋತಿಸ್ತಂಭಸ್ವರೂಪ! ಇದರ ಬೆಳಕಿನಲ್ಲಿಯೆ ಈಗ ಮನುಷ್ಯನು ಸಂಸಾರ ಸಮುದ್ರದ ದಡವನ್ನು ಸೇರುವನು.

ಶಿಷ್ಯ:—ಮಹಾಶಯರೆ, ಏನನ್ನಾದರೂ ಮಾಹಾತ್ಮ್ಯವನ್ನು ನೋಡದೆ ಕೇಳದೆ ಹೋದರೆ ನಿಜವಾದ ನಂಬುಗೆ ಹುಟ್ಟುವುದಿಲ್ಲವೆಂದು ನನಗೆ ತೋರುತ್ತದೆ. ಮಧುರ ಬಾಬುಗಳು ಪರಮಹಂಸರ ಸಂಬಂಧವಾಗಿ ಎಷ್ಟೆಷ್ಟನ್ನೊ ನೋಡಿದ್ದರೆಂದು ಕೇಳಿದ್ದೇನೆ. ಅದಕ್ಕೋಸ್ಕರವೆ ಆತನಿಗೆ ಪರಮಹಂಸರಲ್ಲಿ ಅಷ್ಟು ನಂಬುಗೆಯಿತ್ತು.

ಸ್ವಾಮಿಜಿ:—ಯಾರಿಗೆ ನಂಬುಗೆ ಉಂಟಾಗುವುದಿಲ್ಲವೋ ಅವರಿಗೆ ಕಣ್ಣಾರ ಕಂಡರೂ ನಂಬುಗೆಯಾಗುವುದಿಲ್ಲ; ಚಿತ್ತಭ್ರಮಣೆ ಸ್ವಪ್ನ ಎಂದುಕೊಂಡು ಬಿಡುತ್ತಾರೆ. ದುರ್ಯೋಧನನೂ ವಿಶ್ವರೂಪವನ್ನು ನೋಡಿ ದನು–ಅರ್ಜುನನೂ ನೋಡಿದನು. ಅರ್ಜುನನಿಗೆ ನಂಬುಗೆ ಹುಟ್ಟಿತು. ದುರ್ಯೋಧನನು ಇಂದ್ರಜಾಲವೆಂದು ಭಾವಿಸಿದನು. ಅವನು (ದೇವರು) ತಿಳಿಸದಿದ್ದರೆ ಏನನ್ನು ಹೇಳುವುದೂ ತಿಳಿಸುವುದೂ ಸಾಧ್ಯವಲ್ಲ. ನೋಡದೆ ಕೇಳದೆ ಕೆಲವರಿಗೆ ಹದಿನಾರಾಣೆಯ ನಂಬುಗೆಯುಂಟಾಗುತ್ತದೆ. ಕೆಲ ವರು ಹನ್ನೆರಡು ವರ್ಷಕಾಲ ಎದುರಿಗಿದ್ದುಕೊಂಡು ನಾನಾ ದಿವ್ಯ ವಿಭೂತಿ

ಗಳನ್ನು ನೋಡಿದರೂ ಸಂದೇಹದಲ್ಲಿ ಮುಳುಗಿರುತ್ತಾರೆ. ಸಾರವಾದ ಮಾತೆಂದರೆ- ಅವನ ಕೃಪೆ, ಆದರೆ ಬಿಡದೆ ಹಿಡಿದು ಇರಬೇಕು ಅಷ್ಟೆ; ಹಾಗಾದರೆ ಅವನ ಕೃಪೆಯುಂಟಾಗುತ್ತದೆ.

ಶಿಷ್ಯ :—ಕೃಪೆಗೆ ಏನಾದರೂ ನಿಯಮವಿದೆಯೇನು ಮಹಾಶಯರೇ?

ಸ್ವಾಮಿಜಿ :—ಇರುವುದೂ ನಿಜ; ಇಲ್ಲದಿರುವುದೂ ನಿಜ.

ಶಿಷ್ಯ :—ಹೇಗೆ?

ಸ್ವಾಮಿಜಿ :—ಯಾರು ಮನೋವಾಕ್ಕಾಯಗಳಲ್ಲಿ ಸದಾ ಪವಿತ್ರರಾಗಿರುತ್ತಾರೆಯೊ ಯಾರ ಭಕ್ತಿ ಪ್ರಬಲವಾಗಿರುತ್ತದೆಯೊ, ಯಾರು ಸದಸದ್ವಿಚಾರವಂತರೊ ಮತ್ತು ಧ್ಯಾನಧಾರಣಗಳಲ್ಲಿ ಆಸಕ್ತರೊ ಅವರ ಮೇಲೆಯೆ ಭಗವಂತನ ಕೃಪೆಯುಂಟಾಗುತ್ತದೆ. ಆದರೆ ಭಗವಂತನು ಪ್ರಕೃತಿಯ ಸಕಲ ನಿಯಮಗಳ ಹೊರಗಿದ್ದಾನೆ; ಯಾವ ನಿಯಮ ನೀತಿಗಳಿಗೂ ವಶೀಭೂತನಲ್ಲ– ಪರಮಹಂಸರು "ಅವನ ಸ್ವಭಾವವು ಹುಡುಗರಸ್ವಭಾವದ ಹಾಗೆ" ಎಂದು ಹೇಳುತ್ತಿದ್ದರು. ಅದಕ್ಕೋಸ್ಕರವೆ ಕೆಲವರು ಕೋಟಿ ಜನ್ಮಗಳನ್ನು ಎತ್ತಿ ಎತ್ತಿ ಬಂದರೂ ಅವನ ಸುಳಿವೆ ಗೊತ್ತಾಗದಿರುವುದು ಕಾಣಬರುತ್ತದೆ; ಮತ್ತು ಯಾರನ್ನು ನಾವು ಪಾಪಿ ತಾಪಿ ನಾಸ್ತಿಕ ಎನ್ನುತ್ತೇವೆಯೊ, ಅವರಲ್ಲಿ ಜಾಗ್ರತೆ ಚಿತ್ಪ್ರಕಾಶವುಂಟಾಗಿ ಬಿಡುತ್ತದೆ– ಅವರಿಗೆ ಭಗವಂತನು ಅಯಾಚಿತವಾಗಿ ಕೃಪೆಮಾಡುತ್ತಾನೆ. ಅವರಿಗೆ ಪೂರ್ವಜನ್ಮದ ಪುಣ್ಯವಿತ್ತು ಎಂದು ನೀನು ಹೇಳಬಹುದು; ಆದರೆ ಈ ರಹಸ್ಯವನ್ನು ತಿಳಿಯುವುದು ಕಷ್ಟ. ಪರಮಹಂಸರು ಕೆಲವುವೇಳೆ 'ಅವನಮೇಲೆ ಭಾರಹಾಕಿದ್ದುಬಿಡು – ಬಿರುಗಾಳಿಗೆ ಹಾರಬಡಿದ ಎಂಜಲೆಲೆಯಾಗಿಬಿಡು'* ಎಂದೂ, ಕೆಲವುವೇಳೆ 'ಅವನ ಕೃಪಾಮಾರುತವು ಬೀಸುತ್ತಲೇ ಇರುತ್ತದೆ, ನೀನು ನಿನ್ನ ದೋಣಿಯ ಪಟವನ್ನು ಎತ್ತಿಕಟ್ಟುವುದಿಲ್ಲ' ಎಂದೂ ಹೇಳುತ್ತಿದ್ದರು.

ಶಿಷ್ಯ :—ಮಹಾಶಯರೆ, ಇದಂತೂ ಬಹಳ ಕಠಿಣವಾದ ವಿಷಯ; ಯಾವ ಯುಕ್ತಿಯೂ ಇದರ ಮುಂದೆ ನಿಲ್ಲುವ ಹಾಗಿಲ್ಲ.

---

* ಎಂದರೆ ಎಂಜಲೆಲೆಗಳು ಗಾಳಿಗೆ ಸಿಕ್ಕಿದಾಗ ಅದು ಅವುಗಳನ್ನು ಎತ್ತಕಡೆ ಎತ್ತಿಕೊಂಡು ಹೋದರೆ ಅತ್ತಕಡೆ ಹೇಗೆ ಹೋಗುತ್ತವೆಯೊ, ಹಾಗೆ ಮನುಷ್ಯನೂ ಭಗವಂತನ ಇಚ್ಛೆ ತನ್ನನ್ನು ಹೇಗೆ ಹೇಗೆ ಎಳೆದುಕೊಂಡು ಹೋದರೆ ಹಾಗೆ ಗೊಣಗುಟ್ಟದೆ ಹೊರಟು ಹೋಗಬೇಕೆಂದು ಅರ್ಥ.

ಸ್ವಾಮಿಜಿ :—ಯುಕ್ತಿತರ್ಕಗಳ ಎಲ್ಲೆಯು ಮಾಯಾ ವ್ಯಾಪ್ತವಾದ ಜಗತ್ತಿನಲ್ಲಿಯೆ, ದೇಶಕಾಲ ನಿಮಿತ್ತಗಳ ಗಡಿಯ ಮಧ್ಯದಲ್ಲಿಯೆ ಇರ ತಕ್ಕದ್ದು. ಅವನು ದೇಶಕಾಲಾತೀತ. ಅವನ ನಿಯಮ ಇರುವುದೂ ನಿಜ. ಮತ್ತು ಅವನು ನಿಯಮದ ಹೊರಗೆ ಇರುವುದೂ ನಿಜ. ಪ್ರಕೃತಿಯ ಯಾವ ಕೆಲವು ನಿಯಮಗಳಿವೆಯೊ ಅವುಗಳನ್ನು ಅವನೇ ಮಾಡಿದ್ದಾನೆ. ಅವುಗಳೂ ಅವನೇ ಆಗಿದ್ದಾನೆ; ಮತ್ತು ಅವುಗಳೆಲ್ಲವುಗಳ ಹೊರಗೂ ಇದ್ದಾನೆ. ಅವನು ಯಾರಿಗೆ ಕೃಪೆ ಮಾಡುತ್ತಾನೆಯೊ, ಅವನು ಆ ಮುಹೂರ್ತದಲ್ಲಿಯೆ ಗಡಿಯ ಹೊರಗಡೆ–ಹೊರಟು ಹೋಗುತ್ತಾನೆ. ಅದಕ್ಕೋಸ್ಕರವೆ ಕೃಪೆಗೆ ಯಾವ ಬಂಧಿಸತಕ್ಕ ನಿಯಮವೂ ಇಲ್ಲ. ಕೃಪೆಯು ಅವನ ಲೀಲೆ, ಈ ಜಗತ್ಸೃಷ್ಟಿ ಎಲ್ಲಾ ಅವನಲೀಲೆ– "ಲೋಕವತ್ತು ಲೀಲಾ ಕೈವಲ್ಯಂ" † ಯಾರು ಲೀಲೆಗಾಗಿ ಇಂಥ ಜಗತ್ತನ್ನು ಸೃಷ್ಟಿಸುವುದಕ್ಕೂ ನಾಶಪಡಿಸುವುದಕ್ಕೂ ಸಮರ್ಥನೊ ಅವನು ಮಹಾ ಪಾಪಿಗೂ ಕೃಪೆಮಾಡಿ ಮುಕ್ತಿ ಕೊಡಲಾರನೇನು? ಆದರೆ ಕೆಲವರಿಗೆ ಸಾಧನ ಭಜನಗಳನ್ನು ಮಾಡಿಸುತ್ತಾನೆ. ಕೆಲವರಿಗೆ ಮಾಡಿಸುವುದಿಲ್ಲ–ಅದೂ ಅವನ ಲೀಲೆ–ಅವನ ಇಚ್ಛೆ.

ಶಿಷ್ಯ :—ಮಹಾಶಯ, ತಿಳಿದುಕೊಳ್ಳುವುದಕ್ಕಾಗಲಿಲ್ಲ.

ಸ್ವಾಮಿಜಿ :—ತಿಳಿದುಕೊಳ್ಳುವುದಕ್ಕೆ ಇನ್ನು ಆಗುತ್ತದೆಯೇನು? ಎಷ್ಟು ತಿಳಿದುಕೊಂಡೆಯೊ ಅಷ್ಟನ್ನು ಮನಸ್ಸಿನಲ್ಲಿ ನಿಲ್ಲಿಸಿಕೊ. ಹಾಗಾದರೆತಾನೆ ಈ ಜಗತ್ತೆಂಬ ಇಂದ್ರಜಾಲ ತನ್ನಷ್ಟಕ್ಕೆ ತಾನೆ ಮಾಯವಾಗುವುದು. ಆದರೆ ತಿಳಿದಷ್ಟನ್ನು ನಿಲ್ಲಿಸಿ ಹಿಡಿದುಕೊಂಡಿರಬೇಕು. ಕಾಮಕಾಂಚನಗಳಿಂದ ಮನಸ್ಸನ್ನು ಸೆಳೆದುಕೊಳ್ಳಬೇಕು, ಸದಸದ್ವಿಚಾರವನ್ನು ಸರ್ವದಾ ಮಾಡುತ್ತಿರಬೇಕು, 'ನಾನು ದೇಹವಲ್ಲ' ಎಂಬ ವಿದೇಹ ಭಾವದಲ್ಲಿ ಇರಬೇಕು, 'ನಾನು ಸರ್ವಗತನಾದ ಆತ್ಮಾ' ಎಂಬುದನ್ನು ಅನುಭವ ಮಾಡಿಕೊಳ್ಳಬೇಕು. ಹೀಗೆ ಪಟ್ಟು ಹಿಡಿದಿರುವುದರ ಹೆಸರೆ ಪುರುಷ ಪ್ರಯತ್ನ. ಈ ವಿಧವಾದ ಪುರುಷಕಾರದ ಸಹಾಯದಿಂದ ಅವನಮೇಲೆ ನಿರ್ಭರನಾಗಿ ಭಾರವನ್ನು ಹಾಕಿಬಿಡಬೇಕು.—ಅದೇ ಪಂಚಮ ಪುರುಷಾರ್ಥವಾಯಿತು.

ಸ್ವಾಮಿಜಿ ಮತ್ತೆ ಹೇಳತೊಡಗಿದರು :—"ಅವನ ಕೃಪೆಯು ನಿನ್ನ

† ವೇದಾಂತ ಸೂತ್ರ. ೨. ೧. ೩೩.

ಮೇಲೆ ಇಲ್ಲದಿದ್ದರೆ ನೀನು ಇಲ್ಲಿಗೆ ಬರುತ್ತಿದ್ದೆಯೇಕೆ? ಪರಮಹಂಸರು ಯಾರ ಮೇಲೆ ಈಶ್ವರನ ಕೃಪೆಯಿದೆಯೊ ಅವರು ಇಲ್ಲಿಗೆ ಬಂದೇ ಬರುತ್ತಾರೆ; ಎಲ್ಲಿಯಾದರೂ ಇರಲಿ ಏನಾದರೂ ಮಾಡಲಿ ಇಲ್ಲಿರುವವನ (ಪರಮಹಂಸರ) ಮಾತಿನಿಂದಲೂ ಭಾವದಿಂದಲೂ ಅವನು ಅವಿರ್ಭೂತನಾಗಿಯೆ ಆಗುತ್ತಾನೆ'' ಎಂದು ಹೇಳುತ್ತಿದ್ದರು. ನಿನ್ನ ವಿಚಾರವನ್ನೆ ಯೋಚಿಸಿ ನೋಡು! ಯಾರು ಕೃಪಾಬಲದಿಂದ ಸಿದ್ಧಪುರುಷರಾದರೊ ಯಾರು ಪ್ರಭುವಿನ ಕೃಪೆಯನ್ನು ಚೆನ್ನಾಗಿ ತಿಳಿದುಕೊಂಡಿದ್ದಾರೆಯೊ ಅಂಥ ನಾಗಮಹಾಶಯರ ಸಂಗಲಾಭ ಈಶ್ವರನ ಕೃಪೆಯಲ್ಲದೆ ಬೇರೆ ಏನು? 'ಅನೇಕ ಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಂ'–ಜನ್ಮ ಜನ್ಮಾಂತರದ ಪುಣ್ಯವಿದ್ದರೆ ಆಗ ಅಂಥ ಮಹಾಪುರುಷರ ದರ್ಶನಲಾಭವಾಗುತ್ತದೆ. ಶಾಸ್ತ್ರದಿಂದ ಉತ್ತಮಭಕ್ತಿಯ ಲಕ್ಷಣಗಳೆಂದು ಯಾವ ಯಾವುವು ತಿಳಿಯಬರುತ್ತವೆಯೊ ಅವೆಲ್ಲಾ ನಾಗಮಹಾಶಯರಲ್ಲಿ ಸ್ಪಷ್ಟವಾಗಿ ಕಂಡುಬಂದಿವೆ. 'ತೃಣಾದಪಿ ಸುನೀಚೇನ' ಎಂದು ಹೇಳುತ್ತಾರೆಯಲ್ಲಾ ಅದು ನಾಗಮಹಾಶಯರೊಬ್ಬರಲ್ಲಿ ಮಾತ್ರವೇ ಪ್ರತ್ಯಕ್ಷವಾದದ್ದು. ನಿಮ್ಮ ಪೂರ್ವ ಬಂಗಾಳಾದೇಶ ಧನ್ಯ–ನಾಗಮಹಾಶಯರ ಪದಸ್ಪರ್ಶದಿಂದ ಪವಿತ್ರವಾಗಿ ಹೋಗಿದೆ''

ಹೀಗೆಂದು ಹೇಳುತ್ತ ಹೇಳುತ್ತ ಸ್ವಾಮಿಜಿ ಮಹಾಕವಿ ಶ್ರೀಯುಕ್ತ ಗಿರೀಶಚಂದ್ರ ಘೋಷರ ಮನೆಗೆ ಹೋಗಿ ಬರುವುದಕ್ಕೆಂದು ಹೊರಟರು; ಜೊತೆಯಲ್ಲಿ ಯೋಗಾನಂದಸ್ವಾಮಿ ಮತ್ತು ಶಿಷ್ಯ. ಗಿರೀಶಬಾಬುಗಳ ಮನೆಗೆ ಹೋಗಿ ಕುಳಿತುಕೊಂಡು ಸ್ವಾಮಿಗಳು "ಜಿ. ಸಿ., ಈ ಕಾಲದಲ್ಲಿ ಅದು ಮಾಡೋಣ ಇದು ಮಾಡೋಣ ಅವರ ವಿಷಯವನ್ನು ಪ್ರಪಂಚದಲ್ಲಿ ಹರಡಿಬಿಡೋಣ ಎಂಬುದೆ ಮನಸ್ಸಿಗೆ ಬರುತ್ತಿರುತ್ತದೆ. ಮತ್ತೆ ಇದರಿಂದ ಭರತಖಂಡದಲ್ಲಿ ಮತ್ತೊಂದು ಸಂಪ್ರದಾಯವು ಸೃಷ್ಟಿಯಾಗಿ ಬಿಡುವುದೆಂದು ಭಾವಿಸಿಕೊಳ್ಳುತ್ತೇನೆ. ಅದಕ್ಕೇ ಬಹುಮಟ್ಟಿಗೆ ಎಚ್ಚರಿಕೆಯಿಂದ ನಡೆಯುತ್ತೇನೆ. ಕೆಲವು ಸಮಯ, ಸಂಪ್ರದಾಯವಾಗಿ ಹೋಗಲಿ ಎಂದುಕೊಳ್ಳುತ್ತೇನೆ. ಮತ್ತೆ–ಹಾಗಲ್ಲ, ಅವರು ಯಾರ ಭಾವವನ್ನೂ ಯಾವಾಗಲೂ ನಷ್ಟಪಡಿಸಲಿಲ್ಲ. ಸಮದೃಷ್ಟಿಯೆ ಅವರ ಭಾವ–ಹೀಗೆಂದುಕೊಂಡು ಅನೇಕಸಾರಿ ಮನಸ್ಸಿನ ಪ್ರವೃತ್ತಿಯನ್ನು ನಿಗ್ರಹಿಸಿಕೊಂಡು ಹೋಗುತ್ತೇನೆ. ನಿನ್ನ ಅಭಿಪ್ರಾಯವೇನು?" ಎಂದರು.

ಗಿರೀಶಬಾಬು:—ನಾನು ಇನ್ನೇನು ಹೇಳಲಿ? ನೀನು ಅವರ ಕೈಯಿನ ಯಂತ್ರ; ಏನನ್ನು ಮಾಡಿಸುತ್ತಾರೆಯೊ ಅದನ್ನೆ ನೀನು ಮಾಡಬೇಕು. ನನಗೆ ಅಷ್ಟು ವಿಷಯಗಳು ತಿಳಯುವುದಿಲ್ಲ. ಆದರೆ ನಿನ್ನ ಮೂಲಕ ಪ್ರಭುವಿನ ಶಕ್ತಿ ಕಾರ್ಯವನ್ನು ಮಾಡಿಸಿಕೊಂಡು ಹೋಗುತ್ತಿದೆಯೆಂಬುದು ನನ್ನ ಕಣ್ಣಿಗೆ ಕಾಣುತ್ತಿದೆ- ಬರಿಯ ಕಣ್ಣಿಗೆ ಕಾಣುತ್ತದೆ.

ಸ್ವಾಮಿಜಿ:—ನನ್ನ ಇಷ್ಟದಂತೆ ನಾನು ಕಾರ್ಯಮಾಡಿಕೊಂಡು ಹೋಗುತ್ತಿದ್ದೇನೆಂದು ನನಗೆ ಕಾಣುತ್ತದೆ. ಆದರೆ ಆಪತ್ತಿನಲ್ಲಿಯೂ ವಿಪತ್ತಿನಲ್ಲಿಯೂ ಅಭಾವದಲ್ಲಿಯೂ ದಾರಿದ್ರ್ಯದಲ್ಲಿಯೂ ಅವರು ನೋಡಿ ಕೊಳ್ಳುತ್ತಿದ್ದು ಸರಿಯಾದ ದಾರಿಯಲ್ಲಿ ನನ್ನನ್ನು ನಡೆಸಿಕೊಂಡು ಹೋಗು ತ್ತಿದ್ದಾರೆಂಬುದನ್ನು ಕಂಡಿದ್ದೇನೆ. ಆದರೆ ಪ್ರಭುವಿನ ಶಕ್ತಿಯ ಪರಿಮಾಣವು ಇಷ್ಟೆಂದು ಸ್ವಲ್ಪಮಟ್ಟಿಗಾದರೂ ಗೊತ್ತುಮಾಡಲಾರದವನಾಗಿದ್ದೇನೆ.

ಗಿರೀಶಬಾಬು:—ಅವರು "ಎಲ್ಲವೂ ಪೂರ್ಣವಾಗಿ ತಿಳಿದರೆ ಕೂಡಲೆ ಎಲ್ಲಾ ಮಾಯವಾಗಿ ಹೋಗುತ್ತದೆ. ಮಾಡುವನು ಯಾರು? ಮಾಡಿಸುವವನು ಯಾರು?" ಎಂದು ಹೇಳಿದ್ದಾರೆ.

ಹೀಗೆ ಮಾತುಕಥೆಗಳು ನಡೆದ ಬಳಿಕ ಅಮೇರಿಕಾದ ಪ್ರಸ್ತಾಪ ಆರಂಭವಾಯಿತು. ಗಿರೀಶಬಾಬುಗಳು ಬೇಕೆಂದೇ ಸ್ವಾಮಿಗಳ ಮನಸ್ಸನ್ನು ಬೇರೊಂದು ಸಂಗತಿಗೆ ತಿರುಗಿಸಿದಂತೆ ಕಾಣುತ್ತದೆ. ಹೀಗೆ ಮಾಡಿದ್ದಕ್ಕೆ ಕಾರಣವನ್ನು ಕೇಳಲು ಗಿರೀಶಬಾಬುಗಳು ನನಗೆ ಮತ್ತೊಂದು ಸಮಯ ದಲ್ಲಿ "ಪರಮಹಂಸರ ಶ್ರೀಮುಖದಿಂದ ಕೇಳಿದ್ದೇನೆ- ಇಂಥ ಮಾತನ್ನು ಹೆಚ್ಚಾಗಿ ಆಡುತ್ತ ಆಡುತ್ತ ಸ್ವಾಮಿಗಳಿಗೆ ಸಂಸಾರ ವೈರಾಗ್ಯವೂ ಈಶ್ವರೋದ್ದೀಪನವೂ ಆಗುತ್ತದೆ. ಒಟ್ಟಿಗೇನಾದರೂ ಸ್ವಸ್ವರೂಪವು ದರ್ಶನವಾಗಿಬಿಟ್ಟರೆ- ಅವನಿಗೂ ಈ ವಿಷಯವು ಗೊತ್ತೋ ಏನೋ- ಆಮೇಲೆ ಒಂದು ಮುಹೂರ್ತವೂ ಅವನ ದೇಹವು ನಿಲ್ಲುವುದಿಲ್ಲ" ಎಂದು ಹೇಳಿದರು. ಅದಕ್ಕೋಸ್ಕರವೇ ಸ್ವಾಮಿಗಳ ಗುರುಭ್ರಾತೃಗಳೂ ಕೂಡ ಸ್ವಾಮಿಜಿ ಇಪ್ಪತ್ತನಾಲ್ಕು ಗಂಟೆಯೂ ಪರಮಹಂಸರ ಮಾತುಕಥೆಗಳನ್ನೆ, ಆಡುವುದಕ್ಕೆ ಮೊದಲುಮಾಡಿದರೆ ಸ್ವಾಮಿಗಳನ್ನು ಬೇರೆ ವಿಷಯದಲ್ಲಿ ಮನಸ್ಸಿಡುವಂತೆ ಮಾಡುತ್ತಿದ್ದದ್ದನ್ನು ನೋಡಿದ್ದೇನೆ. ಅದು ಹೇಗಾದರೂ ಇರಲಿ, ಅಮೇರಿಕಾದ ಪ್ರಸ್ತಾಪ ಮಾಡುತ್ತ ಮಾಡುತ್ತ ಅದರಲ್ಲಿಯೆ ಮಗ್ನರಾಗಿ ಹೋದರು. ಆ ದೇಶದ ಸಮೃದ್ಧಿ, ಸ್ತ್ರೀಪುರುಷರ ಗುಣಾವ

ಗುಣ, ಭೋಗ ವಿಲಾಸಗಳು ಮುಂತಾದ ನಾನಾ ಸಂಗತಿಗಳನ್ನು ವರ್ಣನೆ ಮಾಡತೊಡಗಿದರು.

---

# ಅಧ್ಯಾಯ ೮

**ಸ್ಥಳ:—ಕಲ್ಕತ್ತ. ವರ್ಷ:—ಕ್ರಿ. ಶ. ೧೮೯೭.**

ಸ್ವಾಮಿಜಿ ಬಾಗಬಜಾರಿನ ಬಲರಾಮ ಬಸುಗಳ ಮನೆಯಲ್ಲಿ ವಾಸ ಮಾಡುವುದಕ್ಕೆ ಮೊದಲು ಮಾಡಿ ಕೆಲವು ದಿನಗಳಾದುವು. ಬೆಳಗ್ಗೆಯಾಗಲಿ ಮಧ್ಯಾಹ್ನವಾಗಲಿ ಸಾಯಂಕಾಲವಾಗಲಿ ಅವರಿಗೆ ಸ್ವಲ್ಪವೂ ವಿರಾಮವಿಲ್ಲ; ಏಕೆಂದರೆ ಉತ್ಸಾಹಶಾಲಿಗಳಾದ ಅನೇಕ ಯುವಕರು, ಕಾಲೇಜಿನ ಬಹು ಜನ ವಿದ್ಯಾರ್ಥಿಗಳು, ಅವರು ಈಗ ಎಲ್ಲಿದ್ದರೂ ಸರಿಯೆ ಅವರ ದರ್ಶನ ಮಾಡುವುದಕ್ಕೆಂದು ಬರುತ್ತಿದ್ದರು; ಸ್ವಾಮಿಜಿ ಕೂಡ ಅವರೆಲ್ಲರಿಗೂ ಆದರದಿಂದ ಧರ್ಮ ಮತ್ತು ದರ್ಶನಗಳಿಗೆ ಸಂಬಂಧಪಟ್ಟ ಜಟಿಲತತ್ತ್ವಗಳನ್ನು ಸುಲಭವಾದ ಮಾತಿನಲ್ಲಿ ತಿಳಿಸಿಕೊಡುತ್ತಿದ್ದರು; ಸ್ವಾಮಿಜಿ ಮೇಧಾಶಕ್ತಿಯ ಮುಂದೆ ಅವರೆಲ್ಲರೂ ಪರಾಜಿತರಾದಂತಾಗಿ ಸದ್ದುಗಲಗಿಲ್ಲದೆ ಇರುತ್ತಿದ್ದರು.

ಇಂದು ಸೂರ್ಯ ಗ್ರಹಣ—ಪೂರ್ಣಗ್ರಹಣ. ಜ್ಯೋತಿಷ್ಕರು ಗ್ರಹಣವನ್ನು ನೋಡುವುದಕ್ಕೆ ನಾನಾ ಸ್ಥಳಗಳಿಗೆ ಹೋಗಿದ್ದಾರೆ. ಆಚಾರ ಶೀಲ ಸ್ತ್ರೀ ಪುರುಷರು ಗಂಗಾಸ್ನಾನಕ್ಕಾಗಿ ಬಹುದೂರದಿಂದ ಬಂದು ಉತ್ಸುಕರಾಗಿ ಗ್ರಹಣವಾಗುವ ಕಾಲವನ್ನು ಎದುರುನೋಡುತ್ತಿದ್ದಾರೆ. ಸ್ವಾಮಿಜಿಗೆ ಮಾತ್ರ ಗ್ರಹಣದ ವಿಚಾರವಾಗಿ ವಿಶೇಷವಾದ ಉತ್ಸಾಹ ವೇನೂ ಇಲ್ಲ. ಶಿಷ್ಯನು ಈ ದಿವಸ ಸ್ವಾಮಿಜಿಗೆ ತನ್ನ ಕೈಯಿಂದ ಅಡಿಗೆ ಮಾಡಿ ಬಡಿಸುತ್ತಾನೆ—ಹಾಗೆ ಸ್ವಾಮಿಗಳ ಅಪ್ಪಣೆಯಾಗಿದೆ. ತರಕಾರಿ ಮತ್ತು ಅಡಿಗೆಗೆ ಬೇಕಾದ ಇತರ ಪದಾರ್ಥಗಳನ್ನು ತಂದುಕೊಂಡು ಅವನು ಸುಮಾರು ಎಂಟುಗಂಟೆಯ ಹೊತ್ತಿಗೆ ಬಲರಾಮ ಬಾಬುಗಳ ಮನೆಗೆ ಬಂದಿದ್ದಾನೆ. ಅವನನ್ನು ನೋಡಿ ಸ್ವಾಮಿಜಿ "ನಿಮ್ಮದೇಶದ ಅಡಿಗೆ ಮಾಡಬೇಕು; ಮತ್ತು ಗ್ರಹಣವಾಗುವುದಕ್ಕೆ ಮುಂಚೆಯೇ ತಿನ್ನುವುದು ಕೊಡುವುದು ಎಲ್ಲಾ ಮುಗಿದುಹೋಗಿರಬೇಕು" ಎಂದರು.

ಬಲರಾಮ ಬಾಬುಗಳ ಮನೆಯ ಹೆಂಗಸರು ಯಾರೂ ಈಗ ಕಲ್ಕತ್ತೆಯಲ್ಲಿಲ್ಲ. ಆದ್ದರಿಂದ ಮನೆ ಪೂರ್ತಿಯಾಗಿ ಬಿಡುವಾಗಿತ್ತು. ಶಿಷ್ಯ ಮನೆಯ ಒಳಗೆಹೋಗಿ ಅಡಿಗೆಗೆ ಮೊದಲು ಮಾಡಿದನು. ಶ್ರೀ ರಾಮ ಕೃಷ್ಣಗತಪ್ರಾಣಳಾದ ಯೋಗೀನ್‌ಮಾತೆಯು ಹತ್ತಿರ ನಿಂತುಕೊಂಡು ಅಡಿಗೆಗೆ ಬೇಕಾದ ಪದಾರ್ಥಗಳನ್ನು ಶಿಷ್ಯನಿಗೆ ಒದಗಿಸಿಕೊಡುತ್ತ ಸಹಾಯ ಮಾಡುತ್ತಿದ್ದಳು. ಸ್ವಾಮಿಜಿ ಮಧ್ಯೆ ಮಧ್ಯೆ ಒಳಕ್ಕೆ ಬಂದು ಅಡಿಗೆಯನ್ನು ನೋಡಿ ಅವನಿಗೆ ಉತ್ಸಾಹ ಕೊಡುತ್ತಿದ್ದರು; ಮತ್ತು ಆಗಾಗ್ಗೆ "ನೋಡು, ಪೂರ್ವಬಂಗಾಳದ ಕಡೆಯದರ ಹಾಗೆ ಇರಬೇಕು" ಎಂದು ಮುಂತಾಗಿ ಹಾಸ್ಯಮಾಡುತ್ತಿದ್ದರು.

ಅನ್ನ ಸಾರು ತೊವ್ವೆ ಪಲ್ಯ ಮುಂತಾದ ಅಡಿಗೆ ಇನ್ನೇನು ಮುಗಿ ದಂತಾಯಿತು. ಈ ಸಮಯದಲ್ಲಿ ಸ್ವಾಮಿಜಿ ಸ್ನಾನಮಾಡಿಕೊಂಡು ಬಂದು ತಾವೆ ಎಲೆಹಾಕಿಕೊಂಡು ಊಟಕ್ಕೆ ಕುಳಿತರು. "ಇನ್ನೂ ಸ್ವಲ್ಪ ಅಡಿಗೆ ಯಾಗುವುದು ಉಳಿದಿದೆ" ಎಂದು ಹೇಳಿದರೂ ಕೇಳದೆ ಹಟಮಾಡಿಕೊಂಡು ಹುಡುಗರ ಹಾಗೆ "ಏನಾಗಿದೆಯೋ ಅದನ್ನೇ ಬೇಗ ತಂದು ಹಾಕಿಬಿಡು, ಇನ್ನು ನಾನು ಕಾದುಕೊಂಡಿರಲಾರೆ, ಹೊಟ್ಟೆ ಹಸಿವಿನಿಂದ ಉರಿದು ಹೋಗುತ್ತಿದ್ದೇನೆ" ಎಂದರು. ಆದ್ದರಿಂದ ಶಿಷ್ಯನು ಗಡಿಬಿಡಿಯಿಂದ ಮೊದಲು ಪಲ್ಯ ಅನ್ನಗಳನ್ನು ಬಡಿಸಿದನು; ಸ್ವಾಮಿಜಿ ಆ ಕ್ಷಣವೆ ಊಟಕ್ಕೆ ಮೊದಲುಮಾಡಿದರು. ಆಮೇಲೆ ಶಿಷ್ಯನು ಮಿಕ್ಕ ಅಡಿಗೆಗಳನ್ನೆಲ್ಲಾ ಸ್ವಾಮಿಜಿಗೆ ಬಡಿಸಿದಮೇಲೆ ಯೋಗಾನಂದ ಪ್ರೇಮಾನಂದ ಮುಂತಾದ ಮಿಕ್ಕ ಸನ್ಯಾಸಿ ಗುರುಗಳಿಗೆ ಬಡಿಸುವುದಕ್ಕೆ ಹೊರಟನು. ಶಿಷ್ಯನು ಯಾವತ್ತೂ ಅಡಿಗೆಯಲ್ಲಿ ಬುದ್ಧಿವಂತನೆನ್ನಿಸಿಕೊಂಡವನಲ್ಲ. ಆದರೆ ಸ್ವಾಮಿಜಿ ಇಂದು ಅವನ ಅಡಿಗೆಯನ್ನು ಬಹುವಾಗಿ ಹೊಗಳುವುದಕ್ಕೆ ಮೊದಲು ಮಾಡಿದರು. ಕಲ್ಕತ್ತೆಯ ಜನರು ನಾನು ಮಾಡಿದ್ದ ಪಲ್ಯದ ಹೆಸರು ಕೇಳಿದೊಡನೆಯೆ ಹಾಸ್ಯಮಾಡಿಕೊಂಡು ನಗುವರು, ಆದರೆ ಅವರು ಮಾತ್ರ ಆ ಪಲ್ಯವನ್ನು ತಿಂದು ಸಂತೋಷಪಟ್ಟು "ಇಂಥಾದ್ದನ್ನು ಯಾವಾಗಲೂ ತಿಂದಿರಲಿಲ್ಲ" ಎಂದರು. ಆಮೇಲೆ ಮೊಸರು ಹಾಕಿಸಿ ಕೊಂಡು ಊಟಮಾಡಿ ಮುಗಿಸಿ ಆಚಮನಾನಂತರದಲ್ಲಿ ಒಳಗೆ ಇದ್ದ ಮಂಚದಮೇಲೆ ಹೋಗಿ ಕುಳಿತುಕೊಂಡರು. ಶಿಷ್ಯನು ಸ್ವಾಮಿಜಿ ಎದು ರಿಗೆ ನಡುಮನೆಯಲ್ಲಿ ಪ್ರಸಾದವನ್ನು ತೆಗೆದುಕೊಳ್ಳುತ್ತ ಕುಳಿತನು. ಸ್ವಾಮಿಜಿ

ತಂಬಾಕನ್ನು ತೀಡುತ್ತ ತೀಡುತ್ತ ಅವನನ್ನು ಕುರಿತು "ಯಾರು ಚೆನ್ನಾಗಿ ಅಡಿಗೆ ಮಾಡಲಾರರೊ ಅವರು ಒಳ್ಳೆಯ ಸಾಧುಗಳಾಗಲಾರರು–ಮನಸ್ಸು ಶುದ್ಧವಾಗಿಲ್ಲದಿದ್ದರೆ ಒಳ್ಳೆಯ ರುಚಿಯಾದ ಅಡಿಗೆಯಾಗುವುದಿಲ್ಲ" ಎಂದು ಹೇಳಿದರು.

ಸ್ವಲ್ಪ ಹೊತ್ತಿನ ಮೇಲೆ ನಾಲ್ಕು ಕಡೆಯಲ್ಲಿಯೂ ಶಂಖದ ಮತ್ತು ಗಂಟೆಯ ಧ್ವನಿಯೆದ್ದಿತು. ಮತ್ತು ಸ್ತ್ರೀಯರ *'ಉಲು' ಧ್ವನಿಯು ಕೇಳುವುದಕ್ಕೆ ಮೊದಲಾಯಿತು. ಸ್ವಾಮಿಜಿ "ಅಯ್ಯಾ, ಗ್ರಹಣ ಹಿಡಿಯಿತು–ನಾನು ಮಲಗಿಕೊಳ್ಳುತ್ತೇನೆ. ಸ್ವಲ್ಪ ಕಾಲು ಹಿಸುಕು" ಎಂದು ಹೇಳಿ ನಿದ್ರೆಮಾಡತೊಡಗಿದರು. ಶಿಷ್ಯನೂ ಅವರ ಪಾದಸೇವೆ ಮಾಡುತ್ತ "ಈ ಪುಣ್ಯಕಾಲದಲ್ಲಿ ಗುರುಪದ ಸೇವೆಯೆ ನನಗೆ ಗಂಗಾಸ್ನಾನ ಮತ್ತು ಜಪ" ವೆಂದು ಭಾವಿಸಿಕೊಂಡನು. ಹೀಗೆಂದುಕೊಂಡು ಶಿಷ್ಯನು ಶಾಂತ ಮನಸ್ಕನಾಗಿ ಸ್ವಾಮಿಜಿ ಪಾದಸೇವೆ ಮಾಡತೊಡಗಿದನು. ಗ್ರಹಣ ಪೂರ್ತಿಗ್ರಾಸವಾಗಿ ಕ್ರಮೇಣ ನಾಲ್ಕು ದಿಕ್ಕುಗಳಲ್ಲಿಯೂ ಸಾಯಂಕಾಲದ ಹಾಗೆ ಕತ್ತಲೆ ಕವಿದುಕೊಂಡಿತು.

ಗ್ರಹಣ ಬಿಡುವುದಕ್ಕೆ ಇನ್ನು ೧೫–೨೦ ನಿಮಿಷವಿದೆ ಎನ್ನುವಾಗ ಸ್ವಾಮಿಜಿ ಎದ್ದು ಕೈಕಾಲು ಮುಖಗಳನ್ನು ತೊಳೆದುಕೊಂಡು ತಂಬಾಕನ್ನು ಸೇವಿಸುತ್ತ ಸೇವಿಸುತ್ತ ಶಿಷ್ಯನನ್ನು ಕುರಿತು ಹಾಸ್ಯಮಾಡುತ್ತ "ಗ್ರಹಣ ಕಾಲದಲ್ಲಿ ಯಾರು ಏನು ಮಾಡುತ್ತಾರೆಯೊ ಅವರು ಅದನ್ನು ಕೋಟಿ ಪಾಲಿನಷ್ಟು ಪಡೆಯುತ್ತಾರೆಂದು ಜನರು ಹೇಳುತ್ತಾರೆ. ಅದಕ್ಕೋಸ್ಕರವೆ ಎಂದುಕೊಂಡೆ–ಮಹಾಮಾಯೆ ಈ ಶರೀರದಲ್ಲಿ ಒಳ್ಳೆಯ ನಿದ್ದೆಯನ್ನು ಕೊಡಲಿಲ್ಲ; ಈ ಸಮಯದಲ್ಲಿ ಒಂದಿಷ್ಟು ನಿದ್ರೆಮಾಡಿದರೆ ಆ ಮೇಲೆ ಚನ್ನಾಗಿ ನಿದ್ದೆಬರುವುದು–ಎಂದು. ಆದರೆ ಅದು ಆಗಲಿಲ್ಲ; ಹೆಚ್ಚೆಂದರೆ ಹದಿನೈದು ನಿಮಿಷ ನಿದ್ದೆಯಾಗಿರಬಹುದು" ಎಂದರು.

ಅನಂತರ ಎಲ್ಲರೂ ಸ್ವಾಮಿಜಿ ಹತ್ತಿರ ಬಂದು ಕುಳಿತುಕೊಳ್ಳಲು ಸ್ವಾಮಿಜಿ ಶಿಷ್ಯನನ್ನು ಕುರಿತು ಉಪನಿಷತ್ ಸಂಬಂಧವಾಗಿ ಏನಾದರೂ ಹೇಳುವಂತೆ ಅಪ್ಪಣೆ ಮಾಡಿದರು. ಶಿಷ್ಯನು ಇದಕ್ಕೆ ಹಿಂದೆ ಎಂದೂ ಸ್ವಾಮಿಜಿ ಮುಂದೆ ಉಪನ್ಯಾಸಮಾಡಿದ್ದಿಲ್ಲ. ಆದ್ದರಿಂದ ಅವನ ಎದೆ ಡವಡವನೆ ಹೊಡೆದು

* ವಂಗದೇಶದಲ್ಲಿ ಸ್ತ್ರೀಯರು ಮಂಗಳ ಸೂಚಕಾರ್ಥವಾಗಿ ಮಾಡುವ ಧ್ವನಿಗೆ 'ಉಲು' ಎಂದು ಹೆಸರು.

ಕೊಳ್ಳಲು ಮೊದಲುಮಾಡಿತು. ಆದರೆ ಸ್ವಾಮಿಜಿ ಬಿಡುವಂಥವರಲ್ಲ. ಆದ್ದರಿಂದ ಶಿಷ್ಯನು ಎದ್ದು "ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ" ಎಂಬ ವಾಕ್ಯವನ್ನು ವಿವರಿಸುವುದಕ್ಕೆ ಮೊದಲುಮಾಡಿದನು; ಆಮೇಲೆ 'ಗುರುಭಕ್ತಿ' ಮತ್ತು 'ತ್ಯಾಗ'ದ ಮಹಿಮೆಯನ್ನು ವರ್ಣನಮಾಡಿ ಬ್ರಹ್ಮ ಜ್ಞಾನವೆ ಪರಮಪುರುಷಾರ್ಥವೆಂಬುದನ್ನು ವಿಚಾರಮಾಡಿ ಕುಳಿತು ಕೊಂಡನು. ಸ್ವಾಮಿಜಿ ಪುನಃ ಪುನಃ ಚಪ್ಪಾಳೆ ತಟ್ಟುವುದರ ಮೂಲಕ ಶಿಷ್ಯನನ್ನು ಉತ್ಸಾಹಗೊಳಿಸಿ "ಆಹಾ! ಬಲು ಸೊಗಸಾಗಿ ಹೇಳಿದೆ" ಎಂದರು.

ಆಮೇಲೆ ಸ್ವಾಮಿಜಿ ಶುದ್ಧಾನಂದ ಪ್ರಕಾಶಾನಂದ ಮುಂತಾದ ಕೆಲವು ಸನ್ಯಾಸಿಗಳಿಗೆ ಏನಾದರೂ ಸ್ವಲ್ಪ ಹೇಳುವಂತೆ ಅಪ್ಪಣೆಮಾಡಿದರು. ಶುದ್ಧಾನಂದಸ್ವಾಮಿಗಳು ಓಜಃ ಪೂರ್ಣವಾದ ಭಾಷೆಯಲ್ಲಿ 'ಧ್ಯಾನ'ದ ಸಂಬಂಧವಾಗಿ ಅಷ್ಟೇನೂ ಉದ್ದವಿಲ್ಲದ ಒಂದು ಉಪನ್ಯಾಸ ಮಾಡಿದರು. ಆಮೇಲೆ ಪ್ರಕಾಶಾನಂದ ಮುಂತಾದವರೂ ಹೀಗೆಯೇ ಮಾಡಿದಮೇಲೆ ಸ್ವಾಮಿಜಿ ಎದ್ದು ಹೊರಗಿನ ಬೈಠಕ್‌ಖಾನೆಗೆ ಬಂದರು. ಆಗಲೂ ಸಾಯಂಕಾಲವಾಗುವುದಕ್ಕೆ ಇನ್ನೂ ಸುಮಾರು ಒಂದು ಘಂಟೆಯಿತ್ತು. ಎಲ್ಲರೂ ಅಲ್ಲಿಗೆ ಬಂದ ಮೇಲೆ ಸ್ವಾಮಿಜಿ "ನೀವು ಕೇಳತಕ್ಕುದ್ದೇನಾದರೂ ಇದ್ದರೆ ಹೇಳಿ" ಎಂದರು.

ಶುದ್ಧಾನಂದ ಸ್ವಾಮಿಗಳು 'ಮಹಾಶಯರೆ, ಧ್ಯಾನದ ಸ್ವರೂಪ ವೇನು?' ಎಂದು ಕೇಳಿದರು.

ಸ್ವಾಮಿಜಿ:—ಯಾವುದಾದರೂ ಒಂದು ವಿಷಯದಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದರ ಹೆಸರೆ ಧ್ಯಾನ. ಒಂದು ವಿಷಯದಲ್ಲಿ ಮನಸ್ಸನ್ನು ಏಕಾಗ್ರಮಾಡುವುದಕ್ಕೆ ಸಮರ್ಥನಾದರೆ ಆ ಮನಸ್ಸನ್ನು ಯಾವ ವಿಷಯ ದಲ್ಲಿಬೇಕಾದರೂ ಏಕಾಗ್ರ ಮಾಡಬಹುದು.

ಶಿಷ್ಯ:— ಶಾಸ್ತ್ರದಲ್ಲಿ ವಿಷಯ ಮತ್ತು ನಿರ್ವಿಷಯ ಎಂಬ ಭೇದವನ್ನಿಟ್ಟುಕೊಂಡು ಎರಡು ವಿಧವಾದ ಧ್ಯಾನ ಹೇಳಲ್ಪಟ್ಟಿದೆಯಲ್ಲಾ ಅದರ ಅರ್ಥವೇನು? ಅವುಗಳಲ್ಲಿ ಯಾವುದು ಶ್ರೇಷ್ಠ?

ಸ್ವಾಮಿಜಿ:— ಮೊದಲು ಯಾವುದಾದರೂ ವಿಷಯವನ್ನು ತೆಗೆದು ಕೊಂಡು ಧ್ಯಾನವನ್ನು ಅಭ್ಯಾಸಮಾಡಬೇಕು. ಒಂದು ಕಾಲದಲ್ಲಿ ನಾನು ಒಂದು ಕರಿಯ ಬಟ್ಟನಲ್ಲಿ ಮನಸ್ಸನ್ನು ನಿಲ್ಲಿಸುತ್ತಿದ್ದೆನು. ಆಗ ಕೊನೆಯಲ್ಲಿ

ಬಟ್ಟುಗಾಣದೇ ಹೋಗುತ್ತಿತ್ತು. ಅಥವಾ ಮುಂದೆ ಏನಿದೆ ಅದನ್ನು ತಿಳಿದುಕೊಳ್ಳಲಾರದೆ ಹೋಗುತ್ತಿದ್ದೆನು; ಮನಸ್ಸು ನಿರುದ್ಧವಾಗಿ ಬಿಡುತ್ತಿತ್ತು-ಯಾವ ವೃತ್ತಿಯ ತರಂಗವೂ ಉಂಟಾಗುತ್ತಿರಲಿಲ್ಲ–ಗಾಳಿಯಿಲ್ಲದ ಸಾಗರದಂತಿರುತ್ತಿತ್ತು. ಈ ಅವಸ್ಥೆಯಲ್ಲಿ ಅತೀಂದ್ರಿಯ ಸತ್ಯದ ಛಾಯೆಯನ್ನು ಕೊಂಚ ಕೊಂಚ ನೋಡಬಲ್ಲವನಾಗಿದ್ದೆನು. ಅದಕ್ಕೋಸ್ಕರವೆ, ಯಾವುದಾದರೊಂದು ಸಾಮಾನ್ಯವಾದ ಬಾಹ್ಯ ವಿಷಯವನ್ನು ಇಟ್ಟುಕೊಂಡು ಧ್ಯಾನವನ್ನು ಅಭ್ಯಾಸಮಾಡಿದರೂ ಮನಸ್ಸು ಏಕಾಗ್ರ ಅಥವಾ ಧ್ಯಾನಸ್ಥವಾಗುತ್ತದೆಂದು ತೋರುತ್ತದೆ. ಆದರೆ ಯಾವುದರಲ್ಲಿ ಯಾರ ಮನಸ್ಸು ನಿಲ್ಲುತ್ತದೆಯೊ ಅದನ್ನು ಅವರು ಅವಲಂಬಿಸಿಕೊಂಡು ಧ್ಯಾನವನ್ನು ಅಭ್ಯಾಸಮಾಡಿದರೆ ಮನಸ್ಸು ಶೀಘ್ರದಲ್ಲಿ ಸ್ಥಿರವಾಗಿ ಹೋಗುತ್ತದೆ. ಅದಕ್ಕೋಸ್ಕರವೆ ಈ ದೇಶದಲ್ಲಿ ಇಷ್ಟು ದೇವ ದೇವೀ ಮೂರ್ತಿಗಳ ಪೂಜೆ ಅಲ್ಲದೆ ಈ ದೇವ ದೇವೀಯರ ಪೂಜೆಯಿಂದ ಎಂಥ ಶಿಲ್ಪದ ಉನ್ನತಿ ಆಯಿತು! ಈಗ ಆ ಮಾತು ಹಾಗಿರಲಿ. ಈಗ್ಗೆ ಬೇಕಾದ ವಿಷಯವೇನೆಂದರೆ, ಧ್ಯಾನದ ಬಾಹ್ಯಾಲಂಬನ ಎಲ್ಲರಿಗೂ ಸಮಾನ ಅಥವಾ ಒಂದೇ ಆಗುವುದು ಸಾಧ್ಯವಲ್ಲ. ಯಾರು ಯಾವ ವಿಷಯವನ್ನು ಅವಲಂಬಿಸಿಕೊಂಡು ಧ್ಯಾನ ಸಿದ್ಧನಾಗುತ್ತಾನೆಯೊ ಆತನು ಆ ಬಾಹ್ಯಾಲಂಬನವನ್ನೆ ಕೀರ್ತನೆ ಮಾಡುತ್ತಲೂ ಪ್ರಚಾರ ಮಾಡುತ್ತಲೂ ಹೋಗುವನು. ಆಮೇಲೆ ಕ್ರಮೇಣ ಅದರಿಂದ ಮನಸ್ಸನ್ನು ಸ್ಥಿರಪಡಿಸಿಕೊಳ್ಳಬೇಕೆಂಬ ಸಂಗತಿ ಮರೆತುಹೋಗಿ ಆ ಬಾಹ್ಯಾಲಂಬನವೆ ದೊಡ್ಡದಾಗಿ ಕುಳಿತುಕೊಳ್ಳುತ್ತದೆ. ಉಪಾಯವನ್ನು ಹಿಡಿದುಕೊಂಡೆ ಜನರು ಒದ್ದಾಡುತ್ತಾ ಕುಳಿತಿದ್ದಾರೆ, ಉದ್ದೇಶದ ಕಡೆಗೆ ಲಕ್ಷ್ಯವೇ ಕಡಿಮೆಯಾಗಿ ಹೋಗಿದೆ. ಉದ್ದೇಶವೇನೆಂದರೆ ಮನಸ್ಸನ್ನು ವೃತ್ತಿ ಶೂನ್ಯ ಮಾಡುವುದು–ಆದರೆ ಮಾತ್ರ, ಯಾವುದಾದರೂ ಒಂದು ವಿಷಯದಲ್ಲಿ ತನ್ಮಯನಾಗಿ ಹೋಗದೆ ಅದು ಸಾಧ್ಯವಲ್ಲ.

ಶಿಷ್ಯ:—ಮನೋವೃತ್ತಿ ವಿಷಯಾಕಾರವನ್ನು ಪಡೆದರೆ ಅದರಿಂದ ಬ್ರಹ್ಮ ಅನುಭವಕ್ಕೆ ಬರುವುದು ಹೇಗೆ?

ಸ್ವಾಮಿಜಿ:—ವೃತ್ತಿ ಮೊದಲು ವಿಷಯಾಕಾರವಾಗಿರುವುದೇನೊ ನಿಜ; ಆದರೆ ಆಮೇಲೆ ಈ ವಿಷಯದ ಜ್ಞಾನವಿರುವುದಿಲ್ಲ. ಆಮೇಲೆ ಶುದ್ಧ "ಅಸ್ತಿ" (ಇದೆ) ಎಂಬುದಿಷ್ಟು ಮಾತ್ರ ಜ್ಞಾನವಿರುತ್ತದೆ.

ಶಿಷ್ಯ:—ಮಹಾಶಯರೇ, ಮನಸ್ಸಿಗೆ ಏಕಾಗ್ರತೆಯುಂಟಾದರೂ ಕಾಮನಾ ವಾಸನಾದಿಗಳು ಬರುತ್ತವೆ ಏಕೆ?

ಸ್ವಾಮಿಜಿ:—ಅವು ಹಿಂದಿನ ಸಂಸ್ಕಾರದಿಂದ ಬರುತ್ತವೆ. ಬುದ್ಧದೇವನು ಸಮಾಧಿಸ್ಥನಾಗಲು ಹೋದಾಗ ಮಾರನು ತಲೆಹಾಕುತ್ತಿದ್ದನು. ಮಾರನೆಂದರೆ ಹೊರಗೆ ಏನೂ ಇರುತ್ತಿರಲಿಲ್ಲ. ಮನಸ್ಸಿನ ಪೂರ್ವ ಸಂಸ್ಕಾರವೆ ಛಾಯಾರೂಪವಾಗಿ ಹೊರಗೆ ಕಾಣುತ್ತಿತ್ತು.

ಶಿಷ್ಯ:—ಹಾಗಾದರೆ ಸಿದ್ಧನಾಗುವುದಕ್ಕೆ ಮುಂಚೆ ನಾನಾ ಹೆದರಿಕೆಯನ್ನು ಉಂಟುಮಾಡುವ ನಾನಾ ರೂಪುಗಳು ಕಂಡುಬರುತ್ತವೆಯೆಂದು ಕೇಳಿದ್ದೇವೆಯಲ್ಲಾ, ಅವೇನು ಮನಃ ಕಲ್ಪಿತವೇ?

ಸ್ವಾಮಿಜಿ:—ಅಲ್ಲದೆ ಮತ್ತೇನು? ಸಾಧಕನು ಆಗ ಇವು ತನ್ನ ಮನಸ್ಸಿನ ಬಹಿಃಪ್ರಕಾಶವೆ ಎಂಬುದನ್ನು ತಿಳಿದುಕೊಳ್ಳಲಾರನು. ಆದರೆ ಹೊರಗೆ ಏನೂ ಇರುವುದಿಲ್ಲ. ನೀನು ನೋಡುತ್ತಿದ್ದೀಯಲ್ಲಾ ಈ ಜಗತ್ತೂ ಇರುವುದಿಲ್ಲ. ಎಲ್ಲಾ ಮನಸ್ಸಿನ ಕಲ್ಪನೆ, ಮನಸ್ಸು ಯಾವಾಗ ವೃತ್ತಿ ಶೂನ್ಯವಾಗುತ್ತದೆಯೊ ಆವಾಗ ಅದರಿಂದ ಬ್ರಹ್ಮಾಭಾಸದ ದರ್ಶನವುಂಟಾಗುತ್ತದೆ. ಆಗ "ಯಂ ಯಂ ಲೋಕಂ ಮನಸಾ ಸಂವಿಭಾತಿ" ಆ ಆ ಲೋಕದ ದರ್ಶನವಾಗುತ್ತದೆ. ಯಾವುದನ್ನು ಸಂಕಲ್ಪಮಾಡಿದರೆ ಅದು ಸಿದ್ಧವಾಗುತ್ತದೆ. ಈ ವಿಧವಾದ ಸತ್ಯ ಸಂಕಲ್ಪಾವಸ್ಥೆಯುಂಟಾದರೂ ಮನಸ್ಸನ್ನು ಅಧೀನದಲ್ಲಿ ಇಟ್ಟುಕೊಂಡು ಯಾವ ಆಶೆಗೂ ದಾಸನಾಗದೆ ಇರಬಲ್ಲವನಾದರೆ ಅಂಥವನೆ ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ. ಮತ್ತು ಈ ಅವಸ್ಥೆಯನ್ನು ಪಡೆದು ಯಾರು ಚಂಚಲವಾಗುತ್ತಾರೊ ಅವರು ನಾನಾ ಸಿದ್ಧಿಗಳನ್ನು ಪಡೆದು ಪರಮಾರ್ಥದಿಂದ ಭ್ರಷ್ಟರಾಗುತ್ತಾರೆ.

ಈ ಮಾತನ್ನು ಹೇಳುತ್ತ ಹೇಳುತ್ತ ಸ್ವಾಮಿಜಿ 'ಶಿವ' 'ಶಿವ' ಎಂದು ಶಿವನಾಮವನ್ನು ಉಚ್ಚಾರಣಮಾಡತೊಡಗಿದರು. ಕೊನೆಗೆ ಹೇಳಿದ್ದೇನೆಂದರೆ "ತ್ಯಾಗವನ್ನು ಬಿಟ್ಟು ಮತ್ತಾವುದರಿಂದಲೂ ಈ ಗಂಭೀರವಾದ ಜೀವನ ಸಮಸ್ಯೆಯ ರಹಸ್ಯವನ್ನು ಭೇದಿಸುವುದಕ್ಕಾಗುವುದಿಲ್ಲ. ತ್ಯಾಗ-ತ್ಯಾಗ-ತ್ಯಾಗ! ಇದೇ ನಿಮ್ಮ ಜೀವನದ ಮೂಲಮಂತ್ರವಾಗಿರಲಿ. 'ಸರ್ವಂವಸ್ತುಭಯಾನ್ವಿತಂ ಭುವಿ ನೃಣಾಂ ವೈರಾಗ್ಯಮೇವಾಭಯಂ'"

---

# ಅಧ್ಯಾಯ ೯

**ಸ್ಥಳ:—ಕಲ್ಕತ್ತ, ವರ್ಷ:–ಕ್ರಿ. ಶ. ೧೮೯೭, ಮಾರ್ಚಿ ಮತ್ತು ಏಪ್ರಿಲ್.**

ಸ್ವಾಮಿಜಿ ಅಮೇರಿಕಾದಿಂದ ಹಿಂತಿರುಗಿ ಬಂದು ಕೆಲವು ದಿನ ಕಲ್ಕತ್ತೆಯಲ್ಲಿಯೆ ಇರುತ್ತಿದ್ದರು–ಬಾಗ್‌ಬಜಾರಿನ ಬಲರಾಮ ಬಸು ಮಹಾಶಯರ ಮನೆಯಲ್ಲಿಯೇ ಇದ್ದರು. ಮಧ್ಯೆ ಮಧ್ಯೆ ಪರಿಚಿತರಾದ ಜನರ ಮನೆಗೂ ಹೋಗಿ ಬರುತ್ತಿದ್ದರು. ಈ ದಿವಸ ಬೆಳಿಗ್ಗೆ ಶಿಷ್ಯನು ಸ್ವಾಮಿಜಿ ಬಳಿಗೆ ಬಂದು ನೋಡಲು, ಸ್ವಾಮಿಜಿ ಹೊರಗೆ ಎಲ್ಲಿಗೊ ಹೋಗುವುದಕ್ಕೆ ಸಿದ್ಧರಾಗಿದ್ದರು. ಶಿಷ್ಯನಿಗೆ "ನಡೆ–ನನ್ನ ಜೊತೆಯಲ್ಲಿ ಹೋಗುವಂತೆ" ಎಂದು ಹೇಳಿದರು. ಹೇಳುತ್ತ ಹೇಳುತ್ತ ಕೆಳಗೆ ಇಳಿದರು. ಶಿಷ್ಯನೂ ಹಿಂದೆ ಹಿಂದೆಯೆ ಹೋದನು. ಅವರು ಒಂದು ಬಾಡಿಗೆಯ ಗಾಡಿಯೊಳಕ್ಕೆ ಶಿಷ್ಯನೊಡನೆ ಹೋಗಿ ಕುಳಿತುಕೊಂಡರು; ಗಾಡಿ ದಕ್ಷಿಣ ಮುಖವಾಗಿ ಹೊರಟಿತು.

ಶಿಷ್ಯ:—ಮಹಾಶಯರೆ, ಎಲ್ಲಿಗೆ ಹೋಗಬೇಕು?

ಸ್ವಾಮಿಜಿ:—ನಡೆ,–ಗೊತ್ತಾಗುತ್ತದೆ ಈವಾಗ.

ಹೀಗೆ ಸ್ವಾಮಿಜಿ ಹೋಗಬೇಕೆಂಬುದರ ವಿಚಾರವಾಗಿ ಶಿಷ್ಯನಿಗೆ ಏನನ್ನೂ ಹೇಳದೆ, ಗಾಡಿಯು ಬಿಡನ್ ರಸ್ತೆಗೆ ಬಂದಾಗ ಮಾತಿಗೆ ಮಾತು ಬಂದು ಹೀಗೆಂದರು:—"ನಿಮ್ಮ ದೇಶದಲ್ಲಿ ಹೆಂಗಸರಿಗೆ ಓದುಬರಹವನ್ನು ಕಲಿಸುವುದಕ್ಕಾಗಿ ಸ್ವಲ್ಪವೂ ಪ್ರಯತ್ನವು ಕಂಡುಬರುವುದಿಲ್ಲ. ನೀವು ಓದು ಬರಹಗಳನ್ನು ಕಲಿತು ದೊಡ್ಡವರಾಗುತ್ತೀರಿ. ಆದರೆ ಯಾರು ನಿಮ್ಮ ಸುಖ ದುಃಖಗಳಲ್ಲಿ ಭಾಗಿಗಳೊ–ಸಕಲ ಕಾಲದಲ್ಲಿಯೂ ಮನಃ ಪೂರ್ವಕವಾಗಿ ಸೇವೆಮಾಡುತ್ತಾರೆಯೊ ಅವರಿಗೆ ಶಿಕ್ಷಣ ಕೊಡುವುದಕ್ಕೆ–ಅವರಿಗೆ ಉನ್ನತಿ ಯುಂಟುಮಾಡಿ ಕೊಡುವುದಕ್ಕೆ ನೀವು ಏನುಮಾಡುತ್ತೀರಿ?"

ಶಿಷ್ಯ:—ಏಕೆ ಮಹಾಶಯರೆ! ಈಗಿನ ಕಾಲದಲ್ಲಿ ಹೆಂಗಸರಿಗೋಸ್ಕರ ಎಷ್ಟು ಸ್ಕೂಲುಗಳೂ ಕಾಲೇಜುಗಳೂ ಇವೆ. ಎಷ್ಟು ಹೆಂಗಸರು ಬಿ. ಎ., ಎಂ. ಎ. ಪ್ಯಾಸುಮಾಡುತ್ತಿದ್ದಾರೆ!

ಸ್ವಾಮಿಜಿ:— ಅದು ವಿಲಾಯತಿಯ ರೀತಿ! ನಿಮ್ಮ ಧರ್ಮ ಶಾಸ್ತ್ರಾನುಸಾರವಾಗಿ ನಿಮ್ಮ ದೇಶಾನುಸಾರವಾಗಿ ನಡೆಯುವ ಸ್ಕೂಲು

ಎಲ್ಲೆಲ್ಲಿ ಎಷ್ಟೆಷ್ಟಿವೆ? ದೇಶದಲ್ಲಿ ಗಂಡಸರಿಗೂ ಇಂಥ ಶಿಕ್ಷಣ ಪ್ರಚಾರಕ್ಕೆ ಬಂದಿಲ್ಲ, ಹೀಗಿರಲು ಹೆಂಗಸರಲ್ಲಿ ಕೇಳಬೇಕೆ! ಸರ್ಕಾರದ ಲೆಕ್ಕದ ಪಟ್ಟಿ ಯನ್ನು ನೋಡಿದರೆ ಭರತಖಂಡದಲ್ಲಿ ಶೇಕಡ ಹತ್ತು ಹನ್ನೆರಡು ಜನ ಮಾತ್ರ ಶಿಕ್ಷಿತರೆಂದು ಗೊತ್ತಾಗುತ್ತದೆ. ಹೆಂಗಸರಲ್ಲಿ ಶೇಕಡ ಒಬ್ಬರು ಇದ್ದಾರೆಯೊ ಇಲ್ಲವೊ ಎಂದು ತೋರುತ್ತದೆ.

ಹಾಗಿಲ್ಲದಿದ್ದರೆ ದೇಶಕ್ಕೆ ಇಂಥ ದುರ್ದಶೆಯುಂಟಾಗುತ್ತಿತ್ತೆ? ಶಿಕ್ಷಣ ಪ್ರಚಾರ, ಜ್ಞಾನೋದಯ, ಇವೆಲ್ಲಾ ಆಗದಿದ್ದರೆ ದೇಶದ ಉನ್ನತಿ ಹೇಗೆ ಆಗುತ್ತದೆ? ದೇಶದಲ್ಲಿ ನೀವು ಕೆಲವರು ಓದುಬರಹಗಳನ್ನು ಕಲಿತು ಕೊಂಡಿದ್ದೀರಷ್ಟೆ–ದೇಶದ ಭವಿಷ್ಯದಾಶೆಗೆ ಕಾರಣರಾದವರು–ಈ ಕೆಲವು ಜನರಲ್ಲಿಯೂ ಈ ವಿಷಯವಾಗಿ ಯಾವ ಕಾರ್ಯವಾಗಲಿ ಪ್ರಯತ್ನವಾಗಲಿ ಕಂಡು ಬರುವುದಿಲ್ಲ. ಆದರೆ ಇದನ್ನು ತಿಳಿದುಕೊ, ಸಾಧಾರಣರಲ್ಲಿಯೂ ಹೆಂಗಸರಲ್ಲಿಯೂ ಶಿಕ್ಷಣ ಪ್ರಚಾರವಾಗದಿದ್ದರೆ ಏನೂ ಸಾಧ್ಯವಿಲ್ಲ. ಆದ್ದರಿಂದ ನನ್ನ ಇಷ್ಟವೇನೆಂದರೆ–ಕೆಲವು ಜನ ಬ್ರಹ್ಮಚಾರಿ ಮತ್ತು ಬ್ರಹ್ಮಚಾರಿಣಿ ಯರನ್ನು ತಯಾರುಮಾಡಬೇಕು. ಬ್ರಹ್ಮಚಾರಿಗಳು ಸಕಾಲದಲ್ಲಿ ಸನ್ಯಾಸ ವನ್ನು ಪಡೆದು ದೇಶದೇಶದಲ್ಲಿಯೂ ಪ್ರಚಾರಮಾಡುತ್ತ ಹೋಗಿ ಸಾಧಾರಣ ಜನರಿಗೆ ಶಿಕ್ಷಣ ಕೊಡುವುದಕ್ಕೆ ಪ್ರಯತ್ನಿಸಬೇಕು. ಬ್ರಹ್ಮಚಾರಿಣಿಯರೂ, ಹೆಂಗಸರಲ್ಲಿ ಶಿಕ್ಷಣವನ್ನು ಪ್ರಚಾರಿಸಬೇಕು. ಆದರೆ ದೇಶೀಯ ರೀತಿಯಲ್ಲಿ ಈ ಕೆಲಸವನ್ನು ಮಾಡಬೇಕು. ಗಂಡಸರಿಗೋಸ್ಕರ ಹೇಗೆ ಕೆಲವು ಶಿಕ್ಷಣ ಕೇಂದ್ರಗಳನ್ನೂ ಮಾಡಬೇಕೊ, ಹೆಂಗಸರಿಗೋಸ್ಕರವೂ ಹಾಗೆಯೆ ಕೆಲವು ಕೇಂದ್ರಗಳನ್ನು ಮಾಡಬೇಕು. ಶಿಕ್ಷಿತೆಯರೂ ಸಚ್ಚರಿತ್ರೆಯರೂ ಆದ ಬ್ರಹ್ಮಚಾರಿಣಿಯರು ಈ ಕೇಂದ್ರಗಳಲ್ಲಿ ಹೆಂಗಸರ ಶಿಕ್ಷಣದ ಭಾರವನ್ನು ವಹಿಸಬೇಕು. ಪುರಾಣ ಇತಿಹಾಸ ಗೃಹಕಾರ್ಯ ಶಿಲ್ಪ ಗೃಹಕೃತ್ಯನಿಯಮ ಗಳು ಆದರ್ಶಜೀವನವನ್ನು ಬೆಳೆಸುವುದಕ್ಕೆ ಸಹಕಾರಿಗಳಾದ ನೀತಿಗಳು–ಇವುಗಳ ವಿಚಾರವಾಗಿ ಈಗಿನ ವಿಜ್ಞಾನದ ಸಹಾಯದಿಂದ ಶಿಕ್ಷಣ ಕೊಡ ಬೇಕು. ಸ್ತ್ರೀಶಿಷ್ಯರನ್ನು ಧರ್ಮಪರಾಯಣರನ್ನಾಗಿಯೂ ನೀತಿಪರಾಯಣ ರನ್ನಾಗಿಯೂ ಮಾಡಬೇಕು. ಮುಂದೆ ಅವರು ಏತರಿಂದ ಒಳ್ಳೆಯ ಗೃಹಣಿಯರಾಗುವರೊ ಅದನ್ನೇ ಹೇಳಿಕೊಡಬೇಕು. ಈ ಹೆಂಗಸರ ಸಂತಾನ ಸಂತತಿಗಳು ಆಮೇಲೆ ಈ ವಿಷಯಗಳಲ್ಲಿ ಮತ್ತೂ ಉನ್ನತಿಯನ್ನು ಪಡೆಯಲು ಸಮರ್ಥರಾಗುವರು. ಯಾರ ತಾಯಿಯು ಸುಶಿಕ್ಷಿತಳೂ

ನೀತಿಪರಾಯಣಳಾಗಿಯೂ ಇರುತ್ತಾಳೆಯೊ ಅವರ ಮನೆಯಲ್ಲಿಯೆ ಶ್ರೇಷ್ಠರಾದ ಜನರು ಹುಟ್ಟುವರು. ಈಗ ನೀವು ಹೆಂಗಸರನ್ನು ಕೆಲಸ ಮಾಡುವ ಯಂತ್ರಗಳನ್ನಾಗಿ ಮಾಡಿದ್ದೀರಿ. ರಾಮರಾಮ! ಇದೇನು ನಿಮ್ಮ ಶಿಕ್ಷಣದ ಫಲವೊ? ಮೊದಲು ಹೆಂಗಸರನ್ನು ಎತ್ತಿ ಉತ್ತಮ ಸ್ಥಿತಿಗೆ ತರಬೇಕು, ಸಾಧಾರಣ ಜನರನ್ನು ಎಚ್ಚರಗೊಳಿಸಬೇಕು; ಹಾಗಾದರೆ ತಾನೆ ದೇಶಕ್ಕೆ ಕಲ್ಯಾಣ–ಭರತಖಂಡಕ್ಕೆ ಕಲ್ಯಾಣ.

ಗಾಡಿ ಈಗ ಕಾರ್ನವಾಲೀಸ್ ರಸ್ತೆಯ ಬ್ರಹ್ಮ ಸಮಾಜವನ್ನು ಬಿಟ್ಟು ಮುಂದಕ್ಕೆ ಹೋಗುತ್ತಿದ್ದದ್ದನ್ನು ನೋಡಿ ಗಾಡಿಯವನಿಗೆ "ಚೋರ ಬಾಗಾನಿನ ರಸ್ತೆಯಲ್ಲಿ ಹೊಡಿ" ಎಂದು ಹೇಳಿದರು. ಗಾಡಿ ಆ ರಸ್ತೆಗೆ ಪ್ರವೇಶ ಮಾಡಿದಾಗ ಸ್ವಾಮಿಜಿ ಮಹಾಕಾಳೀ ಪಾಠಶಾಲೆಯ ಸ್ಥಾಪನ ಕರ್ತ್ರಿಯಾದ ತಪಸ್ವಿನೀಮಾತೆ ತಮ್ಮ ಪಾಠಶಾಲೆಯನ್ನು ಬಂದು ನೋಡಬೇಕೆಂದು ಆಹ್ವಾನಮಾಡಿ ಚೀಟಿ ಬರೆದು ಕಳುಹಿಸಿದುದಾಗಿ ಬಾಯಿಬಿಟ್ಟು ಹೇಳಿದರು. ಈ ಪಾಠಶಾಲೆ ಆಗ ಚೋರ ಬಾಗಾನಿನ ರಾಜೇಂದ್ರ ಮಲ್ಲಿಕ–ಮಹಾಶಯರ ಮನೆಗೆ ಸ್ವಲ್ಪ ಪೂರ್ವದಲ್ಲಿದ್ದ ಎರಡಂತಸ್ತಿನ ಒಂದು ಬಾಡಿಗೆಯ ಮನೆಯಲ್ಲಿತ್ತು. ಗಾಡಿ ನಿಲ್ಲಲು ನಾಲ್ಕೈದುಜನ ದೊಡ್ಡ ಮನುಷ್ಯರು ಅವರಿಗೆ ಪ್ರಣಾಮಮಾಡಿ ಮೇಲಕ್ಕೆ ಕರೆದುಕೊಂಡು ಹೋದರು; ತಪಸ್ವಿನೀಮಾತೆ ಅವರನ್ನು ಸ್ವಾಗತಪೂರ್ವಕ ಬರಮಾಡಿಕೊಂಡರು. ಸ್ವಲ್ಪ ಹೊತ್ತಿನಮೇಲೆ ತಪಸ್ವಿನೀಮಾತೆ ಸ್ವಾಮಿಜಿಯನ್ನು ಒಂದು ತರಗತಿಗೆ ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋದರು. ಹುಡುಗಿಯರು ಎದ್ದು ನಿಂತು ಸ್ವಾಮಿಜಿಗೆ ಪ್ರಣಾಮ ಮಾಡಿದರು. ಮತ್ತೆ ಮಾತೆಯ ಅಪ್ಪಣೆಯಂತೆ ಮೊದಲು ರಾಗವಾಗಿ ಶಿವಸ್ತೋತ್ರವನ್ನು ಹೇಳುವುದಕ್ಕೆ ಮೊದಲು ಮಾಡಿದರು. ಆಮೇಲೆ ಪೂಜೆ ಮುಂತಾದ ವಿಷಯಗಳಲ್ಲಿ ಪಾಠಶಾಲೆಯಲ್ಲಿ ಶಿಕ್ಷಣ ಹೇಗೆ ಕೊಡಲ್ಪಡುತ್ತಿತ್ತೆಂಬುದನ್ನು ಮಾತಾಜಿಯವರ ಅಪ್ಪಣೆ ಮೇರೆ ಹುಡುಗಿಯರು ನಡೆಸಿ ತೋರಿಸಿದರು. ಸ್ವಾಮಿಜಿ ಉತ್ಫುಲ್ಲ ನಯನದಿಂದ ಇವೆಲ್ಲವನ್ನೂ ನೋಡಿ ಮತ್ತೊಂದು ತರಗತಿಯ ವಿದ್ಯಾರ್ಥಿನಿಯರನ್ನು ನೋಡುವುದಕ್ಕೆ ಹೊರಟರು. ವೃದ್ಧೆಯಾದ ಮಾತಾಜಿಯು ಸ್ವಾಮಿಜಿ ಜೊತೆಯಲ್ಲಿ ಎಲ್ಲಾ ತರಗತಿಗಳಿಗೂ ತಿರುಗಲಾರನೆಂದು ಆ ಪಾಠಶಾಲೆಯ ಇಬ್ಬರು ಮೂರುಜನ ಉಪಾಧ್ಯಾಯರನ್ನು ಕರೆದು ಎಲ್ಲಾ ತರಗತಿಗಳನ್ನೂ ಸ್ವಾಮಿಜಿಗೆ ಚೆನ್ನಾಗಿ ತೋರಿಸುವಂತೆ ಹೇಳಿದರು.

ಅನಂತರ ಸ್ವಾಮಿಜಿ ಎಲ್ಲಾ ತರಗತಿಗಳಿಗೂ ಹೋಗಿ ಮತ್ತೆ ಮಾತಾಜಿಯ ಬಳಿಗೆ ಬರಲು, ಆಕೆಯು ಒಬ್ಬ ಹುಡುಗಿಯನ್ನು ಅಲ್ಲಿಗೆ ಕರೆಸಿಕೊಂಡು ರಘುವಂಶದ ಮೂರನೆಯ ಸರ್ಗದಲ್ಲಿ ಮೊದಲನೆಯ ಶ್ಲೋಕಕ್ಕೆ ಅರ್ಥ ಹೇಳುವಂತೆ ಹೇಳಿದಳು. ವಿದ್ಯಾರ್ಥಿನಿ ಅದಕ್ಕೆ ಸಂಸ್ಕೃತದಲ್ಲಿಯೆ ಅರ್ಥ ವನ್ನು ಹೇಳಿ ಸ್ವಾಮಿಜಿಗೆ ಒಪ್ಪಿಸಿದಳು. ಸ್ವಾಮಿಜಿ ಕೇಳಿ ತಮ್ಮ ಸಂತೋಷ ವನ್ನು ಸೂಚಿಸಿ, ಸ್ತ್ರೀಶಿಕ್ಷಣ ಪ್ರಚಾರದಲ್ಲಿ ಮಾತಾಜಿಯ ಪ್ರಯತ್ನ ಮತ್ತು ವ್ಯವಸಾಯಗಳು ಇಷ್ಟುದೂರ ಸಫಲವಾದದ್ದನ್ನು ನೋಡಿ ಅವರನ್ನು ವಿಶೇಷವಾಗಿ ಹೊಗಳುವುದಕ್ಕೆ ಮೊದಲುಮಾಡಿದರು. ಅದಕ್ಕೆ ಮಾತಾ ಜಿಯು ವಿನೀತಭಾವದಿಂದ "ನಾನು ಭಗವತೀ ಬುದ್ಧಿಯನ್ನಿಟ್ಟುಕೊಂಡು ವಿದ್ಯಾರ್ಥಿನಿಯರ ಸೇವೆಯನ್ನು ಮಾಡಿಕೊಂಡಿದ್ದೇನೆ. ಅಷ್ಟು ಹೊರತು ಪಾಠಶಾಲೆಯನ್ನಿಟ್ಟು ಯಶಸ್ಸು ಪಡೆಯುವದಾಗಲಿ ಮತ್ತಾವ ಉದ್ದೇಶ ವಾಗಲಿ ಇಲ್ಲ" ಎಂದರು.

ವಿದ್ಯಾಲಯ ಸಂಬಂಧವಾಗಿ ಮಾತುಕಥೆಗಳನ್ನು ಮುಗಿಸಿ ಸ್ವಾಮಿಜಿ ಹೊರಡುವುದಕ್ಕೆ ಸಿದ್ಧರಾಗಲು ಮಾತಾಜಿ ಪಾಠಶಾಲೆಯ ವಿಚಾರವಾಗಿ ದರ್ಶಕರು ಅಭಿಪ್ರಾಯಗಳನ್ನು ಬರೆದಿಡುವುದಕ್ಕಾಗಿ ಇಟ್ಟಿದ್ದ ಪುಸ್ತಕದಲ್ಲಿ ತಮ್ಮ ಅಭಿಪ್ರಾಯಗಳನ್ನು ಬರೆದಿಡುವಂತೆ ಸ್ವಾಮಿಗಳನ್ನು ಕೇಳಿ ಕೊಂಡರು. ಸ್ವಾಮಿಜಿ ಈ ದರ್ಶಕರ ಪುಸ್ತಕದಲ್ಲಿ ತಮ್ಮ ಅಭಿಪ್ರಾಯ ವನ್ನು ವಿಸ್ತಾರವಾಗಿ ಬರೆದಿಟ್ಟರು. ಬರೆದ ವಿಷಯದಲ್ಲಿ ಕೊನೆಯ ಪಂಕ್ತಿಯು ಶಿಷ್ಯನಿಗೆ ಈಗಲೂ ಮನಸ್ಸಿನಲ್ಲಿ ನಿಂತಿದೆ. ಅದೇನೆಂದರೆ– ಕೆಲಸ ಸರಿಯಾದ ಮಾರ್ಗದಲ್ಲಿದೆ.

ಅನಂತರ ಮಾತಾಜಿಗೆ ಅಭಿವಾದನ ಮಾಡಿದಮೇಲೆ ಸ್ವಾಮಿಜಿ ಮತ್ತೆ ಗಾಡಿಯೊಳಗೆ ಕುಳಿತುಕೊಂಡು ಸ್ತ್ರೀಶಿಕ್ಷಣ ಸಂಬಂಧವಾಗಿ ನಾನಾ ಕಥೋಪಕಥನಗಳನ್ನು ಮಾಡುತ್ತ ಮಾಡುತ್ತ ಬಾಗಬಜಾರಿನ ಕಡೆಗೆ ಹೊರಟರು. ಈ ಕೆಳಗೆ ಬರೆದಿರುವುದು ಅದರ ಅಲ್ಪಸ್ವಲ್ಪ ವಿವರಣೆ.

ಸ್ವಾಮಿಜಿ :—ಈಕೆಯು (ಮಾತಾಜಿ) ಹುಟ್ಟಿದ್ದು, ಎಲ್ಲಿ!– ಸರ್ವಸ್ವ ವನ್ನೂ ತ್ಯಾಗಮಾಡಿದ್ದಾಳೆ– ಆದರೆ ಲೋಕಹಿತಾರ್ಥವಾಗಿ ಎಷ್ಟು ಪ್ರಯತ್ನ!– ಹೆಂಗಸರಲ್ಲದಿದ್ದರೆ ಹುಡುಗಿಯರಿಗೆ ಹೀಗೆ ಶಿಕ್ಷೆ ಕೊಡುವುದ ಕ್ಕಾಗುತ್ತದೆಯೇನು? ನಾನು ನೋಡಿದ್ದು ಎಲ್ಲಾ ಚೆನ್ನಾಗಿತ್ತು; ಆದರೆ ಕೆಲವು ಸಂಸಾರಿಗಳಾದ ಗಂಡಸರು ಮೇಸ್ಟರುಗಳಾಗಿದ್ದಾರಲ್ಲಾ– ಇದು

ಮಾತ್ರ ಚೆನ್ನಾಗಿ ತೋರುವುದಿಲ್ಲ. ಶಿಕ್ಷಿತರಾದ ವಿಧವೆಯರು ಮತ್ತು ಬ್ರಹ್ಮಚಾರಿಣಿಯರು ಇವರ ಮೇಲೆಯೆ ಪಾಠಶಾಲೆಯ ಶಿಕ್ಷಣದ ಭಾರವನ್ನು ಪೂರ್ತಿಯಾಗಿ ಹಾಕುವುದು ಉಚಿತ. ಈ ದೇಶದಲ್ಲಿ ಸ್ತ್ರೀವಿದ್ಯಾಲಯದಲ್ಲಿ ಗಂಡಸರನ್ನು ಸೇರಿಸದೆ ಇರುವುದೆ ಒಳ್ಳೆಯದು.

ಶಿಷ್ಯ :—ಆದರೆ, ಮಹಾಶಯರೆ, ಗಾರ್ಗಿ, ಖನಾ, ಲೀಲಾವತಿ ಇವರ ಹಾಗೆ ಗುಣವತಿಯರಾದ ಶಿಕ್ಷಿತ ಸ್ತ್ರೀಯರು ದೇಶದಲ್ಲಿ ಎಲ್ಲಿ ಸಿಕ್ಕುತ್ತಾರೆ?

ಸ್ವಾಮಿಜಿ :—ದೇಶದಲ್ಲಿಯೇನು ಈಗಲೂ ಇಂಥ ಹೆಂಗಸರಿಲ್ಲವೆ? ಈ ಸೀತಾಸಾವಿತ್ರಿಯರ ದೇಶದಲ್ಲಿ ಪುಣ್ಯಕ್ಷೇತ್ರವಾದ ಭರತಖಂಡದಲ್ಲಿ, ಈಗಲೂ ಹೆಂಗಸರಲ್ಲಿ ಎಂಥ ಗುಣ, ಸೇವಾಭಾವ, ಸ್ನೇಹ, ದಯೆ, ತೃಪ್ತಿ ಮತ್ತು ಭಕ್ತಿ ಇವು ಕಂಡುಬರುತ್ತವೆಯೊ ಅವು ಅಷ್ಟರ ಮಟ್ಟಿಗೆ ಪೃಥ್ವಿಯಲ್ಲಿ ಮತ್ತೆಲ್ಲಿಯೂ ಇರುವುದನ್ನು ನಾನು ನೋಡಿಲ್ಲ. ಆ ಪಾಶ್ಚಾತ್ಯ ದೇಶದ ಹೆಂಗಸರನ್ನು ನೋಡಿದರೆ ಅನೇಕವೇಳೆ ನನಗೆ ಅವರು ಹೆಂಗಸರೆಂದೇ ಹೇಳುವುದಕ್ಕಾಗುವುದಿಲ್ಲ. ಅವರು ಮಾಡುವ ಕೆಲಸಗಳು ಎಲ್ಲಾ ಗಂಡಸರ ಹಾಗೆಯೆ! ಗಾಡಿ ಹೊಡೆಯುತ್ತಾರೆ, ಆಫೀಸಿಗೆ ಹೋಗುತ್ತಾರೆ, ಸ್ಕೂಲಿಗೆ ಹೋಗುತ್ತಾರೆ, ಪ್ರೊಫೆಸರಿ ಕೆಲಸ ಮಾಡುತ್ತಾರೆ! ಭರತಖಂಡ ಒಂದರಲ್ಲಿ ಮಾತ್ರ ಹೆಂಗಸರ ಲಜ್ಜೆ ವಿನಯ ಮುಂತಾದುವುಗಳನ್ನು ನೋಡಿ ಕಣ್ಣುಗಳು ಸಮಾಧಾನಗೊಳ್ಳುತ್ತವೆ. ಇಂಥ ಆಧಾರಗಳೆಲ್ಲಾ ಇದ್ದರೂ ನೀವು ಇವರನ್ನು ಉನ್ನತರನ್ನಾಗಿ ಮಾಡಲಾರದೆ ಹೋದಿರಿ! ಇವರಿಗೆ ಜ್ಞಾನಾಲೋಕವನ್ನು ಕೊಡುವುದಕ್ಕೆ ಪ್ರಯತ್ನ ಮಾಡಲಿಲ್ಲ! ಸರಿಯಾದ ಶಿಕ್ಷಣವನ್ನು ಪಡೆದರೆ ಇವರು ಆದರ್ಶ ಸ್ತ್ರೀಯರಾಗಬಲ್ಲರು.

ಶಿಷ್ಯ :—ಮಹಾಶಯರೇ, ಮಾತಾಜಿಯು ವಿದ್ಯಾರ್ಥಿನಿಯರಿಗೆ ಯಾವ ರೀತಿಯಲ್ಲಿ ಜ್ಞಾನಶಿಕ್ಷಣವನ್ನು ಕೊಡುತ್ತಿದ್ದಾರೆಯೊ ಅದರಿಂದ ಇಂಥ ಫಲವಾಗುವುದೇನು? ಈ ಹುಡುಗಿಯರೆಲ್ಲಾ ದೊಡ್ಡವರಾಗಿ ಮದುವೆಮಾಡಿಕೊಳ್ಳುತ್ತಾರೆ, ಅದಾದಮೇಲೆ ಇನ್ನೂ ಸ್ವಲ್ಪಕಾಲಕ್ಕೆ ಮಿಕ್ಕ ಹೆಂಗಸರಹಾಗೇ ಆಗಿಬಿಡುತ್ತಾರೆ. ಇವರು ಬ್ರಹ್ಮಚರ್ಯವನ್ನು ಅವಲಂಬಿಸುವಂತೆ ಮಾಡಬಲ್ಲರಾದರೆ, ಇವರು ಸಮಾಜದ ಮತ್ತು ದೇಶದ ಉನ್ನತಿಗಾಗಿ ಜೀವನವನ್ನು ಧಾರೆಯೆರೆಯುವುದಕ್ಕೂ ಮತ್ತು ಶಾಸ್ತ್ರೋಕ್ತ

ನಾದ ಉಚ್ಚಾಭದರ್ಶವನ್ನು ಸಾಧಿಸುವುದಕ್ಕೂ ಸಮರ್ಥರಾಗಬಲ್ಲರೆಂದು ನನಗೆ ತೋರುತ್ತದೆ.

ಸ್ವಾಮಿಜಿ :—ಕ್ರಮೇಣ ಎಲ್ಲಾ ಆಗುತ್ತದೆ. ಸಮಾಜದಂಡನೆಗೆ ಹೆದರದೆ ತಮ್ಮ ಹೆಣ್ಣುಮಕ್ಕಳನ್ನು ಮದುವೆಮಾಡದೆ ನಿಲ್ಲಿಸಿಕೊಳ್ಳುವಷ್ಟು ಶಿಕ್ಷಿತರಾದ ಜನರು ದೇಶದಲ್ಲಿ ಇನ್ನೂ ಹುಟ್ಟಿಲ್ಲ. ಇದನ್ನೇ ನೋಡು—ಈಗಲೂ ಹುಡುಗಿಯರಿಗೆ ಹನ್ನೆರಡು ಹದಿಮೂರು ವರ್ಷ ತುಂಬಿತೋ ತುಂಬಲಿಲ್ಲವೋ ಆಗಲೇ ಲೋಕಕ್ಕೆ ಹೆದರಿಕೊಂಡು, ಸಮಾಜಕ್ಕೆ ಹೆದರಿಕೊಂಡು, ಅವರಿಗೆ ಮದುವೆಮಾಡಿಬಿಡುತ್ತಾರೆ. ಆ ದಿವಸ ಸಮ್ಮತಿಯ ಮೇಲೆ ಕಾಯಿದೆಯು ಏರ್ಪಾಡಾಗಬೇಕಾದಾಗ ಸಮಾಜದ ಮುಖಂಡರಾದ ಲಕ್ಷೋಪಲಕ್ಷ ಜನರು ಸೇರಿಕೊಂಡು 'ನಮಗೆ ಕಾಯಿದೆ ಬೇಡ!' ಎಂದು ಅರಚಿಕೊಂಡರು—ಮತ್ತೊಂದು ದೇಶವಾಗಿದ್ದರೆ, ಸಭೆಮಾಡಿ ಅರಚಿಕೊಳ್ಳುವುದು ಹಾಗಿರಲಿ, ನಾಚಿಕೆಯಿಂದ ಮುಖವನ್ನು ತಗ್ಗಿಸಿಕೊಂಡು ಜನರು ಮನೆಯಲ್ಲಿ ಕುಳಿತುಕೊಂಡಿರುತ್ತಿದ್ದರು. ಮತ್ತು ನಮ್ಮ ಸಮಾಜದಲ್ಲಿ ಈಗಲೂ ಇಂಥ ಕಳಂಕವಿದೆಯಲ್ಲಾ ಎಂದುಕೊಳ್ಳುತ್ತಿದ್ದರು.

ಶಿಷ್ಯ :—ಹಾಗಾದರೆ, ಮಹಾಶಯರೆ, ಸಂಹಿತಾಕಾರರು ಸ್ವಲ್ಪವೂ ಯೋಚಿಸದೆ ಬಾಲ್ಯ ವಿವಾಹವನ್ನು ಅನುಮೋದಿಸಿದ್ದಾರೆಯೇನು? ಖಂಡಿತವಾಗಿಯೂ ಅದರೊಳಗೆ ಏನೋ ರಹಸ್ಯವಿದೆ.

ಸ್ವಾಮಿಜಿ :—ಏನು ರಹಸ್ಯವಿದೆ?

ಶಿಷ್ಯ :—ಇದನ್ನೇ ನೋಡಿ; ಅಲ್ಪ ವಯಸ್ಸಿನಲ್ಲಿ ಹೆಂಗಸರಿಗೆ ಮದುವೆ ಮಾಡಿದರೆ ಅವರು ಗಂಡನಮನೆಗೆ ಬಂದು ಕುಲಧರ್ಮಗಳನ್ನು ಬಾಲ್ಯ ಕಾಲದಲ್ಲಿಯೇ ಕಲಿತುಕೊಳ್ಳಬಹುದು. ಅತ್ತೆಮಾವಂದಿರ ಆಶ್ರಯದಲ್ಲಿದ್ದು ಗೃಹಕೃತ್ಯದಲ್ಲಿ ನಿಪುಣರಾಗಬಹುದು. ಮತ್ತು ಅದರಿಂದ ಲಜ್ಜೆ, ಸಹಿಷ್ಣುತೆ, ಶ್ರಮಶೀಲತೆ ಮುಂತಾದ ಸ್ತ್ರೀಯರಿಗೆ ಅನುರೂಪವಾದ ಗುಣಗಳು ಹೊರಹೊಮ್ಮುತ್ತವೆ. ತವರು ಮನೆಯಲ್ಲಿ ವಯಸ್ಸಾದ ಹುಡುಗಿಯು ದಾರಿತಪ್ಪಿ ಹೋಗುವುದಕ್ಕೆ ಹೆಚ್ಚು ಅವಕಾಶವಿದೆ;

ಸ್ವಾಮಿಜಿ :—ಹಾಗೆಯೇ ಎದುರು ಪಕ್ಷದ ಪರವಾಗಿಯೂ ಹೇಳಬಹುದೇನೆಂದರೆ :—ಬಾಲ್ಯವಿವಾಹದಿಂದ ಹೆಂಗಸರು ಅಕಾಲದಲ್ಲಿ ಸಂತಾನವನ್ನು ಪಡೆದು, ಅನೇಕರು ಮೃತ್ಯುವಿನ ಬಾಯಿಗೆ ಬೀಳುವರು; ಅವರ ಮಕ್ಕಳುಮರಿಗಳೂ ಕ್ಷೀಣಜೀವಿಗಳಾಗಿ ದೇಶದ ತಿರುಕರ ಸಂಖ್ಯೆ

ಯನ್ನು ಹೆಚ್ಚಿಸುವರು. ಏಕೆಂದರೆ ತಾಯಿತಂದೆಗಳ ಶರೀರವು ಸಂಪೂರ್ಣವಾಗಿ ಸಾಮರ್ಥ್ಯವನ್ನೂ ಬಲವನ್ನೂ ಪಡೆದಹೊರತು ಆರೋಗ್ಯ ದೃಢಕಾಯರಾದ ಮಕ್ಕಳು ಹೇಗೆ ಹುಟ್ಟುವರು? ವಿದ್ಯೆಯನ್ನು ಕಲಿತು ಸ್ವಲ್ಪ ವಯಸ್ಸಾದಮೇಲೆ ಮದುವೆಮಾಡಿಕೊಳ್ಳುವ ಹೆಂಗಸರ ಹೊಟ್ಟೆಯಲ್ಲಿ ಯಾವ ಮಕ್ಕಳು ಹುಟ್ಟುತ್ತಾರೆಯೊ ಅವರಿಂದ ದೇಶಕ್ಕೆ ಕಲ್ಯಾಣವಾಗುತ್ತದೆ. ನಿಮ್ಮ ಮನೆಮನೆಗೂ ಇಷ್ಟು ವಿಧವೆಯರು ಇರುವುದಕ್ಕೆ ಕಾರಣವೆ ಇದು—ಈ ಬಾಲ್ಯವಿವಾಹ. ಬಾಲ್ಯವಿವಾಹವು ಕಡಿಮೆಯಾಗಿ ಹೋದರೆ ವಿಧವೆಯರ ಸಂಖ್ಯೆಯೂ ಕಡಿಮೆಯಾಗಿಹೋಗುತ್ತದೆ.

ಶಿಷ್ಯ:— ಆದರೆ, ಮಹಾಶಯರೆ, ವಯಸ್ಸಾದಮೇಲೆ ಮದುವೆ ಮಾಡಿದರೆ ಹೆಂಗಸರು ಮನೆಯ ಕೆಲಸಗಳಿಗೆ ಅಷ್ಟು ಮನಸ್ಸು ಕೊಡುವುದಿಲ್ಲವೆಂದು ತೋರುತ್ತದೆ. ಕಲ್ಕತ್ತೆಯ ಅನೇಕ ಮನೆಗಳಲ್ಲಿ ಅತ್ತೆಯರು ಅಡಿಗೆ ಮಾಡುತ್ತಾರೆಂದೂ ಮತ್ತು ವಿದ್ಯಾವಂತೆಯರಾದ ಸೊಸೆಯರು ಕಾಲಿಗೆ ಅರಗಿನ ರಸವನ್ನು ಹಚ್ಚಿಸಿಕೊಂಡು ಕುಳಿತಿರುತ್ತಾರೆಂದೂ ಕೇಳಿದ್ದೇನೆ. ನಮ್ಮ ಪೂರ್ವ ಬಂಗಾಳಾದೇಶದಲ್ಲಿ ಹೀಗೆ ಎಂದಿಗೂ ಆದದ್ದಿಲ್ಲ.

ಸ್ವಾಮಿಜಿ:—ಒಳ್ಳೆಯದು ಕೆಟ್ಟದು ಎಲ್ಲಾ ದೇಶದಲ್ಲಿಯೂ ಇರುತ್ತದೆ. ನಮ್ಮದರಂಥ ಸಮಾಜವು ಸಕಲ ದೇಶಗಳಲ್ಲಿಯೂ ತನ್ನಷ್ಟಕ್ಕೆ ತಾನೇ ಉಂಟಾಗುತ್ತದೆ. ಅದಕ್ಕೋಸ್ಕರನೆ, ಬಾಲ್ಯವಿವಾಹವನ್ನು ಕಿತ್ತು ಹಾಕುವುದು ವಿಧವೆಯರಿಗೆ ಮದುವೆ ಮಾಡುವುದು ಮುಂತಾದ ವಿಷಯಗಳನ್ನು ತೆಗೆದುಕೊಂಡು ನಾವು ತಲೆಚಚ್ಚಿಕೊಳ್ಳಬೇಕಾದದ್ದಿಲ್ಲ. ನಮ್ಮ ಕೆಲಸವೇನೆಂದರೆ, ಹೆಂಗಸರು ಗಂಡಸರು ಸಮಾಜ ಎಲ್ಲಕ್ಕೂ ಶಿಕ್ಷಣವನ್ನು ಕೊಡುವುದು; ಆ ಶಿಕ್ಷಣದ ಫಲದಿಂದ ಅವರು ತಾವೆ ಯಾವುದು ಒಳ್ಳೆಯದು ಯಾವುದು ಕೆಟ್ಟದ್ದು ಎಂದು ಎಲ್ಲವನ್ನು ತಿಳಿದುಕೊಳ್ಳಲು ಸಮರ್ಥರಾಗುತ್ತಾರೆ, ಮತ್ತು ತಾವೆ ಕೆಟ್ಟದ್ದು ಮಾಡುವುದನ್ನು ಬಿಟ್ಟುಬಿಡುತ್ತಾರೆ. ಆವಾಗ ಸಮಾಜದ ಯಾವದೊಂದು ವಿಚಾರವನ್ನೂ ಬಲವಂತವಾಗಿ ಕಿತ್ತುಹಾಕಿ ಬದಲಾವಣೆ ಮಾಡಬೇಕಾಗಿಲ್ಲ.

ಶಿಷ್ಯ:—ಹೆಂಗಸರಿಗೆ ಈಗ ಎಂಥ ಶಿಕ್ಷಣ ಆವಶ್ಯಕವಾದದ್ದು?

ಸ್ವಾಮಿಜಿ:—ಧರ್ಮ, ಶಿಲ್ಪ, ವಿಜ್ಞಾನ, ಗೃಹಕೃತ್ಯ, ಅಡಿಗೆ ಹೊಲಿಗೆ ಶರೀರಪಾಲನ—ಈ ವಿಷಯಗಳನ್ನು ಸುಮಾರಾಗಿ ಹೆಂಗಸರಿಗೆ ಹೇಳಿಕೊಡು

ವುದು ಉಚಿತ. ನಾವೆಲ್ ನಾಟಕಗಳನ್ನು ಅವರ ಕೈಗೆ ಕೊಡುವುದು ಉಚಿತವಲ್ಲ. ಮಹಾಕಾಳೀ ಪಾಠಶಾಲೆ ಬಹುಮಟ್ಟಿಗೆ ಸರಿಯಾದ ದಾರಿಯಲ್ಲಿ ಹೋಗುತ್ತಿದೆ; ಆದರೆ ಬರಿಯ ಪೂಜಾಪದ್ಧತಿಯನ್ನು ಹೇಳಿಕೊಟ್ಟರೇ ಸಾಲದು; ಎಲ್ಲಾ ವಿಷಯಗಳಲ್ಲಿಯೂ ಕಣ್ಣುತೆರೆಯುವಂತೆ ಮಾಡಬೇಕು. ಆದರ್ಶನಾರಿಯರ ಚರಿತ್ರೆಗಳನ್ನು ವಿದ್ಯಾರ್ಥಿನಿಯರ ಮುಂದೆ ಸರ್ವದಾ ಇಟ್ಟು ಉಚ್ಚತ್ಯಾಗ ರೂಪವಾದ ವ್ರತದಲ್ಲಿ ಅವರಿಗೆ ಅನುರಾಗ ಹುಟ್ಟುವಂತೆ ಮಾಡಬೇಕು. ಸೀತೆ, ಸಾವಿತ್ರಿ, ದಮಯಂತಿ, ಲೀಲಾವತಿ, ಖನಾ, ಮೀರಾ – ಇವರ ಜೀವನಚರಿತ್ರೆಯನ್ನು ಹೆಂಗಸರಿಗೆ ತಿಳಿಯಪಡಿಸಿ ತಮ್ಮ ಜೀವನಗಳನ್ನೂ ಹೀಗೆಯೆ ನಡೆಸಿಕೊಂಡು ಬರಬೇಕೆಂದು ಹೇಳಬೇಕು.

ಗಾಡಿ ಈಗ ಬಾಗಬಜಾರಿನ ಬಲರಾಮ ಬಸು ಮಹಾಶಯರ ಮನೆಗೆ ತಲಪಿತು. ಸ್ವಾಮಿಜಿ ಗಾಡಿಯಿಂದ ಇಳಿದು ಮೇಲಕ್ಕೆ ಹೋಗಿ ಅವರ ದರ್ಶನ ತೆಗೆದುಕೊಳ್ಳುವುದಕ್ಕೆಂದು ಅಲ್ಲಿಗೆ ಬಂದಿದ್ದವರಿಗೆ ಮಹಾ ಕಾಳೀ ಪಾಠಶಾಲೆಯ ವೃತ್ತಾಂತವನ್ನು ಆದ್ಯಂತವಾಗಿ ತಿಳಿಸಿದರು.

ಆಮೇಲೆ ಹೊಸದಾಗಿ ಏರ್ಪಡಿಸಿದ "ರಾಮಕೃಷ್ಣಮಿಷನ್" ನ ಸಭ್ಯರು ಯಾವ ಯಾವ ಕಾರ್ಯವನ್ನು ಕೈಗೊಳ್ಳಬೇಕೆಂಬ ವಿಷಯವನ್ನು ವಿಚಾರಮಾಡುತ್ತ ಮಾಡುತ್ತಾ "ವಿದ್ಯಾದಾನ" ಮತ್ತು "ಜ್ಞಾನದಾನ" ದ ಶ್ರೇಷ್ಠತ್ವವನ್ನು ನಾನಾ ವಿಧವಾಗಿ ಪ್ರತಿಪಾದನ ಮಾಡುತ್ತ ಹೋದರು. ಶಿಷ್ಯನ ಕಡೆಗೆ ಲಕ್ಷ್ಯಕೊಟ್ಟು "ವಿದ್ಯೆಕಲಿಸಿ, ವಿದ್ಯೆಕಲಿಸಿ! – ನಾನ್ಯಃಪಂಥಾ ವಿದ್ಯತೇಽಯನಾಯ" ಎಂದರು. ವಿದ್ಯಾದಾನಕ್ಕೆ ವಿರೋಧಿಗಳಾದವರ ಕಡೆಗೆ ನೋಡುತ್ತ "ಪ್ರಹ್ಲಾದನ ಗುಂಪಿಗೆ ಸೇರಿಲ್ಲವಲ್ಲ." ಎಂದರು. ಈ ಮಾತಿಗೆ ಅರ್ಥವೇನೆಂದು ಕೇಳಲು "ಕೇಳಿಲ್ಲವೇ? 'ಕ' ಎಂಬ ಅಕ್ಷರವನ್ನು ನೋಡಿದೊಡನೆಯೆ ಪ್ರಹ್ಲಾದನಿಗೆ ಕಣ್ಣಿನಲ್ಲಿ ನೀರು ಬಂತು – ಇನ್ನು ಓದುವುದು ಕೇಳುವುದು ಹೇಗೆ ನಡೆದೀತು? ಪ್ರಹ್ಲಾದನ ಕಣ್ಣಿನಲ್ಲಿ ನೀರುಬಂದದ್ದು ನಿಸ್ಸಂದೇಹವಾಗಿಯೂ ಆನಂದದಿಂದ. ಆದರೆ ಮೂರ್ಖರ ಕಣ್ಣಿನಲ್ಲಿ ಭಯದಿಂದ ಸುರಿಯುತ್ತಿರುತ್ತಿದೆ." ಎಂದು ಉತ್ತರಕೊಟ್ಟರು. ಭಕ್ತರಲ್ಲಿಯೂ ಅನೇಕರು ಇಂಥವರು ಇದ್ದಾರೆ? ಎಲ್ಲರೂ ಈ ಮಾತನ್ನು ಕೇಳಿ ನಗುವುದಕ್ಕೆ ತೊಡಗಿದರು. ಯೋಗಾನಂದ ಸ್ವಾಮಿಗಳು ಈ ಮಾತನ್ನು ಕೇಳಿ "ನಿನ್ನ ಮನಸ್ಸು ಯಾವ ವಿಷಯದ ಕಡೆ ತಿರುಗುತ್ತದೆಯೊ ಅದು ಉಂಟು ಇಲ್ಲವೆಂಬುದು

ತಿಳಿಯುವವರೆಗೆ ನಿನಗೆ ಶಾಂತಿ ಇರದು – ಈಗ್ಗೆ ನಿನ್ನ ಇಷ್ಟಯಾವುದೊ ಅದೇ ನಡೆದು ಹೋಗುತ್ತದೆ '' ಎಂದರು.

---

## ಅಧ್ಯಾಯ ೧೦

**ಸ್ಥಾನ :— ಕಲ್ಕತ್ತ. ವರ್ಷ :— ಕ್ರಿ. ಶ. ೧೮೯೭.**

ಇಂದಿಗೆ ಹತ್ತುದಿನದಿಂದ ಶಿಷ್ಯನು ಸ್ವಾಮಿಜಿ ಹತ್ತಿರ ಋಗ್ವೇದಕ್ಕೆ ಸಾಯಣ ಭಾಷ್ಯವನ್ನು ಓದುತ್ತಿದ್ದಾನೆ. ಸ್ವಾಮಿಜಿ ಬಾಗಬಜಾರಿನಲ್ಲಿ ಬಲರಾಮ ಬಸುಗಳ ಮನೆಯಲ್ಲಿರುತ್ತಿದ್ದಾರೆ. ಮ್ಯಾಕ್ಸ್‌ಮುಲ್ಲರ್‌ನಿಂದ ಮುದ್ರಿತವಾದ, ಬಹು ಸಂಪುಟಗಳುಳ್ಳ, ಋಗ್ವೇದ ಗ್ರಂಥವೊಂದನ್ನು ಯಾರೋ ಒಬ್ಬ ದೊಡ್ಡ ಮನುಷ್ಯರ ಮನೆಯಿಂದ ತಂದಿತ್ತು. ಹೊಸ ಗ್ರಂಥ, ಅದರಲ್ಲಿಯೂ ವೈದಿಕಭಾಷೆ; ಆದ್ದರಿಂದ ಓದುತ್ತ ಓದುತ್ತ ಶಿಷ್ಯನಿಗೆ ಅನೇಕ ಕಡೆಗಳಲ್ಲಿ ತಡೆಯಾಗುತ್ತಿತ್ತು, ಅದನ್ನು ಕಂಡು ಸ್ವಾಮಿಜಿ ಸ್ನೇಹಪೂರ್ವಕವಾಗಿ ಆಗಾಗ್ಗೆ 'ಬಾಂಗಾಲ್' ಯೆಂದು ಹಾಸ್ಯ ಮಾಡುತ್ತಿದ್ದರು. ಮತ್ತು ಈ ಸ್ಥಳಗಳಲ್ಲಿ ಉಚ್ಚಾರಣ ಪಾಠಗಳನ್ನು ಹೇಳಿಕೊಡುತ್ತಿದ್ದರು. ವೇದದ ಅನಾದಿತ್ವವನ್ನು ಸ್ಥಾಪಿಸುವುದಕ್ಕೆ ಸಾಯಣಾಚಾರ್ಯರು ತಮ್ಮ ಯಾವ ಅದ್ಭುತ ಬುದ್ಧಿ ಕೌಶಲ್ಯವನ್ನು ತೋರಿಸಿದ್ದಾರೆಯೊ ಅದರ ಮೇಲೆ ಸ್ವಾಮಿಜಿ ವ್ಯಾಖ್ಯಾನಮಾಡುತ್ತ ಮಾಡುತ್ತ ಕೆಲವುವೇಳೆ ಭಾಷ್ಯಕಾರರನ್ನು ಬಹಳವಾಗಿ ಹೊಗಳುತ್ತಿದ್ದರು; ಮತ್ತೆ ಕೆಲವೆಡೆ ಪ್ರಮಾಣ ಪ್ರಯೋಗದಲ್ಲಿ ಅಥವಾ ಪದದ ಗೂಡಾರ್ಥನಿಚಾರವಾಗಿ ತಮ್ಮ ಅಭಿಪ್ರಾಯವು ಬೇರೆಯಾಗಿರುವುದನ್ನು ತಿಳಿಸಿ ಸಾಯಣಾಚಾರ್ಯರನ್ನು ವಿನೋದವಾಗಿ ಹಾಸ್ಯಮಾಡುತ್ತಿದ್ದರು.

ಹೀಗೆ ಸ್ವಲ್ಪಹೊತ್ತು ಪಾಠ ನಡೆದ ಬಳಿಕ ಸ್ವಾಮಿಜಿ ಮ್ಯಾಕ್ಸ್‌ಮುಲ್ಲರ್‌ನ ಪ್ರಸ್ತಾಪವನ್ನು ಎತ್ತಿ ಹೀಗೆಂದು ಹೇಳಿದರು :— '' ನನಗೆ ಏನು ತೋರುತ್ತದೆ ಬಲ್ಲೆಯಾ ? ಸಾಯಣರೆ ತಮ್ಮ ಭಾಷ್ಯವನ್ನು ತಾವೆ ಸ್ವಂತವಾಗಿ ಉದ್ಧಾರಮಾಡುವುದಕ್ಕಾಗಿ ಮ್ಯಾಕ್ಸ್‌ಮುಲ್ಲರ್‌ನ ರೂಪದಲ್ಲಿ ಪುನಃ ಹುಟ್ಟಿರಬೇಕು ; ನನಗೆ ಬಹುದಿನದಿಂದಲೂ ಈ ಅಭಿಪ್ರಾಯವಿದೆ.

ಮ್ಯಾಕ್ಸ್‌ಮುಲ್ಲರನ್ನು ನೋಡಿ ಆ ಅಭಿಪ್ರಾಯ ಮತ್ತಷ್ಟು ದೃಢವಾದಂತಾಯಿತು. ಅಂಥ ಅಧ್ಯವಸಾಯವುಳ್ಳ, ವೇದವೇದಾಂತಸಿದ್ಧ ಪಂಡಿತರು ಈ ದೇಶದಲ್ಲಿಯೂ ಕಂಡು ಬರುವುದಿಲ್ಲ. ಇದರ ಜೊತೆಗೆ ಪರಮಹಂಸರ ಮೇಲೆ ಎಂಥ ಅಗಾಧ ಭಕ್ತಿ! ಅವರನ್ನು ಅವತಾರವೆಂದು ನಂಬುತ್ತಿದ್ದನಯ್ಯ! ಮನೆಯಲ್ಲಿ ಅತಿಥಿಯಾಗಿದ್ದೆ— ಏನು ಆದರ ಉಪಚಾರಗಳನ್ನು ಮಾಡಿದರು! ಆ ಮುದುಕ ಮುದುಕಿಯರನ್ನು ನೋಡಿದಾಗ ವಸಿಷ್ಠ ಅರುಂಧತಿಯರಂತೆ ಇಬ್ಬರೂ ಸಂಸಾರ ಮಾಡಿಕೊಂಡಿದ್ದ ಹಾಗೆ ತೋರಿತು— ನನಗೆ ಹೊರಡುವುದಕ್ಕೆ ಅಪ್ಪಣೆಯನ್ನು ಕೊಟ್ಟಾಗ ಆ ವೃದ್ಧನ ಕಣ್ಣಿನಲ್ಲಿ ನೀರುಬಂತು!''

ಶಿಷ್ಯ:— ಒಳ್ಳೆಯದು ಮಹಾಶಯರೆ, ಸಾಯಣರೆ ಮ್ಯಾಕ್ಸ್‌ಮುಲ್ಲರ್ ಆಗಿದ್ದರೆ ಪುಣ್ಯಭೂಮಿಯಾದ ಭರತಖಂಡದಲ್ಲಿ ಹುಟ್ಟದೆ ಮ್ಲೇಚ್ಛರಾಗಿ ಏಕೆ ಹುಟ್ಟಿದರು?

ಸ್ವಾಮಿಜಿ:—ಅಜ್ಞಾನದಿಂದಲೆ ಮನುಷ್ಯನು "ನಾನು ಆರ್ಯ, ಅವನು ಮ್ಲೇಚ್ಛ" ಮುಂತಾಗಿ ಭಾವಿಸಿಕೊಳ್ಳುವನು ಮತ್ತು ಭೇದಮಾಡುವನು. ಆದರೆ ಯಾರು ವೇದದ ಭಾಷ್ಯಕಾರರೊ, ಜ್ಞಾನದ ಉಜ್ವಲ ಮೂರ್ತಿಗಳೊ, ಅವರ ವಿಚಾರದಲ್ಲಿ ವರ್ಣಾಶ್ರಮ, ಜಾತಿ ವಿಭಾಗ ಇದೆಲ್ಲಾ ಏನು?—ಅವರ ಬಳಿಯಲ್ಲಿ ಅದೆಲ್ಲಾ ಸಂಪೂರ್ಣವಾಗಿ ಅರ್ಥಶೂನ್ಯವಾದದ್ದು. ಜೀವರ ಉಪಕಾರಕ್ಕೋಸ್ಕರ ಅವರು ಹೇಗೆ ಮನಸ್ಸುಬಂದರೆ ಹಾಗೆ ಹುಟ್ಟಲು ಸಮರ್ಥರು. ಅದರಲ್ಲಿಯೂ ಯಾವದೇಶದಲ್ಲಿ ವಿದ್ಯೆ ಮತ್ತು ಸಂಪತ್ತು ಇವೆರಡೂ ಇವೆಯೊ ಅಲ್ಲಿ ಹುಟ್ಟದಿದ್ದರೆ ಈ ದೊಡ್ಡ ಗ್ರಂಥವು ಅಚ್ಚಾಗುವುದಕ್ಕೆ ಬೇಕಾದ ಖರ್ಚನ್ನು ತರುವುದು ಎಲ್ಲಿ? ಕೇಳಿಲ್ಲವೆ? ಈಸ್ಟ್ ಇಂಡಿಯಾ ಕಂಪನಿಯವರು ಈ ಋಗ್ವೇದವನ್ನು ಅಚ್ಚುಮಾಡಿಸುವುದಕ್ಕೆ ಒಂಬತ್ತು ಲಕ್ಷ ರೂಪಾಯಿಗಳನ್ನು ನಗದಾಗಿ ಕೊಟ್ಟರು. ಅದೂ ಸಾಲದೆ ಈ ದೇಶದಲ್ಲಿ ನೂರಾರು ಪಂಡಿತರುಗಳಿಗೆ ಮಾಸಾಶನಗಳನ್ನು ಕೊಟ್ಟು ಈ ಕಾರ್ಯಕ್ಕೆ ನಿಯಮಿಸಬೇಕಾಯಿತು. ವಿದ್ಯಾ ಮತ್ತು ಜ್ಞಾನ ಇವುಗಳಿಗಾಗಿ ಹೀಗೆ ಯಥೇಚ್ಛವಾಗಿ ಹಣವನ್ನು ಖರ್ಚುಮಾಡುವುದು, ಇಂಥ ಪ್ರಬಲವಾದ ಜ್ಞಾನ ತೃಷ್ಣೆ ಇವುಗಳನ್ನು ಈ ದೇಶದಲ್ಲಿ ಈ ಕಾಲದಲ್ಲಿ ಯಾರಾದರೂ ಎಲ್ಲಿಯಾದರೂ ನೋಡಿದ್ದಾರೆಯೇನು? ಮ್ಯಾಕ್ಸ್ ಮುಲ್ಲರ್ ತಾನೇ ಭೂಮಿಕೆಯಲ್ಲಿ ಹೀಗೆ ಬರೆದಿದ್ದಾನೆ:—

ಆತನು ೨೫ ವರ್ಷಕಾಲ ಕೇವಲ ಹಸ್ತಲಿಪಿಯನ್ನು ಬರೆಯುತ್ತಿದ್ದನಂತೆ; ಆಮೇಲೆ ಅಚ್ಚುಹಾಕಿಸುವುದಕ್ಕೆ ಇಪ್ಪತ್ತುವರ್ಷ ಹಿಡಿಯಿತಂತೆ; ೪೫ ವರ್ಷ ಒಂದು ಪುಸ್ತಕವನ್ನು ಈ ರೀತಿ ಹಿಡಿದುಕೊಂಡು ಕುಳಿತುಕೊಳ್ಳುವುದೆಂದರೆ ಅದು ಸಾಮಾನ್ಯ ಮನುಷ್ಯನ ಕೆಲಸವಲ್ಲ; ಇದರಿಂದಲೆ ತಿಳಿದುಕೊ! ಆತನು ಸಾಯಣರೆಂದು ಇನ್ನು ಹೇಳುವುದು ನನ್ನ ಇಚ್ಛೆ ಏನು?

ಮ್ಯಾಕ್ಸ್ ಮುಲ್ಲರ್‌ನ ಸಂಬಂಧದಲ್ಲಿ ಈ ವಿಧವಾಗಿ ಮಾತುಕಥೆಗಳು ನಡೆದಮೇಲೆ ಮತ್ತೆ ಗ್ರಂಥಪಾಠ ನಡೆಯುವುದಕ್ಕೆ ಮೊದಲಾಯಿತು. ಈಗ, ವೇದವನ್ನು ಅವಲಂಬಿಸಿಕೊಂಡೇ ಸೃಷ್ಟಿಯು ವಿಕಾಸವಾಯಿತೆಂಬೀ ಸಾಯಣರ ಮತವನ್ನು ಸ್ವಾಮಿಜಿ ಪೂರ್ತಿ ಸಮರ್ಥಿಸುವುದಕ್ಕೆ ಹೊರಟರು. ಅವರು ಹೇಳಿದ್ದೇನಂದರೆ:—"ವೇದ" ಎಂದರೆ ಅನಾದಿ ಸತ್ಯದ ಸಮಷ್ಟಿ, ವೇದಪಾರಂಗತರಾದ ಋಷಿಗಳು ಈ ಸತ್ಯಗಳನ್ನು ಪ್ರತ್ಯಕ್ಷಮಾಡಿಕೊಂಡರು; ಅತೀಂದ್ರಿಯ ದರ್ಶಿಗಳು ಹೊರತು ನಮ್ಮಂಥ ಸಾಧಾರಣ ಜನರ ದೃಷ್ಟಿಗೆ ಅವು ಪ್ರತ್ಯಕ್ಷವಾಗುವುದಿಲ್ಲ; ಅದಕ್ಕೋಸ್ಕರವೆ ವೇದದಲ್ಲಿ 'ಋಷಿ' ಶಬ್ದಕ್ಕೆ ಮಂತ್ರಾರ್ಥದ್ರಷ್ಟೃ (ಮಂತ್ರಾರ್ಥಗಳನ್ನು ಕಂಡವನು) ಎಂದು ಅರ್ಥ; ಯಜ್ಞೋಪವೀತ ಕತ್ತಿನಲ್ಲಿದ್ದ ಮಾತ್ರಕ್ಕೆ ಬ್ರಾಹ್ಮಣನಲ್ಲ; ಬ್ರಾಹ್ಮಣಾದಿ ಜಾತಿವಿಭಾಗವು ಆಮೇಲೆ ಆಯಿತು; ವೇದ ಶಬ್ದಾತ್ಮಕ ಎಂದರೆ ಭಾವಾತ್ಮಕ ಅಥವಾ ಅನಂತ ಭಾವರಾಶಿಯ ಸಮಷ್ಟಿಮಾತ್ರ; 'ಶಬ್ದ' ಪದಕ್ಕೆ ವೈದಿಕ ಪ್ರಾಚೀನ ಅರ್ಥ 'ಸೂಕ್ಷ್ಮಭಾವ' ಎಂದು; ಅದು ಆಮೇಲೆ ಸ್ಥೂಲಾಕಾರವನ್ನು ಪಡೆದು ತನ್ನನ್ನು ಪ್ರಕಾಶಕ್ಕೆ ತಂದುಕೊಳ್ಳುವುದು. ಆದ್ದರಿಂದ ಪ್ರಳಯವಾಗುವಾಗ ಮುಂದಿನ ಸೃಷ್ಟಿಯ ಸೂಕ್ಷ್ಮ ಬೀಜಗಳು ವೇದದಲ್ಲಿಯೆ ಅಡಗಿರುತ್ತವೆ. ಅದರಿಂದಲೆ ಪುರಾಣದಲ್ಲಿ ಮೊದಲು ಮತ್ಸ್ಯಾವತಾರದಿಂದ ವೇದೋದ್ಧಾರವಾಗಿರುವುದು ಕಂಡು ಬರುತ್ತದೆ. ಪ್ರಥಮಾವತಾರದಿಂದಲೆ ವೇದದ ಉದ್ಧಾರ ಸಾಧಿತವಾಯಿತು. ಆಮೇಲೆ ಅದೆ ವೇದದಿಂದಲೆ ಕ್ರಮವಾಗಿ ಸೃಷ್ಟಿ ವಿಕಾಸವಾಗತೊಡಗಿತು ಎಂದರೆ, ವೇದದಲ್ಲಿದ್ದ ಶಬ್ದವನ್ನು ಅವಲಂಬಿಸಿಕೊಂಡು ಪ್ರಪಂಚದ ಸಕಲ ಸ್ಥೂಲ ಪದಾರ್ಥಗಳಿಂದ ಒಂದೊಂದಾಗಿ ನಿರ್ಮಿತವಾಗುತ್ತ ಬಂದವು. ಏಕೆಂದರೆ, ಸಕಲ ಸ್ಥೂಲ ಪದಾರ್ಥಗಳ ಸೂಕ್ಷ್ಮರೂಪವೂ ಶಬ್ದ ಅಥವಾ ಭಾವವೇ ಆಗಿದೆ. ಹಿಂದುಹಿಂದಿನ ಕಲ್ಪಗಳಲ್ಲಿಯೂ ಹೀಗೇ ಸೃಷ್ಟಿಯಾಯಿತು. ಈ ಸಂಗತಿ ವೈದಿಕ ಸಂಧ್ಯಾವಂದನೆಯ ಮಂತ್ರದಲ್ಲಿಯೂ

ಇದೆ– 'ಸೂರ್ಯಾ ಚಂದ್ರಮಸೌಧಾತಾ ಯಥಾಪೂರ್ವಮಕಲ್ಪಯತ್ ಪೃಥಿವೀಂ ದಿವಂ ಚಾಂತರಿಕ್ಷಮಥೋ ಸ್ವಃ' ಗೊತ್ತಾಯಿತೆ?"

ಶಿಷ್ಯ:— ಆದರೆ ಮಹಾಶಯರೆ, ಯಾವ ಪದಾರ್ಥವೂ ಇಲ್ಲದಿದ್ದರೆ ಏತಕ್ಕೋಸ್ಕರ ಶಬ್ದ ಪ್ರಯೋಗಿಸಲ್ಪಡುತ್ತದೆ? ಮತ್ತು ಪದಾರ್ಥಗಳ ಹೆಸರು ತಾನೆ ಹೇಗೆ ಬರುತ್ತವೆ?

ಸ್ವಾಮಿಜಿ:— ಮೇಲು ಮೇಲೆ ನೋಡಿದರೆ ಅದೇ ಮನಸ್ಸಿಗೆ ಬರುತ್ತದೆ ನಿಜ; ಆದರೆ ನೋಡು; ಈ ಘಟ ಒಡೆದು ಹೋದರೆ ಘಟತ್ವ ನಾಶವಾಗಿ ಹೋಗುತ್ತದೆ ಏನು? ಇಲ್ಲ; ಏಕೆಂದರೆ ಘಟ ಸ್ಥೂಲ; ಆದರೆ ಘಟತ್ವ ಘಟದ ಸೂಕ್ಷ್ಮಾವಸ್ಥೆ ಅಥವಾ ಶಬ್ದಾವಸ್ಥೆ; ಹೀಗೆ ಸಕಲ ಪದಾರ್ಥಗಳ ಶಬ್ದಾವಸ್ಥೆಯೆ ಈ ಸಕಲ ಪದಾರ್ಥಗಳ ಸೂಕ್ಷ್ಮಾವಸ್ಥೆ. ಮತ್ತು ನಾವು ಯಾವ ಪದಾರ್ಥಗಳನ್ನು ನೋಡಿ ಕೇಳಿ ಮುಟ್ಟಿ ಮುಂತಾದ್ದನ್ನು ಮಾಡುತ್ತೇವೆಯೊ ಅವು ಇಂಥ ಸೂಕ್ಷ್ಮ ಅಥವಾ ಶಬ್ದಾವಸ್ಥೆಯಲ್ಲಿರುವ ಪದಾರ್ಥಗಳ ಸ್ಥೂಲವಿಕಾಸ. ಮತ್ತೆ ಇಂಥ ಕಾರ್ಯವು ಅದರ ಕಾರಣ. ಜಗತ್ತು ಧ್ವಂಸವಾಗಿ ಹೋದರೂ ಜಗದ್ಬೋಧಾತ್ಮಕವಾದ ಶಬ್ದ ಅಥವಾ ಸ್ಥೂಲ ಪದಾರ್ಥಗಳ ಸೂಕ್ಷ್ಮಸ್ವರೂಪ ಬ್ರಹ್ಮದಲ್ಲಿ ಕಾರಣರೂಪವಾಗಿರುತ್ತವೆ. ಜಗದ್ವಿಕಾಸವಾಗುವುದಕ್ಕೆ ಹಿಂದೆ, ಮೊದಲು ಸೂಕ್ಷ್ಮಸ್ವರೂಪಗಳ ಸಮಷ್ಟಿರೂಪವಾದ ಈ ಪದಾರ್ಥ ಕ್ಷುಭಿತವಾಗಿ ಅದರಲ್ಲಿಯೆ ಪ್ರಕೃತಿ ಸ್ವರೂಪವೂ ಶಬ್ದಗರ್ಭಾತ್ಮಕವೂ ಆದ ಅನಾದಿನಾದ "ಓಂ" ಕಾರವು ತನ್ನಷ್ಟಕ್ಕೆ ತಾನೇ ಬರುತ್ತಿರುತ್ತದೆ. ಕ್ರಮವಾಗಿ ಈ ಸಮಷ್ಟಿಯಿಂದ ಪ್ರತಿಯೊಂದು ವಿಶೇಷ ಪದಾರ್ಥವೂ ಮೊದಲು ಸೂಕ್ಷ್ಮ ಅಥವಾ ಶಾಬ್ದಿಕ ರೂಪದಲ್ಲಿ ಅನಂತರ ಸ್ಥೂಲರೂಪದಲ್ಲಿ ಪ್ರಕಾಶಿತವಾಗುತ್ತದೆ. ಈ ಶಬ್ದವೆ ಬ್ರಹ್ಮ—ಶಬ್ದವೆ ವೇದ. ಇದೇ ಸಾಯಣರ ಅಭಿಪ್ರಾಯ ತಿಳಿಯಿತೆ?

ಶಿಷ್ಯ:— ಮಹಾಶಯರೆ, ಚೆನ್ನಾಗಿ ತಿಳಿದುಕೊಳ್ಳುವುದಕ್ಕಾಗಲಿಲ್ಲ.

ಸ್ವಾಮಿಜಿ:— ಜಗತ್ತಿನಲ್ಲಿ ಎಷ್ಟು ಗಡಿಗೆಗಳಿವೆಯೊ ಅವೆಲ್ಲಾ ನಷ್ಟವಾದರೂ ಘಟ ಶಬ್ದವಿರಬಲ್ಲದೆಂಬುದು ಗೊತ್ತಿದೆಯೊ? ಹಾಗಾದರೆ ಜಗತ್ತು ಧ್ವಂಸವಾದರೂ ಎಂದರೆ ಯಾವ ಪದಾರ್ಥಗಳು ಸೇರಿ ಜಗತ್ತಾಗಿದೆಯೊ ಅವೆಲ್ಲಾ ಒಡೆದು ಪುಡಿಪುಡಿಯಾಗಿ ಹೋದರೂ, ಅವುಗಳನ್ನು ಬೋಧಿಸುವ ಶಬ್ದಗಳು ಏಕೆ ಇರಲಾರವು? ಮತ್ತು ಅವುಗಳಿಂದ ಪುನಃ ಸೃಷ್ಟಿ ಏಕೆ ಆಗಲಾರದು?

ಶಿಷ್ಯ :— ಆದರೆ, ಮಹಾಶಯರೇ, 'ಘಟ' 'ಘಟ' ಎಂದು ಕೂಗಿಕೊಂಡ ಮಾತ್ರದಿಂದ ಘಟ ತಯಾರಾಗುವುದಿಲ್ಲ.

ಸ್ವಾಮಿಜಿ :— ನೀನೂ ನಾನೂ ಹೀಗೆ ಕೂಗಿಕೊಂಡರೆ ಆಗುವುದಿಲ್ಲ. ಆದರೆ ಸಿದ್ಧಸಂಕಲ್ಪ ಬ್ರಹ್ಮದಲ್ಲಿ ಘಟಸ್ಮೃತಿ ಉಂಟಾದ ಮಾತ್ರದಿಂದಲೆ ಘಟ ಪ್ರಕಾಶಿತವಾಗುತ್ತದೆ. ಸಾಮಾನ್ಯ ಸಾಧಕನ ಇಚ್ಛೆಯಿಂದಲೆ ನಾನಾ ಅಘಟನಘಟನಗಳು ನಡೆಯುವುದು ಸಾಧ್ಯವಾಗಿರುವಾಗ ಸಿದ್ಧ ಸಂಕಲ್ಪವಾದ ಬ್ರಹ್ಮದ ವಿಚಾರವಾಗಿ ಹೇಳತಕ್ಕದ್ದೇನು? ಸೃಷ್ಟಿಗೆ ಮೊದಲು ಬ್ರಹ್ಮ ಶಬ್ದಾತ್ಮಕವಾಗಿರುತ್ತದೆ; ಆಮೇಲೆ ಓಂಕಾರಾತ್ಮಕ ಅಥವಾ ನಾದಾತ್ಮಕವಾಗಿಬಿಡುತ್ತದೆ. ಆಮೇಲೆ ಪೂರ್ವಪೂರ್ವ ಕಲ್ಪದ ನಾನಾ ವಿಶೇಷ ಶಬ್ದಗಳು — ಎಂದರೆ ಭೂಃ, ಭುವಃ, ಸ್ವಃ, ಅಥವಾ ಗೋವು, ಮನುಷ್ಯ, ಪಟ, ಘಟ ಮುಂತಾದುವುಗಳು — ಓಂಕಾರದಿಂದ ಹೊರಡುತ್ತವೆ. ಸಿದ್ಧಸಂಕಲ್ಪ ಬ್ರಹ್ಮದಲ್ಲಿ ಈ ಶಬ್ದಗಳು ಕ್ರಮಕ್ರಮವಾಗಿ ಒಂದೊಂದಾಗಿ ಉಂಟಾದ ಮಾತ್ರದಿಂದಲೇ ಆಯಾ ಪದಾರ್ಥಗಳು ಅಲ್ಲಿಂದ ಹೊರಗೆ ಬಂದು ಕ್ರಮೇಣ ವಿಚಿತ್ರ ಜಗತ್ತಿನ ವಿಕಾಸವಾಗಿಬಿಡುತ್ತವೆ. ಈಗ ತಿಳಿಯಿತೆ; ಶಬ್ದವೆ ಹೀಗೆ ಸೃಷ್ಟಿಯ ಮೂಲವೆಂಬುದು?

ಶಿಷ್ಯ :— ಹುಂ, ಏನೊ ಒಂದು ವಿಧದಲ್ಲಿ ತಿಳಿದುಕೊಂಡೆ ನಿಜ; ಆದರೆ ಸರಿಯಾಗಿ ಮನಸ್ಸಿಗೆ ಹತ್ತಲಿಲ್ಲ.

ಸ್ವಾಮಿಜಿ :— ಮನಸ್ಸಿಗೆ ಹತ್ತುವುದು — ಪ್ರತ್ಯಕ್ಷವಾಗಿ ಅನುಭವ ಮಾಡಿಕೊಳ್ಳುವುದು— ಏನು ಸುಲಭವೇನಪ್ಪಾ? ಮನಸ್ಸು ಯಾವಾಗ ಬ್ರಹ್ಮದಲ್ಲಿ ಪ್ರವೇಶಿಸುತ್ತ ಹೋಗುತ್ತದೆಯೊ ಆಗ ಒಂದಾದಮೇಲೆ ಒಂದರಂತೆ ಈ ಸ್ಥಿತಿಗಳೊಳಗಿನಿಂದ ಹೋಗಿ ಕೊನೆಗೆ ನಿರ್ವಿಕಲ್ಪಕ್ಕೆ ಹೋಗುತ್ತದೆ. ಸಮಾಧಿ ಮುಖದಲ್ಲಿ ಮೊದಲು ಗೊತ್ತಾಗುತ್ತದೆ — ಜಗತ್ತು ಶಬ್ದಮಯ ಎಂದು, ಆಮೇಲೆ ಗಭೀರವಾದ ಓಂಕಾರ ಧ್ವನಿಯಲ್ಲಿ ಎಲ್ಲವೂ ಸೇರಿಹೋಗುತ್ತದೆ– ಆಮೇಲೆ ಅದೂ ಕೇಳುವುದಿಲ್ಲ– ಅದೂ ಇದೆಯೊ ಇಲ್ಲವೊ ಎನ್ನಿಸುತ್ತದೆ! ಇದೆ ಅನಾದಿನಾದವೆಂಬುದು. ಆಮೇಲೆ ಸರ್ವವ್ಯಾಪಕ ಬ್ರಹ್ಮದಲ್ಲಿ ಸೇರಿ ಹೋಗುತ್ತದೆ. ಆಯಿತು — ಎಲ್ಲ ಅಲ್ಲಿಗೆ ನಿಂತು ಹೋಯಿತು.

ಸ್ವಾಮಿಜಿ ಮಾತಿನಿಂದ ಅವರು ಈ ಸ್ಥಿತಿಗಳನ್ನೆಲ್ಲಾ ಅನುಭವ ಮಾಡಿಕೊಂಡು ಅನೇಕಸಾರಿ ಸಮಾಧಿಭೂಮಿಗೆ ಹೋಗಿ ಬಂದಿದ್ದರೆಂದು

ಶಿಷ್ಯನಿಗೆ ಸ್ಪಷ್ಟವಾಗಿ ತಿಳಿಯುತ್ತ ಬಂತು. ಇಲ್ಲದಿದ್ದರೆ ಇಷ್ಟು ವಿಶದವಾಗಿ ಈ ವಿಷಯಗಳನ್ನೆಲ್ಲಾ ಹೇಗೆ ತಿಳಿಸ ಹೇಳುತ್ತಿದ್ದರು? ತಾವೇ ನೋಡಿ ಕೇಳಿ ಮಾಡದ ವಿಷಯುವಲ್ಲದಿದ್ದರೆ ಯಾರೂ ಎಂದಿಗೂ ಹೀಗೆ ಹೇಳಲೂ ತಿಳಿಸಲೂಲಾರರೆಂದು ಶಿಷ್ಯನು ಇದನ್ನೆಲ್ಲಾ ಮಾತಿಲ್ಲದೆ ಬೆರಗಾಗಿ ಕೇಳುತ್ತ ಭಾವಿಸಿಕೊಂಡನು.

ಸ್ವಾಮಿಜಿ ಇನ್ನೂ ಹೇಳಿದ್ದೇನೆಂದರೆ:—"ಅವತಾರ ಸಮಾನರಾದ ಮಹಾಪುರುಷರು ಸಮಾಧಿ ಸ್ಥಿತಿಯಿಂದ 'ನಾನು ನನ್ನದು' ಎಂಬ ಸ್ಥಿತಿಗೆ ಇಳಿದು ಬಂದಾಗ ಮೊಟ್ಟಮೊದಲು ಅವ್ಯಕ್ತನಾದದ ಅನುಭವವನ್ನು ಪಡೆಯುವರು; ಕ್ರಮವಾಗಿ ನಾದವು ಸ್ಪಷ್ಟವಾಗಿ ಓಂಕಾರದ ಅನುಭವ ವಾಗುವುದು; ಓಂಕಾರದಿಂದ ಆಮೇಲೆ ಶಬ್ದಮಯವಾದ ಜಗತ್ತಿನ ಬೋಧೆ ಯುಂಟಾಗುವುದು; ಆಮೇಲೆ ಎಲ್ಲಕ್ಕೂ ಕೊನೆಯಲ್ಲಿ ಸ್ಥೂಲವಾದ ಭೌತಿಕ ಜಗತ್ತಿನ ಪ್ರತ್ಯಕ್ಷವಾಗುವುದು. ಸಾಮಾನ್ಯ ಸಾಧಕರು ಹೇಗೆ ಹೇಗೊ ಬಹು ಕಷ್ಟಪಟ್ಟುಕೊಂಡು ನಾದದಿಂದ ಮುಂದಕ್ಕೆ ಹೋಗಿ ಬ್ರಹ್ಮದ ಉಪ ಲಬ್ಧಿಯನ್ನು ಸಾಕ್ಷಾತ್ತಾಗಿ ಪಡೆದರೆ, ಯಾವ ನಿಮ್ನಭೂಮಿಯಲ್ಲಿ ಸ್ಥೂಲ ಜಗತ್ತಿನ ಪ್ರತ್ಯಕ್ಷವಾಗುವುದೊ ಅಲ್ಲಿಗೆ ಪುನಃ ಇಳಿದು ಬರಲಾರರು. ಬ್ರಹ್ಮದಲ್ಲಿಯೆ ಸೇರಿ ಹೋಗುತ್ತಾರೆ. "ಕ್ಷೀರೇ ನೀರವತ್."

ಈ ಮಾತುಗಳೆಲ್ಲಾ ನಡೆಯುತ್ತಿರುವಾಗ ಮಹಾಕವಿ ಶ್ರೀಯುಕ್ತ ಗಿರಿಶಚಂದ್ರಘೋಷ ಮಹಾಶಯರು ಅಲ್ಲಿಗೆ ಬಂದರು. ಸ್ವಾಮಿಜಿ ಅವರನ್ನು ಅಭಿವಂದಿಸಿ ಕುಶಲ ಪ್ರಶ್ನಾದಿಗಳನ್ನು ಮಾಡಿ ಪುನಃ ಶಿಷ್ಯನಿಗೆ ಪಾಠ ಹೇಳತೊಡಗಿದರು. ಗಿರಿಶಬಾಬುಗಳೂ ಅದನ್ನು ಮನಸ್ಸುಕೊಟ್ಟು ಕೇಳುತ್ತ ಸ್ವಾಮಿಜಿ ಹೀಗೆ ವೇದಕ್ಕೆ ವಿಶದವಾಗಿ ವ್ಯಾಖ್ಯಾನ ಮಾಡುತ್ತಿರು ವುದನ್ನು ನೋಡಿ ಬೆರಗಾಗಿ ಕುಳಿತುಕೊಂಡರು.

ಹಿಂದಿನ ವಿಷಯುವನ್ನು ಅನುಸರಣಮಾಡಿಕೊಂಡು ಸ್ವಾಮಿಜಿ ಪುನಃ ಹೇಳತೊಡಗಿದರು:—"ವೈದಿಕ ಮತ್ತು ಲೌಕಿಕವೆಂದು ಶಬ್ದವು ಎರಡು ಭಾಗ. "ಶಬ್ದಶಕ್ತಿ ಪ್ರಕಾಶಿಕೆ" ಯಲ್ಲಿ ಈ ವಿಷಯದ ವಿಚಾರವನ್ನು ನೋಡಿದ್ದೇನೆ. ಅಲ್ಲಿ ಮಾಡಿರುವ ವಿಚಾರಗಳು ಗಂಭೀರವಿಚಾರವನ್ನೇನೊ ತೋರಿಸುತ್ತವೆ; ಆದರೆ ಪಾರಿಭಾಷಿಕ ಶಬ್ದಗಳ ಅವಾಂತರದಲ್ಲಿ ತಲೆ ಚಿಟ್ಟು ಹಿಡಿದು ಹೋಗುತ್ತದೆ" ಈಗ ಗಿರೀಶಬಾಬುಗಳ ಕಡೆಗೆ ನೋಡಿ ಹೇಳಿದ್ದೇನೆಂದರೆ:—"ಏನು ಜಿ. ಸಿ., ಇವುಗಳೊಂದನ್ನೂ ಓದಲಿಲ್ಲ,

ಕೇವಲ ಪುರಾಣ ಕಥೆಗಳಲ್ಲಿಯೆ ಈ ಕಾಲ ಕಳೆದು ಹೋಯಿತು?''

ಗಿರಿಶಬಾಬು:—''ಮತ್ತೇನು ಓದೋಣವಣ್ಣ? ಅದರಲ್ಲಿ ಪ್ರವೇಶಿಸುವಷ್ಟು ಅವಕಾಶವೂ ಇಲ್ಲ, ಬುದ್ಧಿಯೂ ಇಲ್ಲ; ಆದರೇನೊ ಪರಮಹಂಸರ ದಯೆಯಿಂದ ಆ ವೇದವೇದಾಂತಗಳಿಗೆ ನಮಸ್ಕಾರಮಾಡಿ ಈಸಾರಿಗೆ ಕಡೆಹಾಯ್ದು ಬಿಡುತ್ತೇನೆ. ನಿನ್ನಿಂದ ತಮ್ಮ ಕೆಲಸವನ್ನು ತುಂಬ ಮಾಡಿಸಿಕೊಳ್ಳಬೇಕೆಂದು ಅವರು ಅದನ್ನೆಲ್ಲಾ ನಿನಗೆ ಓದಿಸಿದರು; ನನಗೆ ಅದರ ಅವಶ್ಯಕತೆ ಇಲ್ಲ'' ಹೀಗೆಂದು ಹೇಳಿ ಗಿರಿಶಬಾಬುಗಳು ಆ ದೊಡ್ಡ ಋಗ್ವೇದ ಗ್ರಂಥಕ್ಕೆ ಮತ್ತೆ ಮತ್ತೆ ಪ್ರಣಾಮ ಮಾಡುತ್ತ ಮಾಡುತ್ತ 'ಜಯ ವೇದರೂಪೀ, ರಾಮಕೃಷ್ಣ ಜಯ!' ಎಂದು ಹೇಳತೊಡಗಿದರು. ಸ್ವಾಮಿಜಿ ಯಾವಾಗ ಯಾವ ವಿಷಯವನ್ನು ಉಪದೇಶಮಾಡುತ್ತಿದ್ದರೆ ಆಗ ಆ ವಿಷಯವು ಶ್ರೋತೃಗಳ ಮನಸ್ಸಿನಲ್ಲಿ ದೃಢವಾಗಿ ನೆಟ್ಟು ಅವರು ಅದೇ ಎಲ್ಲದಕ್ಕಿಂತಲೂ ಸಾರವಾದ ವಸ್ತುವೆಂದು ಅನುಭವ ಮಾಡುತ್ತಿದ್ದರು–ಇದನ್ನು ಪಾಠಕರಿಗೆ ನಾವು ಮತ್ತೊಂದು ಕಡೆಯಲ್ಲಿ ಹೇಳಿದ್ದೇವೆ. ಬ್ರಹ್ಮಜ್ಞಾನ ಸಂಬಂಧವಾಗಿ ಅವರು ಮಾತನಾಡಿದಾಗ, ಅಲ್ಲಿ ಕೇಳುತ್ತಿದ್ದವರು ಅದನ್ನು ಪಡೆಯುವುದು ಒಂದೇ ಜೀವನದ ಉದ್ದೇಶ್ಯವೆಂದು ಮನಸ್ಸಿನಲ್ಲಿ ಮಾಡಿಕೊಳ್ಳುತ್ತಿದ್ದರು. ಮತ್ತೆ, ಭಕ್ತಿ ಕರ್ಮ ಅಥವಾ ಜಾತೀಯ ಉನ್ನತಿ ಮುಂತಾದ ಇತರ ವಿಷಯಗಳನ್ನು ಅವರು ಪ್ರಸ್ತಾಪಿಸಿದಾಗ ಆ ವಿಷಯಕ್ಕೆ ಶ್ರೋತೃಗಳು ತಮ್ಮ ಮನಸ್ಸಿನಲ್ಲಿ ಸರ್ವೋಚ್ಚಾಸನವನ್ನು ಕೊಟ್ಟು ಆಯಾ ವಿಷಯವನ್ನು ಅಭ್ಯಾಸಮಾಡುವುದಕ್ಕೆ ತವಕಪಡುತ್ತಿದ್ದರು. ಈಗ ವೇದದ ಪ್ರಸಕ್ತಿಯನ್ನು ತೆಗೆದು ಶಿಷ್ಯ ಮುಂತಾದವರ ಮನಸ್ಸನ್ನು ವೇದೋಕ್ತ ಮಹಿಮೆಯಲ್ಲಿ ಎಷ್ಟರಮಟ್ಟಿಗೆ ಮೋಹಗೊಳಿಸಿ ಬಿಟ್ಟರೆಂದರೆ, ಅವರು ಈಗ ಅದಕ್ಕಿಂತ ಸಾರತರವೂ ಆವಶ್ಯಕವೂ ಆದ ಮತ್ತೊಂದು ವಸ್ತುವನ್ನು ಅರಿಯಲಾರದೆ ಹೋದರು. ಗಿರೀಶಬಾಬುಗಳು ಇದನ್ನು ಕಂಡರು; ಮತ್ತು ಸ್ವಾಮಿಗಳ ಮಹದುದಾರಭಾವವೂ ಶಿಕ್ಷಣಕೊಡುವ ಈ ವಿಧವಾದ ರೀತಿಯೂ ಮೊದಲೆ ಅವರಿಗೆ ತಿಳಿದಿದ್ದದ್ದರಿಂದ ಶಿಷ್ಯ ಮುಂತಾದವರಿಗೆ ಜ್ಞಾನ ಭಕ್ತಿ ಮತ್ತು ಕರ್ಮಗಳಲ್ಲಿ ಸಮಾನವಾದ ಆವಶ್ಯಕತೆಯನ್ನು ತೋರಿಸಿಕೊಡುವುದಕ್ಕಾಗಿ ಈಗ ಒಂದು ಯುಕ್ತಿಯನ್ನು ಹೂಡಿದರು.

ಸ್ವಾಮಿಜಿ ಅನ್ಯ ಮನಸ್ಕರಾಗಿ ಏನೋ ಯೋಚಿಸುತ್ತಿದ್ದರು. ಈ ಮಧ್ಯೆ ಗಿರೀಶಬಾಬುಗಳು ಹೇಳಿದ್ದೇನೆಂದರೆ–''ಹೌದೊ ನರೇನ್, ಒಂದು

ಮಾತು ಕೇಳಬೇಕೆಂದಿದ್ದೇನೆ. ವೇದ ವೇದಾಂತವನ್ನೇನೊ ಬೇಕಾದಷ್ಟು ಓದಬಹುದು. ಆದರೆ, ಈ ನಮ್ಮ ದೇಶದಲ್ಲಿರುವ ಘೋರವಾದ ಹಾಹಾಕಾರ, ಹೊಟ್ಟೆಗಿಲ್ಲದಿರುವಿಕೆ, ವ್ಯಭಿಚಾರ, ಶಿಶುಹತ್ಯ ಮಹಾ ಪಾಪಗಳು ಇವೆಲ್ಲಾ ಕಣ್ಣು ಮುಂದೆ ಹಗಲೂ ರಾತ್ರಿ ಸುತ್ತುತ್ತಿವೆಯಲ್ಲ, ಇವುಗಳನ್ನೆಲ್ಲಾ ನಿವಾರಣೆ ಮಾಡುವ ದಾರಿ ನಿಮ್ಮ ವೇದದಲ್ಲಿಯೇನಾದರೂ ಹೇಳಿದೆಯೇನು? ಇಗೋ ಇಂಥವರ ಮನೆಯ ಯಜಮಾನಿ, ಒಂದಾನೊಂದು ಕಾಲದಲ್ಲಿ ಅವರ ಮನೆಯಲ್ಲಿ ದಿನಕ್ಕೆ ಐವತ್ತು ಎಲೆ ಬೀಳುತ್ತಿತ್ತು, ಅಂಥವಳು ಈಗ ಒಲೆಯ ಮೇಲೆ ಮೂರು ದಿನದಿಂದ ತಪ್ಪಲೆಯಿಟ್ಟಿಲ್ಲ, ಇಗೋ ಇಂಥವರ ಮನೆಯ ಕುಲಸ್ತ್ರೀಯನ್ನು ಪುಂಡರು ಕೆಡಿಸಿ ಕೊಂದು ಹಾಕಿದರು; ಇಗೋ ಇಂಥವರ ಮನೆಯ ಮನೆಯಲ್ಲಿ ಶಿಶುಹತ್ಯವಾಯಿತು, ಇಂಥವರು ಮೋಸಮಾಡಿ ಗಂಡಸತ್ತ ಹೆಂಗಸಿನ ಸರ್ವಸ್ವವನ್ನೂ ಹೊತ್ತು ಹಾಕಿದರು—ಇವುಗಳೆಲ್ಲಾ ಇಲ್ಲದಂತೆ ಮಾಡುವುದಕ್ಕೆ ಏನಾದರೂ ದಾರಿಯಿದೆಯೆ ನಿಮ್ಮ ವೇದದಲ್ಲಿ?" ಗಿರಿಶಬಾಬುಗಳು ಹೀಗೆ ಸಮಾಜದ ಭಯಂಕರವಾದ ಚಿತ್ರಗಳನ್ನು ಮೇಲೆ ಮೇಲೆ ಚಿತ್ರಿಸಿ ತೋರಿಸುವುದಕ್ಕೆ ಮೊದಲು ಮಾಡಲು, ಸ್ವಾಮಿಜಿ ಮಾತು ಹೊರಡದೆ ಕುಳಿತುಕೊಂಡರು. ಜಗತ್ತಿನ ದುಃಖಕಷ್ಟಗಳ ವಿಚಾರವನ್ನು ಯೋಚಿಸುತ್ತ ಯೋಚಿಸುತ್ತ ಸ್ವಾಮಿಗಳ ಕಣ್ಣಿನಲ್ಲಿ ನೀರು ಬಂದಿತು. ಅವರು ತಮ್ಮ ಮನಸ್ಸಿನ ಈ ವಿಧವಾದ ಭಾವವನ್ನು ನಮಗೆ ತಿಳಿಸಬಾರದೆಂದಿದ್ದರೊ ಏನೊ, ಅಂತು ಎದ್ದು ಹೊರಗೆ ಹೊರಟು ಹೋದರು.

ಈ ಮಧ್ಯೆ ಗಿರಿಶಬಾಬುಗಳು ಶಿಷ್ಯನ ಕಡೆಗೆ ತಿರುಗಿ ಹೇಳಿದ್ದೇನೆಂದರೆ "ನೋಡಿದೇನಯ್ಯ ಎಂಥ ದೊಡ್ಡ ಹೃದಯ! ನಿಮ್ಮ ಸ್ವಾಮಿಗಳನ್ನು ಕೇವಲ ವೇದಪಂಡಿತನೆಂದು ನಾನು ಗೌರವಿಸುವುದಿಲ್ಲ; ಆದರೆ ಇಗೋ ಈಗ ಪ್ರಾಣಿಗಳ ಕಷ್ಟವನ್ನು ನೋಡಿ ಅಳುತ್ತ ಹೊರಗೆ ಹೊರಟುಹೋದನಲ್ಲ. ಈ ಮಹಾ ಹೃದಯಕ್ಕೋಸ್ಕರ ಗೌರವಿಸುವುದು. ಕಣ್ಣೆದುರಿಗೆ ನೋಡಿದೆಯಷ್ಟೆ! ಜನರ ದುಃಖ ಕಷ್ಟಗಳ ಮಾತನ್ನು ಕೇಳಿ ಕರುಣೆಯಿಂದ ಹೃದಯವು ತುಂಬಿ ಹೋಗಿ ಸ್ವಾಮಿಗಳ ವೇದವೇದಾಂತವೆಲ್ಲಾ ಎಲ್ಲಿಯೊ ಓಡಿ ಹೋಯಿತು."

ಶಿಷ್ಯ:— ಮಹಾಶಯರೆ, ನನಗೆ ಸೊಗಸಾಗಿ ವೇದಪಾಠವು ನಡೆಯುತ್ತಿತ್ತು; ತಾವು ಮಾಯಾ ಜಗತ್ತಿನ ಕೆಲವು ಕೆಲಸಕ್ಕೆ ಬಾರದ ಮಾತು

ಗಳನ್ನು ತೆಗೆದು ಸ್ವಾಮಿಗಳ ಮನಸ್ಸನ್ನು ಕೆಡಿಸಿಬಿಟ್ಟಿರಿ.

ಗಿರಿಶಬಾಬು :—ಜಗತ್ತಿನಲ್ಲಿ ಇಂಥ ದುಃಖ ಕಷ್ಟಗಳಿವೆ. ಈಗ ಇವನು ಅವುಗಳನ್ನು ಕೊನೆಗೆ ಒಂದುಸಾರಿ ಕಣ್ಣುಬಿಟ್ಟು ಕೂಡ ನೋಡದೆ ಸುಮ್ಮನೆ ಕುಳಿತುಕೊಂಡು ಬರಿಯ ವೇದವನ್ನು ಓದುತ್ತಾನಂತೆ! ನಿನ್ನ ವೇದವೇದಾಂತವನ್ನೆಲ್ಲಾ ಅತ್ತಲಾಗಿ ತೆಗೆದಿಡು.

ಶಿಷ್ಯ :— ತಾವು ಹೃದಯದ ಭಾವೋದ್ರೇಕವನ್ನುಂಟುಮಾಡುವ ಮಾತನ್ನು ಮಾತ್ರವೇ ಕೇಳುವುದಕ್ಕೆ ಇಷ್ಟಪಡುತ್ತೀರಿ; ಏಕೆಂದರೆ ತಾವು ಹೃದಯವುಳ್ಳವರಲ್ಲವೇನು! ಆದರೆ ಇದೆಲ್ಲಾ ಶಾಸ್ತ್ರ, ಅದರಲ್ಲಿ ವಿಚಾರವನ್ನು ಹೂಡಿದರೆ ಪ್ರಪಂಚ ಮರೆತು ಹೋಗುವುದು; ಅದರಲ್ಲಿ ತಮಗೆ ಆಸಕ್ತಿ ಇರುವಂತೆ ನನಗೆ ಕಂಡು ಬರಲಿಲ್ಲ; ಹಾಗಿದ್ದಿದ್ದರೆ ತಾವು ಹೀಗೆ ರಸಭಂಗ ಮಾಡುತ್ತಿರಲಿಲ್ಲ.

ಗಿರಿಶಬಾಬು :— ಹಾಗಾದರೆ ನಾನು ಹೇಳುತ್ತೇನೆ; ಜ್ಞಾನ ಮತ್ತು ಪ್ರೇಮ ಇವೆರಡೂ ಬೇರೆ ಬೇರೆಯೆಂಬುದು ಹೇಗೆ? ನನಗೆ ತೋರಿಸಿಕೊಡು ನೋಡೋಣ. ಇದನ್ನೇ ನೋಡು, ನಿನ್ನ ಗುರು ಇದ್ದಾನಲ್ಲ, ಆತನು ಎಷ್ಟು ಪಂಡಿತನೊ ಅಷ್ಟು ಪ್ರೇಮಿಕ. ನಿನ್ನ ವೇದವೂ ಹೇಳುವುದಿಲ್ಲವೆ "ಸತ್ ಚಿತ್ ಆನಂದ" ಈ ಮೂರೂ ಒಂದೇ ಪದಾರ್ಥವೆಂದು? ಇಲ್ಲಿ ನೋಡಲಿಲ್ಲವೇ? ಸ್ವಾಮಿಜಿ ಅಷ್ಟು ಪಾಂಡಿತ್ಯವನ್ನು ತೋರಿಸಿದರು, ಆದರೆ ಪ್ರಪಂಚದ ದುಃಖದ ವೃತ್ತಾಂತವು ಕಿವಿಯಲ್ಲಿ ಬಿದ್ದು ಮನಸ್ಸಿಗೆ ಬಂದ ಕೂಡಲೆ, ಪ್ರಾಣಿಗಳ ಕಷ್ಟಕ್ಕಾಗಿ ಅಳುವುದಕ್ಕೆ ಮೊದಲು ಮಾಡಿದರು. ವೇದವೇದಾಂತಗಳು ಜ್ಞಾನ ಮತ್ತು ಪ್ರೇಮಗಳಲ್ಲಿ ಭೇದವನ್ನು ಪ್ರಾಮಾಣ್ಯದಿಂದ ಹೇಳುವುವಾದರೆ ಅಂಥ ವೇದವೇದಾಂತಗಳು ನನ್ನ ತಲೆಯನ್ನು ಹೊಗದೆ ಇರಲಿ.

ಶಿಷ್ಯನು ಮಾತೆ ಹೊರಡದೆ "ನಿಜವಾಗಿಯೂ ಗಿರೀಶಬಾಬುಗಳ ಸಿದ್ಧಾಂತ ವೇದಕ್ಕೆ ಅವಿರುದ್ಧವಾದವು" ಎಂದು ಭಾವಿಸಿಕೊಳ್ಳುತ್ತಿದ್ದನು.

ಈ ಮಧ್ಯೆ ಸ್ವಾಮಿಜಿ ಹಿಂತಿರುಗಿ ಬಂದು ಶಿಷ್ಯನನ್ನು ಕರೆದು "ಏನಯ್ಯಾ ನೀವು ಆಡುತ್ತಿದ್ದ ಮಾತೇನು?" ಎಂದು ಕೇಳಿದರು. ಅದಕ್ಕೆ ಶಿಷ್ಯನು "ಎಲ್ಲಾ ಬರಿಯ ವೇದದ ಮಾತೆ ನಡೆಯುತ್ತಿತ್ತು; ಇವರು ಈ ಗ್ರಂಥವೊಂದನ್ನು ಓದಿಲ್ಲ; ಆದರೆ ಅವುಗಳ ಸಿದ್ಧಾಂತಗಳನ್ನು ಮಾತ್ರ

ಚೆನ್ನಾಗಿ ಸರಿಯಾಗಿ ತಿಳಿದುಕೊಂಡಿದ್ದಾರೆ–ಇದು ತುಂಬ ಆಶ್ಚರ್ಯಕರ ವಾದ ಸಂಗತಿ" ಎಂದು ಉತ್ತರ ಕೊಟ್ಟನು.

ಸ್ವಾಮಿಜಿ :—ಗುರುಭಕ್ತಿಯಿದ್ದರೆ ಎಲ್ಲಾ ಸಿದ್ಧಾಂತಗಳು ಪ್ರತ್ಯಕ್ಷ ವಾಗುತ್ತವೆ.–ಓದಿ ಕೇಳಿ ಮಾಡಬೇಕಾದ ಆವಶ್ಯಕತೆ ಇಲ್ಲ. ಆದರೆ ಇಂಥ ಭಕ್ತಿವಿಶ್ವಾಸಗಳು ಜಗತ್ತಿನಲ್ಲಿ ದುರ್ಲಭ. ಗಿರೀಶಬಾಬುಗಳಂತೆ ಯಾರಿಗೆ ಭಕ್ತಿ ವಿಶ್ವಾಸಗಳಿವೆಯೊ ಅವರು ಶಾಸ್ತ್ರವನ್ನೋದಬೇಕಾದದ್ದಿಲ್ಲ. ಆದರೆ ಇತರರು ಅವರನ್ನು, ಗಿರೀಶಬಾಬುಗಳನ್ನು ಅನುಕರಣ ಮಾಡುವುದಕ್ಕೆ ಹೋದರೆ ಅಂಥವರಿಗೆ ಸರ್ವನಾಶವಾದೀತು. ಅವರ ವಿಷಯುವನ್ನು ಕಿವಿಯಿಂದ ಕೇಳಿಕೊಂಡು ಹೋಗಿ; ಎಂದಿಗೂ ಅವರನ್ನು ನೋಡಿಕೊಂಡು ಕೆಲಸಮಾಡುವುದಕ್ಕೆ ಹೋಗಬೇಡಿ.

ಶಿಷ್ಯ :—ಅಪ್ಪಣೆ.

ಸ್ವಾಮಿಜಿ :—ಅಪ್ಪಣೆಯೆಂದರಾಗಲಿಲ್ಲ! ಏನೇನು ಹೇಳಿದೆನೊ ಆ ವಿಷಯುಗಳನ್ನೆಲ್ಲಾ ತಿಳಿದುಕೊ–ಮೂರ್ಖನ ಹಾಗೆ ಎಲ್ಲದಕ್ಕೂ ಸುಮ್ಮನೆ ಋಜುಹಾಕಿಕೊಂಡು ಹೋಗಬೇಡ. ನಾನು ಹೇಳಿದರೂ ನಂಬಬೇಡ; ತಿಳಿದರೆ, ಆಮೇಲೆ ಒಪ್ಪಿಕೊ. ನನಗೆ ಪರಮಹಂಸರು ತಮ್ಮ ಮಾತು ಗಳನ್ನೆಲ್ಲಾ ಗ್ರಹಿಸಿಕೊಳ್ಳಬೇಕೆಂದು ಸರ್ವದಾ ಹೇಳುತ್ತಿದ್ದರು. ಸದ್ಯುಕ್ತಿ ತರ್ಕಶಾಸ್ತ್ರ ಇವೆಲ್ಲಾ ಏನನ್ನು ಹೇಳುತ್ತವೆಯೊ ಅದನ್ನು ಅನುಸರಿಸಿ ಆ ಮಾರ್ಗದಲ್ಲಿ ಹೋಗುತ್ತಿದ್ದರು. ವಿಚಾರ ಮಾಡುತ್ತ ಮಾಡುತ್ತ ಬುದ್ಧಿಯು ಪರಿಷ್ಕಾರವಾಗುತ್ತದೆ; ಆಮೇಲೆ ಅದರಲ್ಲಿ ಬ್ರಹ್ಮ ಪ್ರತಿಫಲಿತ ಆಗುತ್ತದೆ. ತಿಳಿಯಿತೆ?

ಶಿಷ್ಯ :—ಹುಂ; ಆದರೆ ನಾನಾ ಜನದ ನಾನಾ ಮಾತಿನಿಂದ ಬುದ್ಧಿ ಸಮನಾಗಿರುವುದಿಲ್ಲ; ಗಿರೀಶಬಾಬುಗಳು "ಅದನ್ನೆಲ್ಲಾ ಓದಿದರೆ ಆಗುವು ದೇನು?" ಎಂದರು; ತಾವು ವಿಚಾರಮಾಡಬೇಕೆಂದು ಹೇಳುವಿರಿ; ಈಗ ಏನುಮಾಡುವುದು?

ಸ್ವಾಮಿಜಿ :—ನಮ್ಮ ಇಬ್ಬರ ಮಾತೂ ನಿಜ, ಆದರೆ ಎರಡು ಬೇರೆ ಬೇರೆ ದೃಷ್ಟಿಯಿಂದ ನಮ್ಮಿಬ್ಬರ ಮಾತುಗಳನ್ನು ಆಡಬೇಕಾಗಿದೆ–ಅಷ್ಟೆ. ಒಂದು ಅವಸ್ಥೆ ಇದೆ, ಅಲ್ಲಿ ಯುಕ್ತಿ ತರ್ಕ ಎಲ್ಲಾ ಅಡಗಿ ಹೋಗುತ್ತದೆ– "ಮೂಕಾಸ್ವಾದನವತ್." ಮತ್ತೊಂದು ಅವಸ್ಥೆ ಇದೆ, ಅದರಲ್ಲಿ ವೇದಾದಿ ಶಾಸ್ತ್ರಗ್ರಂಥಗಳ ಸಮಾಲೋಚನ, ಓದುವುದು, ಹೇಳುವುದು ಇವುಗಳನ್ನು

ಮಾಡುತ್ತ ಮಾಡುತ್ತ ಸತ್ಯವಸ್ತುವು ಪ್ರತ್ಯಕ್ಷವಾಗುತ್ತದೆ. ನೀವು ಇವುಗಳನ್ನು ಓದಿ ಕೇಳಿ ಮಾಡಬೇಕಾಗಿದೆ; ಹಾಗಾದರೆ ನಿನಗೆ ಸತ್ಯ ಪ್ರತ್ಯಕ್ಷವಾಗುತ್ತದೆ- ತಿಳಿಯಿತೆ?

ದಡ್ಡ ಶಿಷ್ಯನು ಸ್ವಾಮಿಗಳ ಈ ವಿಧವಾದ ಅಪ್ಪಣೆಯಿಂದ ಗಿರೀಶ ಬಾಬುಗಳಿಗೆ ಸೋಲಾಯಿತೆಂದು ಮನಸ್ಸಿನಲ್ಲಿ ಮಾಡಿಕೊಂಡು, ಗಿರೀಶ ಬಾಬುಗಳ ಕಡೆಗೆ ನೋಡುತ್ತ, "ಮಹಾಶಯರೆ, ನಾನು ವೇದವೇದಾಂತಗಳನ್ನು ಓದಿ ವಿಚಾರಮಾಡಬೇಕೆಂದು ಸ್ವಾಮಿಗಳು ಹೇಳಿದ್ದನ್ನು ಕೇಳಿದಿರಷ್ಟೆ!" ಎಂದು ನುಡಿದನು.

ಗಿರೀಶಬಾಬು:—ನೀನು ಹಾಗೆಯೆ ಮಾಡು ಹೋಗು. ಸ್ವಾಮಿಗಳ ಆಶೀರ್ವಾದದಿಂದ ಹಾಗೆ ಮಾಡಿಯೆ ನಿನಗೆ ಎಲ್ಲಾ ಒಳ್ಳೆಯದಾಗುತ್ತದೆ.

ಸದಾನಂದ ಸ್ವಾಮಿಗಳು ಈ ಸಮಯದಲ್ಲಿ ಅಲ್ಲಿಗೆ ಬಂದು ಕುಳಿತುಕೊಂಡರು, ಸ್ವಾಮಿಜಿ ಅವರನ್ನು ನೋಡಿ "ಅಯ್ಯಾ, ಈ ಜಿ. ಸಿ. ಯ ಬಾಯಿಯಿಂದ ದೇಶದ ದುರ್ದಶೆಯನ್ನು ಕೇಳಿ ಮನಸ್ಸು ಮಿಲಿಮಿಲನೆ ಒದ್ದುಕೊಳ್ಳುತ್ತಿದೆ. ದೇಶಕ್ಯೋಸ್ಕರ ಏನಾದರೂ ಮಾಡಬಲ್ಲಿರಾ?" ಎಂದರು.

ಸದಾನಂದ:—ಮಹಾಸ್ವಾಮಿ, ಅಪ್ಪಣೆ- ಸೇವಕನು ಸಿದ್ಧನಾಗಿದ್ದಾನೆ.

ಸ್ವಾಮಿಜಿ:—ಮೊದಲು ಸಣ್ಣ ಕ್ರಮದಲ್ಲಿ ಒಂದು ಸೇವಾಕ್ರಮವನ್ನು ಸ್ಥಾಪಿಸಿ. ಅದರಲ್ಲಿ ದರಿದ್ರರೂ ದುಃಖಿಗಳೂ ಎಲ್ಲರೂ ಸಹಾಯ ಪಡೆಯಬೇಕು. ರೋಗಿಗಳಿಗೆ ಉಪಚಾರಮಾಡಬೇಕು.- ಯಾರಿಗೆ ನೀನೆ ಎನ್ನುವರು ದಿಕ್ಕಿಲ್ಲವೊ ಅಂಥ ದಿಕ್ಕಿಲ್ಲದ ಜನರನ್ನು ಜಾತಿವರ್ಣಗಳನ್ನು ಲಕ್ಷ್ಯಮಾಡದೆ ಸೇವೆಮಾಡಬೇಕು. ಗೊತ್ತಾಯಿತೆ?

ಸದಾನಂದ:—ಅಪ್ಪಣೆ ಮಹಾಸ್ವಾಮಿ!

ಸ್ವಾಮಿಜಿ:—ಜೀವ ಸೇವೆಗಿಂತ ಮತ್ತೊಂದು ಧರ್ಮವಿಲ್ಲ. ಸೇವಾಧರ್ಮವನ್ನು ಸರಿಯಾಗಿ ನಡೆಸಿಕೊಂಡು ಬರಲು ಸಮರ್ಥನಾದರೆ ಸುಲಭವಾಗಿಯೇ ಸಂಸಾರ ಬಂಧನವು ಕತ್ತರಿಸಿ ಹೋಗುತ್ತದೆ-"ಮುಕ್ತಿಃ ಕರಫಲಾಯತೇ."

ಈಗ ಗಿರೀಶಬಾಬುಗಳನ್ನು ಸಂಬೋಧಿಸಿ ಸ್ವಾಮಿಗಳು ಹೇಳಿದ್ದೇ

ನೆಂದರೆ–"ನೋಡು ಗಿರಿಶಬಾಬು, ನನಗೆ ಎನ್ನಿಸುತ್ತದೆ–ಈ ಜಗತ್ತಿನ ದುಃಖವನ್ನು ಹೋಗಲಾಡಿಸುವುದಕ್ಕೆ ನಾನು ಸಹಸ್ರ ಜನ್ಮವನ್ನೆತ್ತಬೇಕಾದರೂ ಎತ್ತುವೆನು! ಅದರಿಂದ ಯಾರಿಗಾದರೂ ಒಂದಿಷ್ಟು ದುಃಖ ಹೋಗುವುದಾದರೂ ಹಾಗೆ ಮಾಡುವೆನು. ಬರಿಯ ಒಬ್ಬನ ಮುಕ್ತಿಯನ್ನು ಕಟ್ಟಿಕೊಂಡು ಆಗುವುದೇನು?–ಎನ್ನಿಸುತ್ತದೆ. ಎಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ಆ ಮಾರ್ಗದಲ್ಲಿ ಹೋಗಬೇಕು. ಏಕೆ ಈ ಭಾವ ಉಂಟಾಯಿತು ಹೇಳಬಲ್ಲೆಯಾ?"

ಗಿರೀಶಬಾಬು:— ಹಾಗಲ್ಲದಿದ್ದರೆ ಪರಮಹಂಸರು ನಿನ್ನನ್ನು ಎಲ್ಲರಿಗಿಂತಲೂ ದೊಡ್ಡ ಆಧಾರವೆಂದು ಹೇಳುತ್ತಿರಲಿಲ್ಲ.

ಇಷ್ಟು ಹೇಳಿ ಗಿರಿಶಬಾಬುಗಳು ಬೇರೆ ಕೆಲಸವಿದೆಯೆಂದು ಅಪ್ಪಣೆ ಪಡೆದು ಹೊರಟುಹೋದರು.

---

## ಅಧ್ಯಾಯ ೧೧

**ಸ್ಥಳ:— ಆಲಂಬಜಾರ್ ಮಠ. ವರ್ಷ– ಕ್ರಿ. ಶ. ೧೮೯೭.**

ಸ್ವಾಮಿಜಿ ಮೊದಲುಸಾರಿ ವಿಲಾಯಿತಿಯಿಂದ ಹಿಂತಿರುಗಿ ಕಲ್ಕತ್ತೆಗೆ ಬಂದಮೇಲೆ ಉತ್ಸಾಹಶಾಲಿಗಳಾದ ಬಹುಜನ ಯುವಕರು ಸ್ವಾಮಿಗಳಲ್ಲಿ ಬಂದು ಹೋಗುತ್ತಿದ್ದರೆಂದು ಹಿಂದೆಯೆ ಹೇಳಿದ್ದೇವೆ. ಆ ಸಮಯದಲ್ಲಿ ಸ್ವಾಮಿಜಿ ಮದುವೆಯಿಲ್ಲದ ಯುವಕರಿಗೆ ಬ್ರಹ್ಮಚರ್ಯ ಮತ್ತು ತ್ಯಾಗದ ವಿಷಯವಾಗಿ ಸರ್ವದಾ ಉಪದೇಶ ಮಾಡುತ್ತಲೂ, ಸನ್ಯಾಸವನ್ನು ಎಂದರೆ ತಮ್ಮ ಮೋಕ್ಷ ಮತ್ತು ಜಗತ್ತಿನ ಕಲ್ಯಾಣಕ್ಕಾಗಿ ಸರ್ವಸ್ವವನ್ನೂ ತ್ಯಾಗ ಮಾಡುವಿಕೆಯನ್ನು ಕೈಕೊಳ್ಳಬೇಕೆಂದು ಬಹುವಾಗಿ ಅವರನ್ನು ಉತ್ಸಾಹಗೊಳಿಸುತ್ತಲೂ ಇದ್ದದ್ದನ್ನು ನೋಡಿದ್ದೇವೆ. ಸನ್ಯಾಸ ತೆಗೆದುಕೊಳ್ಳದಿದ್ದರೆ ಯಾರಿಗೂ ಯಥಾರ್ಥವಾದ ಆತ್ಮಜ್ಞಾನವುಂಟಾಗುವುದು ಸಾಧ್ಯವಲ್ಲ: ಅಷ್ಟೇಕೆ? ಬಹುಜನ ಹಿತಕರವೂ ಬಹುಜನ ಸುಖಕರವೂ ಆದ ಯಾವ ವಿಧವಾದ ಐಹಿಕ ಕಾರ್ಯವನ್ನು ಮಾಡುವುದೂ ಅದರಿಂದ ಸಿದ್ಧಿಯನ್ನು ಪಡೆಯುವುದೂ ಸನ್ಯಾಸವಿಲ್ಲದೆ ಆಗುವುದಿಲ್ಲ.–ಎಂದು ಅವರು

ಅನೇಕವೇಳೆ ಹೇಳಿದ್ದನ್ನು ನಾವು ಕೇಳಿದ್ದೇವೆ. ಅವರು ಯಾವಾಗಲೂ ಉತ್ಸಾಹಶಾಲಿಗಳಾದ ಯುವಕರ ಮುಂದೆ ತ್ಯಾಗದ ಉಚ್ಚಾದರ್ಶವನ್ನು ತಂದಿಡುತ್ತಿದ್ದರು ; ಮತ್ತು ಯಾರಾದರೂ ಸನ್ಯಾಸ ತೆಗೆದುಕೊಳ್ಳಬೇಕೆಂಬ ಅಭಿಪ್ರಾಯವನ್ನು ತೋರಿಸಿದರೆ ಅವರಿಗೆ ಹೆಚ್ಚು ಉತ್ಸಾಹವನ್ನುಂಟು ಮಾಡಿ ಕೃಪೆಯನ್ನು ತೋರಿಸುತ್ತಿದ್ದರು. ಅವರ ಉತ್ಸಾಹದ ಮಾತು ಗಳಿಂದ ಆಗ ಕೆಲವು ಜನ ಭಾಗ್ಯಶಾಲಿಗಳಾದ ಯುವಕರು ಸಂಸಾರಾಶ್ರಮ ವನ್ನು ತ್ಯಾಗಮಾಡಿ ಅವರಿಂದಲೇ ಸನ್ಯಾಸಾಶ್ರಮವನ್ನು ಕೈಗೊಂಡರು. ಇವರಲ್ಲಿ ಮೊದಲು ನಾಲ್ಕು ಜನರಿಗೆ ಸನ್ಯಾಸ ಕೊಟ್ಟರಷ್ಟೆ. ಆ ದಿನ ಶಿಷ್ಯನ ಮನಸ್ಸಿನಲ್ಲಿ ಇವೊತ್ತಿಗೂ ನೆನೆಪಿನಲ್ಲಿದೆ.

ಸ್ವಾಮಿ ನಿತ್ಯಾನಂದ, ವಿರಜಾನಂದ, ಪ್ರಕಾಶಾನಂದ ಮತ್ತು ನಿರ್ಭ ಯಾನಂದ ಎಂಬ ಹೆಸರುಗಳನ್ನು ಪಡೆದು ಶ್ರೀರಾಮಕೃಷ್ಣ ಮಂಡಲಿಯಲ್ಲಿ ಈಗ ಯಾರು ಸುಪರಿಚಿತರಾಗಿದ್ದಾರೆಯೊ ಅವರೇ ಆ ದಿನ ಸನ್ಯಾಸವನ್ನು ಪಡೆದವರು. ಮಠದ ಸನ್ಯಾಸಿಗಳಿಂದ ಶಿಷ್ಯನು ಅನೇಕಸಲ ಕೇಳಿರು ವುದೇನೆಂದರೆ, – ಅವರಲ್ಲಿ ಒಬ್ಬರಿಗೆ ಸನ್ಯಾಸ ಕೊಡಿಸದಿರುವುದಕ್ಕೋಸ್ಕರ ಸ್ವಾಮಿಜಿ ಗುರುಭ್ರಾತೃಗಳು ಅವರಿಗೆ ಬಹುವಾಗಿ ಹೇಳುತ್ತಿದ್ದರು. ಸ್ವಾಮಿಜಿ ಅದಕ್ಕೆ ಉತ್ತರವಾಗಿ "ನಾವೂ ಪಾಪಿ ತಾಪಿ ದೀನ ದುಃಖಿ ಪತಿತ ಇಂಥವರ ಉದ್ಧಾರ ವಿಷಯದಲ್ಲಿ ಹಿಂಜರಿದರೆ ಅದನ್ನು ಮಾಡು ವವರು ಇನ್ಯಾರು ? – ನೀವು ಈ ವಿಷಯದಲ್ಲಿ ಯಾವ ವಿಧವಾಗಿಯೂ ಅಡ್ಡಿಯಾಗಬೇಡಿ" ಎಂದರು. ಸ್ವಾಮಿಜಿಯ ಬಲಿಷ್ಠವಾದ ಇಚ್ಛೆಯೇ ಕೈಗೂಡಿತು. ಅನಾಥಶರಣರಾದ ಸ್ವಾಮಿಜಿ ತಮ್ಮ ಕೃಪಾಗುಣದಿಂದ ಆತನಿಗೆ ಸನ್ಯಾಸ ಕೊಡುವುದಕ್ಕೆ ಮನಸ್ಸುಮಾಡಿದರು.

ಶಿಷ್ಯನು ಈಗ ಎರಡು ದಿನಗಳಿಂದ ಮಠದಲ್ಲಿಯೆ ಇದ್ದಾನೆ. ಸ್ವಾಮಿಜಿ ಶಿಷ್ಯನನ್ನು ಕುರಿತು "ನೀನು ಭಟ್ಟಾಚಾರ್ಯ ಬ್ರಾಹ್ಮಣ ; ನಾಳೆ ಬೆಳಗ್ಗೆ ನೀನೆ ಇವರ ಶ್ರಾದ್ಧಮಾಡಿಸು ; ಮರುದಿನ ಇವರೆಲ್ಲರಿಗೂ ಸನ್ಯಾಸಕೊಡುತ್ತೇನೆ. ಇವತ್ತು ಪಂಚಾಂಗ ಪುಸ್ತಕ ಎಲ್ಲವನ್ನೂ ಓದಿ ಹೇಳಿ ನೋಡಿಬಿಡು" ಎಂದು ಹೇಳಿದರು. ಶಿಷ್ಯನು ಸ್ವಾಮಿಜಿ ಆಜ್ಞೆ ಯನ್ನು ಶಿರಸಾವಹಿಸಿದನು.

ಸನ್ಯಾಸ ತೆಗೆದುಕೊಳ್ಳುವ ಹಿಂದಿನದಿನ ಸನ್ಯಾಸವ್ರತವನ್ನು ಸ್ವೀಕರಿ ಸುವುದಕ್ಕೆ ನಿಶ್ಚಯಮಾಡಿಕೊಂಡು ಮೇಲೆ ಹೇಳಿದ ನಾಲ್ಕುಜನ ಬ್ರಹ್ಮ

ಚಾರಿಗಳು ತಲೆಯನ್ನು ಮುಂಡನ ಮಾಡಿಸಿಕೊಂಡು ಗಂಗೆಯಲ್ಲಿ ಸ್ನಾನ ಮಾಡಿ ಶುಭ್ರವಸ್ತ್ರವನ್ನುಟ್ಟು, ಸ್ವಾಮಿಜಿ ಪಾದಪದ್ಮಗಳನ್ನು ವಂದಿಸಿ, ಅವರ ಸ್ನೇಹಾಶೀರ್ವಾದಗಳನ್ನು ಪಡೆದು ಶ್ರಾದ್ಧ ಮಾಡುವುದಕ್ಕೆ ಸಿದ್ಧ ರಾದರು.

ಇಲ್ಲಿ ಒಂದು ಸಂಗತಿಯನ್ನು ಹೇಳಿದರೆ ಅಸಂಬದ್ಧವಾಗಲಾರದು. ಅದೇನೆಂದರೆ, ಶಾಸ್ತ್ರರೀತಿ ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳುವವರು ಆ ಕಾಲದಲ್ಲಿ ತಮ್ಮ ಶ್ರಾದ್ಧವನ್ನು ತಾವೇ ಮಾಡಿಕೊಳ್ಳಬೇಕು. ಏಕೆಂದರೆ ಸನ್ಯಾಸವನ್ನು ತೆಗೆದುಕೊಂಡರೆ ಲೌಕಿಕ ಅಥವಾ ವೈದಿಕ ಯಾವ ವಿಷಯ ದಲ್ಲಿಯೂ ಅವರಿಗೆ ಅಲ್ಲಿಂದ ಮುಂದಕ್ಕೆ ಅಧಿಕಾರವಿರುವುದಿಲ್ಲ. ಮಕ್ಕಳು ಮೊಮ್ಮಕ್ಕಳು ಮುಂತಾದವರು ಮಾಡುವ ಶ್ರಾದ್ಧ ಪಿಂಡದಾನಾದಿಗಳ ಫಲ ಅವರನ್ನು ಅಲ್ಲಿಂದ ಮುಂದೆ ಸ್ಪರ್ಶಮಾಡಲಾರವು. ಆದ್ದರಿಂದ ಸನ್ಯಾಸ ತೆಗೆದುಕೊಳ್ಳುವುದಕ್ಕೆ ಮೊದಲು ತನ್ನ ಶ್ರಾದ್ಧವನ್ನು ತಾನೇ ಮಾಡಿಕೊಳ್ಳ ಬೇಕು; ತನ್ನ ಕಾಲಿನಮೇಲೆ ತನ್ನ ಪಿಂಡವನ್ನು ಹಾಕಿಕೊಂಡು ಸಂಸಾರದ ಅಷ್ಟೇ ಏಕೆ, ತನ್ನ ದೇಹದ, ಪೂರ್ವ ಸಂಬಂಧಾದಿಗಳನ್ನು ಸಂಕಲ್ಪದ್ವಾರಾ ಪೂರ್ತಿಯಾಗಿ ತ್ಯಜಿಸಲು ಸಾಧನಮಾಡಬೇಕು. ಇದನ್ನು ಸನ್ಯಾಸ ತೆಗೆದುಕೊಳ್ಳುವುದರ ಅಧಿವಾಸಕ್ರಿಯೆಯೆಂದು ಹೇಳಬಹುದು. ಸ್ವಾಮಿಜಿ ಈ ವೈದಿಕ ಕರ್ಮಗಳಲ್ಲೆಲ್ಲಾ ಪೂರ್ಣವಾದ ನಂಬುಗೆಯನ್ನಿಟ್ಟುಕೊಂಡಿ ದ್ದರು; ಮತ್ತು ಈ ಕರ್ಮಗಳೆಲ್ಲಾ ಶಾಸ್ತ್ರೋಕ್ತವಾಗಿ ಸರಿಯಾಗಿ ನಡೆಯು ದಿದ್ದರೆ ಬಹು ಅಸಮಾಧಾನಪಟ್ಟುಕೊಳ್ಳುತ್ತಿದ್ದರು. ಇದನ್ನು ಶಿಷ್ಯ ಗಮನಿಸಿದನು. ಈಗಿನ ಕಾಲದಲ್ಲಿ ಕಾವಿಯ ಬಟ್ಟೆಯನ್ನುಟ್ಟು ಹೊರಗೆ ಬಂದುಬಿಟ್ಟರೆ ಅನೇಕರು ಸನ್ಯಾಸದೀಕ್ಷೆಯನ್ನು ಪಡೆದೆವೆಂದು ಕೊಳ್ಳುತ್ತಾರಲ್ಲಾ, ಇದನ್ನು ಸ್ವಾಮಿಜಿ ಒಪ್ಪುತ್ತಿರಲಿಲ್ಲ. ಬಹುಕಾಲ ದಿಂದ ಗುರುಪರಂಪರೆಯನ್ನು ಅನುಸರಿಸಿ ಪ್ರಚಾರಕ್ಕೆ ಬಂದಿರುವ ಮತ್ತು ಬ್ರಹ್ಮಸಾಧನಕ್ಕೆ ಉಪಯುಕ್ತವಾದ ಸನ್ಯಾಸ ವ್ರತವನ್ನು ತೆಗೆದುಕೊಳ್ಳು ವುದಕ್ಕೆ ಮೊದಲು ನಡೆಯಬೇಕಾದ ನೈಷ್ಠಿಕಸಂಸ್ಕಾರಗಳನ್ನು ಬ್ರಹ್ಮಚಾರಿ ಗಳಿಂದ ಯಥಾವತ್ತಾಗಿ ನಡೆಸುತ್ತಿದ್ದರು. ನಾವು ಮತ್ತೂ ಒಂದು ಸಂಗತಿಯನ್ನು ಕೇಳಿದ್ದೇವೆ; ಅದೇನೆಂದರೆ, ಪರಮಹಂಸರು ಪರಂಧಾಮ ವನ್ನು ಪಡೆದ ಬಳಿಕ ಸ್ವಾಮಿಜಿ ಉಪನಿಷತ್ತು ಮತ್ತು ಶಾಸ್ತ್ರಗಳಲ್ಲಿರುವ ಸನ್ಯಾಸವಿಧಿಪದ್ಧತಿಗಳನ್ನು ಶೇಖರಿಸಿಕೊಂಡು, ಗುರುಭ್ರಾತೃಗಳೊಡನೆ

ಒಂದುಕಡೆ ಪರಮಹಂಸರ ಚಿತ್ರಪಠದ ಸಮಕ್ಷಮದಲ್ಲಿ ವೈದಿಕ ರೀತಿಯನ್ನನುಸರಿಸಿ ಸನ್ಯಾಸವನ್ನು ತೆಗೆದುಕೊಂಡರಂತೆ.

ಆಲಂಬಜಾರ್ ಮಠದ ಮಹಡಿಯ ಮೇಲಿದ್ದ ನೀರಿನ ಮನೆಯಲ್ಲಿ ಶ್ರಾದ್ಧಕ್ಕೆ ಬೇಕಾದ ಪದಾರ್ಥಗಳೆಲ್ಲಾ ಸಿದ್ಧಮಾಡಲ್ಪಟ್ಟಿದ್ದವು. ನಿತ್ಯಾನಂದ ಸ್ವಾಮಿಗಳು ಶ್ರಾದ್ಧಗಳನ್ನು ಅನೇಕಸಾರಿ ಮಾಡಿಸಿದ್ದಾರೆ; ಆದ್ದರಿಂದ ಬೇಕಾದ ಪದಾರ್ಥಗಳನ್ನು ಒದಗಿಸಿಕೊಳ್ಳುವುದರಲ್ಲಿ ಏನೂ ಕೊರತೆಯಿಲ್ಲ; ಶಿಷ್ಯನು ಸ್ನಾನಮಾಡಿಕೊಂಡು ಸ್ವಾಮಿಜಿ ಅಪ್ಪಣೆಯಂತೆ ಪೌರೋಹಿತ್ಯ ಮಾಡಿಸುವುದಕ್ಕೆ ಕುಳಿತನು. ಮಂತ್ರಗಳನ್ನು ಹೇಳಿಕೊಡುವುದಕ್ಕೂ ಹೇಳುವುದಕ್ಕೂ ಆರಂಭವಾಯಿತು. ಸ್ವಾಮಿಜಿ ಒಂದೊಂದುಸಾರಿ ಬಂದು ಬಂದು ಹೋಗುತ್ತಿದ್ದರು. ಶ್ರಾದ್ಧದ ಕೊನೆಯಲ್ಲಿ ನಾಲ್ಕುಜನ ಬ್ರಹ್ಮಚಾರಿಗಳೂ ಯಾವಾಗ ತಮ್ಮ ತಮ್ಮ ಪಾದಗಳ ಮೇಲೆ ಪಿಂಡಗಳನ್ನು ಹಾಕಿಕೊಂಡು ಇಂದಿನಿಂದ ಸಂಸಾರದ ಭಾಗಕ್ಕೆ ಸತ್ತವರಂತಾದರೋ ಆಗ ಶಿಷ್ಯನ ಮನಸ್ಸಿನಲ್ಲಿ ತುಂಬ ವ್ಯಾಕುಲತೆಯುಂಟಾಯಿತು. ಸನ್ಯಾಸದ ಕಠೋರತೆಯನ್ನು ನೆನೆದುಕೊಂಡು ಮಂಕು ಬಡಿದಂತಾಯಿತು. ಪಿಂಡ ಮುಂತಾದುವುಗಳನ್ನು ಇವರೆಲ್ಲಾ ತೆಗೆದುಕೊಂಡು ಗಂಗೆಗೆ ಹೊರಟು ಹೋಗಲು, ಸ್ವಾಮಿಜಿ ಶಿಷ್ಯನ ವ್ಯಾಕುಲತೆಯನ್ನು ನೋಡಿ "ಇದನ್ನೆಲ್ಲಾ ನೋಡಿ ಕೇಳಿ ನಿನ್ನ ಮನಸ್ಸಿನಲ್ಲಿ ತುಂಬ ಭಯವುಂಟಾಗಿದೆ— ಅಲ್ಲವೆ ನಯ್ಯ?" ಎಂದು ಕೇಳಿದರು. ಶಿಷ್ಯನು ತಲೆಯನ್ನು ಬಗ್ಗಿಸಿಕೊಂಡು ಸಮ್ಮತಿಯನ್ನು ಸೂಚಿಸಲು, ಸ್ವಾಮಿಜಿ ಅವನಿಗೆ ಹೀಗೆಂದು ಹೇಳಿದರು:— ಸಂಸಾರದಲ್ಲಿ ಇಂದಿನಿಂದ ಇವರು ಸತ್ತವರು, ನಾಳೆಯಿಂದ ಇವರಿಗೆ ಹೊಸ ದೇಹ ಹೊಸ ಯೋಚನೆ ಹೊಸ ಬಟ್ಟೆಬರಿಗಳು ಬರುತ್ತವೆ—ಇವರು ಬ್ರಹ್ಮವೀರ್ಯದಲ್ಲಿ ಪ್ರದೀಪ್ತರಾಗಿ ಉರಿಯುತ್ತಿರುವ ಬೆಂಕಿಯಂತಿರುತ್ತಾರೆ. "ನ ಧನೇನ ನ ಚೇಜ್ಯಯಾ ತ್ಯಾಗೇನೈಕೇನ ಅಮೃತತ್ವಮಾನಶುಃ" ಧನದಿಂದಲ್ಲ, ಯಜ್ಞಯಾಗಾದಿಗಳಿಂದಲ್ಲ; ತ್ಯಾಗವೊಂದರಿಂದಲೇ ಅಮೃತತ್ವವನ್ನು ಪಡೆದರು.

ಸ್ವಾಮಿಜಿ ಮಾತನ್ನು ಕೇಳಿ ಶಿಷ್ಯನು ಮಾತು ಹೊರಡದೆ ನಿಂತುಕೊಂಡಿದ್ದನು. ಸನ್ಯಾಸದ ಕಠೋರತೆಯನ್ನು ನೆನೆದುಕೊಂಡು ಆತನ ಬುದ್ಧಿಯು ಸ್ತಂಭಿತವಾಗಿ ಹೋಗಿತ್ತು — ಶಾಸ್ತ್ರಜ್ಞಾನಾಡಂಬರಗಳಿಂದ ದೂರವಾಗಿ ಹೋಗಿಬಿಟ್ಟಿತ್ತು. ಅವನು ಬರೆಯ ಮಾತಿಗೂ ಕಾರ್ಯಕ್ಕೂ

ಎಷ್ಟು ಪ್ರಭೇದವಿದೆಯೆಂದು ಭಾವಿಸಿಕೊಳ್ಳತೊಡಗಿದನು.

ಶ್ರಾದ್ಧಮಾಡಿಕೊಂಡ ನಾಲ್ಕು ಜನ ಬ್ರಹ್ಮಚಾರಿಗಳು ಈ ಮಧ್ಯೆ ಗಂಗೆಯಲ್ಲಿ ಪಿಂಡವನ್ನು ಹಾಕಿ ಬಂದು ಸ್ವಾಮಿಜಿ ಪಾದಪದ್ಮದಲ್ಲಿ ನಮ ಸ್ಕಾರಮಾಡಿದರು. ಸ್ವಾಮಿಜಿ ಆಶೀರ್ವಾದಮಾಡಿ "ನೀವು ಮಾನವ ಜೀವನದ ಶ್ರೇಷ್ಠವ್ರತವನ್ನು ಕೈಗೊಳ್ಳುವುದರಲ್ಲಿ ಉತ್ಸಾಹಿತರಾಗಿದ್ದೀರಿ; ನಿಮ್ಮ ಜನ್ಮ ಧನ್ಯ; ಧನ್ಯ ನಿಮ್ಮ ವಂಶ; ಧನ್ಯಳು ನಿಮ್ಮನ್ನು ಹೆತ್ತ ತಾಯಿ "ಕುಲಂ ಪವಿತ್ರಂ ಜನನೀ ಕೃತಾರ್ಥಾ" ಎಂದು ಹೇಳಿದರು.

ಆ ದಿವಸ ರಾತ್ರಿ ಊಟವಾದ ಮೇಲೆ ಸ್ವಾಮಿಜಿ ಕೇವಲ ಸನ್ಯಾಸ ಧರ್ಮವಿಷಯವಾಗಿಯೆ ಮಾತುಕಥೆಗಳನ್ನಾಡುತ್ತಿದ್ದರು. ಸನ್ಯಾಸವ್ರತ ವನ್ನು ಕೈಗೊಳ್ಳುವುದರಲ್ಲಿ ಉತ್ಸುಕರಾಗಿದ್ದ ಬ್ರಹ್ಮಚಾರಿಗಳ ಕಡೆಗೆ ನೋಡುತ್ತ ಹೀಗೆಂದು ಹೇಳಿದರು:— "'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ' - ಇದೇ ಸನ್ಯಾಸದ ನಿಜವಾದ ಉದ್ದೇಶ? ಸನ್ಯಾಸ ವಿಲ್ಲದಿದ್ದರೆ ಯಾರೂ ಯಾವಾಗಲೂ ಬ್ರಹ್ಮಜ್ಞರಾಗಲಾರರು—ಈ ಮಾತನ್ನು ವೇದ ವೇದಾಂತಗಳು ಉದ್ಘೋಷಿಸಿ ಹೇಳುತ್ತವೆ. 'ಈ ಸಂಸಾರವನ್ನೂ ನಡೆಸಿಕೊಂಡು ಹೋಗುತ್ತೇನೆ, ಬ್ರಹ್ಮಜ್ಞನೂ ಆಗುತ್ತೇನೆ? ಎಂದು ಯಾರು ಹೇಳುತ್ತಾರೆಯೊ ಅವರ ಮಾತಿಗೆ ಕಿವಿಕೊಡಬೇಡಿರಿ. ಅವೆಲ್ಲ ಪ್ರಚ್ಛನ್ನ ಭೋಗಿಗಳ ಪೊಳ್ಳು ಮಾತುಗಳು. ಒಂದಿಷ್ಟು ಸಂಸಾರ ಭೋಗೇಚ್ಛೆ ಯಾರಿಗೆ ಇರುತ್ತದೆಯೊ,—ಒಂದಿಷ್ಟು ಆಶೆ ಯಾರಿಗೆ ಇರು ತ್ತದೆಯೊ - ಅವರಿಗೆ ಇದು ಬಹು ಕಠಿನವಾದ ಮಾರ್ಗವೆಂದು ಭಯವಾಗು ವುದು. ಅದಕ್ಕೋಸ್ಕರವೆ ತಮ್ಮ ಮನಸ್ಸಿಗೆ ಸಮಾಧಾನ ತಂದುಕೊಳ್ಳುವು ದಕ್ಕೋಸ್ಕರ 'ಈ ಪಕ್ಷ ಆ ಪಕ್ಷ ಎರಡು ಪಕ್ಷಗಳನ್ನೂ ಎಂದರೆ ಭೋಗ ತ್ಯಾಗಗಳೆರಡನ್ನೂ ನಡೆಸಿಕೊಂಡು ಹೋಗಬೇಕು' ಎಂದು ಹೇಳಿಕೊಂಡು ತಿರುಗುತ್ತಾರೆ. ಅದೆಲ್ಲಾ ಹುಚ್ಚರಮಾತು, ಉನ್ಮತ್ತರ ಪ್ರಲಾಪ - ಅಶಾ ಸ್ತ್ರೀಯ - ಅವೈದಿಕ ಮತ. ತ್ಯಾಗವಿಲ್ಲದೆ ಮುಕ್ತಿಯಿಲ್ಲ. ತ್ಯಾಗವಿಲ್ಲದೆ ಪರಾಭಕ್ತಿ ಬರುವುದಿಲ್ಲ. ತ್ಯಾಗ - ತ್ಯಾಗ - "ನಾನ್ಯಃ ಪಂಥಾವಿದ್ಯತೇ ಅಯನಾಯ" ಗೀತೆಯಲ್ಲಿಯೂ ಹೇಳಿದೆ - 'ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ಯಾಸಂ ಕವಯೋ ವಿದುಃ'."

ಸಂಸಾರದ ತಾಪತ್ರಯವನ್ನು ಬಿಟ್ಟುಬಿಡದಿದ್ದರೆ ಯಾರಿಗೂ ಮುಕ್ತಿ ಲಭಿಸುವುದಿಲ್ಲ. ಸಂಸಾರಾಶ್ರಮದಲ್ಲಿ ಯಾರು ಇರುತ್ತಾರೆಯೊ ಅವರು

ಒಂದಲ್ಲದಿದ್ದರೆ ಮತ್ತೊಂದು ಆಶೆಗೆ ದಾಸರಾಗಿ ಬಂಧನದಲ್ಲಿ ಸಿಕ್ಕಿಕೊಂಡಿರುತ್ತಾರೆಂಬುದಕ್ಕೆ ಇದೆ ಪ್ರಮಾಣ.— ಇಲ್ಲದಿದ್ದರೆ ಸಂಸಾರದಲ್ಲಿ ಹೇಗೆ ಇರುತ್ತಾನೆ? ಕಾಮಿನಿಯ ದಾಸ, ಇಲ್ಲದಿದ್ದರೆ ಕಾಂಚನದ ದಾಸ, ಇಲ್ಲದಿದ್ದರೆ ಮಾನ ಯಶಸ್ಸು ವಿದ್ಯೆ ಪಾಂಡಿತ್ಯ— ಇವುಗಳ ದಾಸ. ಈ ದಾಸತ್ವದಿಂದ ಹೊರಗೆ ಹೋಗಿ ಬಿದ್ದರೆ ಆಗ ಮುಕ್ತಿಮಾರ್ಗದಲ್ಲಿ ಮುಂದಾಗಲು ಸಮರ್ಥನಾದಾನು! ಯಾರು ಎಷ್ಟಾದರೂ ಹೇಳಲಿ, ನಾನೇನೋ ತಿಳಿದುಕೊಂಡಿದ್ದೇನೆ— ಇದನ್ನೆಲ್ಲಾ ಬಿಟ್ಟು ಬಿಡದಿದ್ದರೆ, ಸನ್ಯಾಸವನ್ನು ಕೈಗೊಳ್ಳದಿದ್ದರೆ ಯಾವುದರಿಂದಲೂ ಜೀವನಿಗೆ ರಕ್ಷಣವಿಲ್ಲ— ಯಾವುದರಿಂದಲೂ ಬ್ರಹ್ಮಜ್ಞಾನವಾಗುವ ಸಂಭವವಿಲ್ಲ.''

ಶಿಷ್ಯ :—ಮಹಾಶಯರೆ, ಸನ್ಯಾಸವನ್ನು ತೆಗೆದುಕೊಂಡರೆ ತಾನೇ ಸಿದ್ಧಿಯಾಗುತ್ತದೆಯೆ?

ಸ್ವಾಮಿಜಿ :—ಸಿದ್ಧಿಯಾಗುತ್ತದೆಯೊ ಬಿಡುತ್ತದೆಯೊ ಅದು ಆಮೇಲಿನ ಮಾತು. ನೀನು ಎಂದಿನವರಿಗೆ ಈ ಭೀಷಣ ಸಂಸಾರದ ಎಲ್ಲೆಯಿಂದ ಹೊರಗೆ ಹೋಗಿ ಬೀಳಲಾರೆಯೊ— ಎಲ್ಲಿಯವರಿಗೆ ಆಶಾವಾಸನಗಳ ಗುಲಾಮಗಿರಿಯನ್ನು ಬಿಡಲಾರೆಯೊ— ಅಲ್ಲಿಯವರೆಗೆ ನಿನಗೆ ಭಕ್ತಿ ಮುಕ್ತಿ ಯಾವುದೂ ಬರುವುದಿಲ್ಲ. ಬ್ರಹ್ಮಜ್ಞನಿಗೆ ಸಿದ್ಧಿ ಋದ್ಧಿಗಳೆಲ್ಲಾ ಅತಿ ತುಚ್ಛವಾದುವುಗಳು.

ಶಿಷ್ಯ :—ಮಹಾಶಯರೆ, ಸನ್ಯಾಸಕ್ಕೆ ಕಾಲಾಕಾಲಗಳಾಗಲಿ, ಪ್ರಕಾರ ಪ್ರಭೇದಗಳಾಗಲಿ ಇವೆಯೆ?

ಸ್ವಾಮಿಜಿ :—ಸನ್ಯಾಸ ಧರ್ಮಸಾಧನಕ್ಕೆ ಕಾಲಾಕಾಲವಿಲ್ಲ. ಶ್ರುತಿ ಹೇಳುವುದೇನೆಂದರೆ, ''ಯದಹರೇವ ವಿರಜೇತ್, ತದಹರೇವ ಪ್ರವ್ರಜೇತ್''— ಎಂದು ವೈರಾಗ್ಯ ಹುಟ್ಟುತ್ತದೆಯೊ ಅಂದೇ ಸನ್ಯಾಸಿಯಾಗಿ ಹೊರಟುಹೋಗಬೇಕು. ಯೋಗವಾಸಿಷ್ಠದಲ್ಲಿಯೂ ಹೇಳಿದೆ—

**'ಯುವೈವ ಧರ್ಮಶೀಲಃ ಸ್ಯಾತ್ ಅನಿತ್ಯಂ ಖಲು ಜೀವಿತಂ ।**
**ಕೋ ಹಿ ಜಾನಾತಿ ಕಸ್ಯಾದ್ಯ ಮೃತ್ಯುಕಾಲೋ ಭವಿಷ್ಯತಿ ॥'**

ಜೀವನ ಅನಿತ್ಯವಾದುದರಿಂದ ಯೌವನದಲ್ಲಿಯೇ ಧರ್ಮಶೀಲನಾಗಬೇಕು. ಯಾರಿಗೆ ಯಾವಾಗ ಮೃತ್ಯು ಬಂದೊದಗುವುದೆಂಬುದನ್ನು ಯಾರು ಬಲ್ಲರು? ಶಾಸ್ತ್ರದಲ್ಲಿ ನಾಲ್ಕು ವಿಧವಾದ ಸನ್ಯಾಸ ವಿಧಾನ ಕಂಡು ಬರುತ್ತದೆ:— (೧) ವಿದ್ವತ್ ಸನ್ಯಾಸ, (೨) ವಿವಿದಿಷಾ ಸನ್ಯಾಸ, (೩) ಮರ್ಕಟ ಸನ್ಯಾಸ,

ಮತ್ತು (೪) ಆತುರ ಸನ್ಯಾಸ. ಹಠಾತ್ತಾಗಿ ನಿಜವಾದ ವೈರಾಗ್ಯ ಹುಟ್ಟಿತು. ಆಗ ಸನ್ಯಾಸವನ್ನು ತೆಗೆದುಕೊಂಡು ಹೊರಟುಹೋದರೆ— ಇದು ಪೂರ್ವಜನ್ಮ ಸಂಸ್ಕಾರವಿಲ್ಲದಿದ್ದರೆ ಹುಟ್ಟುವುದಿಲ್ಲ— ಇದರ ಹೆಸರೆ ವಿದ್ವತ್ ಸನ್ಯಾಸ. ಆತ್ಮ ತತ್ತ್ವವನ್ನು ತಿಳಿಯುವ ಪ್ರಬಲವಾದ ಆಶೆಯಿಂದ ಶಾಸ್ತ್ರಪಾಠ ಸಾಧನಾದಿಗಳ ಮೂಲಕ ಸ್ವಸ್ವರೂಪವನ್ನು ತಿಳಿದುಕೊಳ್ಳುವುದಕ್ಕೋಸ್ಕರ ಯಾರಾದರೂ ಬ್ರಹ್ಮಜ್ಞ ಪುರುಷರ ಹತ್ತಿರ ಸನ್ಯಾಸವನ್ನು ತೆಗೆದುಕೊಂಡು ಅಧ್ಯಯನ ಸಾಧನ ಭಜನಗಳನ್ನು ಮಾಡುವುದಕ್ಕೆ ತೊಡಗಿದರೆ— ಇದಕ್ಕೆ ವಿವಿದಿಷಾ ಸನ್ಯಾಸವೆಂದು ಹೆಸರು. ಸಂಸಾರದಲ್ಲಿ ಏಟುತಿಂದೊ, ನೆಂಟರಿಷ್ಟರನ್ನು ಕಳೆದುಕೊಂಡೊ ಅಥವಾ ಮತ್ತಾವ ಕಾರಣದಿಂದಲೊ ಕೆಲಕೆಲವರು ಹೊರಟುಹೋಗಿ ಸನ್ಯಾಸ ತೆಗೆದುಕೊಳ್ಳುವರು; ಆದರೆ ಈ ವೈರಾಗ್ಯ ಸ್ಥಿರವಾಗಿರುವುದಿಲ್ಲ– ಇದರ ಹೆಸರು ಮರ್ಕಟ ಸನ್ಯಾಸ. "ವೈರಾಗ್ಯಪಡೆದು ಪಶ್ಚಿಮದಕಡೆ ಹೋದ; ಹಾಗೆಯೇ ಒಂದು ಚಾಕರಿ ಸಂಪಾದಿಸಿಕೊಂಡ; ಆಮೇಲೆ ಬೇಕಾಗಿದ್ದರೆ ತನ್ನ ಪರಿವಾರವನ್ನು ಕರಸಿಕೊಂಡ; ಇಲ್ಲದಿದ್ದರೆ ಮರಳಿ ಮದುವೆಮಾಡಿಕೊಂಡು ಬಿಟ್ಟ" ಎಂದು ಪರಮಹಂಸರು ಹೇಳುತ್ತಿದ್ದರಲ್ಲಾ ಹಾಗೆ. ಮತ್ತೊಂದು ವಿಧವಾದ ಸನ್ಯಾಸವಿದೆ; ಅದು ಹೇಗೆಂದರೆ, ಒಬ್ಬನು ಮುಮೂರ್ಷು ಎಂದರೆ ಬದುಕುವ ಆಶೆಯಿಲ್ಲದೆ ಕಾಯಿಲೆಯಲ್ಲಿ ನರಳುತ್ತ ಹಾಸಿಗೆಯ ಮೇಲೆ ಮಲಗಿದ್ದಾನೆ— ಅವನಿಗೆ ಆಗ ಸನ್ಯಾಸ ಕೊಡುವುದಕ್ಕೆ ವಿಧಿಯಿದೆ. ಅವನು ಸತ್ತರೆ ಪವಿತ್ರವಾದ ಸನ್ಯಾಸ ವ್ರತವನ್ನು ಕೈಗೊಂಡು ದೇಹವನ್ನು ಬಿಡುತ್ತಾನೆ; ಮುಂದಿನ ಜನ್ಮದಲ್ಲಿ ಒಳ್ಳೆಯ ಜನ್ಮ ಬರುತ್ತದೆ; ಹಾಗಲ್ಲದೆ ಬದುಕಿಕೊಂಡು ಬಿಟ್ಟರೆ, ಮತ್ತೆ ಮನೆಗೆ ಹಿಂತಿರುಗಿ ಹೋಗದೆ ಬ್ರಹ್ಮಜ್ಞಾನವನ್ನು ಪಡೆಯುವುದಕ್ಕೋಸ್ಕರ ಪ್ರಯತ್ನ ಮಾಡುತ್ತ ಸನ್ಯಾಸಿಯಾಗಿ ಕಾಲಕಳೆಯಬೇಕು. ನಿಮ್ಮ ಚಿಕ್ಕಪ್ಪ ಶಿವಾನಂದಸ್ವಾಮಿಗಳಿಗೆ ಆತುರ ಸನ್ಯಾಸವನ್ನು ಕೊಟ್ಟಿತ್ತು; ಆತನು ಸತ್ತು ಹೋದನು; ಆದರೆ ಹೀಗೆ ಸನ್ಯಾಸ ತೆಗೆದುಕೊಂಡದ್ದರಿಂದ ಆತನಿಗೆ ಉತ್ತಮವಾದ ಜನ್ಮ ಬರುತ್ತದೆ. ಸನ್ಯಾಸ ತೆಗೆದುಕೊಳ್ಳದಿದ್ದರೆ ಆತ್ಮಜ್ಞಾನ ಬರುವುದಕ್ಕೆ ಬೇರೆ ಮಾರ್ಗವಿಲ್ಲ.

ಶಿಷ್ಯ:— ಮಹಾಶಯರೆ, ಹಾಗಾದರೆ ಗೃಹಸ್ಥರಿಗೆ ದಾರಿಯಾವುದು?

ಸ್ವಾಮಿಜಿ:— ಪುಣ್ಯವಶಾತ್ ಒಂದಲ್ಲದಿದ್ದರೆ ಮತ್ತೊಂದು ಜನ್ಮದಲ್ಲಿ

ಅವರಿಗೆ ವೈರಾಗ್ಯವುಂಟಾಗುತ್ತದೆ. ವೈರಾಗ್ಯ ಬಂದು ಬಿಟ್ಟರೆ ಮುಗಿದು ಹೋಯಿತು - ಜನನ - ಮರಣ - ಮಾಯಾ ಜಾಲದಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಆಮೇಲೆ ಹೆಚ್ಚು ಹೊತ್ತಾಗುವುದಿಲ್ಲ. ಆದರೆ ಸಕಲ ನಿಯಮಗಳಿಗೂ ಒಂದೆರಡು ಪ್ರತಿ ಉಂಟು. ಸರಿಯಾದ ಗೃಹಸ್ಥ ಧರ್ಮ ವನ್ನು ಪಾಲನ ಮಾಡಿಕೊಂಡು ಬಂದರೂ ಒಬ್ಬಿಬ್ಬರು ಮುಕ್ತ ಪುರುಷ ರಾಗುವುದು ಕಂಡುಬಂದಿದೆ ;– ನಮ್ಮಲ್ಲಿ ನಾಗಮಹಾಶಯರ ಹಾಗೆ.

ಶಿಷ್ಯ :— ಮಹಾಶಯರೆ, ವೈರಾಗ್ಯ ಮತ್ತು ಸನ್ಯಾಸ ಈ ವಿಷಯ ವಾಗಿ ಉಪನಿಷತ್ತು ಮುಂತಾದ ಗ್ರಂಥದಲ್ಲಿಯೂ ವಿಸ್ತಾರವಾದ ಉಪದೇಶ ಸಿಕ್ಕುವುದಿಲ್ಲ.

ಸ್ವಾಮಿಜಿ :— ಏನು ಹುಚ್ಚನ ಹಾಗೆ ಹೇಳುತ್ತಿ ! ವೈರಾಗ್ಯವೆ ಉಪನಿಷತ್ತಿನ ಪ್ರಾಣ. ವಿಚಾರದಿಂದ ಹುಟ್ಟುವ ಪ್ರಜ್ಞೆಯೆ ಉಪನಿಷತ್. ಜ್ಞಾನದ ಕೊನೆಯ ಉದ್ದೇಶ; ಆದರೆ ನಾನು ನಂಬಿಕೊಂಡಿರುವುದೇನೆಂದರೆ, ಭಗವಾನ್ ಬುದ್ಧದೇವನಿಂದ ಈಚೆಗೆ ಭರತಖಂಡದಲ್ಲಿ ಈ ತ್ಯಾಗವ್ರತ ವಿಶೇಷವಾಗಿ ಪ್ರಚಾರಕ್ಕೆ ಬಂದಿದೆ, ಮತ್ತು ವೈರಾಗ್ಯ ವಿಷಯ ವಿತೃಷ್ಣೆಗಳೆ ಧರ್ಮದ ಕೊನೆಯ ಉದ್ದೇಶ್ಯವೆಂದು ವಿವೇಚನೆ ಮಾಡಲ್ಪಟ್ಟಿದೆ. ಬೌದ್ಧ ಧರ್ಮದ ಆ ತ್ಯಾಗ ವೈರಾಗ್ಯಗಳನ್ನು ಹಿಂದೂ ಧರ್ಮ ಹೀರಿಕೊಂಡು ಬಿಟ್ಟಿದೆ. ಭಗವಾನ್ ಬುದ್ಧನಂಥ ತ್ಯಾಗಿ ಮಹಾ ಪುರುಷ ಪ್ರಪಂಚದಲ್ಲಿ ಮತ್ತೊಬ್ಬ ಹುಟ್ಟಿಲ್ಲ.

ಶಿಷ್ಯ :— ಮಹಾಶಯರೆ, ಹಾಗಾದರೆ, ಬುದ್ಧದೇವನು ಹುಟ್ಟು ವುದಕ್ಕೆ ಮುಂಚೆ ದೇಶದಲ್ಲಿ ತ್ಯಾಗ ವೈರಾಗ್ಯಗಳು ಎಲ್ಲೋ ಸ್ವಲ್ಪವಿದ್ದು ವೇನು ? ಮತ್ತು ದೇಶದಲ್ಲಿ ಸನ್ಯಾಸಿಗಳೇ ಇರಲಿಲ್ಲವೇ ?

ಸ್ವಾಮಿಜಿ :— ಹಾಗೆಂದು ಹೇಳಿದವರು ಯಾರು ? ಆದರೆ ಅದೇ ಜೀವನದ ಚರಮ ಲಕ್ಷ್ಯವೆಂಬುದು ಸಾಧಾರಣ ಜನರಿಗೆ ಗೊತ್ತಿರಲಿಲ್ಲ ; ವೈರಾಗ್ಯದಲ್ಲಿ ದಾರ್ಢ್ಯವಿರಲಿಲ್ಲ ; ವಿವೇಕದಲ್ಲಿ ನಿಷ್ಠೆಯಿರಲಿಲ್ಲ. ಆದ್ದರಿಂದ ಬುದ್ಧದೇವನು ಎಷ್ಟು ಯೋಗಿಗಳ ಎಷ್ಟು ಸಾಧುಗಳ ಹತ್ತಿರ ಹೋದರೂ ಶಾಂತಿಯನ್ನು ಪಡೆಯಲಿಲ್ಲ. ಆಮೇಲೆ "ಇಹಾಸನೇ ಶುಷ್ಯತು ಮೇ ಶರೀರಂ" ಎಂದು ಹೇಳಿ ಆತ್ಮಜ್ಞಾನವನ್ನು ಪಡೆಯುವುದಕ್ಕೋಸರ ತಾನೇ ಕುಳಿತುಕೊಂಡು ಬಿಟ್ಟು ಪ್ರಬುದ್ಧನಾಗಿ ಎದ್ದು ಬಂದನು. ಭರತಖಂಡದಲ್ಲಿ ಸನ್ಯಾಸಿಗಳ ಮಠಗಿಠಗಳನ್ನು ಏನೇನು ನೋಡಿದ್ದೀಯೆ– ಇವೆಲ್ಲ ಬೌದ್ಧ

ಧರ್ಮದ ಅಧಿಕಾರದಲ್ಲಿದ್ದುವು. ಹಿಂದೂಗಳು ಅವುಗಳಿಗೆಲ್ಲ ಈಗ ತಮ್ಮ ಬಣ್ಣವನ್ನು ಹಾಕಿ ಅವುಗಳನ್ನು ತಮ್ಮ ಸ್ವತ್ತನ್ನಾಗಿ ಮಾಡಿಟ್ಟುಕೊಂಡಿದ್ದಾರೆ. ಭಗವಾನ್ ಬುದ್ಧದೇವನಿಂದಲೇ ಯಥಾರ್ಥವಾದ ಸನ್ಯಾಸಾಶ್ರಮದ ಸೂತ್ರವು ಬಂದಿದ್ದು. ಅವನೇ ಸನ್ಯಾಸಾಶ್ರಮದ ನಿರ್ಜೀವವಾದ ಅಸ್ಥಿಪಂಜರದಲ್ಲಿ ಪ್ರಾಣವನ್ನು ತುಂಬಿಟ್ಟು ಹೋದವನು.

ಸ್ವಾಮಿಜಿಯ ಗುರುಭ್ರಾತೃವಾದ ರಾಮಕೃಷ್ಣಾನಂದ ಸ್ವಾಮಿಗಳು "ಬುದ್ಧದೇವನು ಹುಟ್ಟುವುದಕ್ಕೆ ಮುಂಚೆಯೂ ಭರತಖಂಡದಲ್ಲಿ ನಾಲ್ಕು ಆಶ್ರಮಗಳು ಇದ್ದುವೆಂಬುದಕ್ಕೆ ಸಂಹಿತಾ ಪುರಾಣಾದಿಗಳು ಪ್ರಮಾಣವಾಗಿವೆ" ಎಂದರು. ಅದಕ್ಕೆ ಸ್ವಾಮಿಜಿ "ಮನು ಮುಂತಾದ ಸಂಹಿತೆಗಳು, ಪುರಾಣಗಳ ಬಹುಭಾಗ, ಮತ್ತು ಮಹಾಭಾರತದ ಅನೇಕ ವಿಷಯಗಳು ಇವೆಲ್ಲಾ ಈಚಿನ ಕಾಲದವು. ಆದರೆ ಭಗವಾನ್ ಬುದ್ಧದೇವನು ಅವುಗಳಿಗಿಂತ ಬಹು ಹಿಂದಿನವನು" ಎಂದು ಉತ್ತರಕೊಟ್ಟರು. ಸ್ವಾಮಿ ರಾಮಕೃಷ್ಣಾನಂದರು ಹೇಳಿದ್ದೇನೆಂದರೆ, "ಹಾಗಿದ್ದರೆ ವೇದ ಉಪನಿಷತ್ತು ಸಂಹಿತೆ ಪುರಾಣ ಇವುಗಳಲ್ಲಿ ಬೌದ್ಧಧರ್ಮದ ಸಮಾಲೋಚನೆಯು ಖಂಡಿತವಾಗಿಯೂ ಇರುತ್ತಿತ್ತು. ಆದರೆ ಈ ಪ್ರಾಚೀನ ಗ್ರಂಥಗಳಲ್ಲಿ ಬೌದ್ಧ ಧರ್ಮದ ಸಮಾಲೋಚನೆ ಕಂಡು ಬರದಿರುವಾಗ ಬುದ್ಧದೇವನು ಇವಕ್ಕಿಂತ ಮುಂಚೆಯಿದ್ದವನೆಂದು ಹೇಗೆ ಹೇಳಿದೆ? ಎರಡು ಮೂರು ಪ್ರಾಚೀನ ಪುರಾಣಾದಿಗಳಲ್ಲಿ ಬೌದ್ಧ ಮತದ ಸೂಕ್ಷ್ಮ ವರ್ಣನೆಯಿದೆ–ಅದನ್ನು ನೋಡಿ ಅಷ್ಟರಿಂದಲೇ ಹಿಂದೂಗಳ ಸಂಹಿತಾ ಪುರಾಣಾದಿಗಳು ಆಧುನಿಕ ಶಾಸ್ತ್ರಗಳೆಂದು ಹೇಳುವುದಕ್ಕಾಗುವುದಿಲ್ಲ."

ಸ್ವಾಮಿಜಿ:— ಚರಿತ್ರೆಯನ್ನು ಓದಿನೋಡು. ಹಿಂದೂ ಧರ್ಮ ಬುದ್ಧದೇವನ ಭಾವಗಳನ್ನೆಲ್ಲಾ ತನ್ನಲ್ಲಿ ಸೇರಿಸಿಕೊಂಡು ಬಿಟ್ಟು ಇಷ್ಟು ದೊಡ್ಡದಾಗಿದೆ ಎಂಬುದು ಗೊತ್ತಾಗುತ್ತದೆ.

ರಾಮಕೃಷ್ಣಾನಂದ:— ತ್ಯಾಗ ವೈರಾಗ್ಯ ಮುಂತಾದುವುಗಳನ್ನು ಜೀವಮಾನದಲ್ಲಿ ಯಥಾರ್ಥವಾಗಿ ಅನುಷ್ಠಾನಮಾಡಿ ಬುದ್ಧದೇವನು ಹಿಂದು ಧರ್ಮದ ಭಾವಗಳನ್ನು ಸಜೀವಗಳಾಗಿ ಮಾಡಿಹೋದನು ಅಷ್ಟೆ —ಎಂದು ನನಗೆ ತೋರುತ್ತದೆ.

ಸ್ವಾಮಿಜಿ:— ಆದರೆ ಇದಕ್ಕೆ ಪ್ರಮಾಣ ಸಿಕ್ಕುವುದಿಲ್ಲ. ಏಕೆಂದರೆ; ಬುದ್ಧದೇವನು ಹುಟ್ಟುವುದಕ್ಕಿಂತ ಮುಂಚಿನಕಾಲದ ಚರಿತ್ರೆ ಯಾವುದೂ

ಸಿಕ್ಕುವುದಿಲ್ಲ. ಚರಿತ್ರೆಯನ್ನು ಪ್ರಮಾಣವೆಂದು ಒಪ್ಪಿಕೊಂಡರೆ, ಪುರಾಣ ಕಾಲದ ಘೋರಾಂಧಕಾರದಲ್ಲಿ ಭಗವಾನ್ ಬುದ್ಧದೇವನೊಬ್ಬನೆ ಜ್ಞಾನಾಲೋಕದಿಂದ ಪ್ರದೀಪ್ತನಾಗಿದ್ದವನೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ಈಗ ಮತ್ತೆ ಸನ್ಯಾಸಧರ್ಮದ ಪ್ರಸ್ತಾಪ ಬಂತು. ಸ್ವಾಮಿಜಿ "ಸನ್ಯಾಸದ ಉತ್ಪತ್ತಿ ಹೇಗಾದರೂ ಇರಲಿ ಮಾನವ ಜನ್ಮದ ಉದ್ದೇಶ ಏನೆಂದರೆ ಈ ತ್ಯಾಗವ್ರತವನ್ನವಲಂಬಿಸಿಕೊಂಡು ಬ್ರಹ್ಮಜ್ಞನಾಗುವುದು. ಸನ್ಯಾಸಗ್ರಹಣವೆ ಪರಮ ಪುರುಷಾರ್ಥ. ಯಾರು ವೈರಾಗ್ಯವನ್ನು ಪಡೆದು ಸಂಸಾರದಲ್ಲಿ ವಿರಕ್ತರಾಗುತ್ತಾರೆಯೊ ಅವರೇ ಧನ್ಯರು" ಎಂದರು.

ಶಿಷ್ಯ :— ಮಹಾಶಯರೆ, ತ್ಯಾಗಿ ಸನ್ಯಾಸಿಗಳ ಸಂಖ್ಯೆ ಹೆಚ್ಚಿ ಹೋಗಿರುವುದರಿಂದ ವ್ಯಾವಹಾರಿಕ ವಿಚಾರಗಳಲ್ಲಿ ದೇಶಕ್ಕೆ ಇದ್ದ ಉನ್ನತಿಯು ಕ್ಷೀಣವಾಗಿದೆ, ಎಂದು ಈಗ ಅನೇಕರು ಹೇಳುತ್ತಿದ್ದಾರೆ. ಗೃಹಸ್ಥರ ಸಹಾಯವನ್ನು ಅಪೇಕ್ಷಿಸಿಕೊಂಡು ಸಾಧು ಸನ್ಯಾಸಿಗಳು ಕೆಲಸಮಾಡದೆ ತಿರುಗುತ್ತಿದ್ದಾರೆಯಾಗಿ, 'ಇವರಿಂದ ಸಮಾಜ ಮತ್ತು ಸ್ವದೇಶಗಳಿಗೆ ಯಾವ ವಿಧದಲ್ಲಿಯೂ ಸಹಾಯವಾಗುವುದಿಲ್ಲ' ಎಂದು ಅವರು ಹೇಳುತ್ತಾರೆ.

ಸ್ವಾಮಿಜಿ:— ಲೌಕಿಕ ಅಥವಾ ವ್ಯಾವಹಾರಿಕ ಉನ್ನತಿ ಎಂಬುದರ ಅರ್ಥವೇನು ? ಅದನ್ನು ಮೊದಲು ನನಗೆ ಸ್ವಲ್ಪ ವಿವರಿಸು.

ಶಿಷ್ಯ :— ಪಾಶ್ಚಾತ್ಯರು ಹೇಗೆ ವಿದ್ಯೆಯ ಸಹಾಯದಿಂದ ದೇಶದಲ್ಲಿ ಅನ್ನವಸ್ತ್ರಗಳಿಗೆ ಏರ್ಪಾಡು ಮಾಡಿಕೊಂಡಿದ್ದಾರೆಯೊ, ವಿಜ್ಞಾನದ ಸಹಾಯದಿಂದ ದೇಶದಲ್ಲಿ ವ್ಯಾಪಾರ ಶಿಲ್ಪ ವಸನವಸ್ತ್ರ, ರೈಲು ತಂತಿ ಮುಂತಾದ ನಾನಾ ವಿಷಯಗಳಲ್ಲಿ ಮೇಲ್ಮೆಯನ್ನು ಪಡೆದಿದ್ದಾರೆಯೊ ಹಾಗೆ ಮಾಡುವುದು.

ಸ್ವಾಮಿಜಿ :— ಮನುಷ್ಯನಲ್ಲಿ ರಜೋಗುಣವು ಹೆಚ್ಚದಿದ್ದರೆ ಇದೆಲ್ಲಾ ಆಗುತ್ತದೆಯೇನು ? ನಾನು ಭರತಖಂಡವನ್ನು ಸುತ್ತಿ ನೋಡಿಕೊಂಡು ಬಂದಿದ್ದೇನೆ. ಎಲ್ಲಿಯೂ ರಜೋಗುಣದ ವಿಕಾಸವಿಲ್ಲ ! ಬರಿಯ ತಮಸ್ಸು— ತಮಸ್ಸು—ಘೋರ ತಮೋಗುಣದಲ್ಲಿ ಸಾಧಾರಣ ಜನರೆಲ್ಲಾ ಬಿದ್ದಿದ್ದಾರೆ. ಕೇವಲ ಸನ್ಯಾಸಿಗಳಲ್ಲಿ ಮಾತ್ರ ರಜೋಗುಣವೂ ಸತ್ತ್ವಗುಣವೂ ಇರುವದನ್ನು ನೋಡಿದ್ದೇನೆ—ಇವರೇ ಭರತಖಂಡದ ಮೇರುದಂಡ. ನಿಜವಾದ ಸನ್ಯಾಸಿಗಳು ಗೃಹಸ್ಥರಿಗೆ ಉಪದೇಶಕರು. ಅವರ ಉಪದೇಶವನ್ನೂ

ಮತ್ತು ಜ್ಞಾನವನ್ನು ಪಡೆದೇ ಹಿಂದೆ ಅನೇಕವೇಳೆ ಸಂಸಾರಿಗಳು ಜೀವನ ಸಂಗ್ರಾಮದಲ್ಲಿ ಕೃತಕೃತ್ಯರಾಗಿದ್ದಾರೆ. ಸನ್ಯಾಸಿಗಳ ಅಮೂಲ್ಯವಾದ ಉಪದೇಶಕ್ಕೆ ಬದಲಾಗಿ ಗೃಹಸ್ಥರು ಅವರಿಗೆ ಅನ್ನವಸ್ತ್ರಗಳನ್ನು ಕೊಡುವರು. ಈ ಕೊಟ್ಟು ತೆಗೆದುಕೊಂಡು ಮಾಡುವುದಿಲ್ಲದಿದ್ದರೆ ಭರತಖಂಡದ ಜನರು ಇಷ್ಟು ಹೊತ್ತಿಗೆ ಅಮೇರಿಕಾದ ಆದಿನಿವಾಸಿಗಳ ಹಾಗೆ ನಿರ್ನಾಮರು ಆಗಿ ಹೋಗುತ್ತಿದ್ದರು. ಸನ್ಯಾಸಿಗಳಿಗೆ ಅನ್ನ ಬಟ್ಟೆಗಳನ್ನು ಕೊಡುತ್ತಿರುವುದ ರಿಂದಲೇ ಗೃಹಿಗಳು ಈಗಲೂ ಉನ್ನತಿಗೆ ಸಾಧಕವಾದ ಮಾರ್ಗದಲ್ಲಿ ಹೋಗುತ್ತಿದ್ದಾರೆ. ಸನ್ಯಾಸಿಗಳು ಕರ್ಮಹೀನರಲ್ಲ. ಅವರೇ ಕರ್ಮದ ಜನ್ಮ ಸ್ಥಾನ. ಉಚ್ಚಾದರ್ಶಗಳನ್ನು ಅವರು ಜೀವನದಲ್ಲಿ ಕಾರ್ಯರೂಪಕ್ಕೆ ತಿರುಗಿಸಿ ನಡೆಸಿಕೊಂಡು ಬರುವುದನ್ನು ನೋಡಿಯೂ ಮತ್ತು ಅವರಿಂದ ಈ ಅಭಿಪ್ರಾಯಗಳನ್ನು ತೆಗೆದುಕೊಂಡು ಸಂಸಾರಿಕರು ಕರ್ಮಕ್ಷೇತ್ರದಲ್ಲಿ, ಜೀವನ ಸಂಗ್ರಾಮದಲ್ಲಿ, ಸಮರ್ಥರಾಗಿದ್ದಾರೆ ಮತ್ತು ಆಗುತ್ತಾರೆ. ಪವಿತ್ರರಾದ ಸನ್ಯಾಸಿಗಳನ್ನು ನೋಡಿಯೇ ಗೃಹಸ್ಥರು ಪವಿತ್ರಭಾವಗಳ ನ್ನೆಲ್ಲಾ ಜೀವನದಲ್ಲಿ ನಡೆಸಿಕೊಂಡು ಬಂದು ನಿಜವಾದ ರೀತಿಯಲ್ಲಿ ಕರ್ಮ ತತ್ಪರರಾಗುತ್ತಾರೆ. ಸನ್ಯಾಸಿಗಳು ತಮ್ಮ ಜೀವನದಲ್ಲಿ ಈಶ್ವರ ಸಾಕ್ಷಾತ್ಕಾ ರಕ್ಕಾಗಿಯೂ ಲೋಕಕಲ್ಯಾಣಕ್ಕಾಗಿಯೂ ಸರ್ವಸ್ವವನ್ನೂ ತ್ಯಾಗಮಾಡ ಬೇಕೆಂಬ ತತ್ತ್ವವನ್ನು ತೋರಿಸಿ ಸಂಸಾರಿಗಳಿಗೆ ಎಲ್ಲಾ ಸಂಗತಿಗಳಲ್ಲಿಯೂ ಉತ್ಸಾಹಗೊಡುತ್ತಾರೆ. ಅದಕ್ಕೆ ಪ್ರತಿಫಲವಾಗಿ ಇವರು ಅವರಿಗೆ ಅನ್ನ ವಸ್ತ್ರಗಳನ್ನು ಕೊಡುತ್ತಾರೆ. ಈ ಅನ್ನವು ಬರುವುದಕ್ಕೆ ಬೇಕಾದ ಪ್ರವೃತ್ತಿಯೂ ಸಾಮರ್ಥ್ಯವೂ ಸರ್ವತ್ಯಾಗಿಗಳಾದ ಸಂನ್ಯಾಸಿಗಳ ಸ್ನೇಹಾಶೀರ್ವಾದ ಗಳಿಂದಲೇ ಪ್ರಪಂಚದಲ್ಲಿ ಹೆಚ್ಚುತ್ತದೆ. ಜನರು ಅರಿಯದೆ ಸನ್ಯಾಸ ಆಶ್ರಮವನ್ನು ನಿಂದಿಸುತ್ತಾರೆ. ಇತರ ದೇಶಗಳಲ್ಲಿ ಏನಾದರೂ ಆಗಿರಲಿ. ಈ ದೇಶದಲ್ಲಿ ಸನ್ಯಾಸಿಗಳು ಜನಜೀವನವೆಂಬ ದೋಣಿಯನ್ನು ನಡೆಸುತ್ತಿ ರುವುದರಿಂದ ಸಂಸಾರ ಸಾಗರದಲ್ಲಿ ಗೃಹಸ್ಥರ ಜೀವಮಾನವೆಂಬ ದೋಣಿಯು ಮುಳುಗುತ್ತಿಲ್ಲ.

ಶಿಷ್ಯ :— ಮಹಾಶಯರೆ, ಲೋಕಕಲ್ಯಾಣತತ್ಪರರಾದ ಯಥಾರ್ಥ ಸನ್ಯಾಸಿಗಳನ್ನು ನೋಡಬೇಕೆಂದರೆ ಎಷ್ಟು ಜನ ಸಿಕ್ಕಿಯಾರು ?

ಸ್ವಾಮಿಜಿ:— ಸಾವಿರ ವರ್ಷಕಾಲದಲ್ಲಿ ಪರಮಹಂಸರಂಥ ಒಬ್ಬ ಸನ್ಯಾಸೀ ಮಹಾಪುರುಷನು ಬಂದರೆ ಬೇಕಾದಷ್ಟು ಆಗಿಹೋಯಿತು.

ಆತನು ಯಾವ ಉಚ್ಚಾದರ್ಶ ಮತ್ತು ಭಾವಗಳನ್ನು ಕೊಟ್ಟು ಹೋಗುತ್ತಾನೆಯೊ, ಅವುಗಳನ್ನು ಜನರು ಆತನು ಹುಟ್ಟಿದಮೇಲೆ ಸಹಸ್ರವರ್ಷಗಳವರೆಗೂ ತೆಗೆದುಕೊಂಡು ಹೋಗುತ್ತಾರೆ. ಈ ಸನ್ಯಾಸ ಆಶ್ರಮ ದೇಶದಲ್ಲಿ ಇದ್ದದ್ದರಿಂದಲೆ, ಅವರಂಥ ಮಹಾಪುರುಷರು ಈ ದೇಶದಲ್ಲಿ ಹುಟ್ಟಿದ್ದಾರೆ. ದೋಷವೆಂಬುದು ಎಲ್ಲಾ ಆಶ್ರಮಕ್ಕೂ ಉಂಟು – ಸ್ವಲ್ಪ ಹೆಚ್ಚು, ಸ್ವಲ್ಪ ಕಡಿಮೆ; ಅಷ್ಟೇ ದೋಷವಿದ್ದರೂ ಇಷ್ಟು ದಿನದವರೆಗೆ ಈ ಆಶ್ರಮ ಮಿಕ್ಕ ಆಶ್ರಮಗಳ ಶಿರಸ್ಥಾನದಲ್ಲಿ ಅಧಿಕಾರಮಾಡುತ್ತ ನಿಂತುಕೊಂಡಿದೆಯಲ್ಲಾ – ಅದಕ್ಕೆ ಕಾರಣವೇನು? ನಿಜವಾದ ಸನ್ಯಾಸಿಗಳು ತಮ್ಮ ಮೋಕ್ಷವನ್ನೂ ಅಲಕ್ಷ್ಯಮಾಡಿಬಿಟ್ಟರು – ಜಗತ್ತಿಗೆ ಕಲ್ಯಾಣವನ್ನುಂಟುಮಾಡುವುದಕ್ಕೆ ಅವರು ಹುಟ್ಟಿದ್ದು. ಇಂಥ ಸನ್ಯಾಸಾಶ್ರಮದ ವಿಚಾರದಲ್ಲಿ ನೀವು ಕೃತಜ್ಞರಾಗಿರದಿದ್ದರೆ ನಿಮಗೆ ಧಿಕ್—ನೂರುಬಾರಿ ಧಿಕ್!

ಹೀಗೆಂದು ಹೇಳುತ್ತ ಹೇಳುತ್ತ ಸ್ವಾಮಿಗಳ ಮುಖಮಂಡಲವು ಪ್ರದೀಪ್ತವಾಗಿಬಿಟ್ಟಿತು. ಸನ್ಯಾಸಾಶ್ರಮದ ಮಹಿಮೆಯು ಪ್ರಸ್ತಾಪದಲ್ಲಿ ಸ್ವಾಮಿಗಳು ಸಶರೀರವಾದ ಸನ್ಯಾಸದಂತೆ ಶಿಷ್ಯನಿಗೆ ಕಂಡುಬರುತ್ತಿದ್ದರು.

ಅನಂತರದಲ್ಲಿ ಈ ಆಶ್ರಮದ ಗೌರವವನ್ನು ಅವರು ತಮ್ಮ ಹೃದಯದಲ್ಲಿ ಅನುಭವ ಮಾಡುತ್ತ ಮಾಡುತ್ತ ಅಂತರ್ಮುಖರಾದಂತಾಗಿ ತಮ್ಮಷ್ಟಕ್ಕೆ ತಾವೇ ಮಧುರ ಸ್ವರದಲ್ಲಿ

“ ವೇದಾಂತವಾಕ್ಯೇಷು ಸದಾ ರಮಂತಃ<br>
ಭಿಕ್ಷಾನ್ನಮಾತ್ರೇಣ ಚ ತುಷ್ಟಿಮಂತಃ ।<br>
ಅಶೋಕಮಂತಃ ಕರಣೇ ಚರಂತಃ<br>
ಕೌಪೀನವಂತಃ ಖಲು ಭಾಗ್ಯವಂತಃ ॥”

ಎಂಬ ಶ್ಲೋಕವನ್ನು ಹೇಳಿದರು.

ಆಮೇಲೆ ಪುನಃ ಹೇಳಿದ್ದೇನೆಂದರೆ:—ಬಹುಜನ ಹಿತಕ್ಕೋಸ್ಕರ ಬಹುಜನ ಸುಖಕ್ಕೋಸ್ಕರ ಸನ್ಯಾಸಿಯ ಜನ್ಮ. ಸನ್ಯಾಸವನ್ನು ಪಡೆದು ಯಾರು ಈ ಉಚ್ಚಲಕ್ಷ್ಯವನ್ನು ಮರೆತುಬಿಡುತ್ತಾರೆಯೊ – “ವೃಥೈವ ತಸ್ಯ ಜೀವನಂ.” ಅವನಬಾಳು ವ್ಯರ್ಥವೆ ಸರಿ. ಪರರಿಗೋಸ್ಕರ ಪ್ರಾಣ ಕೊಡುವುದಕ್ಕೆ – ಪ್ರಾಣಿಗಳ ಆಕಾಶವನ್ನು ಮುಟ್ಟುತ್ತಿರುವ ಗೋಳಾಟವನ್ನು ಹೋಗಲಾಡಿಸುವುದಕ್ಕೆ, ವಿಧವೆಯರ ಕಣ್ಣೀರನ್ನು ತೊಡೆಯುವುದಕ್ಕೆ, ಪುತ್ರವಿಯೋಗದಿಂದ ಸಂಕಟಪಡುತ್ತಿರುವವರ ಹೃದಯದಲ್ಲಿ

ಶಾಂತಿಯನ್ನು ಉಂಟುಮಾಡುವುದಕ್ಕೆ, ಅಜ್ಞರಾದ ಸಾಧಾರಣ ಜನರಿಗೆ ಜೀವನ ಸಂಗ್ರಾಮದಲ್ಲಿ ದಕ್ಷತೆಯನ್ನುಂಟುಮಾಡಿಕೊಡುವುದಕ್ಕೆ, ಶಾಸ್ತ್ರೋಪದೇಶವನ್ನು ಹರಡುವುದರ ಮೂಲಕ ಎಲ್ಲರಿಗೂ ಐಹಿಕ ಮತ್ತು ಪಾರಮಾರ್ಥಿಕ ಮಂಗಳವನ್ನುಂಟುಮಾಡುವುದಕ್ಕೆ, ಮತ್ತು ಜ್ಞಾನಾ ಲೋಕವನ್ನು ಬೆಳಗಿ ಎಲ್ಲರಲ್ಲಿಯೂ ನಿದ್ರಿಸುತ್ತಿರುವ ಬ್ರಹ್ಮ ಸಿಂಹವನ್ನು ಎಬ್ಬಿಸುವುದಕ್ಕೆ, ಜಗತ್ತಿನಲ್ಲಿ ಸನ್ಯಾಸಿಯ ಜನ್ಮವಿರುವುದು." ಅನಂತರ ತಮ್ಮ ಭ್ರಾತೃಗಳಕಡೆಗೆ ಲಕ್ಷ್ಯವಿಟ್ಟು ಹೇಳಿದ್ದೇನೆಂದರೆ,—"ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ" ನಾನು ಹುಟ್ಟಿರುವುದು. ಏನು ಮಾಡುತ್ತೀರಿ ಎಲ್ಲರೂ ಸುಮ್ಮನೆ ಕುಳಿತು? ಏಳಿ, ಎಚ್ಚರಗೊಳ್ಳಿ, ನೀವು ಎಚ್ಚೆತ್ತುಕೊಂಡು ಎಲ್ಲರನ್ನೂ ಎಚ್ಚರಗೊಳಿಸಿ, ನರಜನ್ಮವನ್ನು ಸಾರ್ಥಕ ಗೊಳಿಸಿ ಹೋಗಿ; — "ಉತ್ತಿಷ್ಠತ — ಜಾಗ್ರತ — ಪ್ರಾಪ್ಯ ವರಾನ್ ನಿಬೋಧತ"*

## ಅಧ್ಯಾಯ ೧೨

**ಸ್ಥಳ:—ಕಲ್ಕತ್ತ; ಬಲರಾಮ ಬಾಬುಗಳ ಮನೆ. ವರ್ಷ:—ಕ್ರಿ. ಶ. ೧೮೯೮.**

ಸ್ವಾಮಿಜಿ ಈಗ ಎರಡುದಿನವೆಲ್ಲಾ ಬಾಗಬಜಾರಿನಲ್ಲಿ ಬಲರಾಮ ಬಸುಗಳು ಮನೆಯಲ್ಲಿ ಇದ್ದರು. ಆದ್ದರಿಂದ ಅಲ್ಲಿಗೆ ಪ್ರತಿನಿತ್ಯವೂ ಹೋಗಿ ಬರುವುದಕ್ಕೆ ಶಿಷ್ಯನಿಗೆ ತುಂಬ ಅನುಕೂಲವಾಗಿತ್ತು. ಇಂದು ಸಾಯಂ ಕಾಲಕ್ಕೆ ಸ್ವಲ್ಪ ಮುಂಚೆ ಸ್ವಾಮಿಜಿ ಈ ಮನೆಯ ಮಹಡಿಯ ಮೇಲೆ ತಿರುಗಾಡುತ್ತಿದ್ದಾರೆ. ಶಿಷ್ಯನೂ ಬೇರೆ ನಾಲ್ಕೈದು ಜನರೂ ಜೊತೆ ಯಲ್ಲಿದ್ದಾರೆ. ಬಹು ಶಖೆ. ಆದ್ದರಿಂದ ಸ್ವಾಮಿಜಿ ಮೈಯನ್ನು ಬಿಟ್ಟು ಕೊಂಡಿದ್ದಾರೆ. ಮೆಲ್ಲಮೆಲ್ಲಗೆ ದಕ್ಷಿಣದ ಕಡೆಯಿಂದ ಗಾಳಿ ಬರುತ್ತಿದೆ. ತಿರುಗಾಡುತ್ತ ತಿರುಗಾಡುತ್ತ ಸ್ವಾಮಿಜಿ ಗುರುಗೋವಿಂದರ ಪ್ರಸ್ತಾಪವನ್ನು ತೆಗೆದು ಅವರ ತ್ಯಾಗ ತಪಸ್ಸು ಕ್ಷಮೆ ಮತ್ತು ಜೀವವನ್ನೂ ತೆತ್ತು ಪಟ್ಟಂಥ ಶ್ರಮ, ಇವುಗಳಿಗೆ ಫಲವಾಗಿ ಸಿಕ್ಕರ ಜಾತಿಗೆ ಹೇಗೆ ಪುನಃ ಅಭ್ಯುತ್ಥಾನ

* ಕಠೋಪನಿಷತ್ತು.

ಉಂಟಾಯಿತು, ಹೇಗೆ ಅವರು ಮೊದಲು ಮುಸಲ್ಮಾನ ಧರ್ಮವನ್ನವಲಂಬಿಸಿದ್ದ ಜನರಿಗೂ ದೀಕ್ಷೆಯನ್ನು ಕೊಟ್ಟು ಮತ್ತೆ ಅವರನ್ನು ಹಿಂದೂಗಳನ್ನಾಗಿ ಮಾಡಿ ಸಿಕ್ಕರ ಜಾತಿಗೆ ಸೇರಿಸಿಕೊಂಡರು, ಮತ್ತು ಹೇಗೆ ನರ್ಮದಾತೀರದಲ್ಲಿ ಮಾನವಲೀಲೆಯನ್ನು ಬಿಟ್ಟರು – ಈ ವಿಷಯಗಳನ್ನೆಲ್ಲಾ ಓಜಸ್ವಿಯಾದ ಭಾಷೆಯಲ್ಲಿ ಸ್ವಲ್ಪ ಸ್ವಲ್ಪ ವರ್ಣಿಸತೊಡಗಿದರು. ಗುರುಗೋವಿಂದರ ಹತ್ತಿರ ದೀಕ್ಷೆಯನ್ನು ಪಡೆದ ಜನರಲ್ಲಿ ಆಗ ಎಂಥ ಮಹಾಶಕ್ತಿ ಸಂಚರಿಸುವುದಕ್ಕೆ ಮೊದಲಾಯಿತೊ, ಅದನ್ನು ವಿವರಿಸಿ ಸ್ವಾಮಿಜಿ ಸಿಕ್ಕರಜ್ಞಾತಿಯವರಲ್ಲಿ ರೂಢಿಗೆ ಬಂದಿರುವ ಒಂದು ದೋಹಾ (ಶ್ಲೋಕ)ವನ್ನು ಹೇಳಿದರು :–

"ಸವ್ವೆಯಾಲಾಖ್ ಪರ ಏಕ ಚಡಾಉ
ಜಬ್ ಗುರು ಗೋವಿಂದ ನಾಮ ಶುನಾಉ."

ಎಂದರೆ, ಗುರುಗೋವಿಂದರ ಹತ್ತಿರ ದೀಕ್ಷೆಯನ್ನು ಪಡೆದ ಒಬ್ಬೊಬ್ಬರಲ್ಲಿಯೂ ಒಂದೂಕಾಲು ಲಕ್ಷ ಜನರಲ್ಲಿರುವುದಕ್ಕಿಂತಲೂ ಹೆಚ್ಚು ಶಕ್ತಿ ಸಂಚರಿಸುತ್ತಿತ್ತು. ಎಂದರೆ ಆತನ ಹತ್ತಿರ ದೀಕ್ಷೆಯನ್ನು ಪಡೆದರೆ ಆತನ ಶಕ್ತಿಯಿಂದ ಜೀವನದಲ್ಲಿ ನಿಜವಾದ ಧರ್ಮಪ್ರಾಣವು ಬಂದು ಗುರುಗೋವಿಂದರ ಪ್ರತಿಯೊಬ್ಬ ಶಿಷ್ಯನೊಳಗೂ ಎಂಥ ವೀರತ್ವ ತುಂಬಿಕೊಳ್ಳುತ್ತಿತ್ತೆಂದರೆ, ಅವನು ಆಗ ಒಂದೂಕಾಲು ಲಕ್ಷ ವಿಧರ್ಮಿಗಳನ್ನು ಸೋಲಿಸಲು ಸಮರ್ಥನಾಗುತ್ತಿದ್ದನು. ಧರ್ಮಮಹಿಮೆಯನ್ನು ತಿಳಿಸುವ ಈ ಮಾತುಗಳನ್ನು ಹೇಳುತ್ತ ಹೇಳುತ್ತ ಉತ್ಸಾಹದಿಂದ ಅರಳಿದ ಸ್ವಾಮಿಜಿ ಕಣ್ಣಿನಲ್ಲಿ ತೇಜಸ್ಸು ಒಡೆದುಕೊಂಡು ಹೊರಗೆ ಬರುತ್ತಿದ್ದಂತೆ ಕಂಡಿತು. ಕೇಳುತ್ತಿದ್ದವರು ಬೆರಗಾಗಿ ಸ್ವಾಮಿಜಿ ಮುಖದಕಡೆಗೆ ದೃಷ್ಟಿಕೊಟ್ಟು ಅದನ್ನೇ ನೋಡುತ್ತಿದ್ದರು. ಸ್ವಾಮಿಜಿಯಲ್ಲಿ ಎಂಥ ಅದ್ಭುತವಾದ ಉತ್ಸಾಹವೂ ಶಕ್ತಿಯೂ ಇತ್ತೆಂದರೆ, ಅವರು ಯಾವಾಗ ಯಾವ ವಿಷಯವನ್ನು ಕುರಿತು ಹೇಳುತ್ತಿದ್ದರೊ ಆವಾಗ ಅವರು ಅದರಲ್ಲಿ ಅಷ್ಟು ತನ್ಮಯರಾಗಿ ಹೋಗಿಬಿಡುತ್ತಿದ್ದರು; ನಮ್ಮ ಮನಸ್ಸಿಗೆ, ಈ ವಿಷಯವನ್ನೆ ಅವರು ಪ್ರಪಂಚದಲ್ಲಿ ಎಲ್ಲದಕ್ಕಿಂತಲೂ ಶ್ರೇಷ್ಠವೆಂಬುದಾಗಿ ತಿಳಿದುಕೊಂಡಿದ್ದರೆಂದೂ ಅದನ್ನು ಪಡೆಯುವುದೆ ಮನುಷ್ಯ ಜೀವನದ ಏಕಮಾತ್ರ ಉದ್ದೇಶವೆಂಬುದಾಗಿ ನಿರ್ಧರಿಸಿಕೊಂಡಿದ್ದರೆಂದೂ ತೋರುತ್ತಿತ್ತು.

ಸ್ವಲ್ಪ ಹೊತ್ತು ಹೋದಮೇಲೆ ಶಿಷ್ಯನು "ಮಹಾಶಯರೆ, ಇದರಲ್ಲಿ ಅದ್ಭುತವಾದ ವಿಷಯವೇನೆಂದರೆ, ಗುರುಗೋವಿಂದರು ಹಿಂದೂ

ಮುಸಲ್ಮಾನರಿಬ್ಬರನ್ನೂ ತಮ್ಮ ಧರ್ಮದಲ್ಲಿ ಸೇರಿಸಿಕೊಂಡು ಒಂದೇ ಉದ್ದೇಶದಿಂದ ಕೆಲಸ ಮಾಡಿಸಬಲ್ಲವರಾದರು. ಭರತಖಂಡದ ಚರಿತ್ರೆಯಲ್ಲಿ ಇಂಥ ಮತ್ತೊಂದು ದೃಷ್ಟಾಂತ ಕಂಡುಬರುವುದಿಲ್ಲ" ಎಂದನು.

ಸ್ವಾಮಿಜಿ:— ಸಾಮಾನ್ಯ ಉದ್ದೇಶವಿಲ್ಲದೆ ಒಂದೇ ಜನರು ಯಾವಾಗಲೂ ಐಕಮತ್ಯವೆಂಬ ಸೂತ್ರದ ಕಟ್ಟಿಗೆ ಸಿಕ್ಕುವುದಿಲ್ಲ. ಸಭೆ ಸಮಿತಿ ಉಪನ್ಯಾಸ ಇವುಗಳನ್ನು ಮಾಡಿ ಸರ್ವಸಾಧಾರಣ ಜನರನ್ನು ಯಾವಾಗಲೂ ಒಟ್ಟು ಗೂಡಿಸುವುದು ಆಗಲಾರದು—ಅವರ ಆಸಕ್ತಿ ಒಂದಾಗದೇ ಇದ್ದ ಪಕ್ಷದಲ್ಲಿ ಗುರುಗೋವಿಂದರು ಆಗಿನ ಕಾಲದ ಹಿಂದೂವೇನು ಮುಸಲ್ಮಾನನೇನು ಎಲ್ಲರೂ ಭಯಂಕರವಾದ ಅತ್ಯಾಚಾರ ಅವಿಚಾರಗಳ ಆಧಿಪತ್ಯದಲ್ಲಿ ವಾಸಮಾಡುತ್ತಿದ್ದರೆಂಬುದನ್ನು ತೋರಿಸಿಕೊಟ್ಟರು. ಗುರುಗೋವಿಂದರು ಒಂದೇ ವಿಧವಾದ ಸ್ವಾರ್ಥ ಪ್ರಯತ್ನವನ್ನು ಉಂಟುಮಾಡಲಿಲ್ಲ; ಅದನ್ನು ಜನ ಸಾಧಾರಣರಿಗೆ ತಿಳಿಸಿಕೊಟ್ಟರು-ಅಷ್ಟು ಮಾತ್ರ, ಅದರಿಂದಲೆ ಹಿಂದೂ ಮುಸಲ್ಮಾನರೆಲ್ಲರೂ ಅವರನ್ನು ಅನುಸರಿಸಿದರು. ಆತನು ಮಹಾಶಕ್ತಿ ಸಾಧಕನಾಗಿದ್ದನು. ಭರತಖಂಡದ ಚರಿತ್ರೆಯಲ್ಲಿ ಆತನಂಥ ದೃಷ್ಟಾಂತ ಅಪರೂಪ.

ಆಮೇಲೆ ಕತ್ತಲೆಯಾದದ್ದನ್ನು ನೋಡಿ ಸ್ವಾಮಿಜಿ ಎಲ್ಲರನ್ನೂ ಜೊತೆಯಲ್ಲಿ ಕರೆದುಕೊಂಡು ಎರಡನೆಯ ಅಂತಸ್ತಿನ ಬೈಠಕ್ ಖಾನೆಗೆ ಇಳಿದು ಬಂದರು. ಅವರು ಇಲ್ಲಿ ಕುಳಿತುಕೊಂಡೊಡನೆಯೆ ಎಲ್ಲರೂ ಅವರನ್ನು ಸುತ್ತಿಕೊಂಡು ಕುಳಿತರು. ಈ ಸಮಯದಲ್ಲಿ ಸಿದ್ಧಿಯ—ಅದ್ಭುತ ಕಾರ್ಯಗಳ ಮಾತು ಬಂತು.

ಸ್ವಾಮಿಜಿ "ಸಿದ್ಧಿ ಅಥವಾ ಅದ್ಭುತ ಕಾರ್ಯಗಳನ್ನು ಮಾಡುವ ಶಕ್ತಿಯನ್ನು ಅತಿಸಾಮಾನ್ಯವಾದ ಚಿತ್ತ ಸಂಯಮದಿಂದಲೇ ಪಡೆಯಬಹುದು" ಎಂದರು. ಶಿಷ್ಯನನ್ನು "ನೋಡಿ ಮತ್ತೊಬ್ಬರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳುವುದು ಕಲಿತುಕೊಳ್ಳಬೇಕೇನು? ನಾಲ್ಕೈದು ದಿನಗಳಲ್ಲಿಯೆ ಈ ವಿದ್ಯೆಯನ್ನು ಕಲಿಸಿಕೊಡಬಲ್ಲೆ" ಎಂದು ಹೇಳಿದರು.

ಶಿಷ್ಯ:— ಅದರಿಂದ ಉಪಕಾರವಾಗುತ್ತದೆಯೇನು?

ಸ್ವಾಮಿಜಿ:— ಏಕೆ? ಅನ್ಯರ ಮನಸ್ಸಿನಲ್ಲಿರುವುದನ್ನು ತಿಳಿದುಕೊಳ್ಳಲು ಶಕ್ತನಾಗುವೆ.

ಶಿಷ್ಯ :—ಅದರಿಂದ ಬ್ರಹ್ಮವಿದ್ಯಾಲಾಭಕ್ಕೆ ಏನಾದರೂ ಸಹಾಯವಾಗುತ್ತದೆಯೇನು ?

ಸ್ವಾಮಿಜಿ :—ಸ್ವಲ್ಪವೂ ಇಲ್ಲ.

ಶಿಷ್ಯ :—ಹಾಗಾದರೆ ನನಗೆ ಈ ವಿದ್ಯೆಯನ್ನು ಕಲಿತುಕೊಳ್ಳುವ ಆವಶ್ಯಕತೆಯೇನೂ ಇಲ್ಲ. ಆದರೆ, ಮಹಾಶಯರೆ, ತಾವು ಸಿದ್ಧಿಯ ಸಂಬಂಧವಾಗಿ ಯಾವುದನ್ನು ಪ್ರತ್ಯಕ್ಷ ಮಾಡಿಕೊಂಡಿದ್ದೀರಿ ಅಥವಾ ನೋಡಿದ್ದೀರಿ ಅದರ ವಿಚಾರವಾಗಿ ಕೇಳುವುದಕ್ಕೆ ನನಗೆ ಆಶೆಯಾಗಿದೆ.

ಸ್ವಾಮಿಜಿ:—ನಾನು ಒಂದು ಸಲ ಹಿಮಾಲಯದಲ್ಲಿ ಸುತ್ತುತ್ತ ಸುತ್ತುತ್ತ ಯಾವುದೋ ಒಂದು ಪರ್ವತಗ್ರಾಮದಲ್ಲಿ ಒಂದು ರಾತ್ರೆಯ ಮಟ್ಟಿಗೆ ಇದ್ದೆ. ಸಾಯಂಕಾಲ ಸ್ವಲ್ಪ ಹೊತ್ತಾದಮೇಲೆ ಆ ಹಳ್ಳಿಯಲ್ಲಿ ಮದ್ದಲೆಯ ಸದ್ದು ಕೇಳಿಸಿತು; ಆ ಮನೆಯವನನ್ನು ಅದೇನೆಂದು ಕೇಳಲು, ಗ್ರಾಮದ ಯಾವನೋ ಒಬ್ಬನಮೇಲೆ 'ದೆವ್ವ' ಬಂದಿದೆಯೆಂದು ಗೊತ್ತಾಯಿತು. ಮನೆಯವನ ಉತ್ಸಾಹದಿಂದಲೂ ನನ್ನ ಮನಸ್ಸಿನ ಕುತೂಹಲವನ್ನು ಕಳೆದುಕೊಳ್ಳುವುದಕ್ಕೋಸ್ಕರವೂ ಅದನ್ನು ನೋಡುವುದಕ್ಕೆ ಹೋದೆ. ಹೋಗಿ ನೋಡಿದರೆ, ಅನೇಕ ಜನರು ಗುಂಪುಕೂಡಿದ್ದಾರೆ; ಎತ್ತರವಾಗಿ ಗುಂಗುರು ಕೂದಲಿನ ತಲೆಯುಳ್ಳ ಒಬ್ಬ ಪರ್ವತವಾಸಿಯನ್ನು ತೋರಿಸಿ ಅವನಮೇಲೆಯೇ 'ದೆವ್ವ ಬಂದಿರುವುದು' ಎಂದು ಹೇಳಿದರು. ಅವನ ಹತ್ತಿರವೆ ಒಂದು ಕೊಡಲಿಯನ್ನು ಬೆಂಕಿಯಲ್ಲಿ ಇಟ್ಟು ಕಾಯಿಸುತ್ತಿದ್ದದ್ದು ಕಂಡಿತು. ಸ್ವಲ್ಪ ಹೊತ್ತಿನಮೇಲೆ, ಈ ಬೆಂಕಿಯ ಬಣ್ಣಕ್ಕಾಗಿದ್ದ ಕೊಡಲಿಯಿಂದ ದೆವ್ವ ಬಂದವನ ಮೈಮೇಲೆ ಅಲ್ಲಲ್ಲೆ ಒತ್ತುತ್ತಿದ್ದರು; ತಲೆಕೂದಲಿನಲ್ಲಿಯೂ ತಿವಿಯುತ್ತಿದ್ದರು. ಆದರೆ ಆಶ್ಚರ್ಯವೇನೆಂದರೆ, ಈ ಕೊಡಲಿಯ ಸ್ಪರ್ಶದಿಂದ ಅವನಿಗೆ ಯಾವ ಅಂಗವಾಗಲಿ ಕೂದಲಾಗಲಿ ಸುಟ್ಟುಹೋಗುತ್ತಿರಲಿಲ್ಲ; ನೋವನ್ನು ಸೂಚಿಸುವ ಚಿಹ್ನೆ ಆತನ ಮುಖದಲ್ಲಿ ತೋರುತ್ತಲೂ ಇರಲಿಲ್ಲ. ನೋಡಿ ಬೆರಗಾಗಿಬಿಟ್ಟೆ. ಈ ಮಧ್ಯದಲ್ಲಿ ಗ್ರಾಮದ ಯಜಮಾನನು ನನ್ನ ಹತ್ತಿರಕ್ಕೆ ಕೈಮುಗಿದುಕೊಂಡು ಬಂದು, "ಮಹರಾಜ್, ತಾವು ದಯೆಯಿಟ್ಟು ಇವನಿಗೆ ದೆವ್ವ ಮೆಟ್ಟಿಕೊಂಡಿರುವುದನ್ನು ಬಿಡಿಸಿಕೊಡಬೇಕು" ಎಂದು ಕೇಳಿಕೊಂಡನು. ನಾನು ಇದನ್ನು ಕಂಡು ಸ್ವಲ್ಪ ಅಸ್ಥಿರನಾದೆ! ಏನು ಮಾಡಲಿ—ಎಲ್ಲರೂ ಕೇಳಿಕೊಂಡಮೇಲೆ, ಭೂತ ಹಿಡಿದುಕೊಂಡಿದ್ದ ಮನುಷ್ಯನ ಹತ್ತಿರಕ್ಕೆ

ಹೋದದ್ದಾಯಿತು. ಹೋದಮೇಲೆ ಮೊದಲು ಕೊಡಲಿಯನ್ನು ಪರೀಕ್ಷಿಸ ಬೇಕೆಂದು ಇಚ್ಛೆಯುಂಟಾಯಿತು; ಅದನ್ನು ಕೈಯಿಂದ ಹಿಡಿದುಕೊಳ್ಳುತ್ತಿದ್ದ ಹಾಗೆಯೆ ಕೈಸುಟ್ಟು ಹೋಯಿತು. ಆಗ ಕೊಡಲಿಯೇನೊ ಕಪ್ಪಗಾಗಿ ಬಿಟ್ಟಿತ್ತು. ಕೈಯಿನ ಉರಿಯಿಂದ ಅಸ್ಥಿರನಾಗಿದ್ದೆ. ಅದು ಹಾಗಿರಬಹುದು ಹೀಗಿರಬಹುದು ಎಂಬ ಊಹೆ ಗೀಹೆ ಎಲ್ಲಾ ಆಗ ಓಡಿಹೋಯಿತು. ಏನು ಮಾಡಲಿ, ಉರಿಯಿಂದ ಅಸ್ಥಿರನಾಗಿದ್ದರೂ ಆ ಮನುಷ್ಯನ ತಲೆಯ ಮೇಲೆ ಕೈಯಿಟ್ಟು ಸ್ವಲ್ಪ ಜಪಮಾಡಿದೆ. ಆಶ್ಚರ್ಯವೇನಾಯಿತೆಂದರೆ ಹೀಗೆಮಾಡಿದ ಹತ್ತು ಹನ್ನೆರಡು ನಿಮಿಷಗಳೊಳಗೇ ಆತನು ಸ್ವಸ್ಥನಾಗಿ ಬಿಟ್ಟನು. ಆಗ ನನ್ನಮೇಲೆ ಆ ಗ್ರಾಮದ ಜನರ ಭಕ್ತಿಯನ್ನು ನೋಡ ಬಹುದೆ? ನನ್ನನ್ನು ಒಬ್ಬ ಬಲು ದೊಡ್ಡ ಮನುಷ್ಯನೆಂದು ನಿರ್ಧರಮಾಡಿ ಬಿಟ್ಟರು. ನನಗೇನೊ ಈ ಸಂಗತಿ ಸ್ವಲ್ಪವೂ ಅರ್ಥವಾಗದೆ ಹೋಯಿತು. ಮತ್ತೇನೂ ಮಾಡಲಾರದೆ, ನನಗೆ ಆಶ್ರಯಕೊಟ್ಟಿದ್ದವನ ಜೊತೆಯಲ್ಲಿ ಸುಮ್ಮನೆ ಅವನ ಗುಡಿಸಿಲಿಗೆ ಹಿಂತಿರುಗಿ ಬಂದು ಬಿಟ್ಟೆ. ಆಗ ರಾತ್ರಿ ಹನ್ನೆರಡು ಗಂಟೆಯಿರಬಹುದು. ಬಂದವನು ಮಲಗಿಬಿಟ್ಟೆ. ಆದರೆ ಕೈಯುರಿಯಿಂದಲೂ ಈ ವಿಚಾರದ ರಹಸ್ಯವನ್ನು ಸ್ವಲ್ಪವೂ ತಿಳಿದುಕೊಳ್ಳ ಲಾರದೆ ಹೋದೆನಲ್ಲಾ ಎಂಬ ಚಿಂತೆಯಿಂದಲೂ ನಿದ್ರೆ ಬರಲಿಲ್ಲ. ಉರಿಯುತ್ತಿರುವ ಕೊಡಲಿಯಿಂದ ಮನುಷ್ಯನ ದೇಹ ಸುಟ್ಟುಹೋಗದಿದ್ದದ್ದನ್ನು ನೋಡಿ ಇದುಮಾತ್ರ ಸುಮ್ಮನೆ ಮನಸ್ಸಿಗೆ ಹೊಳೆಯುತ್ತಿತ್ತು ಏನೆಂದರೆ:—
"There are more things in heaven and earth, than are dreamt of in your philosophy" ಪೃಥ್ವಿಯಲ್ಲಿಯೂ ಸ್ವರ್ಗದಲ್ಲಿಯೂ ಇಂಥಿಂಥ ಅನೇಕ ಸಂಗತಿಗಳಿವೆ, ಎಂಥವುಗಳೆಂದರೆ ಅವುಗಳನ್ನು ದರ್ಶನ ಶಾಸ್ತ್ರಗಳು ಸ್ವಪ್ನದಲ್ಲಿಯೂ ಕಂಡಿಲ್ಲ.

ಶಿಷ್ಯ:—ಆಮೇಲೆ ಈ ವಿಷಯದಲ್ಲಿ ಏನಾದರೂ ತಮಗೆ ಇತ್ಯರ್ಥ ಮಾಡುವುದಕ್ಕಾಯಿತೆ?

ಸ್ವಾಮಿಜಿ:—ಇಲ್ಲ; ಈ ಹೊತ್ತು ಮಾತು ಮಾತಿನಮೇಲೆ ಜ್ಞಾಪಕಕ್ಕೆ ಬಂತು; ಅದನ್ನೇ ನಿಮಗೆ ಹೇಳಿದೆ.

ಆಮೇಲೆ ಸ್ವಾಮಿಜಿ ಮತ್ತೆ ಹೇಳತೊಡಗಿದರು:— "ಪರಮಹಂಸರು ಮಾತ್ರ ಸಿದ್ಧಿಗಳನ್ನು ತುಂಬ ಹಳಿಯುತ್ತಿದ್ದರು. 'ಇವೆಲ್ಲ ಶಕ್ತಿಯನ್ನು ತೋರಿಸುವುದರ ಕಡೆಗೆ ಮನಸ್ಸನ್ನೆಳೆದು ಪರಮಾರ್ಥ ತತ್ತ್ವವನ್ನು ಪಡೆ

ಯುವುದಕ್ಕೆ ಅವಕಾಶ ಕೊಡುವುದಿಲ್ಲ' ಎಂದು ಹೇಳುತ್ತಿದ್ದರು. ಆದರೆ ಮನುಷ್ಯರ ಮನಸ್ಸು ಎಷ್ಟು ದುರ್ಬಲವಾದದ್ದೆಂದರೆ, ಸಂಸಾರಿಗಳ ಮಾತಿರಲಿ, ಸಾಧುಗಳಲ್ಲಿಯೂ ಹದಿನಾಲ್ಕು ಆಣೆಯ ಪಾಲು ಜನರು ಸಿದ್ಧಿಯ ಉಪಾಸಕರಾಗಿ ಪರಿಣಮಿಸುತ್ತಾರೆ. ಪಾಶ್ಚಾತ್ಯದೇಶದಲ್ಲಿ ಈ ವಿಧವಾದ ಇಂದ್ರಜಾಲವನ್ನು ನೋಡಿದರೆ ಜನ ಬೆರಗಾಗುತ್ತಾರೆ. ಸಿದ್ಧಿಗಳನ್ನು ಪಡೆಯುವುದು ಹೇಯವಾದದ್ದು, ಧರ್ಮ ಮಾರ್ಗಕ್ಕೆ ವಿಘ್ನಕಾರಿ ಎಂಬೀ ವಿಷಯವನ್ನು ಪರಮಹಂಸರು ಕೃಪೆಮಾಡಿ ತಿಳಿಸಿಕೊಟ್ಟು ಹೋಗಿರುವುದರಿಂದ ಇದು ನನಗೆ ಗೊತ್ತಿದೆ. ಅದಕ್ಕೋಸ್ಕರವೇ ಪರಮಹಂಸರ ಸಂತಾನರು ಯಾರೂ ಈ ವಿಷಯದಲ್ಲಿ ಆಶೆ ಇಟ್ಟುಕೊಂಡಿರದೆ ಇರುವುದನ್ನು ನೋಡಿಲ್ಲವೇನು ?"

ಯೋಗಾನಂದ ಸ್ವಾಮಿಗಳು ಈ ಸಮಯದಲ್ಲಿ ಸ್ವಾಮಿಗಳನ್ನು ಕುರಿತು, "ನಿಮ್ಮ ಜೊತೆಯಲ್ಲಿ ಮದ್ರಾಸಿನಲ್ಲಿದ್ದಾಗ ದೆವ್ವವನ್ನು ನೋಡಿದೆವಲ್ಲ ಆ ವೃತ್ತಾಂತವನ್ನು ಈ 'ಬಾಂಗಾಳನಿಗೆ' ಹೇಳಿ" ಎಂದರು.

ಶಿಷ್ಯನು ಈ ವೃತ್ತಾಂತವನ್ನು ಹಿಂದೆ ಕೇಳಿರಲಿಲ್ಲ. ಆದ್ದರಿಂದ ಅದನ್ನು ತಿಳಿಸಬೇಕೆಂದು ಸ್ವಾಮಿಗಳ ಹತ್ತಿರ ಹಟಮಾಡುತ್ತ ಕುಳಿತನು. ಸ್ವಾಮಿಜಿ ವಿಧಿಯಿಲ್ಲದೆ ಅವನಿಗೆ ಈ ವೃತ್ತಾಂತವನ್ನು ಹೇಳಿದರು:—

ಮದ್ರಾಸಿನಲ್ಲಿ ಮನ್ಮಥಬಾಬುಗಳ ಮನೆಯಲ್ಲಿದ್ದಾಗ ಒಂದು ದಿನ ನಮ್ಮ ತಾಯಿಯು ಸತ್ತು ಹೋಗಿದ್ದಂತೆ ಕನಸಾಯಿತು. ಮನಸ್ಸು ತುಂಬ ವ್ಯಾಕುಲಿತವಾಯಿತು. ಆಗ ಮಠಕ್ಕೂ ಕಾಗದ ಪತ್ರಗಳನ್ನು ಬಹಳವಾಗಿ ಬರೆಯುತ್ತಿರಲಿಲ್ಲ—ಹೀಗಿರಲು ಮನೆಗೆ ಬರೆಯುವ ವಿಚಾರವನ್ನು ಹೇಳಬೇಕಾದ್ದೇ ಇಲ್ಲ. ಮನ್ಮಥಬಾಬುವಿಗೆ ಸ್ವಪ್ನದ ವಿಚಾರವನ್ನು ಹೇಳಲು ಅವನು ಆಗಲೇ ಈ ಸಂಬಂಧವಾದ ವರ್ತಮಾನವನ್ನು ತರುವುದಕ್ಕೋಸ್ಕರ ಕಲ್ಕತ್ತೆಗೆ ತಂತಿ ಕೊಟ್ಟನು. ಏಕೆಂದರೆ, ಸ್ವಪ್ನವನ್ನು ಕಂಡು ನನಗೆ ಮನಸ್ಸು ತುಂಬ ಕಲಕಿ ಹೋಗಿತ್ತು. ಅಲ್ಲದೆ ಇತ್ತಕಡೆಗೆ ಮದ್ರಾಸಿನ ಸ್ನೇಹಿತರು ಆಗ ನನ್ನನ್ನು ಅಮೇರಿಕಾಕ್ಕೆ ಕಳುಹಿಸುವುದಕ್ಕೆ ಸಿದ್ಧಮಾಡುವುದರಲ್ಲಿ ಸಡಗರಪಡುತ್ತಿದ್ದರು. ಆದರೆ ತಾಯಿಯ ದೇಹಾರೋಗ್ಯದ ವಿಚಾರವಾಗಿ ಒಳ್ಳೆಯ ವರ್ತಮಾನ ತಿಳಿಯದಿದ್ದರೆ ನನಗೆ ಹೋಗುವುದಕ್ಕೆ ಇಷ್ಟವಿರಲಿಲ್ಲ. ನನ್ನ ಮನೋಭಾವವನ್ನು ತಿಳಿದು ಮನ್ಮಥಬಾಬು "ಈ ಪಟ್ಟಣದ ಹತ್ತಿರ ಒಬ್ಬ ಪಿಶಾಚ ಸಿದ್ಧನಾದವನು ಇದ್ದಾನೆ—ಅವನು ಜನರ

ಶುಭಾಶುಭಗಳು ಭೂತ ಭವಿಷ್ಯತ್ತು ಎಲ್ಲವನ್ನೂ ಸರಿಯಾಗಿ ಹೇಳಬಲ್ಲನು'' ಎಂದು ಹೇಳಿದನು. ಅವನು ಕೇಳಿಕೊಂಡ ಮೇಲೆಯೂ ನನ್ನ ಮನಸ್ಸಿನ ಚಿಂತೆಯನ್ನು ಕಳೆದುಕೊಳ್ಳುವುದಕ್ಕೂ ಆತನ ಹತ್ತಿರ ಹೋಗುವುದಕ್ಕೆ ಒಪ್ಪಿಕೊಂಡೆನು. ಮನ್ಮಥ ಬಾಬು, ನಾನು, ಅಲಸಿಂಗಾಚಾರ್ಯರು ಇನ್ನೊಬ್ಬರು ಇಷ್ಟು ಜನವೂ ರೈಲು ಹತ್ತಿ ಹೊರಟು ಆಮೇಲೆ ಅಷ್ಟುದೂರ ನಡೆದುಕೊಂಡು ಹೋಗಿ ಆ ಸ್ಥಳವನ್ನು ತಲಪಿದೆವು. ಹೋಗಿ ನೋಡಿದರೆ, ಸ್ಮಶಾನದ ಹತ್ತಿರ ವಿಕಟಾಕಾರವುಳ್ಳ ಒಣಗಿಹೋಗಿ ಕಾಡಿಗೆಯಂತೆ ಒಬ್ಬನು ಮಲಗಿಕೊಂಡೂ ಒಬ್ಬನು ಕುಳಿತುಕೊಂಡೂ ಇದ್ದರು. ಅವರ ಅನುಚರರು 'ಕೊಣಪಣ' ಎಂದು ಮದ್ರಾಸಿನ ಮಾತಿನಲ್ಲಿ ಆತನೇ ಪಿಶಾಚ ಸಿದ್ಧನಾದ ಮನುಷ್ಯನೆಂದು ತಿಳಿಸಿದರು. ಮೊದಲು ಆತನು ಅಲಕ್ಷ್ಯದಿಂದ ನಮ್ಮ ಕಡೆಗೆ ದೃಷ್ಟಿಯನ್ನೇ ಕೊಡಲಿಲ್ಲ. ಆಮೇಲೆ ನಾವು ಹಿಂತಿರುಗುವುದಕ್ಕೆ ಸಿದ್ಧರಾಗಲು ಆಗ ನಾವು ನಿಲ್ಲಬೇಕೆಂದು ಹೇಳಿದನು. ನಮ್ಮ ಜೊತೆಯಲ್ಲಿದ್ದ ಅಳಸಿಂಗನೇ ಭಾಷಾಂತರಕಾರನ ಕೆಲಸಮಾಡಿ ನಾವು ನಿಲ್ಲಬೇಕೆಂಬ ಮಾತನ್ನು ತಿಳಿಸಿದನು. ಅನಂತರ ಒಂದು ಸೀಸದ ಕಡ್ಡಿಯನ್ನು ತೆಗೆದುಕೊಂಡು ಆತನು ಸ್ವಲ್ಪ ಹೊತ್ತು ಏನೋ ಗುರುತುಹಾಕುತ್ತಿದ್ದನು. ಆಮೇಲೆ, ಆ ಮನುಷ್ಯನು ಚಿತ್ತೈಕಾಗ್ರತೆಯಿಂದಲೋ ಏನೋ ಸ್ಥಿರನಾಗಿ ಬಿಟ್ಟಿದ್ದನ್ನು ನೋಡಿದೆ. ಆಮೇಲೆ, ಮೊದಲು ನನ್ನ ಹೆಸರನ್ನು ನಮ್ಮ ವಂಶದಲ್ಲಿ ಹದಿನಾಲ್ಕು ತಲೆಯವರಿಗಿನ ಜನರ ಹೆಸರನ್ನೂ ಹೇಳಿದನು, ಅದಲ್ಲದೆ ಪರಮಹಂಸರು ನನ್ನ ಜೊತೆಯಲ್ಲಿ ಬೆಂಬಿಡದೆ ಇದ್ದಾರೆಂದೂ, ನಮ್ಮ ತಾಯಿ ಕುಶಲವಾಗಿದ್ದಾಳೆಂದೂ ಹೇಳಿದನು; ಮತ್ತು ಧರ್ಮ ಪ್ರಚಾರ ಮಾಡುವುದಕ್ಕಾಗಿ ನಾನು ಬಹುದೂರ ಅತಿಶೀಘ್ರದಲ್ಲಿಯೆ ಹೋಗಬೇಕಾಗಿದೆಯೆಂಬುದನ್ನೂ ಹೇಳಿದನು. ಹೀಗೆ ತಾಯಿಯ ಕ್ಷೇಮ ಸಮಾಚಾರವನ್ನು ತಿಳಿದುಕೊಂಡು ಭಟ್ಟಾಚಾರ್ಯನ ಜೊತೆಯಲ್ಲಿ ಪಟ್ಟಣಕ್ಕೆ ಹಿಂತಿರುಗಿ ಬಂದೆ. ಬಂದಮೇಲೆ ಕಲ್ಕತ್ತೆಯಿಂದ ಬಂದ ತಂತಿಯ ವರ್ತಮಾನದಲ್ಲಿಯೂ ನಮ್ಮ ತಾಯಿಯ ಕುಶಲ ಸಮಾಚಾರ ತಿಳಿಯಿತು.''

ಯೋಗಾನಂದ ಸ್ವಾಮಿಗಳ ಕಡೆಗೆ ನೋಡಿ ಸ್ವಾಮಿಜಿ ''ಆತನು ಏನೇನು ಹೇಳಿದನೋ ಅದೆಲ್ಲ ಹಾಗೆ ಹಾಗೇ ನಡೆದೇನೊ ನಡೆಯಿತು. ಅದು ಕಾಕತಾಳೀಯ ನ್ಯಾಯವೇ ಆಗಿರಲಿ ಮತ್ತೆ ಏನಾದರೂ ಆಗಿರಲಿ'' ಎಂದು ಹೇಳಿದರು.

ಯೋಗಾನಂದ ಸ್ವಾಮಿಗಳು ಅದಕ್ಕೆ ಉತ್ತರವಾಗಿ, "ನೀನು ಮೊದಲು ಇದನ್ನೆಲ್ಲಾ ಸ್ವಲ್ಪವೂ ನಂಬುತ್ತಿರಲಿಲ್ಲ, ಅದಕ್ಕೋಸ್ಕರವೆ ಇದನ್ನೆಲ್ಲಾ ನೋಡಬೇಕಾದ ಅವಶ್ಯಕತೆಯುಂಟಾಯಿತು" ಎಂದರು.

ಸ್ವಾಮಿಜಿ:—ನಾನೇನು ಕಣ್ಣಾರ ನೋಡದೆ ಕಿವಿಯಾರ ಕೇಳದೆ ಯಾವುದೆಂದರೆ ಅದನ್ನು ನಂಬುವನೇನು? ಅಂಥ ಮನುಷ್ಯನಲ್ಲವೇ ಅಲ್ಲ. ಮಹಾ ಮಾಯೆಯ ರಾಜ್ಯಕ್ಕೆ ಬಂದು ಜಗತ್ತಿನಲ್ಲಿ ಎಷ್ಟೊಂದು ಇಂದ್ರ ಜಾಲ ಮಹೇಂದ್ರಜಾಲಗಳನ್ನು ನೋಡಿಬಿಟ್ಟಿದ್ದೇನೆ! ಮಾಯಾ— ಮಾಯಾ!! ರಾಮರಾಮ! ಈವೊತ್ತು ಏನು! ಬರಿಯ ಬೂದಿ ಭಸ್ಮಗಳ ಮಾತೇ ಆಗಿಹೋಯಿತು! ಭೂತವನ್ನು ಮನಸ್ಸಿನಲ್ಲಿ ಭಾವಿಸಿಕೊಳ್ಳುತ್ತ ಭಾವಿಸಿಕೊಳ್ಳುತ್ತ ಜನರು ಭೂತವಾಗಿಬಿಡುತ್ತಾರೆ. ಮತ್ತೆ, ಯಾರು ಹಗಲೂ ರಾತ್ರಿಯೂ, ತಿಳಿದೂ ತಿಳಿಯದೆಯೂ, 'ನಾನು ನಿತ್ಯ ಶುದ್ಧ ಬುದ್ಧ ಮುಕ್ತನಾದ ಆತ್ಮಾ' ಎಂದುಕೊಳ್ಳುತ್ತಾರೆಯೊ ಅವರು ಬ್ರಹ್ಮಜ್ಞ ರಾಗುವರು.

ಹೀಗೆಂದು ಹೇಳಿ ಸ್ವಾಮಿಜಿ ಸ್ನೇಹಪೂರ್ವಕವಾಗಿ ಶಿಷ್ಯನ ಕಡೆಗೆ ತಿರುಗಿ ಹೀಗೆಂದು ಹೇಳಿದರು:—ಕೆಲಸಕ್ಕೆ ಬಾರದ ಮಾತುಗಳಿಗೆಲ್ಲಾ ಮನಸ್ಸಿನಲ್ಲಿ ಸ್ವಲ್ಪವೂ ಎಡೆಗೊಡಬೇಡ—ಕೇವಲ ಸದ ಸದ್ವಿಚಾರವನ್ನು ಮಾಡು— ಆತ್ಮವನ್ನು ಪ್ರತ್ಯಕ್ಷ ಮಾಡಿಕೊಳ್ಳುವುದಕ್ಕೆ ಪ್ರಾಣವನ್ನಾದರೂ ಕೊಟ್ಟು ಪ್ರಯತ್ನಮಾಡು. ಆತ್ಮಜ್ಞಾನಕ್ಕಿಂತ ಶ್ರೇಷ್ಠವಾದದ್ದು ಮತ್ತಾವುದೂ ಇಲ್ಲ. ಮಿಕ್ಕದ್ದೆಲ್ಲಾ ಮಾಯಾ—ಇಂದ್ರಜಾಲ ಮಹೇಂದ್ರಜಾಲ. ಪ್ರತ್ಯಗಾತ್ಮವೊಬ್ಬನೇ ನಿಜವಾಗಿಯೂ ಸತ್ಯ. ಈ ವಿಷಯವನ್ನು ತಿಳಿದುಕೊ; ಅದಕ್ಕೋಸ್ಕರವೆ ನಿಮಗೆ ತಿಳಿಸುವುದಕ್ಕೆ ಒದ್ದಾಡುತ್ತಿದ್ದೇನೆ. 'ಏಕಮೇವಾದ್ವಿತೀಯಂ ಬ್ರಹ್ಮ ನೇಹ ನಾನಾಸ್ತಿ ಕಿಂಚನ.'"

ಮಾತು ನಡೆಯುತ್ತ ನಡೆಯುತ್ತ ರಾತ್ರಿ ಹನ್ನೊಂದು ಘಂಟೆ ಹೊಡೆದುಹೋಯಿತು. ಅನಂತರದಲ್ಲಿ ಸ್ವಾಮಿಜಿ ಊಟಮಾಡಿ ವಿಶ್ರಮಿಸಿ ಕೊಳ್ಳುವುದಕ್ಕೆ ಎದ್ದರು. ಶಿಷ್ಯನು ಸ್ವಾಮಿಜಿ ಪಾದಪದ್ಮದಲ್ಲಿ ಪ್ರಣಾಮ ಮಾಡಿ ಅಪ್ಪಣೆಯನ್ನು ಪಡೆದನು. ಸ್ವಾಮಿಜಿ "ನಾಳೆ ಬರುತ್ತೀಯಷ್ಟೆ?" ಎಂದು ಕೇಳಿದರು.

ಶಿಷ್ಯ:—ಹೌದು! ಬಂದೇ ಬರುತ್ತೇನೆ. ತಮ್ಮನ್ನು ಸಾಯಂ ಕಾಲದ ಹೊತ್ತು ನೋಡದಿದ್ದರೆ ಮನಸ್ಸು ವ್ಯಾಕುಲಗೊಂಡು ಮಿಲಮಿಲನೆ

ಒದ್ದಾಡುವುದು.

ಸ್ವಾಮಿಜಿ:—ಹಾಗಾದರೆ ಈಗ ಹೊರಡು. ರಾತ್ರಿಯಾಯಿತು.

ಆಮೇಲೆ ಶಿಷ್ಯನು ಸ್ವಾಮಿಗಳ ಮಾತನ್ನು ಮನನ ಮಾಡುತ್ತಾ ಮಾಡುತ್ತ ರಾತ್ರಿ ಹನ್ನೆರಡು ಘಂಟೆಯ ಹೊತ್ತಿಗೆ ಮನೆಗೆ ಹಿಂತಿರುಗಿ ಬಂದನು.

## ಅಧ್ಯಾಯ ೧೩

ಸ್ಥಳ:— ಬೇಲೂರು; ಮಠ (ಬಾಡಿಗೆ ಕಟ್ಟಡ) ವರ್ಷ:—ಕ್ರಿ. ಶ. ೧೮೯೮.

ಸ್ವಾಮಿಜಿ ಇಂಗ್ಲೆಂಡಿನಿಂದ ಹಿಂತಿರುಗಿ ಬಂದ ವರ್ಷ ದಕ್ಷಿಣೇಶ್ವರದ ರಾಣಿ ರಾಸಮಣಿಯ ಕಾಳೀದೇವಸ್ಥಾನದಲ್ಲಿ ಶ್ರೀ ಶ್ರೀರಾಮಕೃಷ್ಣ ಪರಮಹಂಸರವರ ಜನ್ಮೋತ್ಸವ. ಆದರೆ, ನಾನಾಕಾರಣದಿಂದ ಮುಂದಿನ ವರ್ಷ ದಕ್ಷಿಣೇಶ್ವರದಲ್ಲಿ ಉತ್ಸವ ನಿಂತುಹೋಯಿತು; ಮತ್ತು ಬೇಲೂರಿನಲ್ಲಿ ಗಂಗಾ ತೀರದಲ್ಲಿದ್ದ ಶ್ರೀಯುತ ನೀಲಾಂಬರ ಮುಖ್ಯೋಪಾಧ್ಯಾಯರ ಆರಾಮಗೃಹವನ್ನು ಬಾಡಿಗೆಗೆ ತೆಗೆದುಕೊಂಡು ಅಲ್ಲಿಗೆ ಮಠವನ್ನು ಸಾಗಿಸಿತ್ತು. ಅದಾದ ಕೆಲವು ದಿವಸದ ಮೇಲೆ ಈಗಿನ ಮಠ ಇರುವ ಸ್ಥಳ ಖರೀದಿಯಾಯಿತು; ಆದರೂ, ಆ ವರ್ಷ ಜನ್ಮೋತ್ಸವ ಹೊಸ ಸ್ಥಳದಲ್ಲಿ ನಡೆಯುವುದಕ್ಕಾಗಲಿಲ್ಲ. ಏಕೆಂದರೆ, ಆಗ ಮಠದ ನಿವೇಶನದ ತುಂಬ ಕಾಡು ಬೆಳೆದುಕೊಂಡಿತ್ತು; ಅನೇಕ ಕಡೆಗಳಲ್ಲಿ ನೆಲ ಸಮವಾಗಿರಲಿಲ್ಲ. ಇದರಿಂದಲೇ ಆಸಾರಿ ಶ್ರೀ ಶ್ರೀರಾಮಕೃಷ್ಣ ಜನ್ಮೋತ್ಸವ ಬೇಲೂರಿನಲ್ಲಿ ದಾಯರವರು ಕಟ್ಟಿಸಿದ್ದ ಗುಡಿಯಲ್ಲಿ ನಡೆಯಿತು. ಈ ಉತ್ಸವಕ್ಕೆ ಹಿಂದಿನ ಫಾಲ್ಗುಣ ಶುದ್ಧ ಬಿದಿಗೆಯ ದಿವಸ ನೀಲಾಂಬರ ಬಾಬುಗಳ ತೋಟದಲ್ಲಿ ಶ್ರೀರಾಮಕೃಷ್ಣ ಪರಮಹಂಸರ ಜನ್ಮತಿಥಿ ಪೂಜೆ ನಡೆಯಿತು; ಮತ್ತು ಜನ್ಮತಿಥಿ ಪೂಜೆಯಾದ ಒಂದೆರಡು ದಿನಕ್ಕೆ ಒಳ್ಳೆಯ ಮುಹೂರ್ತದಲ್ಲಿ, ಮಠಕ್ಕೋಸ್ಕರ ಕೊಂಡುಕೊಂಡಿದ್ದ ಹೊಸ ನಿವೇಶನಕ್ಕೆ ಶ್ರೀರಾಮಕೃಷ್ಣರ ಮೂರ್ತಿ ಮುಂತಾದ್ದನ್ನೆಲ್ಲಾ ತೆಗೆದುಕೊಂಡು ಹೋಗಿ ಪೂಜೆ ಹೋಮಾದಿಗಳನ್ನು ಮಾಡಿ ಆಮೇಲೆ ಪರಮಹಂಸರ ಪ್ರತಿಮೆಯನ್ನು ಪ್ರತಿಷ್ಠೆ

ಮಾಡಿತು. ಸ್ವಾಮಿಜಿ ಆಗ ಹಿಂದೆ ಹೇಳಿದ ನೀಲಾಂಬರ ಬಾಬುಗಳ ತೋಟ ದಲ್ಲಿಯೇ ಇರುತ್ತಿದ್ದರು. ಜನ್ಮತಿಥಿ ಪೂಜೆಗೆ ದೊಡ್ಡ ಏರ್ಪಾಡು. ಸ್ವಾಮಿಜಿ ಅಪ್ಪಣೆಯನ್ನನುಸರಿಸಿ ದೇವರ ಮನೆಯು ಬೇಕಾದ ಸಲಕರಣೆ ಸಾಮಗ್ರಿಗಳಿಂದ ತುಂಬಿದೆ. ಸ್ವಾಮಿಜಿ ಈ ದಿನ ತಾವೇ ಎಲ್ಲಾ ವಿಷಯ ಗಳನ್ನು ವಿಚಾರಿಸಿ ತಿಳಿದುಕೊಳ್ಳುತ್ತಿದ್ದಾರೆ.

ಜನ್ಮತಿಥಿಯ ಬೆಳಗ್ಗೆ ಎಲ್ಲರಿಗೂ ಆನಂದ! ಪರಮಹಂಸರ ಮಾತನ್ನು ಬಿಟ್ಟು ಭಕ್ತರ ಬಾಯಲ್ಲಿ ಮತ್ತೊಂದು ಮಾತಿಲ್ಲ; ಈಗ ಸ್ವಾಮಿಜಿ ಪೂಜಾ ಮಂದಿರದ ಮುಂದೆ ಬಂದು ಪೂಜೆಗೆ ಸಿದ್ಧವಾಗುತ್ತಿದ್ದದ್ದನ್ನು ನೋಡುತ್ತ ನಿಂತುಕೊಂಡರು.

ಪೂಜೆಗೆ ಆಗಬೇಕಾಗಿದ್ದ ಏರ್ಪಾಡನ್ನು ನೋಡಿ ಸ್ವಾಮಿಜಿ ಶಿಷ್ಯನನ್ನು ಕುರಿತು "ಯಜ್ಞೋಪವೀತವನ್ನು ತಂದಿದ್ದೀಯಷ್ಟೇ" ಎಂದು ಕೇಳಿದರು.

ಶಿಷ್ಯ:— ತಮ್ಮ ಅಪ್ಪಣೆಯಂತೆ ಎಲ್ಲವೂ ಸಿದ್ಧವಾಗಿದೆ; ಆದರೆ ಇಷ್ಟೊಂದು ಯಜ್ಞೋಪವೀತಗಳನ್ನು ಸಿದ್ಧಪಡಿಸಿಕೊಂಡದ್ದು ಏಕೊ ನನಗೆ ಗೊತ್ತಾಗಲಿಲ್ಲ.

ಸ್ವಾಮಿಜಿ:— ದ್ವಿಜರಿಗೆ ಮಾತ್ರ ಉಪನಯನ ಸಂಸ್ಕಾರಕ್ಕೆ ಅಧಿಕಾರ, ಇದಕ್ಕೆ ವೇದವೇ ಪ್ರಮಾಣ. ಇಂದು ಪರಮಹಂಸರ ಜನ್ಮೋ ತ್ಸವಕ್ಕೆ ಯಾರು ಯಾರು ಬರುತ್ತಾರೆಯೋ ಅವರೆಲ್ಲರಿಗೂ ಜನಿವಾರವನ್ನು ಹಾಕಿಸುತ್ತೇನೆ. ಇವರೆಲ್ಲಾ ಪತಿತರಾಗಿಬಿಟ್ಟಿದ್ದಾರೆ. ಪ್ರಾಯಶ್ಚಿತ್ತ ಮಾಡಿಕೊಂಡ ಮೇಲೆ ಉಪನಯನ ಸಂಸ್ಕಾರಕ್ಕೆ ಅರ್ಹನಾಗುವನೆಂದು ಶಾಸ್ತ್ರದಲ್ಲಿ ಹೇಳಿದೆ. ಇಂದು ಪರಮಹಂಸರ ಶುಭಜನ್ಮೋತ್ಸವ—ಎಲ್ಲರೂ ಅವರ ನಾಮೋಚ್ಚಾರಣೆಮಾಡಿ ಪರಿಶುದ್ಧರಾಗುವರು. ಅದಕ್ಕೋಸ್ಕರವೇ ಇಂದು ಬರುವ ಭಕ್ತರಿಗೆಲ್ಲಾ ಜನಿವಾರವನ್ನು ಹಾಕಿಸಬೇಕು; ತಿಳಿಯಿತೆ?

ಶಿಷ್ಯ:—ನಾನು ತಮ್ಮ ಅಪ್ಪಣೆಯಂತೆ ಬೇಕಾದಷ್ಟು ಜನಿವಾರವನ್ನು ಕೂಡಿಹಾಕಿಕೊಂಡು ತಂದಿದ್ದೇನೆ. ಪೂಜೆಯಾದ ಮೇಲೆ ತಮ್ಮ ಅನು ಮತಿಯನ್ನು ಪಡೆದು, ಬಂದ ಭಕ್ತರಿಗೆಲ್ಲಾ ಅದನ್ನು ಹಾಕಿಸುತ್ತೇನೆ.

ಸ್ವಾಮಿಜಿ:— ಬ್ರಾಹ್ಮಣೇತರ ಭಕ್ತರಿಗೆ ಈ ವಿಧ ಗಾಯತ್ರೀ ಮಂತ್ರವನ್ನು ಹೇಳಿಕೊಡುತ್ತೇನೆ. (ಇಲ್ಲಿ ಕ್ಷತ್ರಿಯಾದಿ ದ್ವಿಜರ ಗಾಯತ್ರಿ ಯನ್ನು ಹೇಳಿದರು) ಕಾಲಕ್ರಮದಲ್ಲಿ ದೇಶವನ್ನೆಲ್ಲಾ ಬ್ರಾಹ್ಮಣ ಪದವಿಗೆ ಹತ್ತಿಸಬೇಕಾಗಿದೆ; ಪರಮಹಂಸರ ಭಕ್ತರ ಮಾತಂತೂ ಹೇಳಲೇ ಬೇಕಾಗಿಲ್ಲ.

ಹಿಂದೂಗಳೆಲ್ಲರೂ ಪರಸ್ಪರ ಅಣ್ಣತಮ್ಮಂದಿರು. ಮುಟ್ಟಬೇಡ ಮುಟ್ಟಬೇಡ ಎಂದು ಹೇಳಿ ಹೇಳಿ ನಾವೇ ಅವರನ್ನು ಕೀಳುಮಾಡಿ ಕೂರಿಸಿದ್ದೇವೆ. ಇದೇ ದೇಶದ ಹೀನತೆ, ಭೀರುತೆ, ಮೂರ್ಖತೆ, ಕಾಪುರುಷತೆ ಇವುಗಳ ಪರಾಕಾಷ್ಠತೆಯಲ್ಲಿ ಪರಿಣಮಿಸಿದೆ. ಇವರನ್ನು ಮೇಲಕ್ಕೆ ಎತ್ತಬೇಕು; ಅಭಯದ ಮಾತನ್ನು ಹೇಳಬೇಕು. 'ನೀವೂ ನಮ್ಮ ಹಾಗೇ ಮನುಷ್ಯರು. ನಿಮಗೂ ನಮ್ಮಹಾಗೆ ಎಲ್ಲಾ ಅಧಿಕಾರವೂ ಇದೆ' ಎಂದು ಹೇಳಬೇಕು, ತಿಳಿಯಿತೆ ?

ಶಿಷ್ಯ :— ತಿಳಿಯಿತು.

ಸ್ವಾಮಿಜಿ:— ಈಗ ಯಾರು ಯಾರಿಗೆ ಜನಿವಾರಬೇಕೊ ಅವರೆಲ್ಲರೂ ಗಂಗಾಸ್ನಾನ ಮಾಡಿಕೊಂಡು ಬರುವಂತೆ ಹೇಳು; ಆಮೇಲೆ ಪರಮಹಂಸರಿಗೆ ನಮಸ್ಕಾರಮಾಡಿ ಎಲ್ಲರೂ ಜನಿವಾರವನ್ನು ಹಾಕಿಕೊಳ್ಳಲಿ. ಸ್ವಾಮಿಜಿ ಅಪ್ಪಣೆಯಮೇರೆ, ಬಂದಿದ್ದ ಸುಮಾರು ನಲವತ್ತು ಐವತ್ತು ಜನ ಭಕ್ತರು ಕ್ರಮವಾಗಿ ಗಂಗಾಸ್ನಾನಮಾಡಿ ಬಂದು ಶಿಷ್ಯನಿಂದ ಗಾಯತ್ರೀ ಉಪದೇಶವನ್ನು ಹೊಂದಿ ಜನಿವಾರವನ್ನು ಹಾಕಿಕೊಳ್ಳುವುದಕ್ಕೆ ಮೊದಲು ಮಾಡಿದರು. ಮಠದಲ್ಲಿ ಮಂಗಳರವವುಂಟಾಯಿತು. ಜನಿವಾರವನ್ನು ಹಾಕಿಕೊಂಡು ಭಕ್ತರು ಪುನಃ ಪರಮಹಂಸರಿಗೆ ಪ್ರಣಾಮ ಮಾಡಿದರು; ಸ್ವಾಮಿಜಿ ಪಾದಪದ್ಮದಲ್ಲಿಯೂ ಅಡ್ಡಬಿದ್ದರು. ಅದನ್ನು ನೋಡಿ ಸ್ವಾಮಿಜಿ ಮುಖಾರವಿಂದವು ಒಂದಕ್ಕೆ ನೂರರಷ್ಟು ಅರಳಿದಂತಾಯಿತು. ಇದಾದ ಸ್ವಲ್ಪ ಹೊತ್ತಿಗೆ ಶ್ರೀಯುತ ಗಿರೀಶಚಂದ್ರ ಘೋಷ್ ಮಹಾಶಯರು ಮಠಕ್ಕೆ ಬಂದರು.

ಈಗ ಸ್ವಾಮಿಜಿ ಅಪ್ಪಣೆಯಂತೆ ಸಂಗೀತಕ್ಕೆ ಆರಂಭವಾಯಿತು; ಮಠದ ಸನ್ಯಾಸಿಗಳು ಸ್ವಾಮಿಜಿಗೆ ತಮ್ಮ ಮನದಣಿಯ ವೇಷಭೂಷಗಳನ್ನು ಹಾಕತೊಡಗಿದರು. ಅವರ ಕಿವಿಯಲ್ಲಿ ಶಂಖದ ಕುಂಡಲ, ಮೈಯಲ್ಲಿ ಕರ್ಪೂರ ಧೂಸರವಾದ ಪವಿತ್ರ ವಿಭೂತಿ, ತಲೆಯಲ್ಲಿ ಕಾಲುತನಕ ಜೋಲಾಡುವ ಜಟೆಗಳು, ಎಡೆಗೈಯಲ್ಲಿ ತ್ರಿಶೂಲ, ಎರಡು ತೋಳುಗಳಲ್ಲಿಯೂ ರುದ್ರಾಕ್ಷಿವಲಯ, ಕತ್ತಿನಲ್ಲಿ ಮಂಡಿಯವರೆಗೆ ಬಂದಿದ್ದ ಮೂರು ಸಾಲು ದೊಡ್ಡ ರುದ್ರಾಕ್ಷಿಯ ಮಾಲೆ—ಮುಂತಾದುವುಗಳೆಲ್ಲಾ ಆದವು. ಇವೆಲ್ಲವನ್ನೂ ಧರಿಸಿಕೊಳ್ಳಲು, ಸ್ವಾಮಿಗಳ ರೂಪದಲ್ಲಿ ಉಂಟಾದ ರಮಣೀಯತೆಯನ್ನು ಬಾಯಲ್ಲಿ ಹೇಳ ತೀರದು. ಆದಿನ ಯಾರು ಯಾರು ಆ

ಮೂರ್ತಿಯನ್ನು ನೋಡಿದರೋ ಅವರೆಲ್ಲರೂ, ಸಾಕ್ಷಾತ್ ಭೈರವನೇ ಸ್ವಾಮಿಗಳ ಶರೀರದಿಂದ ಭೂಮಿಯಲ್ಲಿ ಅವತರಿಸಿದ್ದಾನೆಂದು ಹೇಳಿದರು. ಸ್ವಾಮಿಗಳೂ ಇತರ ಸನ್ಯಾಸಿಗಳ ದೇಹದಲ್ಲಿ ವಿಭೂತಿಯನ್ನು ಇಟ್ಟರು. ಅವರು ಸ್ವಾಮಿಜಿಯ ನಾಲ್ಕು ಕಡೆಯಲ್ಲಿಯೂ ಮೂರ್ತಿಮಂತ ಭೈರವ ಗಣಗಳ ಹಾಗೆ ಇದ್ದುಕೊಂಡು, ಮಠ ಪ್ರದೇಶದಲ್ಲಿ ಕೈಲಾಸಪರ್ವತದ ಅಂದವನ್ನು ಬೀರುತ್ತಿದ್ದರು. ಆ ದೃಶ್ಯವನ್ನು ನೆನೆಸಿಕೊಂಡರೂ ಈಗ ಆನಂದ ವಾಗುತ್ತದೆ.

ಈಗ ಸ್ವಾಮಿಜಿ ಪಶ್ಚಿಮ ದಿಕ್ಕಿಗೆ ತಿರುಗಿಕೊಂಡು ಮುಕ್ತ ಪದ್ಮಾಸನ ದಲ್ಲಿ ಕುಳಿತುಕೊಂಡು "ಕೂಜಂತಂ ರಾಮ ರಾಮೇತಿ" ಎಂಬ ಪ್ರಾರ್ಥನಾ ಶ್ಲೋಕವನ್ನು ಮಧುರ ಮಧುರವಾಗಿ ಹೇಳುತ್ತ ಅದು ಮುಗಿದ ಮೇಲೆ "ರಾಮ ರಾಮ ಶ್ರೀರಾಮರಾಮ" ಎಂಬುದನ್ನೇ ಪುನಃ ಪುನಃ ಎನ್ನತೊಡ ಗಿದರು. ಅಕ್ಷರಕ್ಷರದಲ್ಲಿಯೂ ಅಮೃತವು ತೊಟ್ಟಿಕ್ಕುವಂತಿತ್ತು. ಸ್ವಾಮಿಜಿ ಕಣ್ಣು ಅರ್ಧ ಮುಚ್ಚಿದೆ; ಕೈಯಲ್ಲಿ ತಂಬೂರಿಯ ಸ್ವರ ಶ್ರುತಿಗೊಡುತ್ತಿದೆ; 'ರಾಮರಾಮ ಶ್ರೀರಾಮರಾಮ' ಎಂಬ ಧ್ವನಿಯನ್ನು ಬಿಟ್ಟು ಸ್ವಲ್ಪಹೊತ್ತಿನ ತನಕ ಮತ್ತೆ ಯಾವುದೂ ಕೇಳುತ್ತಿರಲಿಲ್ಲ. ಹೀಗೆ ಸುಮಾರು ಅರ್ಧಗಂಟೆ ಗಿಂತ ಹೆಚ್ಚಾಗಿ ಕಳೆಯಿತು; ಆಗಲೂ ಯಾರ ಬಾಯಲ್ಲಿಯೂ ಬೇರೆ ಯಾವ ಮಾತೂ ಇಲ್ಲ. ಸ್ವಾಮಿಜಿ ಬಾಯಿಂದ ಬರುತ್ತಿದ್ದ ರಾಮ ನಾಮಾಮೃತವನ್ನು ಪಾನಮಾಡಿ ಎಲ್ಲರೂ ಇಂದು ಮತ್ತರಾಗಿಬಿಟ್ಟಿದ್ದರು. ಇದೇನು ನಿಜವಾಗಿಯೂ ಇವತ್ತು ಸ್ವಾಮಿಜಿ ಶಿವಭಾವದಲ್ಲಿ ಮತ್ತರಾಗಿ ರಾಮನಾಮವನ್ನು ಹೇಳುವುದಕ್ಕೆ ತೊಡಗಿದರೊ—ಎಂದು ಶಿಷ್ಯ ಮನಸ್ಸಿ ನಲ್ಲಿ ಭಾವಿಸಿಕೊಂಡನು. ಸ್ವಾಮಿಜಿ ಮುಖದ ಸ್ವಾಭಾವಿಕ ಗಾಂಭೀರ್ಯ ಇಂದು ನೂರ್ಮಡಿಯಾದ ಗಭೀರತೆಯನ್ನು ಪಡೆದಂತಿತ್ತು; ಅರೆ ಮುಚ್ಚಿದ್ದ ಕಣ್ಣಡೆಗಳಲ್ಲಿ ಪ್ರಭಾತ ಸೂರ್ಯನ ಕಾಂತಿ ಹೊರಟು ಹೊರಗೆ ಬರು ವಂತಿತ್ತು; ಮತ್ತು ಅತ್ಯಂತವಾದ ಆನಂದ ಮತ್ತತೆಯಲ್ಲಿ ಆ ವಿಪುಲವಾದ ದೇಹ ತೂರಾಡುವಂತಿತ್ತು. ಆ ರೂಪವು ವರ್ಣನೆ ಮಾಡಲು ಸಾಧ್ಯ ವಾದದ್ದಲ್ಲ; ಅನುಭವಕ್ಕೆ ಬರಬೇಕಾದದ್ದು. ನೋಟಕರು "ಚಿತ್ರಾರ್ಪಿತಾ ರಂಭ ಇವಾವತಸ್ಥೆ."

ರಾಮನಾಮ ಸಂಕೀರ್ತನೆಯು ಮುಗಿದ ಮೇಲೆ ಸ್ವಾಮಿಜಿ ಮೊದಲಿ ನಂತೆ ಆನಂದ ಪ್ರಮತ್ತತೆಯಲ್ಲಿಯೇ 'ಸೀತಾಪತಿ ರಾಮಚಂದ್ರ

ರಘುರಾಈ' ಎಂಬುದನ್ನು ಗಾನಮಾಡುವುದಕ್ಕೆ ತೊಡಗಿದರು. ಮೃದಂಗ ಬಾರಿಸುವವನು ಸರಿಯಾಗಿಲ್ಲದ್ದರಿಂದ ಸ್ವಾಮಿಗಳಿಗೆ ರಸಭಂಗವಾದಂತೆ ತೋರಿತು. ಆಗ ಅವರು ಶಾರದಾನಂದ ಸ್ವಾಮಿಗಳನ್ನು ಗಾನಮಾಡುವಂತೆ ಅಪ್ಪಣೆ ಮಾಡಿ ತಾವೇ ಮೃದಂಗವನ್ನು ತೆಗೆದುಕೊಂಡರು. ಶಾರದಾನಂದ ಸ್ವಾಮಿಗಳು ಮೊದಲು "ಏಕರೂಪ ಅರೂಪ ನಾಮವರಣ" ಎಂಬ ಕೀರ್ತನೆಯನ್ನು ಹಾಡಿದರು. ಮೃದಂಗದ ಸ್ನಿಗ್ಧ ಗಂಭೀರ ನಿರ್ಘೋಷಕ್ಕೆ ಗಂಗೆಯು ಉಕ್ಕಿ ಉಕ್ಕಿ ಬರುವಂತಿತ್ತು; ಶಾರದಾನಂದ ಸ್ವಾಮಿಗಳ ಸುಕಂಠವೂ ಮಧುರ ಆಲಾಪನೆಯೂ ಮನೆಯನ್ನು ಆವರಿಸಿಕೊಂಡಿತು. ಆಮೇಲೆ ಶ್ರೀ ರಾಮಕೃಷ್ಣರು ಹಾಡುತ್ತಿದ್ದ ಹಾಡುಗಳನ್ನೆಲ್ಲಾ ಒಂದೊಂದಾಗಿ ಹಾಡತೊಡಗಿದರು.

ಈಗ ಸ್ವಾಮಿಜಿ ಇದ್ದಕ್ಕಿದ್ದ ಹಾಗೆ ತಮ್ಮ ವೇಷಭೂಷಗಳೆಲ್ಲಾ ತೆಗೆದುಹಾಗಿ ಗಿರೀಶಬಾಬುಗಳಿಗೆ ಅವುಗಳನ್ನು ತೊಡಿಸುವುದಕ್ಕೆ ಹೊರಟರು. ತಮ್ಮ ಕೈಯಿಂದಲೆ ಗಿರೀಶಬಾಬುಗಳ ವಿಶಾಲವಾದ ದೇಹದಲ್ಲಿ ವಿಭೂತಿಯನ್ನು ಬಳಿದು ಕಿವಿಯಲ್ಲಿ ಕುಂಡಲವನ್ನೂ ತಲೆಯಲ್ಲಿ ಜಟೆಯನ್ನೂ ಕತ್ತಿನಲ್ಲಿ ರುದ್ರಾಕ್ಷಿಯನ್ನೂ ತೋಳುಗಳಲ್ಲಿ ರುದ್ರಾಕ್ಷಿ ವಲಯವನ್ನೂ ಇಟ್ಟರು. ಗಿರೀಶಬಾಬುಗಳು ಇವುಗಳಿಂದ ಬೇರೊಬ್ಬ ಮೂರ್ತಿಯಾಗಿ ಪರಿಣಮಿಸಿದಂತಾದರು. ಇದನ್ನು ನೋಡಿದ ಭಕ್ತರಿಗೆ ಬೆರಗಾಯಿತು. ಆಮೇಲೆ ಸ್ವಾಮಿಜಿ "ಈತ ಭೈರವನ ಅವತಾರ; ನನಗೂ ಈತನಿಗೂ ಯಾವ ವ್ಯತ್ಯಾಸವೂ ಇಲ್ಲ" ಎಂದು ಪರಮಹಂಸರು ಹೇಳುತ್ತಿದ್ದರು – ಎಂದರು. ಗಿರೀಶಬಾಬುಗಳೂ ವಿಸ್ಮಿತರಾಗಿ ಕುಳಿತುಕೊಂಡಿದ್ದರು. ಅವರ ಸಂನ್ಯಾಸಿಗುರು ಭ್ರಾತೃಗಳು ಅವರನ್ನು ಇಂದು ಹೇಗೆ ಅಲಂಕರಿಸಬೇಕೆಂದು ಇಷ್ಟಪಟ್ಟರೊ ಆ ವೇಷದಲ್ಲಿಯೇ ಅವರು ಒಪ್ಪುತ್ತಿದ್ದರು. ಕೊನೆಗೆ ಸ್ವಾಮಿಜಿ ಅಪ್ಪಣೆಯಂತೆ ಒಂದು ಕಾವಿಯ ಬಟ್ಟೆಯನ್ನು ತಂದು ಗಿರೀಶಬಾಬುಗಳಿಗೆ ಉಡಿಸಿದ್ದಾಯಿತು. ಗಿರೀಶಬಾಬುಗಳು ಯಾವ ಅಡ್ಡಿಯನ್ನೂ ಮಾಡಲಿಲ್ಲ. ಗುರುಭ್ರಾತೃಗಳ ಇಚ್ಛೆಯಂತೆ ಅವರು ಇಂದು ಕೈಕಾಲುಗಳನ್ನು ಧಾರಾಳವಾಗಿ ನೀಡಿದರು. ಈಗ ಸ್ವಾಮಿಜಿ:— "ಜಿ. ಸಿ. (ಗಿರಿಶಬಾಬುಗಳನ್ನು ಸ್ವಾಮಿಗಳು ಜಿ. ಸಿ. ಎಂದು ಕರೆಯುತ್ತಿದ್ದರು.) ನೀನು ಇವೊತ್ತು ನಮಗೆ ಪರಮಹಂಸರ ವಿಚಾರವನ್ನು ಹೇಳಬೇಕು; (ಎಲ್ಲರ ಕಡೆಗೂ ನೋಡಿ) ಎಲ್ಲರೂ ಸುಮ್ಮನೆ ಸ್ಥಿರವಾಗಿ ಕುಳಿತುಕೊಳ್ಳಿ" ಎಂದರು. ಗಿರೀಶಬಾಬು

ಗಳಿಗೆ ಆಗಲೂ ಬಾಯಲ್ಲಿ ಮಾತಿಲ್ಲ. ಯಾರ ಜನ್ಮೋತ್ಸವಕ್ಕಾಗಿ ಇಂದು ಎಲ್ಲರೂ ಸೇರಿದ್ದರೋ ಅವರ ಲೀಲಾದರ್ಶನ ಮತ್ತು ಸಾಕ್ಷಾತ್ ಶಿಷ್ಯರ ಆನಂದ ದರ್ಶನ ಇವುಗಳಿಂದ ಉಂಟಾದ ಸುಖದಲ್ಲಿ ಜಡರಂತಾಗಿಬಿಟ್ಟಿದ್ದರು. ಕೊನೆಗೆ ಗಿರೀಶಬಾಬುಗಳು ಹೀಗೆಂದು ಹೇಳಿದರು :— "ದಯಾಮಯರಾದ ಪರಮಹಂಸರ ವೃತ್ತಾಂತವನ್ನು ನಾನು ಮತ್ತೇನು ಹೇಳಲಿ? ಕಾಮಕಾಂಚನ ತ್ಯಾಗಿಗಳಾದ ನಿಮ್ಮಂಥ ಬಾಲಸನ್ಯಾಸಿಗಳ ಜೊತೆಯಲ್ಲಿ ಅವರು ಈ ಅಧಮನಿಗೆ ಏಕಾಸನದಲ್ಲಿ ಕುಳಿತುಕೊಳ್ಳುವುದಕ್ಕೆ ಅಧಿಕಾರವನ್ನು ಕೊಟ್ಟಿರಲ್ಲಾ, ಇದರಿಂದಲೇ ಅವರ ಅಪಾರ ಕರುಣೆಯನ್ನು ಅನುಭವ ಮಾಡಿಕೊಂಡಿದ್ದೇನೆ" ಈ ಮಾತನ್ನು ಹೇಳುತ್ತ ಹೇಳುತ್ತ ಗಿರೀಶಬಾಬುಗಳಿಗೆ ಗದ್ಗದ ಸ್ವರದಿಂದ ಮಾತು ಹೊರಡದಂತಾಯಿತು; ಅವರು ಆ ದಿವಸ ಮತ್ತೇನನ್ನೂ ಹೇಳಲಾರದೆ ಹೋದರು.

ಆಮೇಲೆ ಸ್ವಾಮಿಜಿ "ಬೇಇಯಾ ನಾ ಪಾಕಾರೋ ಮೇರಾನರಮ್ ಕಹಲಾಇಯೇ" ಮುಂತಾದ ಕೆಲವು ಹಿಂದೀ ಹಾಡುಗಳನ್ನು ಗಾನ ಮಾಡಿದರು. ಶಿಷ್ಯನು ಸಂಗೀತ ವಿದ್ಯೆಯಲ್ಲಿ ಮಹಾಪಂಡಿತ, ಆದ್ದರಿಂದ ಈ ಗಾನಗಳಲ್ಲಿ ಒಂದಕ್ಷರವೂ ಅವನಿಗೆ ಗೊತ್ತಾಗಲಿಲ್ಲ. ಕೇವಲ ಸ್ವಾಮಿಜಿ ಮುಖವನ್ನು ಎವೆಯಿಕ್ಕದೆ ನೋಡುತ್ತಿದ್ದನು. ಈ ಸಮಯದಲ್ಲಿ ಮೊದಲನೆಯ ಪೂಜೆ ಮುಗಿಯಲು ಭಕ್ತರನ್ನು ಫಲಾಹಾರಕ್ಕೆ ಕರೆದರು. ಫಲಾಹಾರ ಮುಗಿದನಂತರ ಸ್ವಾಮಿ ಕೆಳಗಿನ ಬೈಠಕ್ ಖಾನೆಗೆ ಹೋಗಿ ಕುಳಿತುಕೊಂಡರು. ಬಂದಿದ್ದ ಭಕ್ತರೂ ಅವರನ್ನು ಸುತ್ತಿಕೊಂಡು ಕುಳಿತರು. ಜನಿವಾರವನ್ನು ಹಾಕಿಕೊಂಡು ಕುಳಿತಿದ್ದ ಒಬ್ಬ ಗೃಹಸ್ಥನನ್ನು ಸಂಬೋಧಿಸಿ ಸ್ವಾಮಿಜಿ "ನೀವು ದ್ವಿಜರು; ಆದರೆ ಬಹುಕಾಲದ ಹಿಂದಿನಿಂದ ವ್ರಾತ್ಯರಾಗಿದ್ದಿರಿ; ಇಂದಿನಿಂದ ಮತ್ತೆ ದ್ವಿಜರಾದಿರಿ; ಪ್ರತಿನಿತ್ಯವೂ ನೂರು ಗಾಯತ್ರೀ ಜಪವನ್ನು ಮಾಡಿ; ತಿಳಿಯಿತೆ?" ಎಂದರು. ಗೃಹಸ್ಥನು "ಅಪ್ಪಣೆ" ಎಂದು ಸ್ವಾಮಿಜಿ ಆಜ್ಞೆಯನ್ನು ಶಿರಸಾವಹಿಸಿದನು. ಈ ಮಧ್ಯೆ ಶ್ರೀಯುಕ್ತ ಮಹೇಂದ್ರನಾಥಗುಪ್ತರು (ಮಾಸ್ಟರ್ ಮಹಾಶಯ) ಬಂದರು. ಸ್ವಾಮಿಜಿ ಮಾಸ್ಟರ್ ಮಹಾಶಯರನ್ನು ನೋಡಿ ಅವರನ್ನು ನಾನಾ ಸಾದರ ಸಂಭಾಷಣಗಳಿಂದ ಸಂತೋಷಗೊಳಿಸಿದರು. ಮಹೇಂದ್ರಬಾಬುಗಳು ನಮಸ್ಕರಿಸಿ ಒಂದು ಮೂಲೆಯಲ್ಲಿ ನಿಂತುಕೊಂಡರು- ಸ್ವಾಮಿಜಿ ಕುಳಿತುಕೊಳ್ಳಬೇಕೆಂದು ಮೇಲಿಂದ ಮೇಲೆ ಹೇಳಿದ್ದರಿಂದ ಬಹು ಸಂಕೋಚ

ಪಟ್ಟುಕೊಂಡು ಒಂದು ಮೂಲೆಯಲ್ಲಿ ಕುಳಿತುಕೊಂಡರು.

ಸ್ವಾಮಿಜಿ:— ಮಾಸ್ಟರ್ ಮಹಾಶಯ, ಇವೊತ್ತು ಪರಮಹಂಸರ ಜನ್ಮದಿನ; ಪರಮಹಂಸರ ವೃತ್ತಾಂತವನ್ನು ನಮಗೆ ಏನಾದರೂ ತಿಳಿಸಬೇಕು.

ಮಾಸ್ಟರ್ ಮಹಾಶಯರು ಮೃದುವಾಗಿ ನಗುತ್ತ ತಲೆತಗ್ಗಿಸಿಕೊಂಡು ಇದ್ದರು. ಇಷ್ಟರಲ್ಲಿ ಅಖಂಡಾನಂದ ಸ್ವಾಮಿಗಳು ಮುರ್ಷಿದಾಬಾದಿನಿಂದ ಸುಮಾರು ಒಂದೂವರೆ ಮಣ ತೂಕವುಳ್ಳ ಎರಡು ಪಂತವ (ಒಂದುಬಗೆ ಮಿಠಾಯಿ) ವನ್ನು ತೆಗೆದುಕೊಂಡು ಬಂದರು. ಈ ಅದ್ಭುತವಾದ ಮಿಠಾಯನ್ನು ನೋಡುವುದಕ್ಕೆಂದು ಎಲ್ಲರೂ ಎದ್ದರು. ಸ್ವಾಮಿಜಿ ಮುಂತಾದವರಿಗೆ ಅದನ್ನು ತೋರಿಸಿದಮೇಲೆ, ಸ್ವಾಮಿಜಿ 'ದೇವರ ಮನೆಗೆ ತೆಗೆದುಕೊಂಡು ಹೋಗು' ಎಂದರು.

ಅಖಂಡಾನಂದ ಸ್ವಾಮಿಗಳ ಕಡೆಗೆ ನೋಡುತ್ತ ಸ್ವಾಮಿಜಿ ಶಿಷ್ಯನಿಗೆ ಹೀಗೆಂದು ಹೇಳಿದರು:– "ನೋಡಿದೆಯೊ ಎಂಥ ಕರ್ಮವೀರ! ಭಯ ಮೃತ್ಯು–ಇದೊಂದರ ಜ್ಞಾನವೂ ಇಲ್ಲ; ಒಂದೇ ಸಮನಾಗಿ ಕರ್ಮ ಮಾಡಿಕೊಂಡು ಹೋಗುತ್ತಿದ್ದಾನೆ–'ಬಹುಜನ ಹಿತಾಯ ಬಹುಜನ ಸುಖಾಯ.'

ಶಿಷ್ಯ:— ಮಹಾಶಯರೆ, ಎಷ್ಟೋ ತಪಸ್ಸಿನ ಪ್ರಭಾವದಿಂದ ಅವರಲ್ಲಿ ಈ ಶಕ್ತಿ ಬಂದಿದೆ.

ಸ್ವಾಮಿಜಿ:— ತಪಸ್ಸಿನ ಫಲದಿಂದ ಶಕ್ತಿ ಬರುತ್ತದೆ; ಅದರಂತೆ ಸೇವಾಭಾವದಿಂದ ಕರ್ಮ ಮಾಡಿದರೂ ಅದು ತಪಸ್ಸಾಗುತ್ತದೆ. ಕರ್ಮಯೋಗಿ ಕರ್ಮವನ್ನು ತಪಸ್ಸಿನ ಅಂಗವೆಂದೇ ಹೇಳುವನು. ತಪಸ್ಸನ್ನು ಮಾಡುತ್ತ ಇರುವಾಗ ಪರಹಿತೇಚ್ಛೆಯು ಬಲವತ್ತರವಾಗುತ್ತ ಸಾಧಕನ ಕೈಯಲ್ಲಿ ಕರ್ಮ ಮಾಡಿಸುತ್ತ ಹೋಗುತ್ತದೆ. ಪರಾರ್ಥವಾಗಿ ಕೆಲಸ ಮಾಡುತ್ತ ಅಷ್ಟಷ್ಟು ಚಿತ್ತ ಶುದ್ಧಿಯೂ ಪರಮಾತ್ಮನ ದರ್ಶನವೂ ಲಭಿಸುತ್ತದೆ.

ಶಿಷ್ಯ:— ಆದರೆ; ಮಹಾಶಯರೆ, ಮೊದಲಿನಿಂದಲೂ ಅನ್ಯರಿಗಾಗಿ ಪ್ರಾಣವನ್ನಾದರೂ ಕೊಟ್ಟು ಎಷ್ಟು ಜನರು ಕೆಲಸ ಮಾಡಬಲ್ಲರು? ಜೀವನು ಆತ್ಮಸುಖೇಚ್ಛೆಯನ್ನು ಬಲಿಕೊಟ್ಟು ಪರಾರ್ಥವಾಗಿ ಪ್ರಾಣ ಕೊಡುವಂತಾಗುವಷ್ಟು ಉದಾರತೆ ಹೇಗೆ ಮನಸ್ಸಿಗೆ ಉಂಟಾದೀತು?

ಸ್ವಾಮಿಜಿ :— ತಪಸ್ಸಿನ ಮೇಲೆ ತಾನೇ ಎಷ್ಟು ಜನಕ್ಕೆ ಮನಸ್ಸು ಹೋಗುತ್ತದೆ? ಕಾಮಕಾಂಚನದ ಆಕರ್ಷಣದಲ್ಲಿ ಎಷ್ಟು ಜನರು ತಾನೇ ಭಗವಂತನನ್ನು ಅಪೇಕ್ಷಿಸುವರು? ತಪಸ್ಸು ಎಷ್ಟು ಕಠಿಣವೊ ನಿಷ್ಕಾಮ ಕರ್ಮವೂ ಅಷ್ಟೇ ಕಠಿಣ. ಆದ್ದರಿಂದ ಯಾರು ಪರಹಿತಾರ್ಥವಾಗಿ ಕರ್ಮ ಮಾಡುವುದಕ್ಕೆ ಹೊರಡುತ್ತಾರೆಯೊ ಅವರಿಗೆ ವಿರೋಧವಾಗಿ ನೀನು ಏನು ಹೇಳುವುದಕ್ಕೂ ಅಧಿಕಾರವಿಲ್ಲ. ನಿನಗೆ ತಪಸ್ಸು ಒಗ್ಗಿದರೆ ಅದನ್ನು ಮಾಡು ಹೋಗು; ಮತ್ತೊಬ್ಬನಿಗೆ ಕರ್ಮವು ಒಗ್ಗುತ್ತದೆ– ಅವನಿಗೆ ಬೇಡ ವೆಂದು ಹೇಳುವುದಕ್ಕೆ ನಿನಗೇನು ಅಧಿಕಾರ? ಕರ್ಮ ತಪಸ್ಸಲ್ಲವೆಂಬುದು ನಿನ್ನ ದೃಢವಾದ ಅಭಿಪ್ರಾಯ. ನಾನು ಬಲ್ಲೆ.

ಶಿಷ್ಯ :— ಅಪ್ಪಣೆ; ಆದರೆ ಹಿಂದೆ ತಪಸ್ಸಿಗೆ ನಾನು ಬೇರೊಂದು ವಿಧವಾಗಿ ಅರ್ಥಮಾಡಿಕೊಂಡಿದ್ದೆ.

ಸ್ವಾಮಿಜಿ :— ಸಾಧನ ಭಜನಗಳನ್ನು ಅಭ್ಯಾಸ ಮಾಡುತ್ತ ಮಾಡುತ್ತ ಅದರಲ್ಲಿ ಹೇಗೆ ಪ್ರಬಲವಾದ ಪ್ರವೃತ್ತಿ ಹುಟ್ಟುತ್ತದೆಯೊ, ಹಾಗೆಯೆ ಇಚ್ಛೆ ಯಿಲ್ಲದೆ ಇದ್ದರೂ ಕರ್ಮವನ್ನು ಮಾಡುತ್ತ ಮಾಡುತ್ತ ಹೋದರೆ ಮನಸ್ಸು ಕ್ರಮೇಣ ಅದರಲ್ಲಿಯೆ ಮುಳುಗಿಹೋಗುವುದು. ಕ್ರಮವಾಗಿ ಪರಾರ್ಥ ಕರ್ಮದಲ್ಲಿ ಪ್ರವೃತ್ತಿಯುಂಟಾಗುತ್ತದೆ; ತಿಳಿಯಿತೆ? ಇಷ್ಟವಿಲ್ಲದಿದ್ದರೂ ಒಂದುಸಾರಿ ಪರರ ಸೇವೆ ಮಾಡಿನೋಡು, ತಪಸ್ಸಿಗೆ ಫಲ ಬರುತ್ತದೆಯೊ ಇಲ್ಲವೊ ಎಂದು. ಪರಾರ್ಥವಾದ ಕರ್ಮದ ಫಲದಿಂದ ಮನಸ್ಸಿನ ಡೊಂಕು ಪಂಕುಗಳೆಲ್ಲಾ ನೆಟ್ಟಗಾಗಿ ಮನುಷ್ಯನು ಅಕಪಟದಿಂದ ಪರಹಿತಕ್ಕಾಗಿ ಜೀವವನ್ನು ತೆಯ್ಯುವುದಕ್ಕೆ ಹೊರಡುವನು.

ಶಿಷ್ಯ :— ಆದರೆ, ಮಹಾಶಯರೆ, ಪರಹಿತವೇತಕ್ಕೆ ಆಗಬೇಕು?

ಸ್ವಾಮಿಜಿ :— ತನ್ನ ಹಿತಕ್ಕೋಸ್ಕರ; ಈ ದೇಹವನ್ನು — ಏತರಿಂದ 'ನಾನು' ಎಂಬ ಅಭಿಮಾನವನ್ನಿಟ್ಟುಕೊಂಡು ಕುಳಿತಿದ್ದೀಯೊ ಆ ದೇಹ ವನ್ನು ಪರರಿಗೋಸ್ಕರ ತೆಗೆದಿಟ್ಟಿದ್ದೇನೆ ಎಂಬ ವಿಷಯವನ್ನು ಭಾವಿಸಿ ಕೊಳ್ಳುತ್ತ ಹೋದರೆ ಈ ಅಹಂಕಾರವನ್ನು ಮರೆಯಬೇಕಾಗುತ್ತದೆ. ಕಡೆ ಯಲ್ಲಿ ವಿದೇಹ ಬುದ್ಧಿ ಬರುತ್ತದೆ. ನೀನು ಎಷ್ಟೆಷ್ಟು ಏಕಾಗ್ರತೆಯಿಂದ ಪರರ ವಿಚಾರವನ್ನು ಭಾವಿಸುತ್ತೀಯೊ ಅಷ್ಟಷ್ಟು ನಿನ್ನನ್ನು ಮರೆಯುತ್ತ ಹೋಗುತ್ತೀಯೆ. ಹೀಗೆ ಕರ್ಮದಿಂದ ಚಿತ್ತಶುದ್ಧಿಯುಂಟಾಗಲು, ನಿನ್ನಲ್ಲಿ ರುವ ಆತ್ಮವೇ ಸಮಸ್ತ ಜೀವದಲ್ಲಿಯೂ ಸಮಸ್ತ ವಸ್ತುಗಳಲ್ಲಿಯೂ

ವಿರಾಜಿಸುತ್ತಿದೆ ಎಂಬ ತತ್ತ್ವವನ್ನು ಅರಿಯಲು ಶಕ್ತನಾಗುವೆ. ಆದ್ದರಿಂದಲೆ, ತನ್ನ ಆತ್ಮವಿಕಾಸಕ್ಕೆ ಪರಹಿತ ಸಾಧನೆ ಒಂದು ಮಾರ್ಗ. ಇದೂ ಒಂದು ವಿಧವಾದ ಈಶ್ವರಸಾಧನೆಯೆಂಬುದು ಗೊತ್ತಾಗುತ್ತದೆ. ಇದರ ಉದ್ದೇಶವೂ ಆತ್ಮವಿಕಾಸವೆ. ಜ್ಞಾನ ಭಕ್ತಿ ಮುಂತಾದ ಸಾಧನೆಯಿಂದ ಹೇಗೆ ಆತ್ಮವಿಕಾಸವಾಗುತ್ತದೆಯೊ ಪರಾರ್ಥ ಕರ್ಮ ಮಾಡುವುದರಿಂದಲೂ ಅದರ ಹಾಗೆಯೆ ಆಗುತ್ತದೆ.

ಶಿಷ್ಯ :— ಆದರೆ ಮಹಾಶಯರೆ, ನಾನು ಹಗಲೂ ರಾತ್ರಿಯೂ ಪರರ ಚಿಂತೆಯನ್ನೆ ಹಚ್ಚಿಕೊಂಡರೆ ಆತ್ಮವಿಚಾರವನ್ನು ಮಾಡುವುದು ಯಾವಾಗ? ಒಂದು ವಿಶೇಷ ಭಾವವನ್ನು ಹಿಡಿದುಕೊಂಡು ಕುಳಿತರೆ ಅಭಾವರೂಪಿಯಾದ ಆತ್ಮವನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು ಹೇಗೆ?

ಸ್ವಾಮಿಜಿ:— ಆತ್ಮಜ್ಞಾನ ಲಾಭವೆ ಸಕಲ ಸಾಧನೆಯ ಸಕಲ ಮಾರ್ಗದ ಮುಖ್ಯ ಉದ್ದೇಶ. ನೀನು ಸೇವಾಪರನಾಗಿ ಈ ಕರ್ಮಫಲದಿಂದ ಚಿತ್ತಶುದ್ಧಿಯನ್ನು ಪಡೆದು, ಸರ್ವಜೀವಗಳನ್ನೂ ಆತ್ಮದ ಹಾಗೆ ನೋಡಬಲ್ಲೆಯಾದರೆ ಆತ್ಮದರ್ಶನದಲ್ಲಿ ಇನ್ನು ಉಳಿದದ್ದು ಏನು? ಆತ್ಮದರ್ಶನವೆಂದರೇನು ಜಡವಸ್ತುವಿನ ಹಾಗೆ—ಈ ಗೋಡೆಯ ಹಾಗೆ ಅಥವಾ ಮರದ ತುಂಡಿನ ಹಾಗೆ—ಬಿದ್ದಿರುವುದೆಂದು ತಿಳಿದುಕೊಂಡೆಯೊ?

ಶಿಷ್ಯ :— ಹಾಗಿಲ್ಲದಿದ್ದರೂ, ಸರ್ವವೃತ್ತಿ ಮತ್ತು ಕರ್ಮದ ನಿರೋಧಕ್ಕೆ ತಾನೆ ಶಾಸ್ತ್ರ ಆತ್ಮದ ಸ್ವಸ್ವರೂಪಾವಸ್ಥಾನವೆಂದು ಹೇಳುವುದು?

ಸ್ವಾಮಿಜಿ :— ಶಾಸ್ತ್ರದಲ್ಲಿ ಯಾವುದನ್ನು ಸಮಾಧಿಯೆಂದು ಹೇಳಿದೆಯೊ ಆ ಸ್ಥಿತಿ ಸುಲಭವಾಗಿ ದೊರೆಯುವುದಿಲ್ಲ. ಯಾವಾಗಲಾದರೂ ಯಾರಿಗಾದರೂ ದೊರೆತರೂ ಹೆಚ್ಚುಕಾಲ ಸ್ಥಾಯಿಯಾಗಿ ಇರುವುದಿಲ್ಲ. ಆಗ ಅವನು ಯಾವುದರ ಆಧಾರದ ಮೇಲೆ ಇರಬೇಕು ಹೇಳು? ಆದ್ದರಿಂದ ಶಾಸ್ತ್ರೋಕ್ತವಾದ ಸ್ಥಿತಿ ಬಂದನಂತರ ಸಾಧಕನು ಪ್ರತಿಪ್ರಾಣಿಯಲ್ಲಿಯೂ ಆತ್ಮವನ್ನು ಕಾಣುತ್ತಾನೆ, ಮತ್ತು ಅಭೇದ ಜ್ಞಾನದಿಂದ ಸೇವೆಮಾಡುತ್ತ ಪ್ರಾರಬ್ಧ ಕರ್ಮವನ್ನು ಸವೆಸುತ್ತಾನೆ. ಈ ಅವಸ್ಥೆಗೆ ಶಾಸ್ತ್ರಕಾರರು ಜೀವನ್ಮುಕ್ತಿ ಅವಸ್ಥೆ ಎಂದು ಹೇಳಿದ್ದಾರೆ.

ಶಿಷ್ಯ :— ಹಾಗಾದರೆ, ಜೀವನ್ಮುಕ್ತಿಯವಸ್ಥೆಯನ್ನು ಪಡೆಯದಿದ್ದರೆ, ಸರಿಯಾಗಿ ಪರಾರ್ಥಕರ್ಮವನ್ನು ಮಾಡುವುದಕ್ಕಾಗುವುದಿಲ್ಲವೆಂದು ಹೇಳಿದ ಹಾಗಾಯಿತು.

ಸ್ವಾಮಿಜಿ :— ಶಾಸ್ತ್ರದಲ್ಲಿ ಈ ಮಾತು ಹೇಳಿದೆ; ಇನ್ನೂ ಹೇಳಿರುವುದೇನೆಂದರೆ ಪರಾರ್ಥವಾಗಿ ಸೇವೆಮಾಡುತ್ತ ಮಾಡುತ್ತ ಸಾಧಕನಿಗೆ ಜೀವನ್ಮುಕ್ತಿಯವಸ್ಥೆಯು ಬರುತ್ತದೆ; ಹಾಗಲ್ಲದಿದ್ದರೆ 'ಕರ್ಮಯೋಗ' ವೆಂಬ ಬೇರೆಯೊಂದು ಮಾರ್ಗವನ್ನು ಶಾಸ್ತ್ರವು ಉಪದೇಶಮಾಡಬೇಕಾಗಿರಲಿಲ್ಲ.

ಶಿಷ್ಯನು ಇಷ್ಟುಹೊತ್ತಿಗೆ ತಿಳಿದುಕೊಂಡು ಸಮಾಧಾನಗೊಂಡನು; ಸ್ವಾಮಿಗಳೂ ಈ ವಿಚಾರವನ್ನು ಬಿಟ್ಟು ಕಿನ್ನರಕಂಠದಲ್ಲಿ ಗಾನಕ್ಕೆ ಆರಂಭಿಸಿದರು :—

ದುಃಖಿನೀ ಬ್ರಾಹ್ಮಣೀಕೋಲೆ ಕೇ ಶುಯೇಛ ಆಲೋ ಕರೇ ।
ಕೇರೆ ಒರೆ ದಿಗಂಬರ ಏಸೇಛ ಕುಟೀರ ಘರೆ ॥
ಮರಿ ಮರಿ ರೂಪ ಹೇರಿ, ನಯನ ಫಿರಾತೆ ನಾರಿ.
ಹೃದಯ ಸಂತಾಪಹಾರಿ ಸಾಧ ಧರಿ ಹೃದಿಪರೆ ॥
ಭೂತಲೆ ಅತುಲಮಣಿ, ಕೇ ಏಲಿ ರೇ ಯಾದುಮಣಿ,
ತಾಪಿತಾ ಹೇರೇ ಅವನೀ ಏಸೇಛ ಕಿ ಸಕಾತರೆ ॥
ವ್ಯಥಿಥೆ ಕಿ ದಿತೆ ದೇಖಾ, ಗೋಪನೆ ಏಸೇಛ ಏಕಾ ।
ವದನೆ ಕರುಣಾಮಾಖಾ, ಹಾಸ ಕಾಂದ ಕಾರ ತರೆ ॥ *

ಗಿರಿಶಬಾಬು ಭಕ್ತರೂ ಎಲ್ಲರೂ ಅವರ ಜೊತೆಯಲ್ಲಿ ಈ ಹಾಡನ್ನು ಹಾಡುವುದಕ್ಕೆ ಮೊದಲು ಮಾಡಿದರು. "ತಾಪಿತಾ ಹೇರೇ ಅವನೀ ಏಸೇಛ ಕಿ ಸಕಾತರೇ"– ಎಂಬ ನುಡಿಯನ್ನು ಪುನಃ ಪುನಃ ಹೇಳುತ್ತಿದ್ದರು. ಆಮೇಲೆ "ಮಜಲ ಅಮಾರ ಮನ-ಭ್ರಮರಾ ಕಾಳೀ-ಪದ ನೀಲಕಮಲೇ" "ಅಗಣನ ಭುವನಭಾರದಾರೀ" ಮುಂತಾದ ಕೆಲವು ಕೀರ್ತನೆಗಳಾದ ಮೇಲೆ, ತಿಥಿ ಪೂಜೆಯ ನಿಯಮವನ್ನನುಸರಿಸಿ ಒಂದು ಜೀವವಿರುವ ಮೀನನ್ನು ವಾದ್ಯಗಳೊಡನೆ ಗಂಗೆಯಲ್ಲಿ ಬಿಟ್ಟದ್ದಾಯಿತು. ಆಮೇಲೆ ಮಹಾ ಪ್ರಸಾದವನ್ನು ಸ್ವೀಕರಿಸುವುದಕ್ಕಾಗಿ ಭಕ್ತಾದಿಗಳಲ್ಲಿ ಗದ್ದಲಕ್ಕಾರಂಭವಾಯಿತು.

* ಶ್ರೀರಾಮಕೃಷ್ಣ ಜನ್ಮೋತ್ಸವಕ್ಕಾಗಿ ನಾಟ್ಯಕಾರ ಗಿರೀಶಚಂದ್ರ ಘೋಷರಿಂದ ರಚಿತವಾದದ್ದು.

# ಅಧ್ಯಾಯ ೧೪

**ಸ್ಥಳ:—ಬೇಲೂರು; ಮಠ (ಬಾಡಿಗೆ ಕಟ್ಟಡ.) ವರ್ಷ:—ಕ್ರಿ. ಶ. ೧೮೯೮.**

ಇಂದು ಹೊಸಮಠದ ನಿವೇಶನದಲ್ಲಿ ಸ್ವಾಮಿಜಿ ಹೋಮಮಾಡಿ ಪರಮಹಂಸ ದೇವರ ಪ್ರತಿಷ್ಠೆಯನ್ನು ಮಾಡುವರು. ಶಿಷ್ಯನು ಹಿಂದಿನ ರಾತ್ರಿಯಿಂದ ಮಠದಲ್ಲಿದ್ದಾನೆ. ಪರಮಹಂಸ ದೇವರ ಪ್ರತಿಷ್ಠೆ ಮಾಡುವುದನ್ನು ನೋಡಬೇಕೆಂಬ ಆಸೆ.

ಬೆಳಿಗ್ಗೆ ಗಂಗಾಸ್ನಾನಮಾಡಿ ಸ್ವಾಮಿಜಿ ದೇವರಮನೆಗೆ ಹೋದರು. ಅನಂತರದಲ್ಲಿ ಪೂಜಾಸನದಲ್ಲಿ ಕುಳಿತುಕೊಂಡು ಹೂವಿನಬುಟ್ಟಿಯಲ್ಲಿ ಎಷ್ಟು ಹೂ ಪತ್ರೆಗಳಿದ್ದುವೊ ಎಲ್ಲವನ್ನೂ ಒಟ್ಟಿಗೆ ಎರಡು ಕೈಗಳಿಂದಲೂ ತೆಗೆದುಕೊಂಡು ಶ್ರೀ ರಾಮಕೃಷ್ಣರ ಪಾದುಕೆಯ ಮೇಲೆ ಪೂಜೆಮಾಡಿ ಧ್ಯಾನಸ್ಥರಾದರು—ಅಪೂರ್ವದರ್ಶನ! ಅವರ ಧರ್ಮ-ಪ್ರಭಾ-ವಿಭಾಸಿತವಾದ ಸ್ನಿಗ್ಧೋಜ್ಜ್ವಲ ತೇಜಸ್ಸಿನಿಂದ ದೇವರಮನೆಯು ಒಂದು ಅದ್ಭುತವಾದ ಪ್ರಕಾಶದಿಂದ ತುಂಬಿತು! ಪ್ರೇಮಾನಂದರು ಮತ್ತು ಇತರ ಸ್ವಾಮಿಗಳು ಪೂಜಾಗೃಹದ ಬಾಗಿಲಲ್ಲಿ ನಿಂತುಕೊಂಡಿದ್ದರು.

ಧ್ಯಾನ ಪೂಜೆಗಳಾದ ಮೇಲೆ, ಮಠದ ನಿವೇಶನಕ್ಕೆ ಹೊರಡಲು ಎಲ್ಲವೂ ಸಿದ್ಧವಾಯಿತು. ಶ್ರೀ ರಾಮಕೃಷ್ಣರ ಭಸ್ಮಾಸ್ಥಿಗಳನ್ನು ಇಟ್ಟಿದ್ದ ತಾಮ್ರಸಂಪುಟವನ್ನು ಸ್ವಾಮಿಜಿ ತಾವೇ ಬಲಭುಜದ ಮೇಲೆ ಇಟ್ಟುಕೊಂಡು ಮುಂದೆ ಹೊರಟರು. ಇತರ ಸನ್ಯಾಸಿಗಳೊಡನೆ ಶಿಷ್ಯನು ಹಿಂದೆ ಹಿಂದೆ ಹೋದನು. ಶಂಖ ಘಂಟೆ ಇವುಗಳ ಧ್ವನಿಯಿಂದ ತಟಪ್ರದೇಶವು ಅದಿರುತ್ತಿರಲು ಗಂಗಾನದಿ ಹಾವಭಾವಗಳನ್ನು ತೋರಿಸುತ್ತ ನರ್ತನ ಮಾಡುವಂತಿತ್ತು. ಹೋಗುತ್ತ ಹೋಗುತ್ತ ದಾರಿಯಲ್ಲಿ ಸ್ವಾಮಿಜಿ ಶಿಷ್ಯನನ್ನು ಕುರಿತು ಹೀಗೆಂದರು:—"ಪರಮಹಂಸರು 'ನೀನು ನನ್ನನ್ನು ಭುಜದಮೇಲೆ ಇಟ್ಟುಕೊಂಡು ಎಲ್ಲಿಗೆ ಕರೆದುಕೊಂಡು ಹೋದರೆ ಅಲ್ಲಿ ನಾನು ಬಂದುಬಿಡುತ್ತೇನೆ, ಅಲ್ಲಿಯೆ ನೆಲೆಸಿಬಿಡುತ್ತೇನೆ-ಅದು ಮರದ ಕೆಳಗೇ ಆಗಿರಲಿ, ಒಂದು ಗುಡಿಸಲೇ ಆಗಿರಲಿ, ಚಿಂತೆಯಿಲ್ಲ' ಎಂದು ನನಗೆ ಹೇಳಿದ್ದಾರೆ. ಅದಕ್ಕೋಸ್ಕರವೇ ಇವೊತ್ತು ನಾನೇ ಅವರನ್ನು (ಅವರ ಭಸ್ಮಾಸ್ಥಿಗಳನ್ನು) ಹೆಗಲಿನ ಮೇಲೆ ಕೂರಿಸಿಕೊಂಡು ಹೊಸಮಠ

ಪ್ರದೇಶಕ್ಕೆ ಹೋಗುತ್ತೇನೆ. ಇದನ್ನು ಖಂಡಿತವಾಗಿ ತಿಳಿದುಕೊ, ಬಹು ಕಾಲದವರೆಗೆ 'ಬಹುಜನ ಹಿತಾಯ' ಪರಮಹಂಸರು ಈ ಸ್ಥಾನದಲ್ಲಿ ನಿಶ್ಚಿಂತೆಯಾಗಿ ನಿಲ್ಲುವರು."

ಶಿಷ್ಯ:— ಪರಮಹಂಸರು ತಮಗೆ ಈ ಮಾತನ್ನು ಯಾವಾಗ ಹೇಳಿದರು ?

ಸ್ವಾಮಿಜಿ: (ಮಠದ ಸಾಧುಗಳನ್ನು ತೋರಿಸಿ) ಇವರ ಬಾಯಿಂದ ಕೇಳಿಲ್ಲವೇನು ?—ಕಾಶೀಪುರದ ತೋಟದಲ್ಲಿ.

ಶಿಷ್ಯ:—ಒಹೋ! ಆಗಲೇ ಪರಮಹಂಸರ ಗೃಹಸ್ಥ ಮತ್ತು ಸನ್ಯಾಸಿ ಭಕ್ತರ ಮಧ್ಯೆ ಸೇವಾಧಿಕಾರ ವಿಚಾರವಾಗಿ ಬೇರೆ ಬೇರೆ ಗುಂಪುಗಳಾದುವೆಂದು ತೋರುತ್ತದೆ.

ಸ್ವಾಮಿಜಿ:—ಹೌದು; ಆದರೆ 'ಗುಂಪುಗಳು' ಎಂಬುದು ನಿಜವಲ್ಲ.—ಎಲ್ಲೋ ಸ್ವಲ್ಪ ಮನಸ್ತಾಪ ಬಂದಿತ್ತು. ಇದನ್ನು ತಿಳಿದುಕೊ—ಯಾರು ಪರಮಹಂಸರ ಭಕ್ತರೊ, ಯಾರು ನಿಜವಾಗಿ ಅವರ ಕೃಪೆಯನ್ನು ಪಡೆದಿರುತ್ತಾರೊ, (ಅವರು ಗೃಹಸ್ಥರೇ ಆಗಿರಲಿ, ಸನ್ಯಾಸಿಗಳೇ ಆಗಿರಲಿ) ಅವರಲ್ಲಿ ಗುಂಪು ಪಂಗಡ ಯಾವುದೂ ಇಲ್ಲ, ಇರುವುದಕ್ಕೆ ಆಗುವುದಿಲ್ಲ. ಆದರೆ ಈ ಅಲ್ಪಸ್ವಲ್ಪ ಮನಸ್ತಾಪಕ್ಕೆ ಕಾರಣವೇನು ಬಲ್ಲೆಯಾ? ಪ್ರತಿಯೊಬ್ಬ ಭಕ್ತನೂ ಪರಮಹಂಸರಿಗೆ ತಮ್ಮ ತಮ್ಮ ಬಣ್ಣವನ್ನು ಕಟ್ಟಿ ಒಬ್ಬೊಬ್ಬನೂ ಅವರನ್ನು ಒಂದೊಂದು ವಿಧವಾಗಿ ನೋಡಿ ಒಬ್ಬೊಬ್ಬರು ಒಂದೊಂದು ರೀತಿ ತಿಳಿದುಕೊಳ್ಳುತ್ತಾರೆ. ಅವರು ಒಂದು ದೊಡ್ಡ ಸೂರ್ಯನಂತಿದ್ದಾರೆ; ನಾವು ಒಬ್ಬೊಬ್ಬರೂ ಒಂದೊಂದು ಬಣ್ಣದ ಗಾಜನ್ನು ಕಣ್ಣಿಗೆ ಕಟ್ಟಿಕೊಂಡು ಆ ಒಬ್ಬ ಸೂರ್ಯನನ್ನೇ ನಾನಾ ಬಣ್ಣಗಳಿಂದ ಕೂಡಿರುವವನೆಂದು ನೋಡುತ್ತಿರುವವರಂತಿದ್ದೇವೆ. ಆದ್ದರಿಂದ ಇದೂ ನಿಜ–ಏನೆಂದರೆ, ಕಾಲಕ್ರಮದಲ್ಲಿ ಇಲ್ಲಿಂದಲೂ-ಒಂದು ಪಂಗಡ ನಿರ್ಮಿತವಾಗುತ್ತದೆ. ಆದರೆ ಯಾರು ಭಾಗ್ಯವಶದಿಂದ ಅವತಾರಪುರುಷರ ಸಾಕ್ಷಾತ್ ಸಂಪರ್ಕದಲ್ಲಿರುವರೊ ಅವರ ಜೀವನ ದೆಸೆಯಲ್ಲಿ ಈ ವಿಧವಾದ 'ಗುಂಪು' ಸಾಮಾನ್ಯವಾಗಿ ಆಗುವುದಿಲ್ಲ. ಆ ಆತ್ಮಾರಾಮಪುರುಷರ ಬೆಳಕಿನಲ್ಲಿ ಅವರ ಕಣ್ಣು ಸ್ಪಷ್ಟವಾಗಿ ಕಾಣುತ್ತದೆ. ಅಹಂಕಾರ ಅಭಿಮಾನ ಹೀನಬುದ್ಧಿ ಎಲ್ಲಾ ಕೊಚ್ಚಿ ಹೋಗುತ್ತವೆ. ಆದ್ದರಿಂದ 'ಗುಂಪು' ಮಾಡಿಕೊಳ್ಳುವುದಕ್ಕೆ ಅವರಿಗೆ ಅವಕಾಶವಿರುವುದಿಲ್ಲ. ಕೇವಲ ತಮ್ಮ ತಮ್ಮ ಭಾವದಿಂದ ಅವರನ್ನು

ಮನಃಪೂರ್ವಕವಾಗಿ ಪೂಜಿಸುವರು.

ಶಿಷ್ಯ:—ಮಹಾಶಯರೆ, ಹಾಗಾದರೇನು ಪರಮಹಂಸರ ಭಕ್ತರೆಲ್ಲರೂ ಅವರನ್ನು ದೇವರೆಂದು ತಿಳಿದುಕೊಂಡಿದ್ದರೂ ಆ ಒಂದೇ ಭಗವಂತನ ಸ್ವರೂಪವನ್ನು ಅವರು ಬೇರೆ ಬೇರೆ ಭಾವದಲ್ಲಿ ನೋಡುವುದರಿಂದ ಅವರ ಶಿಷ್ಯ ಪ್ರತಿಶಿಷ್ಯರು ಕ್ರಮೇಣ ಒಂದು ಇಕ್ಕಟ್ಟಾದ ಎಲ್ಲೆಯೊಳಗೆ ಬಿದ್ದು ಸಣ್ಣ ಸಣ್ಣ ಗುಂಪು ಅಥವಾ ಸಂಪ್ರದಾಯಗಳಾಗಿ ಪರಿಣಮಿಸುತ್ತಾರೆಯೆ?

ಸ್ವಾಮಿಜಿ:—ಹೌದು; ಇದರಿಂದಲೇ ಕಾಲಕ್ರಮದಲ್ಲಿ ಸಂಪ್ರದಾಯವು ಆಗಿಯೇ ಆಗುತ್ತದೆ. ಇದನ್ನೇ ನೋಡು, ಈಗ ಚೈತನ್ಯದೇವನ ಎರಡು ಮೂರು ಸಂಪ್ರದಾಯಗಳಿವೆ; ಕ್ರಿಸ್ತನ ಸಾವಿರಾರು ಮತಗಳು ಹೊರಟಿವೆ. ಆದರೆ ಈ ಸಂಪ್ರದಾಯಗಳನ್ನೆಲ್ಲಾ ಚೈತನ್ಯ ದೇವನೂ ಕ್ರಿಸ್ತನೂ ಒಪ್ಪಿದ್ದರೆ?

ಶಿಷ್ಯ:—ಹಾಗಾದರೆ ಶ್ರೀರಾಮಕೃಷ್ಣ ಪರಮಹಂಸರ ಭಕ್ತರಲ್ಲಿಯೂ ಕ್ರಮೇಣ ಬಹು ಸಂಪ್ರದಾಯಗಳು ಆಗುತ್ತವೆಂದು ತೋರುತ್ತದೆ.

ಸ್ವಾಮಿಜಿ:—ಆಗದೇ ಇನ್ನೇನು? ಆದರೆ ನಮ್ಮ ಈ ಮಠವಿದೆಯಲ್ಲಾ ಇದರಿಂದ ಸಕಲಮತದ ಮತ್ತು ಭಾವಗಳ ಸಾಮಂಜಸ್ಯವು ನಿಂತಿರುತ್ತದೆ. ಇದು, ಪರಮಹಂಸರ ಮತವು ಎಷ್ಟು ಉದಾರವಾಗಿತ್ತೋ ಅಷ್ಟೆ ಉದಾರವಾದ ಅದೇ ಭಾವಕ್ಕೆ ಕೇಂದ್ರಸ್ಥಾನವಾಗುತ್ತದೆ. ಈ ಸ್ಥಳದಿಂದ ಹೊರಟು ಉಕ್ಕಿ ಹರಿಯುವ ಸಮನ್ವಯದ ಪ್ರವಾಹದಿಂದ ಪ್ರಪಂಚವೆಲ್ಲಾ ತುಂಬಿಹೋಗುತ್ತದೆ.

ಹೀಗೆ ಮಾತುಕಥೆಗಳು ನಡೆಯುತ್ತ ನಡೆಯುತ್ತ ಎಲ್ಲರೂ ಮಠದ ನಿವೇಶನಕ್ಕೆ ಬಂದರು. ಸ್ವಾಮಿಜಿ ಭುಜದಮೇಲಿದ್ದ ಸಂಪುಟವನ್ನು ಅಲ್ಲಿ ಹಾಕಿದ್ದ ಆಸನದ ಮೇಲೆ ಇಳಿಸಿ ನೆಲಮುಟ್ಟಿ ನಮಸ್ಕಾರ ಮಾಡಿದರು. ಮಿಕ್ಕವರೂ ನಮಸ್ಕಾರ ಮಾಡಿದರು.

ಆಮೇಲೆ ಸ್ವಾಮಿಜಿ ಪುನಃ ಪೂಜೆಗೆ ಕುಳಿತರು. ಪೂಜೆ ಮುಗಿದ ಮೇಲೆ ಹೋಮಾಗ್ನಿಯನ್ನು ಪ್ರಜ್ವಲನಮಾಡಿ ಅದರಲ್ಲಿ ಹೋಮಮಾಡಿದರು; ಮತ್ತು ಸನ್ಯಾಸೀ ಭ್ರಾತೃಗಳ ಸಹಾಯದಿಂದ ತಮ್ಮ ಕೈಯಿಂದಲೇ ಪರಮಾನ್ನವನ್ನು ಮಾಡಿ ನೈವೇದ್ಯಮಾಡಿದರು. ಆವೊತ್ತು ಅಲ್ಲಿ ಅವರು ಕೆಲವು ಜನ ಗೃಹಸ್ಥರಿಗೆ ದೀಕ್ಷೆ ಕೊಟ್ಟರೆಂದೂ ತೋರುತ್ತದೆ. ಅದು ಹೇಗಾ

ದರೂ ಇರಲಿ, ಪೂಜೆಯನ್ನು ಮುಗಿಸಿಕೊಂಡು ಸ್ವಾಮಿಜಿ ಅಲ್ಲಿದ್ದವರೆಲ್ಲರನ್ನೂ ಆದರದಿಂದ ಬರಮಾಡಿಕೊಂಡು ಅವರನ್ನು ಸಂಬೋಧಿಸಿ ಮಹಾಯುಗಾವತಾರ ಪರಮಹಂಸರು ಇಂದಿನಿಂದ ಬಹುಕಾಲದವರೆಗೆ 'ಬಹುಜನ ಹಿತಾಯ ಬಹುಜನ ಸುಖಾಯ' ಈ ಪುಣ್ಯಕ್ಷೇತ್ರದಲ್ಲಿ ನಿಂತು ಇದನ್ನು ಸರ್ವಧರ್ಮದ ಅಪೂರ್ವ ಸಮನ್ವಯಕ್ಕೆ ಕೇಂದ್ರವನ್ನಾಗಿ ಮಾಡಬೇಕೆಂದು ತಾವೆಲ್ಲರೂ ಇವೊತ್ತು ಮನೋವಾಕ್ಕಾಯಗಳಿಂದ ಪರಮಹಂಸರ ಪಾದಪದ್ಮದಲ್ಲಿ ಪ್ರಾರ್ಥನೆ ಮಾಡಬೇಕು" ಎಂದರು. ಎಲ್ಲರೂ ಕೈಮುಗಿದುಕೊಂಡು ಹಾಗೆಯೆ ಪ್ರಾರ್ಥನೆ ಮಾಡಿದರು. ಪೂಜೆಯಾದ ಮೇಲೆ ಸ್ವಾಮಿಜಿ ಶಿಷ್ಯನನ್ನು ಕರೆದು "ಪರಮಹಂಸರ ಈ ಸಂಪುಟವನ್ನು ಹಿಂದಕ್ಕೆ ತೆಗೆದುಕೊಂಡುಹೋಗಲು ನಮ್ಮಲ್ಲಿ (ಸನ್ಯಾಸಿಗಳಲ್ಲಿ) ಯಾರಿಗೂ ಅಧಿಕಾರವಿಲ್ಲ; ಏಕೆಂದರೆ ಇವೊತ್ತು ನಾನು ಪರಮಹಂಸರನ್ನು ಇಲ್ಲಿ ಕೂರಿಸಿದ್ದೇನೆ. ಆದ್ದರಿಂದ ನೀನೇ ಈ ಸಂಪುಟವನ್ನು ತಲೆಯಮೇಲೆ ಇಟ್ಟುಕೊಂಡು ಮಠಕ್ಕೆ (ನೀಲಾಂಬರ ಬಾಬುವಿನ ತೋಟಕ್ಕೆ) ತೆಗೆದುಕೊಂಡುಹೋಗು" ಎಂದು ಹೇಳಿದರು. ಶಿಷ್ಯನು ಈ ಸಂಪುಟವನ್ನು ಮುಟ್ಟುವುದಕ್ಕೆ ಹಿಂದು ಮುಂದು ನೋಡುತ್ತಿರುವುದನ್ನು ನೋಡಿ, 'ಭಯವಿಲ್ಲ ಹಾಗೆಮಾಡು, ನಾನು ಆಜ್ಞೆಮಾಡಿದ್ದೇನೆ' ಎಂದರು. ಶಿಷ್ಯನು ಆಗ ಆನಂದಿತ ಚಿತ್ತನಾಗಿ ಸ್ವಾಮಿಜಿ ಆಜ್ಞೆಯನ್ನು ಶಿರಸಾವಹಿಸಿ ಸಂಪುಟವನ್ನು ತಲೆಯಮೇಲೆ ಹೊತ್ತುಕೊಂಡನು; ಮತ್ತು ಶ್ರೀಗುರುವಿನ ಆಜ್ಞೆಯಿಂದ ಈ ಸಂಪುಟವನ್ನು ಮುಟ್ಟುವುದಕ್ಕೆ ಅಧಿಕಾರವನ್ನು ಪಡೆದದ್ದಕ್ಕಾಗಿ ತಾನು ಧನ್ಯನೆಂದು ಭಾವಿಸಿಕೊಳ್ಳುತ್ತಾ ಹೋದನು. ಮುಂದೆ ಶಿಷ್ಯ ಹಿಂದೆ ಸ್ವಾಮಿಗಳು, ಆಮೇಲೆ ಮಿಕ್ಕವರು ಹೀಗೆ ಎಲ್ಲರೂ ಹೊರಟರು. ದಾರಿಯಲ್ಲಿ ಸ್ವಾಮಿಜಿ ಅವನಿಗೆ "ಪರಮಹಂಸರು ಇವೊತ್ತು ನಿನ್ನ ತಲೆಯಮೇಲೆ ಹತ್ತಿ ನಿಂತು ನಿನಗೆ ಆಶೀರ್ವಾದ ಮಾಡಿದ್ದಾರೆ. ಹುಷಾರ್, ಇಂದಿನಿಂದ ಮತ್ತೆ ಯಾವುದಾದರೂ ಅನಿತ್ಯವಿಷಯದಲ್ಲಿ ಮನಸ್ಸುಕೊಟ್ಟೀಯೆ" ಎಂದು ಹೇಳಿದರು. ಒಂದು ಸಣ್ಣ ಸೇತುವೆಯನ್ನು ದಾಟುವಷ್ಟರೊಳಗಾಗಿ ಪುನಃ ಸ್ವಾಮಿಜಿ ಶಿಷ್ಯನಿಗೆ "ನೋಡು ಇನ್ನು ಮೇಲೆ ಬಹಳ ಹುಷಾರ್! ತುಂಬ ವಿಚಾರಪೂರ್ವಕವಾಗಿ ನಡೆದುಕೊಳ್ಳಬೇಕು" ಎಂದು ಹೇಳಿದರು.

ಹೀಗೆ ನಿರ್ವಿಘ್ನವಾಗಿ ಮಠಕ್ಕೆ ಹೋಗಿ ಎಲ್ಲರೂ ಆನಂದದಲ್ಲಿದ್ದರು.

ಸ್ವಾಮಿಜಿ ಈಗ ಶಿಷ್ಯನೊಡನೆ ಮಾತುಕಥೆಗಳಿಗೆ ಆರಂಭಮಾಡಿ ಹೇಳಿದ್ದೇನೆಂದರೆ:— "ಪರಮಹಂಸರ ಇಚ್ಛೆಯಿಂದ ಇವೊತ್ತು ಅವರ ಧರ್ಮಕ್ಷೇತ್ರದ ಪ್ರತಿಷ್ಠೆಯಾಯಿತು. ಹನ್ನೆರಡುವರ್ಷದ ಚಿಂತಾಭಾರ ಕೆಳಗಿಳಿದಂತಾಯಿತು. ನನ್ನ ಮನಸ್ಸಿನಲ್ಲಿ ಈಗ ಏನಿದೆ ಬಲ್ಲೆಯಾ? ಈ ಮಠ ವಿದ್ಯೆ ಮತ್ತು ಸಾಧನಗಳಿಗೆ ಕೇಂದ್ರಸ್ಥಾನವಾಗುವುದು; ನಿಮ್ಮಂಥ ಧಾರ್ಮಿಕ ಗೃಹಸ್ಥರು ಅದರ ನಾಲ್ಕುಕಡೆಯ ಸ್ಥಳದಲ್ಲಿಯೂ ಮನೆಮಠಗಳನ್ನು ಮಾಡಿಕೊಂಡಿರುವರು; ಇವರ ಮಧ್ಯದಲ್ಲಿ ತ್ಯಾಗಿಗಳಾದ ಸನ್ಯಾಸಿಗಳು ಇರುವರು; ಅಲ್ಲದೆ ಮಠದ ದಕ್ಷಿಣಕ್ಕಿರುವ ಈ ಪ್ರದೇಶದಲ್ಲಿ ಇಂಗ್ಲೆಂಡ್ ಮತ್ತು ಅಮೇರಿಕಾ ದೇಶಗಳ ಭಕ್ತಾದಿಗಳು ಇರುವುದಕ್ಕೆ ಮನೆಯಾಗುವುದು. ಹೀಗಾದರೆ ಹೇಗಿರುತ್ತದೆ ಹೇಳು ನೋಡೋಣ"

ಶಿಷ್ಯ:— ಮಹಾಶಯರೆ, ತಮ್ಮ ಈ ಕಲ್ಪನೆಯು ಅದ್ಭುತವಾದದ್ದು.

ಸ್ವಾಮಿಜಿ:— ಕಲ್ಪನೆಯೇನಿದೆಯಯ್ಯಾ? ಸಮಯದಲ್ಲಿ ಎಲ್ಲಾ ಆಗತಕ್ಕದ್ದೆ. ನಾನು ಸುಮ್ಮನೆ ಆರಂಭಮಾಡಿಕೊಡುತ್ತೇನೆ ಅಷ್ಟೆ; ಇದರಮೇಲೆ ಇನ್ನೂ ಎಷ್ಟೋ ಆಗಬೇಕಾಗಿದೆ! ನಾನು ಸ್ವಲ್ಪಮಾಡಿ ಹೋಗುತ್ತೇನೆ; ಮತ್ತು ನಿಮ್ಮಲ್ಲಿ ನಾನಾ ಅಭಿಪ್ರಾಯ ವಿಶೇಷಗಳನ್ನು ಬಿತ್ತಿಹೋಗುತ್ತೇನೆ. ನೀವು ಆಮೇಲೆ ಅವುಗಳನ್ನೆಲ್ಲಾ ಕಾರ್ಯದಲ್ಲಿ ಪರಿಣತವಾಗಿ ಮಾಡುವಿರಿ. ದೊಡ್ಡ ದೊಡ್ಡ ತತ್ತ್ವಗಳನ್ನು ಸುಮ್ಮನೆ ಕೇಳಿಬಿಟ್ಟರೆ ಆಗುವುದೇನು? ಅವುಗಳನ್ನು ಅನುಷ್ಠಾನದಲ್ಲಿ ತರಬೇಕು. ಶಾಸ್ತ್ರದ ಉದ್ದ ಉದ್ದವಾದ ಮಾತುಗಳನ್ನು ಸುಮ್ಮನೆ ಓದಿಬಿಟ್ಟರೆ ಬಂದದ್ದೇನು? ಶಾಸ್ತ್ರ ವಿಷಯಗಳನ್ನು ಮೊದಲು ತಿಳಿದುಕೊಳ್ಳಬೇಕು. ಆಮೇಲೆ ಜೀವನದಲ್ಲಿ ಅವುಗಳನ್ನು ಸಫಲಗೊಳಿಸಬೇಕು, ತಿಳಿಯಿತೆ? ಇದಕ್ಕೆ ಅನುಷ್ಠಾನ ಕರ್ಮ ಎಂದು ಹೆಸರು.

ಹೀಗೆ ನಾನಾ ಪ್ರಸ್ತಾಪ ನಡೆಯುತ್ತ ಶ್ರೀಮಚ್ಛಂಕರಾಚಾರ್ಯರ ಮಾತು ಬಂತು. ಶಿಷ್ಯನಿಗೆ ಶಂಕರಾಚಾರ್ಯರಮೇಲೆ ತುಂಬ ಅಭಿಮಾನ, ಅಷ್ಟೆ ಏಕೆ, ಈ ವಿಷಯದಲ್ಲಿ ಅವನನ್ನು ಅತಿ ಪಕ್ಷಪಾತಿ ಎಂದು ಬೇಕಾದರೂ ಹೇಳಬಹುದು. ಅವನು ಶಂಕರಾಚಾರ್ಯರಿಂದ ಪ್ರತಿಷ್ಠಿತವಾದ ಅದ್ವೈತ ಮತ ಸರ್ವ ದರ್ಶನಗಳಿಗೂ ಶಿರೋರತ್ನಪ್ರಾಯವಾದದ್ದೆಂಬ ಬುದ್ಧಿಯಿಟ್ಟುಕೊಂಡಿದ್ದನು, ಮತ್ತು ಶಂಕರಾಚಾರ್ಯರ ಯಾವ ಮಾತಿನಲ್ಲಿಯಾದರೂ

ಯಾರಾದರೂ ಒಂದು ದೋಷವನ್ನು ಕಂಡು ಹಿಡಿದರೆ ಅವನ ಹೃದಯ ಹಾವು ಕಚ್ಚಿದಂತೆ ವ್ಯಥೆಗೊಳ್ಳುತ್ತಿತ್ತು. ಸ್ವಾಮಿಜಿ ಇದನ್ನು ಬಲ್ಲರು ಮತ್ತು ಯಾರಾದರೂ ಯಾವುದಾದರೂ ಒಂದು ಮತದ ಅತಿ ಪಕ್ಷಪಾತಿಗಳಾಗಿದ್ದರೆ ಅದನ್ನು ಅವರು ಸಹಿಸುತ್ತಿರಲಿಲ್ಲ. ಯಾವುದಾದರೊಂದು ವಿಷಯದಲ್ಲಿ ಅತಿ ಪಕ್ಷಪಾತವನ್ನು ಕಂಡರೆ ಸಾಕು ಅವರು ಅದರ ವಿರುದ್ಧ ಪಕ್ಷವನ್ನು ಹಿಡಿದು ಅಜಸ್ರ ಅಮೋಘಯುಕ್ತಿಯ ಬಲದಿಂದ ಈ ಅತಿ ಪಕ್ಷಪಾತದ ಕಟ್ಟನ್ನು ಪುಡಿ ಪುಡಿ ಮಾಡಿಹಾಕುತ್ತಿದ್ದರು.

ಸ್ವಾಮಿಜಿ:— ಶಂಕರಾಚಾರ್ಯರಿಗೆ ಕತ್ತಿಯ ಧಾರೆಯಂಥ ಬುದ್ಧಿ— ವಿಚಾರಕರು ಹೌದು, ಪಂಡಿತರು ಹೌದು, ಆದರೆ ಅವರ ಉದಾರತೆಯು ತುಂಬ ಗಂಭೀರವಾದದ್ದಾಗಿರಲಿಲ್ಲ. ಹೃದಯವೂ ಹೀಗಿತ್ತೆಂದು ತೋರುತ್ತದೆ; ಮತ್ತು ಬ್ರಾಹ್ಮಣ ಅಭಿಮಾನವೂ ಹೆಚ್ಚಾಗಿತ್ತು. ದಕ್ಷಿಣ ದೇಶದ ವೈದಿಕ ಬ್ರಾಹ್ಮಣರ ಮಗ, ಮತ್ತೇನು? ಬ್ರಾಹ್ಮಣೇತರರಿಗೆ ಬ್ರಹ್ಮಜ್ಞಾನವಾಗುವುದಿಲ್ಲ ಎಂಬೀ ಅಂಶವನ್ನು ವೇದಾಂತ ಭಾಷ್ಯದಲ್ಲಿ ಹೇಗೆ ಸಮರ್ಥನ ಮಾಡಿಕೊಂಡು ಹೋಗಿದ್ದಾರೆ! ಬಲಿಹಾರಿವಿಚಾರ! ವಿದುರನ ಸಂಗತಿಯನ್ನು ಎತ್ತಿಕೊಂಡು, ಅವನ ಪೂರ್ವಜನ್ಮದ ಬ್ರಾಹ್ಮಣ ಶರೀರಫಲದಿಂದ ಅವನು ಬ್ರಹ್ಮಜ್ಞನಾದನೆಂದು ಹೇಳಿದ್ದಾರೆ. ಹಾಗಾದರೆ ನಾನು ಕೇಳುವುದೇನೆಂದರೆ, ಈಗಿನ ಕಾಲದಲ್ಲಿ ಹೀಗೆ ಯಾವನಿಗಾದರೂ ಶೂದ್ರನಿಗೆ ಬ್ರಹ್ಮಜ್ಞಾನವಾದರೆ ಅವನಿಗೆ ಶಂಕರಾಚಾರ್ಯರು ಹೇಳಿರುವಂತೆ ಪೂರ್ವಜನ್ಮದಲ್ಲಿ ಬ್ರಾಹ್ಮಣ್ಯವಿದ್ದದ್ದರಿಂದ ಈವಾಗ ಹೀಗೆ ಆಯಿತೆಂದು ಹೇಳಬೇಕೆ? ಬ್ರಾಹ್ಮಣತ್ವವನ್ನು ಹೀಗೆ ಎಳೆದಾಡುವುದರಿಂದ ಬಂದ ಫಲವೇನಪ್ಪಾ? ವೇದವೇನೊ ತ್ರಿವರ್ಣದವರಿಗೆ ಮಾತ್ರ ವೇದಪಾಠ ಮತ್ತು ಬ್ರಹ್ಮಜ್ಞಾನಗಳ ಅಧಿಕಾರವನ್ನು ಕೊಟ್ಟಿದೆ. ಆದ್ದರಿಂದಲೇ ಈ ವಿಷಯವನ್ನು ತೆಗೆದುಕೊಂಡು ವೇದದ ಮೇಲೆ ತಮ್ಮ ಅದ್ಭುತ ವಿದ್ಯೆಯನ್ನು ಉಪಯೋಗಿಸುವ ಅವಶ್ಯಕತೆ ಏನೂ ಕಾಣಲಿಲ್ಲ. ಅಲ್ಲದೆ ಅವರ ಹೃದಯವೆಂಥಾದ್ದೆಂದರೆ, ಅವರು ಎಷ್ಟೊಜನ ಬೌದ್ಧ ಶ್ರವಣರನ್ನು ಬೆಂಕಿಯಲ್ಲಿ ಬೀಳಿಸಿ ಕೊಲ್ಲಿಸಿದರು – ತಮ್ಮ ತರ್ಕದಿಂದ ಸೋಲಿಸಿಬಿಟ್ಟು! ಬುದ್ಧಿಹೀನರಾದ ಬೌದ್ಧರು ಕೂಡ ತರ್ಕದಲ್ಲಿ ಸೋಲನ್ನು ಒಪ್ಪಿಕೊಂಡು ಬೆಂಕಿಯಲ್ಲಿ ಬಿದ್ದು ಸಾಯುವುದಕ್ಕೆ ಮೊದಲು ಮಾಡಿದರು. ಶಂಕರಾಚಾರ್ಯರ ಈ ರೂಪನಾದ ಕಾರ್ಯವನ್ನು ಧರ್ಮಾಂಧತೆ

ಎನ್ನದೆ ಮತ್ತೇನೆನ್ನಬಹುದು? ಆದರೆ ಬುದ್ಧದೇವನ ಹೃದಯುವನ್ನು ನೋಡು! 'ಬಹುಜನ ಹಿತಾಯ ಬಹುಜನ ಸುಖಾಯ' ಎಂಬ ಈ ಮಾತನ್ನು ಹೇಳಬೇಕಾದ್ದೇ ಇಲ್ಲ. ಸಾಮಾನ್ಯ ಒಂದು ಆಡಿನ ಮರಿಯನ್ನು ಕಾಪಾಡುವುದಕ್ಕಾಗಿ ತನ್ನ ಪ್ರಾಣವನ್ನು ಕೊಡುವುದಕ್ಕೆ ಸರ್ವದಾ ಸಿದ್ಧನಾಗಿರುತ್ತಿದ್ದನು; ನೋಡು ಎಂಥ ಉದಾರತೆ–ಎಂಥ ದಯೆ!

ಶಿಷ್ಯ:— ಬುದ್ಧದೇವನ ಈ ಭಾವವನ್ನೂ ಒಂದು ವಿಧವಾದ ಹುಚ್ಚೆಂದು ಹೇಳುವುದಕ್ಕಾಗುವುದಿಲ್ಲವೆ ಮಹಾಶಯರೆ? ಒಂದು ಪಶುವಿಗೋಸ್ಕರ ತನ್ನ ತಲೆಯನ್ನು ಕೊಡುವುದಕ್ಕೆ ಹೋದನಲ್ಲವೆ!

ಸ್ವಾಮಿಜಿ:— ಆದರೆ ಅವನ ಈ ಮತಭ್ರಾಂತಿಯಿಂದ ಜಗತ್ತಿನ ಪ್ರಾಣಿಗಳಿಗೆ ಎಷ್ಟು ಕಲ್ಯಾಣವಾಯಿತು–ಅದನ್ನು ನೋಡು. ಎಷ್ಟು ಆಶ್ರಮ, ಎಷ್ಟು ಸ್ಕೂಲು, ಎಷ್ಟು ಕಾಲೇಜು, ಎಷ್ಟು ಸಾಧಾರಣ ಜನರಿಗಾಗಿ ಏರ್ಪಡಿಸಿದ ಆಸ್ಪತ್ರೆ, ಎಷ್ಟು ಪಶುಶಾಲೆಗಳ ಸ್ಥಾಪನೆ, ಎಷ್ಟು ಗುಡಿಗೋಪುರಾದಿಗಳನ್ನು ಕಟ್ಟುವುದರಲ್ಲಿ ನಿಪುಣತೆ ಇವು ಪ್ರಕಾಶಕ್ಕೆ ಬಂದುವು–ಅದನ್ನು ನೋಡು! ಬುದ್ಧದೇವನು ಹುಟ್ಟುವುದಕ್ಕೆ ಮುಂಚೆ ಈ ದೇಶದಲ್ಲಿ ಇದ್ದದ್ದೇನು?–ಓಲೆಗರಿಯ ಪುಸ್ತಕಗಳಲ್ಲಿ ಕಟ್ಟಿಹಾಕಿದ್ದ ಕೆಲವು ಧರ್ಮ ತತ್ತ್ವಗಳು–ಅದೂ ಗೊತ್ತಿದ್ದದ್ದು ಸ್ವಲ್ಪಜನರಿಗೆ ಮಾತ್ರ. ಭಗವಾನ್ ಬುದ್ಧದೇವನು ಅವುಗಳನ್ನು ಅನುಷ್ಠಾನ ರಂಗಕ್ಕೆ ತಂದನು.–ಜನರು ತಮ್ಮ ದೈನಂದಿನ ಜೀವನದಲ್ಲಿ ಅವುಗಳನ್ನು ಹೇಗೆ ಕಾರ್ಯದಲ್ಲಿ ಉಪಯೋಗಿಸಬೇಕೆಂಬುದನ್ನು ತೋರಿಸಿಕೊಟ್ಟನು. ನೋಡಿದರೆ, ಅವನೇ ವೇದಾಂತದ ನಿಜವಾದ ಸ್ಫುರನ್ಮೂರ್ತಿ.

ಶಿಷ್ಯ:— ಆದರೆ, ಮಹಾಶಯರೆ, ಆತನೇ ವರ್ಣಾಶ್ರಮ ಧರ್ಮವನ್ನು ನಾಶಪಡಿಸಿ ಭರತಖಂಡದಲ್ಲಿ ಹಿಂದೂಧರ್ಮದ ವಿಪ್ಲವವನ್ನು ತಂದವನು; ಅದಕ್ಕೋಸ್ಕರವೆ ಅವನಿಂದ ಪ್ರಚಾರಿತವಾದ ಧರ್ಮ ಭರತಖಂಡದಿಂದ ಕಾಲಕ್ರಮೇಣ ಓಡಿಸಲ್ಪಟ್ಟಿತು; ಇದೂ ನಿಜವೆಂದು ಒಪ್ಪಿಕೊಳ್ಳಬೇಕು.

ಸ್ವಾಮಿಜಿ:— ಬೌದ್ಧಧರ್ಮದ ಈ ವಿಧವಾದ ದುರ್ದಶೆಯು ಆತನ ಬೋಧನೆಯ ದೋಷದಿಂದ ಬರಲಿಲ್ಲ; ಆತನ ಶಿಷ್ಯಪರಂಪರೆಯ ದೋಷದಿಂದಲೆ ಬಂದದ್ದು. ತುಂಬ ದಾರ್ಶನಿಕರು ಆಗಿ ಅವರ ಹೃದಯದ ಉದಾರತೆ ಕಡಿಮೆಯಾಗಿ ಹೋಯಿತು. ಆಮೇಲೆ ಕ್ರಮೇಣ ವಾಮಾಚಾರದ

ವ್ಯಭಿಚಾರ ಪ್ರವೇಶಿಸಿ ಬೌದ್ಧಧರ್ಮ ಮಾಯವಾಯಿತು. ಅಂತ ಅಸಹ್ಯಕರವಾದ ವಾಮಾಚಾರ ಈಗ ಯಾವ ತಂತ್ರದಲ್ಲಿಯೂ ಇಲ್ಲ! ಬೌದ್ಧಧರ್ಮದ ಒಂದು ಪ್ರಧಾನ ಕೇಂದ್ರ 'ಜಗನ್ನಾಥಕ್ಷೇತ್ರ' ವಾಗಿತ್ತು–ಅಲ್ಲಿ ಮಂದಿರ ಪ್ರದೇಶದಲ್ಲಿ ಕೆತ್ತಿರುವ ಅಸಹ್ಯಕರವಾದ ಮೂರ್ತಿಗಳನ್ನು ಒಂದು ಸಲ ಹೋಗಿ ನೋಡಿಕೊಂಡು ಬಂದರೆ ಈ ವಿಷಯವನ್ನು ತಿಳಿದುಕೊಳ್ಳಬಲ್ಲೆ. ರಾಮಾನುಜ ಮತ್ತು ಚೈತನ್ಯ ಮಹಾಪ್ರಭುವಿನ ಕಾಲದಿಂದ ಪುರುಷೋತ್ತಮ ಕ್ಷೇತ್ರ ವೈಷ್ಣವರ ವಶಕ್ಕೆ ಬಂದಿದೆ. ಈಗ ಅದು ಈ ಮಹಾಪುರುಷರ ಶಕ್ತಿ ಸಹಾಯದಿಂದ ರೂಪಾಂತರವನ್ನು ಹೊಂದಿದೆ.

ಶಿಷ್ಯ:— ಮಹಾಶಯರೆ, ತೀರ್ಥಾದಿ ಸ್ಥಾನಗಳಿಗೆ ವಿಶೇಷ ಮಹಿಮೆಯಿರುವಂತೆ ಶಾಸ್ತ್ರದಿಂದ ತಿಳಿದುಬರುತ್ತದೆ; ಇದರಲ್ಲಿ ಎಷ್ಟು ನಿಜವಿದೆ?

ಸ್ವಾಮಿಜಿ:— ಸಮಗ್ರ ಬ್ರಹ್ಮಾಂಡವೂ ನಿತ್ಯಾತ್ಮನಾದ ಈಶ್ವರನ ವಿರಾಟ್ ಶರೀರವಾದ ಮೇಲೆ ಸ್ಥಾನಮಹಾತ್ಮ್ಯವಿರುವುದರಲ್ಲಿ ವಿಚಿತ್ರವೇನು? ಸ್ಥಾನ ವಿಶೇಷದಲ್ಲಿ ಅದರ ವಿಶೇಷ ಪ್ರಕಾಶ–ಕೆಲವೆಡೆಗಳಲ್ಲಿ ತಾನಾಗಿ ಮತ್ತೆ ಕೆಲವೆಡೆಗಳಲ್ಲಿ ಶುದ್ಧಸತ್ತ್ವವಾದ ಮಾನವ ಮನಸ್ಸಿನ ವ್ಯಾಕುಲಾಗ್ರಹದಿಂದ–ಇದ್ದೇ ಇರುತ್ತದೆ. ಸಾಧಾರಣ ಜನರು ಈ ಸ್ಥಳಗಳಿಗೆ ಜಿಜ್ಞಾಸುಗಳಾಗಿ ಹೋದರೆ ಫಲ ಸುಲಭವಾಗಿ ಬರುತ್ತದೆ. ಇದಕ್ಕೋಸ್ಕರವೆ ತೀರ್ಥಕ್ಷೇತ್ರಾದಿಗಳನ್ನು ಆಶ್ರಯಿಸಿಕೊಂಡಿದ್ದರೆ ಸಕಾಲದಲ್ಲಿ ಆತ್ಮವಿಕಾಸ ಆಗುವುದು ಸಾಧ್ಯವಾಗಿರುತ್ತದೆ. ಆದರೆ ಇದನ್ನು ಮಾತ್ರ ಖಂಡಿತವಾಗಿ ತಿಳಿದುಕೊ, ಈ ಮಾನವ ದೇಹಕ್ಕಿಂತ ಪ್ರಧಾನವಾದ ತೀರ್ಥಸ್ಥಳ ಮತ್ತೊಂದು ಇಲ್ಲ. ಇಲ್ಲಿ ಆತ್ಮದ ಎಂಥ ವಿಕಾಸವಿದೆಯೊ, ಅಷ್ಟು ಮತ್ತೆಲ್ಲಿಯೂ ಇಲ್ಲ. ಜಗನ್ನಾಥನ ರಥವಿದೆಯಷ್ಟೆ. ಅದೂ ಈ ದೇಹರಥದ ಸ್ಥೂಲರೂಪ ಮಾತ್ರ. ಈ ದೇಹವನ್ನು ಧರಿಸಿ ಆತ್ಮವನ್ನು ದರ್ಶನ ಮಾಡಬೇಕಾಗಿದೆ. ಓದಿಲ್ಲವೆ 'ಆತ್ಮಾನಂ ರಥಿನಂ ವಿದ್ಧಿ' ಎಂದು ಮುಂತಾಗಿ? 'ಮಧ್ಯೆ ವಾಮನಮಾಸಿನಂ ವಿಶ್ವೇದೇವಾ ಉಪಾಸತೇ'— ಈ ವಾಮನರೂಪಿಯಾದ ಆತ್ಮದರ್ಶನವೆ ನಿಜವಾದ ಜಗನ್ನಾಥ ದರ್ಶನ "ರಥೇ ಚ ವಾಮನಂ ದೃಷ್ಟ್ವಾ ಪುನರ್ಜನ್ಮ ನ ವಿದ್ಯತೇ" ಎಂದು ಹೇಳಿದೆಯಲ್ಲಾ. ಇದರ ಅಭಿಪ್ರಾಯವೇನೆಂದರೆ–ನಿನ್ನಲ್ಲಿರುವ ಆತ್ಮವನ್ನು ಉಪೇಕ್ಷೆಮಾಡಿ ಈ ವಿಕಾರ ದೇಹರೂಪವಾದ ಜಡ ಪದಾರ್ಥವನ್ನು ಯಾವಾಗಲೂ 'ನಾನು' ಎಂದು ಹಿಡಿದುಕೊಂಡಿರುತ್ತೀಯೊ, ಅದನ್ನು ದರ್ಶನ

ಮಾಡಲು ಸಮರ್ಥನಾದರೆ ಮತ್ತೆ ಪುನರ್ಜನ್ಮವಿಲ್ಲ.– ಎಂದು. ಮಠದ ಮಂಟಪದಲ್ಲಿ ದೇವರನ್ನು ನೋಡುವುದರಿಂದಲೆ ಜೀವನಿಗೆ ಮುಕ್ತಿ ಯಾಗುವ ಹಾಗಿದ್ದಿದ್ದರೆ, ವರ್ಷವರ್ಷವೂ ಕೋಟಿಕೋಟಿ ಜೀವಗಳಿಗೆ ಮುಕ್ತಿಯಾಗುತ್ತಿತ್ತು– ಈಗಿನ ಕಾಲದಲ್ಲಿ ರೈಲಿನಲ್ಲಿ ಹೋಗುವುದು ಎಷ್ಟು ಸುಲಭವೊ ಹಾಗೆ. ಆದರೆ ಜಗನ್ನಾಥನ ಸಾಧಾರಣ ಭಕ್ತಜನರಿಗೆ ಇರುವ ನಂಬಿಕೆಯನ್ನು 'ಕೆಲಸಕ್ಕೆ ಬಾರದ್ದು - ಸುಳ್ಳು' ಎಂದು ಹೇಳುವುದಿಲ್ಲ. ಒಂದು ಶ್ರೇಣಿಯ ಜನರಿದ್ದಾರೆ, ಅವರು ಈ ಮೂರ್ತಿಯನ್ನು ಅವಲಂಬಿಸಿ ಕೊಂಡು ಉಚ್ಚಭಾವದಿಂದ ಉಚ್ಚತರ ತತ್ತ್ವಕ್ಕೆ ಹತ್ತಿ ಹೋಗುತ್ತಾರೆ; ಆದ್ದರಿಂದಲೇ ಈ ಮೂರ್ತಿಯಲ್ಲಿ ಭಗವಂತನ ವಿಶೇಷ ಶಕ್ತಿ ಪ್ರಕಾಶಿತ ವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

ಶಿಷ್ಯ :— ಹಾಗಾದರೇನು, ಮಹಾಶಯರೆ, ದಡ್ಡರಿಗೂ ಬುದ್ಧಿವಂತ ರಿಗೂ ಧರ್ಮವೆಂಬುದು ಬೇರೆ ಬೇರೆಯೆ ?

ಸ್ವಾಮಿಜಿ :— ಹಾಗೇ ತಾನೆ; ಇಲ್ಲದಿದ್ದರೆ ನಿಮ್ಮ ಶಾಸ್ತ್ರಗಳು ಕೂಡ ಅಧಿಕಾರಿ ನಿರ್ದೇಶ ಮಾಡುವುದಕ್ಕೆ ಇಷ್ಟೊಂದು ಒದ್ದಾಡುವುದೇಕೆ? ಎಲ್ಲವೂ ಸತ್ಯ; ಆದರೆ ಸಾಂಬಂಧಿಕ ಸತ್ಯ, ಮನುಷ್ಯನು ಯಾವ ಯಾವು ದನ್ನು ಸತ್ಯವೆಂದು ತಿಳಿದುಕೊಂಡಿದ್ದಾನೆಯೊ ಅದೆಲ್ಲಾ ಹೀಗೆಯೆ; ಕೆಲವು ಸ್ವಲ್ಪ ಸತ್ಯ, ಕೆಲವು ಅದಕ್ಕಿಂತಲೂ ಹೆಚ್ಚು ಸತ್ಯ; ನಿತ್ಯಸತ್ಯ ಕೇವಲ ಭಗ ವಂತ ಒಬ್ಬಮಾತ್ರ. ಈ ಆತ್ಮ ಜಡಪದಾರ್ಥ ಮಧ್ಯದಲ್ಲಿ ಪೂರ್ತಿಯಾಗಿ ನಿದ್ದೆಮಾಡುತ್ತಿದೆ, ಜೀವನೆಂಬ ಹೆಸರುಳ್ಳ ಮನುಷ್ಯನಲ್ಲಿ ಅದೇ ಸ್ವಲ್ಪ ಜಾಗರಿತ ಆಗಿದೆ. ಶ್ರೀಕೃಷ್ಣ ಬುದ್ಧ ಶಂಕರಾದಿಗಳಲ್ಲಾದರೊ ಈ ಆತ್ಮವು ಪೂರ್ಣವಾಗಿ ಜಾಗರಿತವಾಗಿದೆ. ಇದಕ್ಕೂ ಮೇಲಿನ ಅವಸ್ಥೆಯೊಂದು ಉಂಟು, ಅದನ್ನು ಭಾವಿಸಿಕೊಳ್ಳುವುದಕ್ಕಾಗಲಿ ಮಾತಿನಲ್ಲಿ ಹೇಳುವು ದಕ್ಕಾಗಲಿ ಆಗುವುದಿಲ್ಲ.– 'ಅವಾಙ್ಮನಸಗೋಚರಂ'

ಶಿಷ್ಯ :— ಮಹಾಶಯರೆ, ಕೆಲಕೆಲವು ಸಂಪ್ರದಾಯದವರು ಭಗ ವಂತನೊಡನೆ ಒಂದೊಂದು ಭಾವ ಅಥವಾ ಸಂಬಂಧವನ್ನು ಕಲ್ಪಿಸಿಕೊಂಡು ಸಾಧನೆ ಮಾಡಬೇಕೆಂದು ಹೇಳುತ್ತಾರೆ. ಆತ್ಮದ ಮಹತ್ವ ಮುಂತಾದವು ಗಳ ವಿಷಯವನ್ನು ಅವರು ಸ್ವಲ್ಪವೂ ಅರಿಯರು. ಕೇಳಿದರೂ 'ಈ ವಿಷಯ ಗಳನೆಲ್ಲಾ ಬಿಟ್ಟು ಯಾವಾಗಲೂ ಭಾವದಲ್ಲಿ ಇರಿ' ಎಂದು ಹೇಳುತ್ತಾರೆ.

ಸ್ವಾಮಿಜಿ :— ಅವರು ಏನು ಹೇಳುತ್ತಾರೆಯೊ ಅದು ಅವರ

ವಿಚಾರಕ್ಕೆ ಸತ್ಯವೆ. ಹೀಗೆ ಮಾಡುತ್ತ ಮಾಡುತ್ತ ಅವರೊಳಗೂ ಒಂದು ದಿನ ಬ್ರಹ್ಮ ಜಾಗರಿತವಾಗುತ್ತದೆ. ನಾವು ಸನ್ಯಾಸಿಗಳು ಮಾಡುವುದು ಮತ್ತೊಂದು ವಿಧವಾದ ಭಾವ. ನಾವು ಸಂಸಾರವನ್ನು ತ್ಯಾಗಮಾಡಿದ್ದೇವೆ; ಆದ್ದರಿಂದ ನಮ್ಮ ಭಾವವು ಅಮ್ಮ, ಅಪ್ಪ, ಹೆಂಡತಿ, ಮಗ ಮುಂತಾದ ಸಂಸಾರ ಸಂಬಂಧರೂಪವಾದ ಯಾವುದಾದರೂ ಒಂದು ಭಾವವನ್ನು ಭಗವಂತನಲ್ಲಿ ಆರೋಪಿಸಿ ಸಾಧನೆ ಮಾಡುವ ಭಾವ ಹೇಗಾದೀತು? ಅವೆಲ್ಲಾ ನಮ್ಮ ಮನಸ್ಸಿಗೆ ಸಂಕುಚಿತವೆನ್ನಿಸುತ್ತದೆ. ನಿಜವಾಗಿಯೂ, ಸರ್ವಭಾವಾತೀತನಾದ ಭಗವಂತನ ಉಪಾಸನೆ ಮಾಡುವುದು ಬಹು ಕಠಿಣ. ಆದರೆ ಅಮೃತ ಸಿಕ್ಕುತ್ತದೆಯೊ ಇಲ್ಲವೊ ಎಂದು ವಿಷ ಕುಡಿಯುವುದಕ್ಕೆ ಹೋಗಬೇಕೆ? ಈ ಆತ್ಮದ ಸಂಗತಿಯನ್ನು ಸರ್ವದಾ ಹೇಳುತ್ತಿರಬೇಕು, ಕೇಳುತ್ತಿರಬೇಕು, ವಿಚಾರಮಾಡುತ್ತಿರಬೇಕು. ಹೀಗೆ ಮಾಡುತ್ತ ಮಾಡುತ್ತ ಕಾಲಕ್ರಮದಲ್ಲಿ ನಿನ್ನೊಳಗೂ ಬ್ರಹ್ಮ ಎಚ್ಚೆತ್ತುಕೊಳ್ಳುವುದನ್ನು ನೋಡುವೆ. ಈ ಭಾವ ಚಾಪಲ್ಯಗಳನ್ನೆಲ್ಲಾ ಬಿಟ್ಟು ನಡೆ. ಇದನ್ನು ಕೇಳು, ಕಠೋಪನಿಷತ್ತಿನಲ್ಲಿ ಯಮನು ಹೇಳಿರುವುದನ್ನು—

"ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ ನಿಬೋಧತ"

ಹೀಗೆ ಈ ಪ್ರಸ್ತಾಪವು ಮುಗಿಯಿತು. ಮಠದಲ್ಲಿ ಪ್ರಸಾದವನ್ನು ಕೊಡುವ ಘಂಟೆಯಾಯಿತು. ಸ್ವಾಮಿಜಿ ಜೊತೆಯಲ್ಲಿ ಶಿಷ್ಯನೂ ಪ್ರಸಾದವನ್ನು ತೆಗೆದುಕೊಳ್ಳುವುದಕ್ಕೆ ಹೊರಟನು.

---

## ಅಧ್ಯಾಯ ೧೫

**ಸ್ಥಳ:— ಬೇಲೂರು; ಮಠ (ಬಾಡಿಗೆ ಕಟ್ಟಡ) ವರ್ಷ: ಕ್ರಿ. ಶ. ೧೮೯೮; ಫೆಬ್ರವರಿ ತಿಂಗಳು.**

ಬೇಲೂರಿನಲ್ಲಿ ಶ್ರೀಯುಕ್ತ ನೀಲಾಂಬರ ಬಾಬುವಿನ ತೋಟಕ್ಕೆ ಸ್ವಾಮಿಜಿ ಮಠವನ್ನು ವರ್ಗಾಯಿಸಿರುವರು. ಆಲಂಬಜಾರಿನಿಂದ ಇಲ್ಲಿಗೆ ಬಂದದ್ದಾಯಿತಾದರೂ ಸಾಮಾನು ಸರಂಜಾಮುಗಳನ್ನೆಲ್ಲಾ ಇನ್ನೂ ಜೋಡಿಸಿಟ್ಟಿರಲಿಲ್ಲ. ಎಲ್ಲವೂ ಅಲ್ಲಿ ಇಲ್ಲಿ ಬಿದ್ದಿವೆ. ಸ್ವಾಮಿಜಿ ಹೊಸ

ಮನೆಗೆ ಬಂದು ಬಹು ಸಂತೋಷವಾಗಿದ್ದಾರೆ. ಶಿಷ್ಯನು ಅವರ ಹತ್ತಿರ ಹೋದಕೂಡಲೆ "ನೋಡಿದೆಯಾ ಗಂಗೆ ಹೇಗಿದೆ—ಕಟ್ಟಡ ಹೇಗಿದೆ—ಮಠ ಇಂಥ ಸ್ಥಳದಲ್ಲಿ ಇಲ್ಲದಿದ್ದಿದ್ದರೆ ಚನ್ನಾಗಿರುತ್ತಿತ್ತೆ?" ಎಂದರು. ಆಗ ಅಪರಾಹಣವಾಗಿತ್ತು.

ಸಾಯಂಕಾಲವಾದ ಮೇಲೆ ಶಿಷ್ಯನು ಮಹಡಿಯಮೇಲೆ ಸ್ವಾಮಿಜಿ ದರ್ಶನ ತೆಗೆದುಕೊಳ್ಳಲು, ನಾನಾ ಪ್ರಸ್ತಾಪಗಳು ಬಂದವು. ಮನೆಯಲ್ಲಿ ಮತ್ತಾರೂ ಇಲ್ಲ; ಶಿಷ್ಯನು ಮಧ್ಯೆ ಮಧ್ಯೆ ಎದ್ದು ಸ್ವಾಮಿಜಿ ತಂಬಾಕನ್ನು ಸಿದ್ಧಮಾಡಿಕೊಡುತ್ತಿದ್ದನು, ಮತ್ತು ನಾನಾ ಪ್ರಶ್ನೆಗಳನ್ನು ಹಾಕುತ್ತ ಕೊನೆಯಲ್ಲಿ ಮಾತಿಗೆ ಮಾತು ಬಂದು ಸ್ವಾಮಿಜಿ ಬಾಲ್ಯಕಾಲದ ವಿಷಯವನ್ನು ತಿಳಿದುಕೊಳ್ಳಬೇಕೆಂದು ಅಪೇಕ್ಷಿಸಿದನು. ಸ್ವಾಮಿಜಿ "ಚಿಕ್ಕ ವಯಸ್ಸಿನಿಂದ ನಾನು ಭೂತ ಪಿಶಾಚಿಗಳನ್ನೂ ಹೆದರಿಸಿ ಓಡಿಸುತ್ತಿದ್ದಂಥವನು; ಇಲ್ಲದಿದ್ದರೆ ನನಗೆ ಕೈಯಲ್ಲಿ ಕಾಸಿಲ್ಲದೆ ಪ್ರಪಂಚವನ್ನು ತಿರುಗಿಕೊಂಡು ಬರುವುದಕ್ಕಾಗುತ್ತಿತ್ತೇನಯ್ಯಾ?" ಎಂದರು.

ಹುಡುಗರಾಗಿದ್ದಾಗ, ರಾಮಾಯಣ ಗಾನವನ್ನು ಕೇಳುವುದಕ್ಕೆ ಅವರಿಗೆ ತುಂಬ ಆಶೆಯಿತ್ತು. ತಾವಿದ್ದ ಭಾಗದಲ್ಲಿ ಹತ್ತಿರ ಎಲ್ಲಿ ರಾಮಾಯಣ ಗಾನವಾದರೂ ಆಟಪಾಟಗಳನ್ನು ಬಿಟ್ಟು ಅಲ್ಲಿಗೆ ಹೋಗುತ್ತಿದ್ದರು. ರಾಮಾಯಣವನ್ನು ಕೇಳುತ್ತ ಕೇಳುತ್ತ ಒಂದೊಂದು ದಿನ ತನ್ಮಯರಾಗಿ ಹೋಗಿ ಮನೆ ಮಠಗಳನ್ನು ಮರೆತುಬಿಡುತ್ತಿದ್ದರಂತೆ; ಮತ್ತು 'ಕತ್ತಲೆಯಾಯಿತು' ಎಂದಾಗಲಿ 'ಮನೆಗೆ ಹೋಗಬೇಕು' ಎಂದಾಗಲಿ ಯಾವ ವಿಧವಾದ ಚಾಪಲ್ಯವೂ ಇರುತ್ತಿರಲಿಲ್ಲವಂತೆ. ಒಂದು ದಿನ ರಾಮಾಯಣವನ್ನು ಕೇಳುತ್ತಿರುವಾಗ ಹನುಮಂತನು ಬಾಳೆಯ ತೋಟದಲ್ಲಿರುವನೆಂಬುದು ಕಿವಿಗೆ ಬಿತ್ತು. ಆಗ ಆ ಮಾತಿನಲ್ಲಿ ಎಷ್ಟು ನಂಬಿಕೆ ಹುಟ್ಟಿಹೋಯಿತೆಂದರೆ, ಅವರು ರಾತ್ರಿ ರಾಮಾಯಣವನ್ನು ಕೇಳಿ ಮನೆಗೆ ಹಿಂತಿರುಗಿ ಹೋಗದೆ ತಮ್ಮ ಮನೆಯ ಹತ್ತಿರದಲ್ಲಿದ್ದ ಯಾವುದೊ ಒಂದು ತೋಟದಲ್ಲಿ ಬಾಳೆಯಗಿಡದ ಕೆಳಗೆ ಹನುಮಂತನ ದರ್ಶನದ ಆಶೆಯಿಂದ ಹೊತ್ತನ್ನು ಕಳೆದುಬಿಟ್ಟರು.

ಹನುಮಂತನ ಮೇಲೆ ಸ್ವಾಮಿಗಳಿಗೆ ಅಗಾಧವಾದ ಭಕ್ತಿಯಿತ್ತು. ಸನ್ಯಾಸಿಗಳಾದ ಮೇಲೆಯೂ ಆಗಾಗ್ಯೆ ಮಹಾವೀರನ (ಆಂಜನೇಯನ) ಪ್ರಸ್ತಾಪದಲ್ಲಿ ಉನ್ಮತ್ತರಂತಾಗಿಬಿಡುತ್ತಿದ್ದರು ಮತ್ತು ಅನೇಕವೇಳೆ

ಮಠದಲ್ಲಿ ಅವನ ಒಂದು ಸ್ಫಟಿಕಶಿಲೆಯ ಪ್ರತಿಮೆಯನ್ನು ಸ್ಥಾಪಿಸಬೇಕೆಂದು ಸಂಕಲ್ಪಿಸಿದ್ದರು.

ವಿದ್ಯಾರ್ಥಿದೆಶೆಯಲ್ಲಿ, ಅವರು ಹಗಲುಹೊತ್ತು ಜೊತೆ ಹುಡುಗರೊಡನೆ ಆಮೋದ ಪ್ರಮೋದಗಳನ್ನು ಮಾಡುತ್ತ ತಿರುಗುತ್ತಿದ್ದರು. ರಾತ್ರಿಯ ಹೊತ್ತು ಮನೆಯ ಬಾಗಿಲನ್ನು ಹಾಕಿಕೊಂಡು ಓದಿ ಬರೆದು ಮಾಡುತ್ತಿದ್ದರು. ಯಾವಾಗ ಅವರು ಓದಿ ಬರೆದು ಮಾಡುತ್ತಿದ್ದರೆಂಬುದನ್ನು ಯಾರೂ ತಿಳಿದುಕೊಳ್ಳಲಾರದವರಾಗಿದ್ದರು.

* * * *

ಶಿಷ್ಯನು "ಮಹಾಶಯರೆ, ಸ್ಕೂಲಿನಲ್ಲಿ ಓದುವಾಗ ತಾವು ಯಾವಾಗಲಾದರೂ ಏನಾದರೂ ದೃಶ್ಯವನ್ನು ನೋಡಿದಿರಾ?" ಎಂದು ಪ್ರಶ್ನೆಮಾಡಿದರು.

ಸ್ವಾಮಿಜಿ:—ಸ್ಕೂಲಿನಲ್ಲಿ ಓದುವಾಗ ಒಂದು ದಿನ ರಾತ್ರಿ ಬಾಗಿಲನ್ನು ಹಾಕಿಕೊಂಡು ಧ್ಯಾನಮಾಡುತ್ತ ಮಾಡುತ್ತ ಮನಸ್ಸು ತುಂಬ ತನ್ಮಯವಾಗಿಬಿಟ್ಟಿತು. ಎಷ್ಟು ಹೊತ್ತು ಈ ಭಾವದಲ್ಲಿ ಧ್ಯಾನಮಾಡಿದೆನೊ ಹೇಳಲಾರೆ. ಧ್ಯಾನ ಮುಗಿಯಿತು—ಆಗಲೂ ಕುಳಿತುಕೊಂಡಿದ್ದೆ—ಆಗ ಆ ಮನೆಯ ಗೋಡೆಯನ್ನು ಒಡೆದುಕೊಂಡು ಒಂದು ಜ್ಯೋತಿರ್ಮಯ ಮೂರ್ತಿ ಹೊರಕ್ಕೆ ಬಂದು ಎದುರಿಗೆ ನಿಂತುಕೊಂಡಿತು. ಮಹಾಶಾಂತ ಸನ್ಯಾಸಿಯ ಮೂರ್ತಿ, ಮುಂಡನವಾದ ತಲೆ; ಕೈಯಲ್ಲಿ ದಂಡ ಮತ್ತು ಕಮಂಡಲು. ನನ್ನನ್ನು ಸ್ವಲ್ಪ ಹೊತ್ತು ಎವೆಯಿಕ್ಕದೆ ನೋಡುತ್ತಿತ್ತು.—ನನಗೆ ಏನೋ ಹೇಳಬೇಕೆಂಬಂತಿದ್ದ ಭಾವ. ನಾನೂ ಬೆರಗಾಗಿ ಅವರ ಕಡೆಗೆ ನೋಡುತ್ತಿದ್ದೆನು. ಆಮೇಲೆ ಮನಸ್ಸಿಗೆ ಏನೋ ಒಂದು ವಿಧವಾದ ದಿಗಿಲು ಉಂಟಾಯಿತು.—ತಟ್ಟನೆ ಬಾಗಿಲನ್ನು ತೆಗೆದು ಮನೆಯಿಂದ ಹೊರಕ್ಕೆ ಬಂದುಬಿಟ್ಟೆ. ಆಮೇಲೆ ನಾನು ಏಕೆ ಹೀಗೆ ದಡ್ಡನಂತೆ ದಿಗಿಲುಪಟ್ಟು ಓಡಿಹೋದೆ, ಪ್ರಾಯಶಃ ಅದು ಏನನ್ನೋ ಹೇಳುತ್ತಿತ್ತು ಎಂದು ಮನಸ್ಸಿಗೆ ಎನ್ನಿಸಿತು. ಆದರೆ, ಪುನಃ ಆ ಮೂರ್ತಿಯನ್ನು ಯಾವಾಗಲೂ ನೋಡಿಲ್ಲ. ಎಷ್ಟೋದಿನ ಮಸ್ಸಿಗೆ ಎನ್ನಿಸಿದೆ—ಅದರ ಸುಳಿವನ್ನು ಕಂಡರೆ ಈ ಸಾರಿ ಹೆದರಿಕೊಳ್ಳುವುದಿಲ್ಲ, ಅದರೊಡನೆ ಮಾತನಾಡುತ್ತೇನೆ ಎಂದು; ಆದರೆ ಪುನಃ ಕಾಣಲಿಲ್ಲ.

ಶಿಷ್ಯ:—ಆಮೇಲೆ ಈ ವಿಷಯನ್ನು ಕುರಿತು ಯೋಚಿಸಲಿಲ್ಲವೆ?

ಸ್ವಾಮಿಜಿ :—ಯೋಚಿಸಿದೆ; ಆದರೆ ಯಾವುದೂ ಗೊತ್ತಾಗಲಿಲ್ಲ; ಭಗವಾನ್ ಬುದ್ಧದೇವನನ್ನು ನೋಡಿರಬೇಕೆಂದು ಈಗ ತೋರುತ್ತದೆ.

ಸ್ವಲ್ಪ ಹೊತ್ತಿನ ಮೇಲೆ, ಸ್ವಾಮಿಜಿ ಹೇಳಿದ್ದೇನೆಂದರೆ :—"ಮನಸ್ಸು ಶುದ್ಧವಾದರೆ, ಕಾಮಕಾಂಚನಗಳಲ್ಲಿ ಆಶೆಯು ತೊಲಗಿದರೆ, ಎಷ್ಟೋ ದಿವ್ಯದರ್ಶನಗಳನ್ನು ನೋಡಬಹುದು–ಅದ್ಭುತ, ಅದ್ಭುತ! ಆದರೆ ಅದರಲ್ಲಿ ಚಾಪಲ್ಯವನ್ನಿಟ್ಟುಕೊಳ್ಳಬಾರದು. ಇವುಗಳಲ್ಲಿ ಹಗಲು-ರಾತ್ರಿಯೂ ಮನಸ್ಸಿದ್ದರೆ ಸಾಧಕ ಮುಂದುವರಿಯಲಾರ. ಕೇಳಿಲ್ಲವೆ? ಪರಮ ಹಂಸರು "ನನ್ನ ಪ್ರಿಯನಾಥನ ಗರ್ಭಗುಡಿಯ ಹೊರಗೆ ಎಷ್ಟೊ ರತ್ನ ಗಳು ಬಿದ್ದಿವೆ" ಎಂದು ಹೇಳುತ್ತಿದ್ದರು. ಆತ್ಮವನ್ನು ಸಾಕ್ಷಾತ್ಕಾರಮಾಡಿ ಕೊಳ್ಳಬೇಕು. ಆ ಚಾಪಲ್ಯಗಳಲ್ಲೆಲ್ಲಾ ಮನಸ್ಸಿಟ್ಟರೆ ಏನಾಗುತ್ತದೆ?

ಈ ಮಾತುಗಳನ್ನು ಹೇಳಿ ಸ್ವಾಮಿಜಿ ತನ್ಮಯರಾಗಿ ಏನೋ ಒಂದು ವಿಷಯವನ್ನು ಯೋಚಿಸುತ್ತ ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದರು. ಆಮೇಲೆ ಪುನಃ ಹೇಳತೊಡಗಿದರು :—"ನೋಡು! ಅಮೆರಿಕಾ ದಲ್ಲಿದ್ದಾಗ ನನಗೆ ಕೆಲವು ಅದ್ಭುತ ಶಕ್ತಿಗಳು ಸ್ಫುರಿಸಿದುವು. ಜನರ ಕಣ್ಣನ್ನು ನೋಡಿ ಅವರ ಮನಸ್ಸಿನೊಳಗಿರುವುದನ್ನೆಲ್ಲಾ ತಿಳಿದುಕೊಳ್ಳ ಬಲ್ಲವನಾಗಿದ್ದೆ—ಒಂದು ಕ್ಷಣಮಾತ್ರದಲ್ಲಿ ಯಾರು ಯಾವುದನ್ನು ಯೋಚಿಸುತ್ತಿದ್ದರು, ಯಾವುದನ್ನು ಯೋಚಿಸುತ್ತಿರಲಿಲ್ಲ, ಇದೆಲ್ಲಾ ಕರ ತಲಾಮಲಕದ ಹಾಗೆ ಪ್ರತ್ಯಕ್ಷವಾಗಿಬಿಡುತ್ತಿತ್ತು. ಕೆಲಕೆಲವರಿಗೆ ಅದನ್ನು ಹೇಳುತ್ತಿದ್ದೆ; ಯಾರುಯಾರಿಗೆ ಹೇಳುತ್ತಿದ್ದೆನೋ ಅವರಲ್ಲಿ ಅನೇಕರು ಶಿಷ್ಯ ರಾಗಿಬಿಡುತ್ತಿದ್ದರು. ಮತ್ತು ಯಾರಾದರೂ ಯಾವುದಾದರೂ ವಿಧವಾದ ಕೇಡನ್ನು ಬಗೆದು ನನ್ನ ಜೊತೆಯಲ್ಲಿ ಸೇರುವುದಕ್ಕೆ ಬಂದಿದ್ದರೆ ಅಂಥವರು ಈ ಶಕ್ತಿಯ ಪರಿಚಯವನ್ನು ಪಡೆದು ಮತ್ತೆ ನನ್ನ ಕಡೆಗೇ ಸುಳಿಯುತ್ತಿರ ಲಿಲ್ಲ."

ಚಿಕಾಗೊ ಮುಂತಾದ ಪಟ್ಟಣಗಳಲ್ಲಿ ಉಪನ್ಯಾಸಕ್ಕೆ ಆರಂಭಿಸಿದಾಗ, ವಾರಕ್ಕೆ ೧೨–೧೪, ಕೆಲವುವೇಳೆ ಇನ್ನೂ ಹೆಚ್ಚಾಗಿ, ಉಪನ್ಯಾಸಗಳನ್ನು ಕೊಡಬೇಕಾಗಿತ್ತು. ಅತ್ಯಧಿಕವಾದ ಶಾರೀರಕ ಮತ್ತು ಮಾನಸಿಕ ಶ್ರಮ ದಿಂದ ಬಳಲಿ ಬೇಸತ್ತು ಬಿದ್ದುಬಿಡುತ್ತಿದ್ದೆ. ಉಪನ್ಯಾಸದ ವಿಷಯವೆಲ್ಲಾ ಮುಗಿದುಹೋಗಿ ಬಿಟ್ಟಂತಾಗುತ್ತಿತ್ತು. ಏನುಮಾಡಲಿ. ಬೆಳಗ್ಗೆ ಎಲ್ಲಿಂದ ಯಾವ ಹೊಸ ವಿಷಯವನ್ನು ತಂದು ಹೇಳಲಿ?–ಎಂದು ಯೋಚಿಸು

ತ್ತಿದ್ದೆ. ಹೊಸ ವಿಷಯ ಇನ್ನು ದೊರಕುವುದಿಲ್ಲ ಎನ್ನುವಹಾಗೆ ಇರುತ್ತಿತ್ತು. ಒಂದುದಿನ ಉಪನ್ಯಾಸವಾದಮೇಲೆ ಮಲಗಿಕೊಂಡೇ ಯೋಚನೆ ಮಾಡು ತ್ತಿದ್ದೆ – ಹಾಗಾದರೆ ಈಗ ಏನು ಉಪಾಯ ಮಾಡಬೇಕು ಎಂದು ಯೋಚಿ ಸುತ್ತ ಸ್ವಲ್ಪ ಜೊಂಪು ಹತ್ತಿದಂತಾಯಿತು. ಆ ಸ್ಥಿತಿಯಲ್ಲಿಯೆ ನನಗೆ ಕೇಳಬಂತು — ಯಾರೋ ಒಬ್ಬರು ನನ್ನ ಪಕ್ಕದಲ್ಲಿ ನಿಂತುಕೊಂಡು ಉಪ ನ್ಯಾಸ ಮಾಡುತ್ತಿದ್ದ ಹಾಗೆ; ಎಷ್ಟು ನೂತನ ಭಾವಗಳು ಎಷ್ಟು ವಿಷಯ ಗಳು! — ಅವುಗಳನ್ನೆಲ್ಲಾ ಈ ಜನ್ಮದಲ್ಲಿ ಕೇಳಿರಲಿಲ್ಲ. ಜೋಂಪಿನಿಂದ ಎದ್ದು ಅವುಗಳನ್ನು ನೆನಪಿಗೆ ತಂದು ಇಟ್ಟುಕೊಂಡೆ; ಉಪನ್ಯಾಸದಲ್ಲಿಯೂ ಅದನ್ನೆ ಹೇಳಿಬಿಟ್ಟೆ. ಹೀಗೆ ಎಷ್ಟು ದಿನಗಳು ಕಳೆದವೊ ಅವಕ್ಕೆ ಲೆಕ್ಕವಿಲ್ಲ. ಮಲಗಿಕೊಂಡಿದ್ದ ಹಾಗೆಯೆ ಇಂಥ ಉಪನ್ಯಾಸಗಳನ್ನು ಎಷ್ಟೋದಿನ ಕೇಳಿದ್ದೇನೆ. ಕೆಲವುವೇಳೆ ಎಷ್ಟು ಗಟ್ಟಿಯಾಗಿ ಉಪನ್ಯಾಸವು ನಡೆಯು ತ್ತಿತ್ತೆಂದರೆ, ನೆರೆಮನೆಯವರು ಆ ಮಾತನ್ನು ಕೇಳಿ ಮರುದಿನ 'ಸ್ವಾಮಿಗಳೆ ನಿನ್ನೆ ಅಂಥ ರಾತ್ರಿಯಲ್ಲಿ ತಾವು ಯಾರೊಡನೆ ಅಷ್ಟು ಗಟ್ಟಿಯಾಗಿ ಮಾತನಾಡುತ್ತಿದ್ದಿರಿ?' ಎಂದು ನನ್ನನ್ನು ಕೇಳುತ್ತಿದ್ದರು. ನಾನು ಅವರ ಆ ಪ್ರಶ್ನೆಯನ್ನು ಹೇಗೋ ಕಳೆದುಬಿಡುತ್ತಿದ್ದೆ. ಅದು ಒಂದು ಅದ್ಭುತದ ಸಂಗತಿ."

ಶಿಷ್ಯನು ಸ್ವಾಮಿಗಳ ಮಾತನ್ನು ಕೇಳಿ ಬೆರಗಾಗಿ ಯೋಚಿಸುತ್ತ ಯೋಚಿಸುತ್ತ ಹೀಗೆಂದನು:—"ಮಹಾಶಯರೆ, ಹಾಗಾದರೆ ನನಗೇನು ತೋರುತ್ತದೆ ಎಂದರು, ತಾವೇ ಸೂಕ್ಷ್ಮದೇಹದಿಂದ ಹೀಗೆ ಉಪನ್ಯಾಸ ಮಾಡುತ್ತಿದ್ದಿರಿ; ಮತ್ತು ಸ್ಥೂಲದೇಹದಲ್ಲಿ ಆಗಾಗ್ಯೆ ಅದರ ಪ್ರತಿಧ್ವನಿ ಹೊರಗೆ ಬರುತ್ತಿತ್ತು."

ಇದನ್ನು ಕೇಳಿ ಸ್ವಾಮಿಜಿ "ಇರಬಹುದು" ಎಂದರು. ಆಮೇಲೆ ಅಮೇರಿಕಾದ ಪ್ರಸ್ತಾಪ ಬಂತು. ಸ್ವಾಮಿಜಿ ಹೀಗೆಂದರು:—"ಆ ದೇಶ ದಲ್ಲಿ ಗಂಡಸರಿಗಿಂತಲೂ ಹೆಂಗಸರು ಶಿಕ್ಷಿತರಾದವರು, ವಿಜ್ಞಾನದರ್ಶನ ಇವುಗಳಲ್ಲಿ ಅವರೆಲ್ಲಾ ಪಂಡಿತೆಯರು; ಅದಕ್ಕೋಸ್ಕರವೆ ಅವರು ನನ್ನನ್ನು ಅಷ್ಟು ಗೌರವಿಸುತ್ತಿದ್ದರು. ಗಂಡಸರು ಹಗಲೂ ಇರುಳೂ ದುಡಿಯು ತ್ತಾರೆ; ವಿಶ್ರಾಂತಿಗೆ ಅವಕಾಶವಿಲ್ಲ. ಹೆಂಗಸರು ಪಾಠಶಾಲೆಗಳಲ್ಲಿ ಪಾಠ ಗಳನ್ನು ಹೇಳುವುದು, ಕೇಳುವುದು ಇವುಗಳನ್ನೆಲ್ಲಾ ಮಾಡುತ್ತ ಮಹಾ ಪಂಡಿತೆಯರಾಗಿಬಿಟ್ಟಿದ್ದಾರೆ. ಅಮೆರಿಕಾದಲ್ಲಿ ಯಾವ ಕಡೆ ನೋಡಿದರೂ

ಕೇವಲ ಹೆಂಗಸರ ಪಾರುಪತ್ಯವೆ.''

ಶಿಷ್ಯ:—ಒಳ್ಳೆಯದು, ಮಹಾಶಯರೆ, ಅತಿಪಕ್ಷಪಾತಿಗಳಾದ ಕ್ರೈಸ್ತರು ಅಲ್ಲಿ ತಮಗೆ ವಿರೋಧಿಗಳಾಗಲಿಲ್ಲವೆ?

ಸ್ವಾಮಿಜಿ:—ಆಗದೆ ಮತ್ತೇನು? ಅಲ್ಲದೆ ಜನರು ನನಗೆ ತುಂಬ ಗೌರವವನ್ನು ತೋರಿಸುವುದಕ್ಕೆ ಆರಂಭಿಸಲು, ಪಾದ್ರಿಗಳು ನನ್ನನ್ನು ಬಲವಾಗಿ ಬೆನ್ನಂಟಿದರು; ನನ್ನಮೇಲೆ ಬೇಕಾದಷ್ಟು ಅಪವಾದವನ್ನು ಪತ್ರಿಕೆಗಳಲ್ಲಿ ಬರೆದು ಗದ್ದಲ ಹತ್ತಿಸಿದರು. ಎಷ್ಟೋ ಜನರು ಅದನ್ನು ಪ್ರತಿವಾದಿಸಬೇಕೆಂದು ನನಗೆ ಹೇಳುತ್ತಿದ್ದರು. ಆದರೆ ನಾನು ಮಾತ್ರ ಸ್ವಲ್ಪವೂ ಒಪ್ಪುತ್ತಿರಲಿಲ್ಲ. ನನ್ನ ದೃಢವಾದ ನಂಬುಗೆ ಏನೆಂದರೆ, ಬರಿಯ ತೀಕ್ಷ್ಣ ಬುದ್ಧಿಯಿಂದ ಜಗತ್ತಿನಲ್ಲಿ ಯಾವ ಮಹತ್ಕಾರ್ಯವೂ ಆಗುವುದಿಲ್ಲ. ಆದ್ದರಿಂದಲೇ ಈ ಅಶ್ಲೀಲವಾದ ಕುತ್ಸಾಪವಾದಗಳನ್ನು ಕಿವಿಗೆ ಹಾಕಿಕೊಳ್ಳದೆ ಮೆಲ್ಲಮೆಲ್ಲಗೆ ನನ್ನ ಕೆಲಸವನ್ನು ಮಾಡುತ್ತ ಹೋಗುತ್ತಿದ್ದೆನು. ಅನೇಕ ವೇಳೆ ಯಾರು ನನ್ನಮೇಲೆ ಇಲ್ಲದ ಅಪವಾದವನ್ನು ಹೊರಿಸಿದ್ದರೊ ಅವರು ಮನಸ್ಸಿನಲ್ಲಿ ನೊಂದುಕೊಂಡು ನನ್ನ ಶರಣು ಹೋಗುತ್ತಿದ್ದರು, ಮತ್ತು ತಾವೇ ಪತ್ರಿಕೆಯಲ್ಲಿ ಪ್ರತಿವಾದ ಮಾಡಿ ಕ್ಷಮೆಯನ್ನು ಬೇಡುತ್ತಿದ್ದರು. ಕೆಲ ಕೆಲವು ವೇಳೆ ಹೀಗೂ ಆಗಿದೆ:—ನನ್ನನ್ನು ಯಾರಮನೆಗಾದರೂ ಭೋಜನಕ್ಕೆ ಕರೆದಿದ್ದಾರೆಂದು ಗೊತ್ತಾದರೆ, ಯಾರೋ ನನ್ನಮೇಲೆ ಸುಳ್ಳು ಅಪವಾದಗಳನ್ನು ಆ ಮನೆಯವರಿಗೆ ತಿಳಿಸುತ್ತಿದ್ದರು; ಅದನ್ನು ಕೇಳಿ ಅವರು ಮನೆಯ ಬಾಗಿಲನ್ನು ಹಾಕಿಕೊಂಡು ಎಲ್ಲಿಯೋ ಹೊರಟು ಹೋಗಿಬಿಡುತ್ತಿದ್ದರು; ನಾನು ಒಪ್ಪಿಕೊಂಡಿದ್ದಂತೆ ಹೋಗಿ ನೋಡುತ್ತೇನೆ!—ಎಲ್ಲವೂ ಬಿಮ್ಮೆನ್ನುತ್ತಿದೆ—ಯಾರೂ ಇಲ್ಲ! ಆಮೇಲೆ ಕೆಲವು ದಿನದಮೇಲೆ ಅವರೇ, ನಿಜವಾದ ವಿಷಯ ತಿಳಿದು ಬಂದರೆ, ಮನಸ್ಸಿನಲ್ಲಿ ಪರಿತಾಪಪಟ್ಟುಕೊಂಡು ನನ್ನ ಶಿಷ್ಯರಾಗುವುದಕ್ಕೆ ಬರುತ್ತಿದ್ದರು. ಏನೆಂದುಕೊಂಡಿದ್ದೀಯಪ್ಪಾ, ಸಂಸಾರದಲ್ಲಿ ಎಲ್ಲಾ ಪ್ರಾಪಂಚಿಕ ಮೋಹವೆ; ನಿಜವಾದ ಸತ್ಸಾಹಸಿಯೂ ಜ್ಞಾನಿಯೂ ಈ ಪ್ರಾಪಂಚಿಕ ಮೋಹದಲ್ಲಿ ಮೈಮರೆತು ಹೋಗುತ್ತಾರೆಯೆ? ಪ್ರಪಂಚ ತನಗೆ ಇಷ್ಟಬಂದದ್ದನ್ನು ಹೇಳಿಕೊಳ್ಳಲಿ, ನನ್ನ ಕರ್ತವ್ಯ ಕಾರ್ಯವನ್ನು ನಾನು ಮಾಡಿಕೊಂಡು ಹೋಗುತ್ತೇನೆ—ಇದೇ ವೀರನ ಕಾರ್ಯವೆಂದು ತಿಳಿದುಕೊ. ಹಾಗಲ್ಲದೆ ಇವನೇನು ಎನ್ನುತ್ತಾನೆ, ಅವನೇನು ಬರೆಯುತ್ತಾನೆ, ಎಂಬಿವುಗಳನ್ನೇ

ಹಗಲೂ ಇರುಳೂ ಹಿಡಿದುಕೊಂಡು ಕುಳಿತರೆ, ಪ್ರಪಂಚದಲ್ಲಿ ಯಾವ ಮಹತ್ಕಾರ್ಯವೂ ಆಗುವುದಿಲ್ಲ. ಈ ಶ್ಲೋಕವನ್ನು ಅರಿಯೆಯಾ?—

"ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು
ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್ ।
ಅದ್ಯೈವ ವಾ ಮರಣಮಸ್ತು ಯುಗಾಂತರೇ ವಾ
ನ್ಯಾಯ್ಯಾತ್ ಪಥಃ ಪ್ರವಿಚಲಂತಿ ಪದಂ ನ ಧೀರಾಃ ॥"

ಜನರು ನಿನ್ನನ್ನು ಸ್ತುತಿಸಲಿ ನಿಂದಿಸಲಿ, ನಿನ್ನಮೇಲೆ ಲಕ್ಷ್ಮಿಯ ಕೃಪೆಯಾಗಲಿ ಆಗದಿರಲಿ, ಇಂದೇ ಮರಣವಾಗಲಿ ಮತ್ತೊಂದು ಯುಗದಲ್ಲಿ ಆಗಲಿ ನ್ಯಾಯವಾದ ಮಾರ್ಗವನ್ನು ಬಿಟ್ಟು ಹೋಗಕೂಡದು. ಎಷ್ಟು ಬಿರುಗಾಳಿ ಸುಂಟರು ಗಾಳಿಗಳನ್ನು ತಟಾಯಿಸಿದ ಮೇಲೆ ಶಾಂತಿರಾಜ್ಯವು ದೊರಕುವುದು! ಯಾರು ಯಾರು ಎಷ್ಟೆಷ್ಟು ದೊಡ್ಡವರಾಗಿರುತ್ತಾರೆಯೊ ಅವರವರು ಅಷ್ಟಷ್ಟು ಕಠಿನವಾದ ಕಷ್ಟನಿಷ್ಠುರಗಳ ಪರೀಕ್ಷೆಗೆ ಸಿಕ್ಕಿರುತ್ತಾರೆ. ಈ ಪರೀಕ್ಷೆಯೆಂಬ ಒರೆಗಲ್ಲಿನಲ್ಲಿ ಅವರ ಜೀವನವನ್ನು ಉಜ್ಜಿ ನೋಡಿ ಆಮೇಲೆ ಅವರನ್ನು ಜಗತ್ತು ದೊಡ್ಡವರೆಂದು ಒಪ್ಪಿಕೊಳ್ಳುತ್ತದೆ. ಯಾರು ಅಂಜುಬುರುಕರೊ ಕೀಳು ಜನರೊ ಅವರೇ ಸಮುದ್ರದ ಅಲೆಗಳನ್ನು ನೋಡಿ ತೀರದಲ್ಲಿ ದೋಣಿಯನ್ನು ಮುಳುಗಿಸುವರು. ಮಹಾ ವೀರನಾದವನು ಯಾವುದನ್ನಾದರೂ ಲಕ್ಷ್ಯಮಾಡುವನೇನು? ಏನು ಆದರೆ ಅದು ಆಗಿಕೊಂಡು ಹೋಗಲಿ. ತನ್ನ ಇಷ್ಟವನ್ನು ಮೊದಲು ಈಡೇರಿಸಿಕೊಂಡೇ ಸಿದ್ಧ—ಇದೇ ಪುರುಷಕಾರವೆಂಬುದು. ಈ ಪುರುಷಕಾರವಿಲ್ಲದಿದ್ದರೆ ನೂರು ದೈವದಿಂದಲೂ ನಿನ್ನ ಜಡತ್ವವನ್ನು ಹೋಗಲಾಡಿಸಲಾಗುವುದಿಲ್ಲ.

ಶಿಷ್ಯ:—ಆದರೆ ದೈವದ ಮೇಲೆ ಭಾರಹಾಕುವುದು ದೌರ್ಬಲ್ಯದ ಚಿಹ್ನೆಯೆ?

ಸ್ವಾಮಿಜಿ:—ಶಾಸ್ತ್ರದಲ್ಲಿ ನಿರ್ಭರತೆಯನ್ನು ಪಂಚಮಪುರುಷಾರ್ಥವೆಂದು ಹೇಳಿದೆ. ಆದರೆ ನಮ್ಮ ದೇಶದಲ್ಲಿ ದೈವ ದೈವ ಎಂದುಕೊಳ್ಳುತ್ತಿರುವುದು ಮೃತ್ಯುವಿನ ಚಿಹ್ನೆ, ಮಹಾ ಕಾಪುರುಷತೆಯ ಪರಿಣಾಮ; ಒಬ್ಬ ವಿಚಿತ್ರ ಈಶ್ವರನನ್ನು ಕಲ್ಪಿಸಿಕೊಂಡು ಅವನ ತಲೆಯಮೇಲೆ ತಮ್ಮ ದೋಷಗಳನ್ನೆಲ್ಲಾ ಹೊರಿಸುವ ಪ್ರಯತ್ನ ಮಾತ್ರ. ಪರಮಹಂಸರು ಹೇಳುತ್ತಿದ್ದ ಆ ಗೋಹತ್ಯಾಪಾಪದ ಕಥೆಯನ್ನು ಕೇಳಿದ್ದೀಯಷ್ಟೆ? ಆ ಗೋಹತ್ಯಾಪಾಪವನ್ನು ಕೊನೆಗೆ ತೋಟದ ಯಜಮಾನನೆ ಅನುಭವಿಸಿ ಸಾಯಬೇಕಾ

ಯಿತು. ಈಗಿನ ಕಾಲದಲ್ಲಿ ಎಲ್ಲರೂ "ಯಥಾ ನಿಯುಕ್ತೋಽಸ್ಮಿ ತಥಾ ಕರೋಮಿ" ಎನ್ನುತ್ತಾ ಪಾಪ ಪುಣ್ಯಗಳೆರಡನ್ನೂ ಈಶ್ವರನ ತಲೆಯಮೇಲೆ ಹೊರಿಸಿಬಿಡುತ್ತಾರೆ. ತಾವೇನು ಪದ್ಮಪತ್ರದ ಮೇಲಿರುವ ನೀರಿನಹಾಗೆ! ಸರ್ವದಾ ಈ ಭಾವದಲ್ಲಿ ಇರಬಲ್ಲನಾದರೆ ಅವನು ಮುಕ್ತನೇ; ಆದರೆ ಒಳ್ಳೆಯ ಕಾಲದಲ್ಲಿ 'ನಾನು', ಕೆಟ್ಟಕಾಲದಲ್ಲಿ 'ನೀನು'—ನಿನ್ನ ದೈವ ನಿರ್ಭರತೆ ವಿಚಿತ್ರ! ಪೂರ್ಣ ಪ್ರೇಮ ಅಥವಾ ಜ್ಞಾನವಿಲ್ಲದಿದ್ದರೆ ನಿರ್ಭರ ಸ್ಥಿತಿ ಬರಲೇ ಆರದು. ಯಾರಿಗೆ ನಿಜವಾದ ನಿರ್ಭರತೆಯು ಉಂಟಾಗಿದೆಯೊ ಅವರಿಗೆ ಒಳ್ಳೆಯದು ಕೆಟ್ಟದ್ದು ಎಂಬ ಭೇದ ಬುದ್ಧಿಯೆ ಇರುವುದಿಲ್ಲ—ನಮ್ಮಲ್ಲಿ (ಶ್ರೀರಾಮಕೃಷ್ಣರ ಶಿಷ್ಯರಲ್ಲಿ) ಈಗ ಇರುವ ಇಂಥ ಸ್ಥಿತಿಯ ಉಜ್ಜ್ವಲ ದೃಷ್ಟಾಂತವೆಂದರೆ – ನಾಗಮಹಾಶಯರು.

ಹೀಗೆಂದು ಹೇಳುತ್ತ ಹೇಳುತ್ತ, ನಾಗಮಹಾಶಯರ ಪ್ರಸ್ತಾಪಕ್ಕೆ ಆರಂಭವಾಯಿತು. ಸ್ವಾಮಿಜಿ "ಎಂಥ ಅನುರಾಗಿಯಾದ ಭಕ್ತರು! ಅಂಥವರು ಮತ್ತೊಬ್ಬರಿದ್ದಾರೆಯೆ? ಆಹಾ! ಅವರ ದರ್ಶನವು ಮತ್ತೆ ಆಗುವುದು ಯಾವಾಗ!"

ಶಿಷ್ಯ:— ಅವರು ಜಾಗ್ರತೆಯಾಗಿಯೆ ತಮ್ಮ ದರ್ಶನ ಮಾಡಿಕೊಳ್ಳು ವುದಕ್ಕೋಸ್ಕರ ಕಲ್ಕತ್ತೆಗೆ ಬರುತ್ತಾರೆಂದು ಶ್ರೀಮಾತೆ (ನಾಗಮಹಾಶಯರ ಪತ್ನಿ) ನನಗೆ ಚೀಟಿ ಬರೆದು ಕಳುಹಿಸಿದ್ದಾರೆ.

ಸ್ವಾಮಿಜಿ:— ಪರಮಹಂಸರು ಅವರನ್ನು ಜನಕರಾಜನೊಡನೆ ಹೋಲಿಸುತ್ತಿದ್ದರು. ಅಂಥ ಜಿತೇಂದ್ರಿಯರ ದರ್ಶನದ ಮಾತು ಹಾಗಿರಲಿ, ವರ್ತಮಾನವೂ ಕೇಳಬರುವುದಿಲ್ಲ. ಅವರ ಸಂಗವನ್ನು ತುಂಬ ಮಾಡು. ಅವರು ಪರಮಹಂಸರ ಅಂತರಂಗಕ್ಕೆ ಸೇರಿದವರಲ್ಲಿ ಒಬ್ಬರು.

ಶಿಷ್ಯ:— ಮಹಾಶಯರೆ, ಆ ಪ್ರಾಂತದಲ್ಲಿ ಅನೇಕರು ಅವರನ್ನು ಹುಚ್ಚರೆನ್ನುತ್ತಾರೆ. ನಾನು ಮಾತ್ರ ಮೊದಲು ದರ್ಶನಮಾಡಿದ ದಿವಸ ದಂದಿನಿಂದಲೂ ಅವರನ್ನು ಮಹಾ ಪುರುಷರೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದೇನೆ. ಅವರಿಗೆ ನನ್ನ ಮೇಲೆ ತುಂಬ ವಿಶ್ವಾಸ ಮತ್ತು ಕೃಪೆ.

ಸ್ವಾಮಿಜಿ:— ಅಂಥ ಮಹಾಪುರುಷರ ಸಂಗವನ್ನು ಪಡೆದುಕೊಂಡಿದ್ದೀಯೆ, ಇನ್ನು ಬೇರೆ ಅರಿಕೆ ಎಂಥಾದ್ದಯ್ಯಾ? ಬಹು ಜನ್ಮಗಳ ತಪಸ್ಸು ಇದ್ದರೇ ಅಂಥ ಮಹಾಪುರುಷರ ಸಂಗವೆಲ್ಲಾ ದೊರಕುವುದು. ನಾಗ ಮಹಾಶಯರು ಮನೆಯಲ್ಲಿ ಯಾವರೀತಿಯಲ್ಲಿ ಇರುತ್ತಾರೆ?

ಶಿಷ್ಯ :— ಮಹಾಶಯರೆ, ಕೆಲಸಕಾರ್ಯಗಳನ್ನು ಒಂದನ್ನೂ ನೋಡಿಲ್ಲ ಕೇವಲ ಅತಿಥಿ ಸೇವೆಯನ್ನೇ ಹಿಡಿದುಕೊಂಡು ಇರುತ್ತಾರೆ. ಪಾಲ್‌ಬಾಬುಗಳು ಕೊಡುವ ಕೆಲವು ರೂಪಾಯಿಗಳನ್ನು ಬಿಟ್ಟರೆ ಹೊಟ್ಟೆ ಬಟ್ಟೆಗಳಿಗೆ ಬೇರೆ ಆದಾಯವಿಲ್ಲ; ಆದರೆ ಖರ್ಚುಪಟ್ಟಿಯನ್ನು ನೋಡಿದರೆ ಒಬ್ಬ ದೊಡ್ಡಮನುಷ್ಯರ ಮನೆಯಲ್ಲಿ ಹೇಗೊ ಹಾಗೆ! ಆದರೆ ತಮ್ಮ ಭೋಗಕ್ಕಾಗಿ ಒಂದುಪಾವಲಿಯ ಖರ್ಚೂ ಇಲ್ಲ– ಅಷ್ಟು ಖರ್ಚೆಲ್ಲವೂ ಕೇವಲ ಪರಸೇವಾರ್ಥವಾಗಿ, ಸೇವೆ– ಸೇವೆ– ಇದೇ ಅವರ ಜೀವನದ ಮಹಾ ವ್ರತವೆಂದು ತೋರುತ್ತದೆ. ಪ್ರತಿಪ್ರಾಣಿಯಲ್ಲಿಯೂ ಆತ್ಮವನ್ನು ದರ್ಶನಮಾಡಿ ಅವರು ಅಭೇದ ಜ್ಞಾನದಿಂದ ಜಗತ್ತಿನ ಸೇವೆಯನ್ನು ಮಾಡುವುದರಲ್ಲಿ ಆಸಕ್ತರಾಗಿದ್ದಾರೆಂದು ತೋರುತ್ತದೆ. ಸೇವೆಗೋಸ್ಕರ ತಮ್ಮ ಶರೀರವನ್ನು ಶರೀರವೆಂದೇ ಎಣಿಸಿಲ್ಲ– ಅದನ್ನು ಮರತೇ ಹೋಗಿರುವಂತೆ ತೋರುತ್ತದೆ. ನಿಜವಾದ ಶರೀರಜ್ಞಾನ ಅವರಿಗೆ ಇದೆಯೊ ಇಲ್ಲವೊ ಆ ವಿಷಯದಲ್ಲಿ ನನಗೆ ಸಂದೇಹ. ತಾವು ಯಾವ ಸ್ಥಿತಿಯನ್ನು ಜ್ಞಾನಾತೀತ ಅವಸ್ಥೆ ಎಂದು ಹೇಳುತ್ತೀರೊ, ಆ ಸ್ಥಿತಿಯಲ್ಲಿಯೆ ಅವರು ಯಾವಾಗಲೂ ಇರುತ್ತಾರೆಂದು ತೋರುತ್ತದೆ.

ಸ್ವಾಮಿಜಿ :— ಹಾಗಾಗದೇ ಮತ್ತೇನು? ಪರಮಹಂಸರು ಅವರನ್ನು ಎಷ್ಟು ವಿಶ್ವಾಸಿಸುತ್ತಿದ್ದರು! ನಿಮ್ಮ ಪೂರ್ವ ಬಂಗಾಳಾ ದೇಶದಲ್ಲಿ ಈ ಸಾರಿ ಈ ಒಬ್ಬ ಪರಮಹಂಸರ ಸಹವಾಸಿಯೂ ಅವತರಿಸಿದ್ದಾರೆ. ಅವರ ಬೆಳಕಿನಿಂದ ಪೂರ್ವಬಂಗಾಳಾದೇಶದಲ್ಲಿ ಬೆಳಕು ಬಂದಿದೆ.

---

## ಅಧ್ಯಾಯ ೧೬

**ಸ್ಥಳ :— ಬೇಲೂರು ಮಠ (ಬಾಡಿಗೆ ಕಟ್ಟಡ) ವರ್ಷ : ಕ್ರಿ. ಶ. ೧೮೯೮; ನವೆಂಬರ್**

ಸ್ವಾಮಿಜಿ ಕಾಶ್ಮೀರದಿಂದ ಹಿಂತಿರುಗಿ ಬಂದು ಇಂದಿಗೆ ಎರಡು ಮೂರು ದಿನಗಳಾಗಿದ್ದವು. ದೇಹದಲ್ಲಿ ಸ್ವಲ್ಪ ಸ್ವಸ್ಥವಿಲ್ಲ. ಶಿಷ್ಯನು ಮಠಕ್ಕೆ ಬಂದ ಕೂಡಲೆ ಬ್ರಹ್ಮಾನಂದ ಸ್ವಾಮಿಗಳು "ಕಾಶ್ಮೀರದಿಂದ ಹಿಂತಿರುಗಿ

ಬಂದಾರಭ್ಯ ಸ್ವಾಮಿಜಿ ಯಾರೊಡನೆಯೂ ಯಾವ ಮಾತು ಕಥೆಯನ್ನೂ ಆಡಿಲ್ಲ; ಸ್ತಬ್ಧರಾಗಿ ಕುಳಿತುಬಿಟ್ಟಿದ್ದಾರೆ. ನೀನು ಸ್ವಾಮಿಜಿ ಹತ್ತಿರ ಮಾತುಕಥೆಗಳನ್ನು ಆಡಿ ಅವರ ಮನಸ್ಸನ್ನು ಕೆಳಕ್ಕೆ ಇಳಿಸಲು ಪ್ರಯತ್ನ ಮಾಡಿ ನೋಡು" ಎಂದರು.

ಶಿಷ್ಯನು ಮೇಲೆ ಸ್ವಾಮಿಜಿ ಕೊಠಡಿಗೆ ಹೋಗಿ ನೋಡಿದನು.– ಸ್ವಾಮಿಜಿ ಮುಕ್ತ ಪದ್ಮಾಸನದಲ್ಲಿ ಪೂರ್ವ ಮುಖವಾಗಿ ಗಭೀರ ಧ್ಯಾನ ಮಗ್ನರಾಗಿದ್ದಂತೆ ಕುಳಿತುಕೊಂಡಿದ್ದರು. ಮುಖದಲ್ಲಿ ನಗುವಿಲ್ಲ, ಪ್ರದೀಪ್ತ ನಯನಗಳಲ್ಲಿ ಬಹಿರ್ಮುಖ ದೃಷ್ಟಿಯಿಲ್ಲ– ಒಳಗೆ ಏನನ್ನೋ ನೋಡುತ್ತಿದ್ದಂತೆ ತೋರುತ್ತಿತ್ತು. ಶಿಷ್ಯನನ್ನು ನೋಡಿದ ಕೂಡಲೆ "ಬಾರಯ್ಯ, ಕುಳಿತುಕೊ" ಎಂದರು– ಅಷ್ಟೆ. ಸ್ವಾಮಿಗಳ ಎಡಗಣ್ಣಿನ ಒಳಭಾಗ ಕೆಂಪೇರಿದ್ದದ್ದನ್ನು ನೋಡಿ ಶಿಷ್ಯನು "ತಮ್ಮ ಕಣ್ಣಿನ ಒಳಭಾಗವೇಕೆ ಕೆಂಪೇರಿದೆ" ಎಂದು ಕೇಳಿದನು. ಸ್ವಾಮಿಜಿ "ಅದೇನೂ ಆಗಿಲ್ಲ" ಎಂದು ಹೇಳಿ ಪುನಃ ಸ್ಥಿರವಾಗಿ ಕುಳಿತುಕೊಂಡರು. ಬಹಳ ಹೊತ್ತು ಕುಳಿತುಕೊಂಡರೂ ಸ್ವಾಮಿಜಿ ಯಾವ ಮಾತನ್ನೂ ಆಡಲಿಲ್ಲ. ಆಗ ಶಿಷ್ಯನು ಕಳವಳಗೊಂಡು ಸ್ವಾಮಿಜಿ ಪಾದಪದ್ಮವನ್ನು ಮುಟ್ಟಿ "ಅಮರನಾಥದಲ್ಲಿ ಏನೇನು ನೋಡಿದರೊ ಅದನ್ನು ನನಗೆ ಹೇಳುವುದಿಲ್ಲವೆ?" ಎಂದನು. ಪಾದಸ್ಪರ್ಶದಿಂದ ಸ್ವಾಮಿಜಿ ಸ್ವಲ್ಪ ಚಮಕಿತರಾದರು– ಸ್ವಲ್ಪ ಬಹಿರ್ದೃಷ್ಟಿಯಾದಂತೆ ತೋರಿತು; "ಅಮರನಾಥ ದರ್ಶನದಾರಭ್ಯ ನನ್ನ ಮನಸ್ಸಿನಲ್ಲಿ ಇಪ್ಪತ್ತುನಾಲ್ಕು ಘಂಟೆಯು ಹೊತ್ತೂ ಶಿವನು ತುಂಬಿಕೊಂಡಿರುವಂತಿದೆ; ಏನುಮಾಡಿದರೂ ಇಳಿದು ಬರುವಂತಿಲ್ಲ" ಎಂದರು. ಶಿಷ್ಯನು ಕೇಳಿ ಬೆರಗಾದನು.

ಸ್ವಾಮಿಜಿ:— ಅಮರನಾಥದಲ್ಲಿಯೂ ಆಮೇಲೆ ಕ್ಷೀರಭವಾನೀ ಮಂದಿರದಲ್ಲಿಯೂ ತುಂಬ ತಪಸ್ಸುಮಾಡಿದೆ.– ಹೋಗಿ ತಂಬಾಕನ್ನು ಸಿದ್ಧ ಮಾಡಿಕೊಂಡು ಬಾ.

ಶಿಷ್ಯನು ಪ್ರಫುಲ್ಲವಾದ ಮನಸ್ಸಿನಿಂದ ಸ್ವಾಮಿಜಿ ಆಜ್ಞೆಯನ್ನು ಶಿರಸಾ ವಹಿಸಿ ತಂಬಾಕನ್ನು ಸಿದ್ಧಪಡಿಸಿ ಕೊಟ್ಟನು. ಸ್ವಾಮಿಜಿ ಮೆಲ್ಲ ಮೆಲ್ಲಗೆ ಧೂಮಪಾನ ಮಾಡುತ್ತ ಹೇಳತೊಡಗಿದರು:– "ಅಮರನಾಥಕ್ಕೆ ಹೋಗುವಾಗ ಪರ್ವತದ ಒಂದು ಕಡಿದಾದ ತಿಟ್ಟನ್ನು ಹತ್ತಿ ಹೋದೆ; ಆ ಮಾರ್ಗದಲ್ಲಿ ಯಾತ್ರಿಕರು ಯಾರೂ ಹೋಗುವುದಿಲ್ಲ; ಬೆಟ್ಟದ ಜನರು

ಮಾತ್ರ ಅಲ್ಲಿ ಹೋಗಿ ಬಂದು ಮಾಡುತ್ತಾರೆ. ನನಗೇನೋ ಈ ದಾರಿಯಲ್ಲಿಯೇ ಹೋಗಬೇಕೆಂಬ ಹಟ ಹುಟ್ಟಿತು. ಹಾಗೆಯೆ ಹೊರಟು ಹೋದೆ. ಆ ಪ್ರಯತ್ನದಿಂದ ಶರೀರ ಸ್ವಲ್ಪ ಆಯಾಸಗೊಂಡಿದೆ. ಅಲ್ಲಿ ಎಷ್ಟು ಕೊರತವೆಂದರೆ, ಮೈಯಲ್ಲಿ ಸೂಜಿ ಚುಚ್ಚಿದಂತಾಗುತ್ತದೆ.''

ಶಿಷ್ಯ:— ಬೆತ್ತಲೆಯಾಗಿ ಹೋಗಿ ಅಮರನಾಥನನ್ನು ದರ್ಶನಮಾಡಬೇಕೆಂದು ಕೇಳಿದ್ದೇನೆ; ಆ ಸಂಗತಿ ನಿಜವೇ?

ಸ್ವಾಮಿಜಿ:— ಹೌದು; ನಾನೂ ಕೌಪೀನವನ್ನು ಮಾತ್ರ ಹಾಕಿಕೊಂಡು ಬೂದಿ ಬಳಿದುಕೊಂಡು ಗುಹೆಯೊಳಕ್ಕೆ ಹೋದೆನು. ಆಗ ಚಳಿ ಸೆಕೆ ಯಾವುದೂ ತೋರಲಿಲ್ಲ. ಆದರೆ ಮಂದಿರದ ಹೊರಕ್ಕೆ ಬರಲು ಚಳಿಯಿಂದ ಜಡನಾಗಿ ಹೋದೆ.

ಶಿಷ್ಯ:— ಪಾರಿವಾಳದ ಹಕ್ಕಿಗಳನ್ನು ನೋಡಿದಿರೇನು? ಅಲ್ಲಿ ಚಳಿಯಿಂದ ಯಾವ ಜೀವಜಂತುಗಳೂ ವಾಸಮಾಡುವಂತೆ ಕಾಣಬರುವುದಿಲ್ಲವೆಂದೂ, ಕೇವಲ ಬಿಳಿಯ ಪಾರಿವಾಳ ಪಕ್ಷಿಗಳ ಒಂದು ಹಿಂಡು ಎಲ್ಲಿಂದಲೋ ಆಗಾಗ್ಗೆ ಬರುತ್ತಿರುತ್ತದೆಯೆಂದೂ ಕೇಳಿದ್ದೇನೆ.

ಸ್ವಾಮಿಜಿ:— ಹೌದು; ಮೂರುನಾಲ್ಕು ಬಿಳಿಯ ಪಾರಿವಾಳಗಳನ್ನು ನೋಡಿದೆ; ಅವು ಗುಹೆಯಲ್ಲಿರುವವೊ ಇಲ್ಲದಿದ್ದರೆ ಹತ್ತಿರದಲ್ಲಿರುವ ಪರ್ವತದಲ್ಲಿರುವವೊ ಅದನ್ನು ತಿಳಿದುಕೊಳ್ಳಲಾಗಲಿಲ್ಲ.

ಶಿಷ್ಯ:— ಮಹಾಶಯರೆ, ಗುಹೆಯಿಂದ ಹೊರಕ್ಕೆ ಬಂದು ಬಿಳಿಯ ಪಾರಿವಾಳದ ಹಕ್ಕಿಗಳನ್ನು ನೋಡಿದರೆ ನಿಜವಾಗಿಯೂ ಶಿವದರ್ಶನವಾಯಿತೆಂದು ಅರ್ಥ—ಎಂದು ಜನರು ಹೇಳುವುದನ್ನು ಕೇಳಿದ್ದೇನೆ.

ಸ್ವಾಮಿಜಿ:— ಪಾರಿವಾಳಗಳನ್ನು ನೋಡಿದರೆ ಯಾವ ಉದ್ದೇಶವನ್ನಿಟ್ಟುಕೊಂಡು ಹೋಗಿರುತ್ತಾನೆಯೊ ಅದು ಈಡೇರುತ್ತದೆಯೆಂದು ಕೇಳಿದ್ದೇನೆ.

ಅನಂತರದಲ್ಲಿ ಸ್ವಾಮಿಜಿ—ಬರುವಾಗ ಅವರು ಯಾತ್ರಿಕರೆಲ್ಲಾ ಬರುವ ರಸ್ತೆಯಿಂದಲೇ ಶ್ರೀನಗರಕ್ಕೆ ಬಂದರು. ಶ್ರೀನಗರಕ್ಕೆ ಹಿಂತಿರುಗಿ ಬಂದ ಸ್ವಲ್ಪ ದಿನಕ್ಕೇ ಕ್ಷೀರಭವಾನಿಯ ದರ್ಶನ ಮಾಡುವುದಕ್ಕೆ ಹೋದರು ಮತ್ತು ಏಳು ದಿನ ಅಲ್ಲಿದ್ದುಕೊಂಡು ದೇವಿಯನ್ನು ಉದ್ದೇಶಿಸಿ ಹಾಲಿನಿಂದ ಪೂಜೆ ಮತ್ತು ಹೋಮ ಮಾಡಿದರು. ಪ್ರತಿನಿತ್ಯವೂ ಒಂದು ಮಣ ಹಾಲನ್ನು ನೈವೇದ್ಯ ಮಾಡುತ್ತಲೂ ಇದ್ದರು. ಒಂದು

ದಿನ ಪೂಜೆ ಮಾಡುತ್ತ ಮಾಡುತ್ತ, ಸ್ವಾಮಿಜಿ ಮನಸ್ಸಿಗೆ ಬಂದ ದ್ದೇನೆಂದರೆ, "ಭವಾನೀ ಮಾತೆ ನಿಜವಾಗಿಯೂ ಇಲ್ಲಿ ಎಷ್ಟು ಕಾಲದಿಂದ ಇದ್ದಾಳೆ! ಹಿಂದೆ ಯವನರು ಬಂದು ಅವಳ ಮಂದಿರವನ್ನು ಧ್ವಂಸಮಾಡಿ ಹೋದರು; ಆದರೂ ಆಗಿನವರು ಏನನ್ನೂ ಮಾಡಲಿಲ್ಲ. ಆಹಾ! ನಾನು ಆಗ ಇದ್ದಿದ್ದರೆ ಅದನ್ನೆಲ್ಲಾ ಸುಮ್ಮನೆ ನೋಡಿಕೊಂಡಿರುತ್ತಿದ್ದೆನೆ?"– ಹೀಗೆಂದು ಭಾವಿಸಿಕೊಳ್ಳುತ್ತ ಅವರ ಮನಸ್ಸಿಗೆ ದುಃಖದಿಂದಲೂ ಕ್ಷೋಭ ದಿಂದಲೂ ತುಂಬ ನೋವಾಗಲು, ಮಾತೆಯು ಹೀಗೆಂದು ಹೇಳಿದ್ದು ಸ್ಪಷ್ಟ ವಾಗಿ ಕೇಳಿಸಿತು.– "ನನ್ನ ಇಚ್ಛಾನುಸಾರವಾಗಿಯೇ ಯವನರು ನಾಶ ಮಾಡಿದರು; ನಾನು ಪಾಳುದೇವಾಲಯದಲ್ಲಿ ವಾಸಮಾಡಬೇಕೆಂಬುದು ನನ್ನ ಇಷ್ಟ. ಮನಸ್ಸು ಬಂದರೆ ಈಗ ಇಲ್ಲಿ ಏಳು ಅಂತಸ್ತಿನ ಬಂಗಾರದ ಮಂದಿರವನ್ನು ಎಬ್ಬಿಸಲಾರೆನೇನು? ನೀನು ಏನು ಮಾಡಬಲ್ಲೆ? ನಿನ್ನನ್ನು ನಾನು ರಕ್ಷಿಸುವೆನೊ ಅಥವಾ ನನ್ನನ್ನು ನೀನು ರಕ್ಷಿಸುವೆಯೊ?" ಸ್ವಾಮಿಜಿ "ಈ ದೇವವಾಣಿಯನ್ನು ಕೇಳಿದಾರಭ್ಯ ನಾನು ಯಾವ ಸಂಕಲ್ಪವನ್ನೂ ಮಾಡಿಕೊಂಡಿಲ್ಲ. ಮಠಗಿಠಗಳನ್ನು ಮಾಡುವ ಸಂಕಲ್ಪವ ನ್ನೆಲ್ಲಾ ತ್ಯಜಿಸಿ ಬಿಟ್ಟಿದ್ದೇನೆ; ಮಾತೆಗೆ ಏನು ಇಷ್ಟವೋ ಅದೇ ಆಗಲಿ" ಎಂದರು. ಶಿಷ್ಯನು ಬೆರಗಾಗಿ, ಅವರೇ ಒಂದುದಿನ "ನೀನು ನೋಡು ವುದು ಕೇಳುವುದು ಎಲ್ಲಾ ನಿನ್ನೊಳಗೆ ಇರುವ ಆತ್ಮನ ಪ್ರತಿಧ್ವನಿ ಮಾತ್ರ; ಹೊರಗೆ ಏನೂ ಇಲ್ಲ" ಎಂದು ಹೇಳಲಿಲ್ಲವೆ ಎಂದು ಯೋಚಿಸಿಕೊಂಡು, "ಮಹಾಶಯರೆ, ತಾವೇ ಹೇಳಿದ್ದೀರಲ್ಲಾ ಈ ದೇವವಾಣಿಗಳೆಲ್ಲಾ ನಮ್ಮ ಅಂತರಭಾವದ ಬಾಹ್ಯ ಪ್ರತಿಧ್ವನಿ ಮಾತ್ರ ಎಂಬುದಾಗಿ" ಎಂದು ಸ್ಪಷ್ಟ ವಾಗಿ ಕೇಳಿಬಿಟ್ಟನು.

ಸ್ವಾಮಿಜಿ ಗಂಭೀರವಾಗಿ ಹೇಳಿದ್ದೇನೆಂದರೆ:— "ಅದು ಒಳಗಿನದೆ ಆಗಲಿ ಹೊರಗಿನದೆ ಆಗಲಿ, ನೀನು ನನ್ನ ಹಾಗೆ ನಿನ್ನ ಕಿವಿಗಳಿಂದಲೆ ಇಂಥ ಅಶರೀರವಾಣಿಯನ್ನು ಕೇಳಿದ್ದರೆ, ಅದು ಸುಳ್ಳೆಂದು ಹೇಳುತ್ತಿದ್ದೆ ಯೇನು? ದೈವವಾಣಿಯು ನಿಜವಾಗಿಯೂ ಕೇಳಬರುತ್ತದೆ; ನಾವು ಮಾತು ಕಥೆಗಳನ್ನಾಡುತ್ತಿದ್ದೇವಲ್ಲಾ ಹಾಗೆಯೆ ಕೇಳಬರುತ್ತದೆ"

ಶಿಷ್ಯನು ಎರಡನೆಯ ಮಾತನಾಡದೆ ಸ್ವಾಮಿಗಳ ಮಾತನ್ನು ಶಿರಸಾ ವಹಿಸಿಕೊಂಡನು; ಏಕೆಂದರೆ, ಸ್ವಾಮಿಗಳ ಮಾತಿನಲ್ಲಿ ಇಂಥ ಒಂದು ಅದ್ಭುತ ಶಕ್ತಿಯಿತ್ತು ಏನೆಂದರೆ, ಅದಕ್ಕೆ ಒಪ್ಪದೆ ಇರುವುದಕ್ಕೆ ಆಗುತ್ತಿರ

ಲಿಲ್ಲ–ಯುಕ್ತಿ ತರ್ಕಗಳಲ್ಲಿಯೊ ಕೊಚ್ಚಿ ಹೋಗಿ ಬಿಡುತ್ತಿದ್ದವು.

ಶಿಷ್ಯನು ಈಗ ಪ್ರೇತಾತ್ಮಗಳ ಪ್ರಸ್ತಾಪವನ್ನೆತ್ತಿ "ಮಹಾಶಯರೆ, ಭೂತಪ್ರೇತಗಳ ವಿಚಾರವನ್ನು ಕೇಳಿದ್ದೇವೆಯಲ್ಲಾ – ಶಾಸ್ತ್ರದಲ್ಲಿಯೂ ಮೇಲಿಂದ ಮೇಲೆ ಅದರ ಸಮರ್ಥನೆ ಕಂಡು ಬರುತ್ತದೆಯಲ್ಲಾ – ಅದೆಲ್ಲಾ ನಿಜವಾಗಿಯೂ ಇರುವುದೆ?" ಎಂದನು.

ಸ್ವಾಮಿಜಿ:— ನಿಜವಲ್ಲದೆ ಮತ್ತೇನು? ನೀನು ಯಾವುದನ್ನು ನೋಡಿಲ್ಲವೋ ಅದು ನಿಜವಲ್ಲವೇನು? ನಿನ್ನ ದೃಷ್ಟಿಯಿಂದಾಚೆಗೆ ಎಷ್ಟು ಲಕ್ಷಾಂತರ ಬ್ರಹ್ಮಾಂಡಗಳು ಎಷ್ಟು ದೂರದಲ್ಲಿ ತಿರುಗುತ್ತಿವೆ! ನೀನು ನೋಡಲಾರದ್ದರಿಂದ ಅವುಗಳೇ ಇಲ್ಲವೇನು? ಆದರೆ ಈ ಭೂತಗಳ ವಿಚಾರಕ್ಕೆ ಮನಸ್ಸು ಕೊಡಬೇಡ–ಭೂತಪ್ರೇತಗಳೇನೊ ಇವೆಯೆಂದು ಇಟ್ಟುಕೊ. ನಿನ್ನ ಕೆಲಸವೇನೆಂದರೆ, ಈ ಶರೀರ ಮಧ್ಯದಲ್ಲಿರುವ ಆತ್ಮವನ್ನು ಪ್ರತ್ಯಕ್ಷ ಮಾಡಿಕೊಳ್ಳುವುದು. ಅದನ್ನು ಪ್ರತ್ಯಕ್ಷ ಮಾಡಿಕೊಳ್ಳ ಬಲ್ಲೆಯಾದರೆ ಭೂತಪ್ರೇತಗಳು ನಿನ್ನ ದಾಸಾನುದಾಸರಾಗಿಬಿಡುವುವು.

ಶಿಷ್ಯ:— ಆದರೆ, ಮಹಾಶಯರೆ, ಅವುಗಳನ್ನು ನೋಡಿದರೆ ಪುನರ್ಜನ್ಮಾದಿಗಳಲ್ಲಿ ತುಂಬ ನಂಬಿಕೆಯುಂಟಾಗಿ ಪರಲೋಕದಲ್ಲಿ ಅಪನಂಬಿಕೆ ತಪ್ಪಿ ಹೋಗುವುದೆಂದು ತೋರುತ್ತದೆ.

ಸ್ವಾಮಿಜಿ:— ನೀವೋ ಮಹಾಶೂರರು; ನಿಮ್ಮಂಥವರು ಭೂತಪ್ರೇತಗಳನ್ನು ನೋಡಿ ಪರಲೋಕದಲ್ಲಿ ದೃಢವಾದ ನಂಬಿಕೆಯನ್ನಿಟ್ಟುಕೊಳ್ಳಬೇಕೇನು? ಇಷ್ಟು ಶಾಸ್ತ್ರ ವಿಜ್ಞಾನಗಳನ್ನು ಓದಿದ್ದೀರಿ–ಈ ವಿರಾಟ್ ವಿಶ್ವದ ಎಷ್ಟೋ ಗೂಢ ತತ್ತ್ವಗಳನ್ನು ತಿಳಿದುಕೊಂಡಿದ್ದೀರಿ–ಇದರ ಮೇಲೆಯೂ ಆತ್ಮಜ್ಞಾನವನ್ನು ಪಡೆಯುವುದಕ್ಕಾಗಿ ಭೂತಪ್ರೇತಗಳನ್ನು ನೋಡಬೇಕೆ? ಛಿ ಛಿ!

ಶಿಷ್ಯ:— ಒಳ್ಳೆಯದು, ಮಹಾಶಯರೆ, ತಾವು ಭೂತ ಪ್ರೇತಗಳನ್ನು ಯಾವಾಗಲಾದರೂ ಕಣ್ಣಾರ ನೋಡಿದ್ದೀರಾ?

ಸ್ವಾಮಿಜಿ ಹೇಳಿದ್ದೇನೆಂದರೆ,–ಅವರ ಬಂಧುವರ್ಗಕ್ಕೆ ಸೇರಿದ ಯಾರೋ ಒಬ್ಬರು ಪಿಶಾಚಿಯಾಗಿ ಅವರಿಗೆ ಆಗಾಗ್ಗೆ ಕಾಣಿಸಿಕೊಳ್ಳುತ್ತಿದ್ದರು. ಅದು ಆಗಾಗ್ಗೆ ದೂರ ಪ್ರದೇಶದಿಂದ ವರ್ತಮಾನಗಳನ್ನೂ ತರುತ್ತಿತ್ತು. ಆದರೆ ಪರೀಕ್ಷೆಮಾಡಿ ನೋಡಿದಾಗ ಅದರ ಮಾತು ಎಲ್ಲಾ ಸಮಯದಲ್ಲಿಯೂ ನಿಜವಾಗುತ್ತಿರಲಿಲ್ಲ. ಆಮೇಲೆ ಯಾವುದೋ ಒಂದು

ತೀರ್ಥಕ್ಷೇತ್ರಕ್ಕೆ ಹೋಗಿ "ಅದು ಮುಕ್ತಿ ಪಡೆಯಲಿ" ಎಂದು ಪ್ರಾರ್ಥನೆ ಮಾಡಿದಾರಾಭ್ಯ ಪುನಃ ಅದು ಕಂಡುಬಂದಿಲ್ಲ.

ಶಿಷ್ಯನು ಈಗ, ಶ್ರಾದ್ಧಾದಿಗಳಿಂದ ಪ್ರೇತಾತ್ಮಕ್ಕೆ ತೃಪ್ತಿಯಾಗುತ್ತದೆಯೆ ಇಲ್ಲವೇ ಎಂದು ಕೇಳಲು, ಸ್ವಾಮಿಜಿ "ಅದು ಸ್ವಲ್ಪವೂ ಅಸಂಭವವಲ್ಲ" ಎಂದರು. ಶಿಷ್ಯನು ಈ ವಿಷಯದಲ್ಲಿ ಯುಕ್ತಿ ಪ್ರಮಾಣಗಳನ್ನು ಅಪೇಕ್ಷಿಸಲು, ಸ್ವಾಮಿಜಿ "ನಿನಗೆ ಒಂದುದಿನ ಈ ವಿಷಯುವನ್ನು ಚೆನ್ನಾಗಿ ತಿಳಿಸಿಕೊಡುತ್ತೇನೆ. ಶ್ರಾದ್ಧಾದಿಗಳಿಂದ ಪ್ರೇತಾತ್ಮಗಳಿಗೆ ತೃಪ್ತಿಯಾಗುವುದೆಂಬುದಕ್ಕೆ ಬೇಕಾದಷ್ಟು ಯುಕ್ತಿಗಳಿವೆ. ಇಂದು ನನಗೆ ದೇಹಸ್ಥಿತಿ ಸರಿಯಾಗಿಲ್ಲ, ಇನ್ನೊಂದು ದಿನ ಅದನ್ನು ತಿಳಿಸಿಕೊಡುತ್ತೇನೆ" ಎಂದು ಹೇಳಿದರು. ಆದರೆ ಸ್ವಾಮಿಗಳಿಗೆ ಈ ಪ್ರಶ್ನೆ ಹಾಕುವುದಕ್ಕೆ ಶಿಷ್ಯನು ಈ ಜನ್ಮದಲ್ಲಿ ಪುನಃ ಅವಕಾಶವನ್ನು ಪಡೆಯಲಿಲ್ಲ.

---

## ಅಧ್ಯಾಯ ೧೭

**ಸ್ಥಳ:—** ಬೇಲೂರು ಮಠ (ಬಾಡಿಗೆ ಕಟ್ಟಡ.) ವರ್ಷ: ಕ್ರಿ. ಶ. ೧೮೯೮; ನವೆಂಬರ್.

ಬೇಲೂರಿನ ನೀಲಾಂಬರ ಬಾಬುವಿನ ತೋಟದಲ್ಲಿಯೆ ಈಗಲೂ ಮಠ ಇದೆ. ಮಾರ್ಗಶೀರ್ಷಮಾಸದ ಕೊನೆಭಾಗ; ಸ್ವಾಮಿಜಿ ಈಗ ಸಂಸ್ಕೃತ ಶಾಸ್ತ್ರಾದಿ ವ್ಯಾಸಂಗದಲ್ಲಿ ವಿಶೇಷ ತತ್ಪರರಾಗಿದ್ದಾರೆ. "ಆಚಂಡಾಲಾ ಪ್ರತಿಹತ ರಯೋ*" ಮುಂತಾದ ಎರಡು ಶ್ಲೋಕಗಳನ್ನು ಅವರು ಈ ಕಾಲದಲ್ಲಿಯೇ ರಚಿಸಿದರು. ಇಂದು ಸ್ವಾಮಿಜಿ "ಓಂ ಹ್ರೀಂ ಋತಂ†" ಮುಂತಾದ ಸ್ತೋತ್ರವನ್ನು ರಚಿಸಿ ಶಿಷ್ಯನ ಕೈಯಲ್ಲಿ ಕೊಟ್ಟು

---

* "ವೀರವಾಣೀ" ಗ್ರಂಥವನ್ನು ನೋಡಿ.

† ಈ ಘಟನೆಯಾದ ನಾಲ್ಕು ಐದು ದಿನಗಳಾದ ಮೇಲೆ ಸ್ವಾಮಿಗಳು ಒಂದು ದಿನ ಶಿಷ್ಯನನ್ನು "ಆ ಸ್ತೋತ್ರದಲ್ಲಿ ಏನಾದರೂ ತಿದ್ದಬೇಕಾಗಿತ್ತೇ?" ಎಂದು ಕೇಳಿದರು. ಅದಕ್ಕೆ ಉತ್ತರವಾಗಿ ತಾನು ಅದನ್ನು ಇನ್ನೂ ಚೆನ್ನಾಗಿ ಓದಿನೋಡಿರಲಿಲ್ಲವೆಂದು ಶಿಷ್ಯನು ಹೇಳಿದನು. ಆಮೇಲೆ ಈ ಸ್ತೋತ್ರದ

"ನೋಡು ಇದರಲ್ಲಿ ಛಂದೋಭಂಗ ಮುಂತಾದ ದೋಷಗಳೇನಾದರೂ ಇವೆಯೊ ಏನೊ" ಎಂದು ಹೇಳಿದರು. ಶಿಷ್ಯನು ತೆಗೆದುಕೊಂಡು ಅದರ ಒಂದು ಪ್ರತಿಯನ್ನು ಮಾಡಿಟ್ಟುಕೊಂಡನು.

ಸ್ವಾಮಿಜಿ ಈ ಸ್ತೋತ್ರವನ್ನು ರಚಿಸಿದ ದಿವಸ ಅವರ ನಾಲಗೆಯಲ್ಲಿ ಸರಸ್ವತಿಯೆ ಆರೂಢಳಾಗಿದ್ದಂತಿತ್ತು. ಶಿಷ್ಯನೊಡನೆ ನಿರರ್ಗಳವಾಗಿ ಸುಲಲಿತವಾದ ಸಂಸ್ಕೃತ ಭಾಷೆಯಲ್ಲಿ ಸುಮಾರು ಎರಡು ಗಂಟೆಯ ಹೊತ್ತು ಮಾತನಾಡಿದರು! ಇಷ್ಟು ಸುಲಲಿತವಾದ ವಾಕ್ಯವಿನ್ಯಾಸವನ್ನು ಶಿಷ್ಯನು ಮಹಾ ಮಹಾ ಪಂಡಿತರ ಬಾಯಲ್ಲಿಯೂ ಯಾವಾಗಲೂ ಕೇಳಿಲ್ಲ.

ಅದು ಹೇಗಾದರೂ ಇರಲಿ, ಶಿಷ್ಯನು ಸ್ತೋತ್ರವನ್ನು ನಕಲು ಮಾಡಿ ಕೊಂಡ ಮೇಲೆ ಸ್ವಾಮಿಜಿ "ನೋಡು, ಭಾವದಲ್ಲಿ ತನ್ಮಯನಾಗಿ ಬರೆ ಯುತ್ತ ಇರುವಾಗ ಆಗಾಗ್ಗೆ ವ್ಯಾಕರಣ ದೋಷಗಳು ಆಗುವುದುಂಟು. ಅದಕ್ಕೋಸ್ಕರವೇ ನೋಡಿ ಕೇಳಿ ಮಾಡಬೇಕೆಂದು ನಿನಗೆ ಹೇಳುವುದು" ಎಂದರು.

ಶಿಷ್ಯ :— ಮಹಾಶಯರೆ, ಅವೆಲ್ಲಾ ದೋಷಗಳಲ್ಲ–ಅವು ಆರ್ಷ ಪ್ರಯೋಗ.

ಸ್ವಾಮಿಜಿ :—ನೀನೇನೊ ಹೇಳುತ್ತೀಯೆ; ಆದರೆ ಇತರರು ಯಾತಕ್ಕೆ ಹಾಗೆ ತಿಳಿದುಕೊಂಡಾರು? ಆ ದಿನ "ಹಿಂದೂ ಧರ್ಮವೆಂದರೇನು?" ಎಂದು ಒಂದು ಪ್ರಬಂಧವನ್ನು ಬಂಗಾಳಿಯಲ್ಲಿ ಬರೆದೆ—ಅದನ್ನು ನಿಮ್ಮಲ್ಲಿಯೆ ಕೆಲವರು ನೋಡಿ ಕಠಿನವಾದ ಬಂಗಾಳಿ ಎಂದಿರಿ. ಸಕಲ ಪದಾರ್ಥಗಳ ಹಾಗೆ ಭಾಷೆ ಮತ್ತು ಭಾವಗಳೂ ಕಾಲಕ್ರಮದಲ್ಲಿ ನೂತನತ್ವವಿಲ್ಲದೆ ಹೋಗುವುವೆಂದು ನನ್ನ ಅಭಿಪ್ರಾಯ. ದೇಶದಲ್ಲಿ ಹಾಗೆ ಆಗಿದೆ ಎಂದು ನನಗೆ ತೋರುತ್ತದೆ. ಭಾಷೆ ಮತ್ತು ಭಾವಗಳಲ್ಲಿ ಪರಮಹಂಸರ ಆಗಮನದಿಂದ ಹೊಸತಾಗಿ ಪ್ರವಾಹ ಉಕ್ಕಿಬಂದಂತಾಗಿದೆ. ಈಗ ಎಲ್ಲಾ ಹೊಸ ಅಚ್ಚಿನಲ್ಲಿ ತಯಾರಾಗಬೇಕಾಗಿದೆ. ನೂತನ ಪ್ರತಿಭೆಯ

---

ಮೂಲಪ್ರತಿಯನ್ನು ಮಠದಲ್ಲಿ ಬಹುವಾಗಿ ಹುಡುಕಿದರೂ ಸಿಕ್ಕದೆ ಇದ್ದದ್ದರಿಂದ "ಓಂ ಹ್ರೀಂ ಋತಂ" ಸ್ತೋತ್ರವು ಹೋಗಿಬಿಡುವಂತಿತ್ತು. ಶಿಷ್ಯನ ಹತ್ತಿರ ವಿದ್ದ ಪ್ರತಿಯು, ಸ್ವಾಮಿಗಳ ಸ್ವರೂಪ ಸಂವರಣವಾದ ಸುಮಾರು ನಾಲ್ಕು ವರ್ಷ ಗಳ ಮೇಲೆ, ಶಿಷ್ಯನ ಹಳೆಯ ಕಾಗದಗಳನ್ನು ಹುಡುಕುತ್ತಿರುವಾಗ ಸಿಕ್ಕಿತು. ಆವಾಗಲೇ ಅದು "ಉದ್ಬೋಧನ" ದಲ್ಲಿ ಮೊದಲು ಮುದ್ರಿತವಾಯಿತು.

ಮುದ್ರೆಯನ್ನು ಹಾಕಿ ಎಲ್ಲಾ ವಿಷಯಗಳತ್ತೂ ಪ್ರಚಾರ ಮಾಡಬೇಕಾಗಿದೆ. ಇದನ್ನೇ ನೋಡು—ಹಿಂದಿನ ಕಾಲದ ಸನ್ಯಾಸಿಗಳ ಕಾರ್ಯಕರಣಗಳೆಲ್ಲಾ ಹೇಗೆ ಬದಲಾಯಿಸಿ ಈಗ ಹೊಸ ಮಾದರಿಯಾಗಿಬಿಟ್ಟವೆ. ಸಮಾಜ ಇದಕ್ಕೆ ವಿರುದ್ಧವಾಗಿ ಬೇಕಾದಷ್ಟು ಪ್ರತಿವಾದಿಸಿಯೂ ಇದೆ. ಆದರೆ ಅದರಿಂದ ಆಗುವುದೇನು?—ಏನೂ ಆಗುವುದಿಲ್ಲ; ನಾವೇನು ಅದಕ್ಕೆ ಹೆದರುತ್ತೇವೆಯೆ? ಈಗ ಈ ಸನ್ಯಾಸಿಗಳೆಲ್ಲಾ ದೂರದಲ್ಲಿರುವ ದೇಶಾಂತರ ಗಳಿಗೆ ಪ್ರಚಾರ ಕಾರ್ಯಕ್ಕೋಸ್ಕರ ಹೋಗಬೇಕಾಗಿದೆ—ಬೂದಿ ಬಳಿದು ಕೊಂಡು ಅರ್ಧ ವೈಯನ್ನು ಬಿಟ್ಟುಕೊಂಡು ಹಿಂದಿನ ಸನ್ಯಾಸಿಗಳ ವೇಷ ಭೂಷಣಗಳಿಂದ ಹೋದರೆ ಮೊದಲು ಜಹಜಿನಲ್ಲಿಯೆ ಕೂರಿಸಿಕೊಳ್ಳುವುದಿಲ್ಲ; ಈ ವೇಷದಿಂದ ಹೇಗೊ ಆ ದೇಶಕ್ಕೆ ತಲಪಿದರೂ ಅಂಥವನು ಬಂದೀ ಖಾನೆಯಲ್ಲಿರಬೇಕಾಗುವುದು. ದೇಶ ನಾಗರಿಕತೆಗೂ ಕಾಲಕ್ಕೂ ಅನು ಸಾರವಾಗಿ ಎಲ್ಲಾ ವಿಷಯಗಳಲ್ಲಿಯೂ ಅಲ್ಪ ಸ್ವಲ್ಪ ಬದಲಾವಣೆ ಮಾಡಿ ಕೊಳ್ಳಬೇಕು. ಇನ್ನು ಮೇಲೆ ಬಂಗಾಳಿ ಭಾಷೆಯಲ್ಲಿ ಪ್ರಬಂಧಗಳನ್ನು ಬರೆಯೋಣವೆಂದು ಮನಸ್ಸಿನಲ್ಲಿ ಮಾಡಿಕೊಂಡಿದ್ದೇನೆ. ಸಾಹಿತ್ಯ ಲೇಖ ಕರು ಪ್ರಾಯಶಃ ಅವುಗಳನ್ನು ನೋಡಿ ಆಕ್ಷೇಪಣೆ ಮಾಡಬಹುದು. ಮಾಡಿಕೊಂಡು ಹೋಗಲಿ—ಆದರೆ ನಾನು ಬಂಗಾಳಿ ಭಾಷೆಯನ್ನು ಹೊಸ ಅಚ್ಚಿನಲ್ಲಿ ಹಾಕಿ ತೆಗೆದು ಇಡಲು ಯತ್ನಮಾಡುತ್ತೇನೆ. ಈಗಿನ ಬಂಗಾಳಿ ಲೇಖಕರು ಬರೆಯುವುದಕ್ಕೆ ಹೊರಟರೆ ತುಂಬ ಕ್ರಿಯಾಪದ ಉಪಯೋಗ ಮಾಡುತ್ತಾರೆ. ಇದರಿಂದ ಭಾಷೆಗೆ ಬಿಗಿ ಬರುವುದಿಲ್ಲ. ವಿಶೇಷಣಗಳಿಂದ ಭಾವಗಳನ್ನು ವ್ಯಕ್ತಪಡಿಸುವುದಾದರೆ ಭಾಷೆಗೆ ತುಂಬ ಬಿಗಿ ಬರುತ್ತದೆ— ಇನ್ನು ಮೇಲೆ ಹೀಗೆ ಬರೆಯುವುದಕ್ಕೆ ಪ್ರಯತ್ನಮಾಡು ನೋಡೋಣ. 'ಉದ್ಬೋಧನ' ದಲ್ಲಿ ಇಂಥ ಭಾಷೆಯಿಂದ ಪ್ರಬಂಧಗಳನ್ನು ಬರೆಯು ವುದಕ್ಕೆ ಪ್ರಯತ್ನಮಾಡಿ; ಭಾಷೆಯಲ್ಲಿ ಕ್ರಿಯಾಪದಗಳ ಉಪಯೋಗದ ಅರ್ಥವನ್ನು ನೀನು ಬಲ್ಲೆಯಾ? ಇದರಿಂದ ಭಾವಕ್ಕೆ ವಿರಾಮ ಬರು ವುದು. ಆದ್ದರಿಂದ ಭಾಷೆಯಲ್ಲಿ ಕ್ರಿಯಾಪದಗಳನ್ನು ಹೆಚ್ಚಾಗಿ ಉಪ ಯೋಗಿಸುವುದು ದೊಡ್ಡ ದೊಡ್ಡ ನಿಟ್ಟುಸುರುಗಳನ್ನು ಬಿಡುವಹಾಗೆ ದುರ್ಬಲತೆಯ ಚಿಹ್ನೆ ಮಾತ್ರ. ಹೀಗೆ ಮಾಡಿದರೆ ಭಾಷೆಗೆ ಉಸಿರೇ ಇಲ್ಲ ವೆನ್ನಿಸುತ್ತದೆ. ಅದಕ್ಕೋಸ್ಕರವೆ ಬಂಗಾಳಿ ಭಾಷೆಯಲ್ಲಿ ಚೆನ್ನಾಗಿ ಉಪ ನ್ಯಾಸ ಕೊಡುವುದಕ್ಕಾಗುವುದಿಲ್ಲ. ಭಾಷೆಯ ಮೇಲೆ ಯಾರಿಗೆ ಸಾಮರ್ಥ್ಯ

ಇರುವುದೊ ಅವರು ಅಷ್ಟು ಬೇಗಬೇಗ ಭಾವಗಳನ್ನು ನಿಲ್ಲಿಸಿಬಿಡುವುದಿಲ್ಲ. ಅನ್ನ ಸಾರನ್ನು ತಿಂದು ನಿಮ್ಮ ಶರೀರ ಹೇಗೆ ಬಿಗಿಯಿಲ್ಲದೆ ಹೋಗಿದೆಯೊ, ಅದರ ಹಾಗೆಯೆ ಭಾಷೆಯೂ ಆಗಿಬಿಟ್ಟಿದೆ; ಆಹಾರ ನಡೆ ನುಡಿ ಭಾವ ಭಾಷೆ ಇವುಗಳಲ್ಲಿ ತೇಜಸ್ವಿತೆಯನ್ನು ತರಬೇಕು; ಎಲ್ಲಾ ಕಡೆಯಲ್ಲಿಯೂ ಪ್ರಾಣ ವಿಸ್ತೃತವಾಗಬೇಕು–ಎಲ್ಲಾ ರಕ್ತನಾಳಗಳಲ್ಲಿಯೂ ರಕ್ತಪ್ರವಾಹ ಹೋಗುವಂತೆ ಮಾಡಿ ಅದರಿಂದ ಎಲ್ಲಾ ವಿಷಯಗಳಲ್ಲಿಯೂ ಒಂದು ವಿಧವಾದ ಪ್ರಾಣಸಂಚಲನೆ ಅನುಭವಕ್ಕೆ ಬರುವಂತೆ ಮಾಡಬೇಕು. ಹಾಗಾದರೇನೆ, ಈ ಘೋರ ಜೀವನ ಸಂಗ್ರಾಮದಲ್ಲಿ ನಮ್ಮ ದೇಶದ ಜನರು ಬದುಕಿ ಬರಬಲ್ಲರು. ಇಲ್ಲದಿದ್ದರೆ, ಸ್ವಲ್ಪದರಲ್ಲಿಯೆ, ಬಹು ಜಾಗ್ರತೆಯಾಗಿಯೆ ಈ ದೇಶ ಮತ್ತು ಜನಾಂಗಗಳು ಮೃತ್ಯುಚ್ಛಾಯೆಯಲ್ಲಿ ಸೇರಿ ಹೋಗುವುವು.

ಶಿಷ್ಯ:—ಮಹಾಶಯರೆ, ಬಹುಕಾಲದಿಂದ ಈ ದೇಶದ ಜನರ ಸ್ವಭಾವವೆ ಒಂದು ವಿಧವಾಗಿಬಿಟ್ಟಿದೆ; ಅದನ್ನು ಬೇಗ ಬದಲಾಯಿಸುವುದು ಸಾಧ್ಯವೆ?

ಸ್ವಾಮಿಜಿ:—ಹಿಂದಿನ ಕ್ರಮವು ಸರಿಯಾಗಿಲ್ಲವೆಂದು ನೀನು ತಿಳಿದುಕೊಂಡಿದ್ದರೆ ನಾನು ಹೇಳುವಂತೆ, ಹೊಸ ರೀತಿಯಲ್ಲಿ ಪ್ರವರ್ತಿಸುವುದನ್ನು ಕಲಿತುಕೊಳ್ಳುವುದಿಲ್ಲವೇಕೆ? ನಿನ್ನನ್ನು ನೋಡಿ ನಿನ್ನಂತೆ ಮಾಡುವರು ಇನ್ನು ಹತ್ತುಜನ, ಅವರನ್ನು ನೋಡಿ ಅಭ್ಯಾಸಮಾಡುವರು ಮತ್ತೆ ಐವತ್ತು ಜನರು–ಹೀಗೆ ಕಾಲಕ್ರಮದಲ್ಲಿ ಜನರಲ್ಲೆಲ್ಲಾ ಈ ನೂತನ ಭಾವವು ಜಾಗರಿತವಾಗುತ್ತದೆ. ಇದರ ಮೇಲೆ ತಿಳಿದು ತಿಳಿದೂ ನೀನು ಹಾಗೆ ನಡೆಕೊಳ್ಳದಿದ್ದರೆ, ನೀವೆಲ್ಲಾ ಕೇವಲ ಮಾತಿನಲ್ಲಿ ಪಂಡಿತರು ಕೆಲಸದ ವೇಳೆಯಲ್ಲಿ ಮೂರ್ಖರು ಎಂದು ತಿಳಿಯುತ್ತೇನೆ.

ಶಿಷ್ಯ:—ತಮ್ಮ ಮಾತನ್ನು ಕೇಳಿದರೆ ಮಹಾ ಸಾಹಸ ಉತ್ಪನ್ನವಾಗುತ್ತದೆ–ಉತ್ಸಾಹ ಬಲ ಮತ್ತು ತೇಜಸ್ಸು ಇವುಗಳಿಂದ ಹೃದಯ ತುಂಬಿ ಹೋಗುತ್ತದೆ.

ಸ್ವಾಮಿಜಿ:—ಹೃದಯದಲ್ಲಿ ಕ್ರಮಕ್ರಮವಾಗಿ ಬಲವನ್ನು ತಂದುಕೊಳ್ಳಬೇಕು. ಒಬ್ಬ "ಮನುಷ್ಯ" ತಯಾರಾದರೆ ಲಕ್ಷ ಉಪನ್ಯಾಸಗಳ ಫಲವಾಗುವುದು. ಮನಸ್ಸನ್ನೂ ವಾಕ್ಕನ್ನೂ ಒಂದುಮಾಡಿ ಭಾವಗಳನ್ನು ಜೀವನದಲ್ಲಿ ಫಲಿಸುವಂತೆ ಮಾಡಬೇಕು. ಇದರ ಹೆಸರೆ "ಭಾವದ ಮನೆ

ಯಲ್ಲಿ ಕಳ್ಳತನ ವಿಲ್ಲದಿರುವಿಕೆ" ಯೆಂದು ಪರಮಹಂಸರು ಹೇಳುತ್ತಿದ್ದದ್ದು. ಎಲ್ಲಾ ಕಡೆಗಳಲ್ಲಿಯೂ ಕರ್ಮ ಮೂಲಕವಾಗಿ ಅಭಿಪ್ರಾಯ ಅಥವಾ ಭಾವ ಗಳನ್ನು ಪ್ರಕಾಶಗೊಳಿಸುವಂತೆ ಆಗಬೇಕು. ಬರಿಯ ಸಿದ್ಧಾಂತಗಳಿಂದ ದೇಶ ಹಾಳಾಗಿ ಹೋಗಿದೆ. ಯಾರು ಪರಮಹಂಸರ ನಿಜವಾದ ಸಂತಾ ನರೊ ಅವರು ಧರ್ಮ ಅನುಷ್ಠಾನ ರಂಗದಲ್ಲಿ ಕಾರ್ಯಾಕಾರಿ ಯಾಗುವುದನ್ನು ತೋರಿಸಬೇಕು; ಜನಗಳ ಅಥವಾ ಸಮಾಜದ ಮಾತಿಗೆ ಲಕ್ಷ್ಯಕೊಡದೆ ಕಾರ್ಯಮಾಡಿಕೊಂಡು ಹೋಗಬೇಕು. ತುಳಸೀದಾಸರ ದೋಹೆಯಲ್ಲಿರು ವುದನ್ನು ಕೇಳಿಲ್ಲವೇ—

ಹಾತೀ ಚಲೇ ಬಾಜಾರಮೇ ಕುತ್ತೇ ಭುಕೇ ಹಾಜಾರ್,
ಸಾಧುರ್ಕೊ ದುರ್ಭಾವ ನೇಹಿ ಜವ್ ನಿಂದೇ ಸಂಸಾರ್ ॥

ಆನೆಯು ರಸ್ತೆಯಲ್ಲಿ ಹೋಗುತ್ತಿದ್ದರೆ ಸಾವಿರ ನಾಯಿಗಳು ಬೊಗಳುತ್ತವೆ; (ಅದರಂತೆ) ಪ್ರಪಂಚವು ನಿಂದಿಸಿದರೆ ಸಾಧುವಿಗೆ ಯಾವ ಲೋಪವೂ ಇಲ್ಲ.

ಈ ಭಾವದಲ್ಲಿ ನಡೆದುಕೊಳ್ಳಬೇಕು; ಜನರನ್ನು ಹುಳುಗಳೆಂದು ಭಾವಿಸಬೇಕು. ಅವರ ಒಳ್ಳೆಯ ಮತ್ತು ಕೆಟ್ಟ ಮಾತುಗಳಿಗೆ ಕಿವಿ ಗೊಟ್ಟರೆ ಜೀವನದಲ್ಲಿ ಯಾವ ಮಹತ್ಕಾರ್ಯವನ್ನೂ ಮಾಡುವುದ ಕ್ಕಾಗುವುದಿಲ್ಲ. "ನಾಯಮಾತ್ಮಾ ಬಲಹೀನೇನ ಲಭ್ಯಃ" ಶರೀರ ದಲ್ಲಿಯೂ ಮನಸ್ಸಿನಲ್ಲಿಯೂ ಬಲವಿಲ್ಲದಿದ್ದರೆ ಆತ್ಮವನ್ನು ಪಡೆಯುವುದ ಕ್ಕಾಗುವುದಿಲ್ಲ. ಪುಷ್ಟಿಕರವಾದ ಒಳ್ಳೆಯ ಆಹಾರದಿಂದ ಮೊದಲು ಶರೀರ ವನ್ನು ಬೆಳೆಸಬೇಕು. ಹಾಗಾದರೆ ಮನಸ್ಸು ಬದಲಾಗುತ್ತದೆ. ಮನಸ್ಸು ಶರೀರದ ಸೂಕ್ಷ್ಮಾಂಶ. ಮನಸ್ಸಿನಲ್ಲಿಯೂ ಬಾಯಲ್ಲಿಯೂ ತುಂಬ ಬಲವನ್ನು ತೋರ್ಪಡಿಸಬೇಕು. "ನಾನು ಹೀನ" "ನಾನು ಹೀನ" ಎನ್ನುತ್ತ ಎನ್ನುತ್ತ ಮನುಷ್ಯನು ಹೀನನಾಗಿ ಹೋಗುತ್ತಾನೆ—ಶಾಸ್ತ್ರ ಕಾರರು ಅದನ್ನೇ ಹೇಳಿದ್ದಾರೆ—

ಮುಕ್ತಾಭಿಮಾನಿ ಮುಕ್ತೋ ಹಿ ಬದ್ಧೋ ಬದ್ಧಾಭಿಮಾನ್ಯಪಿ ।
ಕಿಂವದಂತೀತಿ ಸತ್ಯೋಯಂ ಯಾ ಮತಿಃ ಸಾ ಗತಿರ್ಭವೇತ್ ॥

ಯಾರು ಅಭಿಮಾನವನ್ನು ಬಿಟ್ಟು ಸರ್ವದಾ ಜಾಗರೂಕನಾಗಿರುತ್ತಾನೆಯೊ ಅವನು ಮುಕ್ತನಾಗಿಯೆ ಬಿಡುತ್ತಾನೆ; ಯಾರು ತಾನು ಬದ್ಧನೆಂದು ಭಾವಿಸಿಕೊಳ್ಳುತ್ತಾನೆಯೊ ಅವನಿಗೆ ಜನ್ಮ ಜನ್ಮದಲ್ಲಿಯೂ ಬದ್ಧ ದೆಶೆಯೆ; ತಿಳಿದುಕೊ. ಐಹಿಕ ಪಾರಮಾರ್ಥಿಕ ಇವೆರಡು ವಿಚಾರಗಳಲ್ಲಿಯೂ

ಈ ಮಾತು ನಿಜವೆಂದು ತಿಳಿ. ಇಹ ಜೀವನದಲ್ಲಿ ಯಾರು ಸರ್ವದಾ ಹತಾಶರೊ ಅವರಿಂದ ಯಾವ ಕೆಲಸವೂ ಸಾಗುವುದಿಲ್ಲ; ಅವರು ಜನ್ಮ ಜನ್ಮದಲ್ಲಿಯೂ ಗೋಳಾಡುತ್ತ ಬರುತ್ತಾರೆ ಹೋಗುತ್ತಾರೆ. "ವೀರಭೋಗ್ಯಾ ವಸುಂದರಾ"—ವೀರನೇ ವಸುಂಧರೆಯನ್ನು ಅನುಭವಿಸುವವನು; ಈ ಮಾತು ಖಂಡಿತವಾಗಿಯೂ ಸತ್ಯ. ವೀರನಾಗು – ಸರ್ವದಾ "ಅಭೀಃ" "ಅಭೀಃ" ಎಂದು ಹೇಳು. ಎಲ್ಲರಿಗೂ "ಮಾಭೈಃ" "ಮಾಭೈಃ" ಎಂದು ಹೇಳು – ಭಯವೇ ಮೃತ್ಯು – ಭಯವೇ ಪಾಪ – ಭಯವೇ ನರಕ – ಭಯವೇ ಅಧರ್ಮ – ಭಯವೇ ವ್ಯಭಿಚಾರ. ಜಗತ್ತಿನಲ್ಲಿ ಎಷ್ಟು ಅಸತ್ ಅಥವಾ ಮಿಥ್ಯಾ ಭಾವಗಳು ಇವೆ, ಅವೆಲ್ಲಾ ಈ ಭಯರೂಪ ಸೈತಾನನಿಂದ. ಈ ಭಯವೆ ಸೂರ್ಯನ ಸೂರ್ಯತ್ವ–ಭಯವೆ ವಾಯುವಿನ ವಾಯುತ್ವ–ಭಯವೇ ಯಮನ ಯಮತ್ವ. ಇವುಗಳನ್ನು ಅವುಗಳ ಸ್ಥಾನದಲ್ಲಿ ಇಟ್ಟದೆ – ತಮ್ಮ ತಮ್ಮ ಎಲ್ಲೆಯಿಂದ ಯಾರನ್ನು ಹೋಗಗೊಡಿಸುವುದಿಲ್ಲ. ಅದನ್ನೇ ಶ್ರುತಿಯು ಹೇಳುವುದು :—

"ಭಯಾದಸ್ಯಾಗ್ನಿ ಸ್ತಪತಿ ಭಯಾತ್ ತಪತಿ ಸೂರ್ಯಃ ।
ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥"

ಎಂದು ಇಂದ್ರ ಚಂದ್ರ ವಾಯು ವರುಣರು ಭಯರಹಿತರಾಗುವರೊ ಅಂದೇ ಎಲ್ಲಾ ಬ್ರಹ್ಮದಲ್ಲಿ ಸೋರಿಹೋಗುವುದು—ಸೃಷ್ಟಿರೂಪ ಅಧ್ಯಾಸಕ್ಕೆ ಲಯವಾಗಿಹೋಗುವುದು. ಅದಕ್ಕೋಸ್ಕರವೆ ಹೇಳುವುದು—"ಅಭೀಃ" "ಅಭೀಃ."

ಹೀಗೆಂದು ಹೇಳುತ್ತ ಹೇಳುತ್ತ ಸ್ವಾಮಿಗಳ ಆ ನೀಲೋತ್ಪಲ ಸದೃಶವಾದ ನಯನ ಪ್ರಾಂತವು ಕೆಂಪೇರಿದಂತಾಯಿತು. "ಅಭೀಃ" ಎಂಬುದೇ ಮೂರ್ತಿಮತ್ತಾಗಿ ಸ್ವಾಮಿಗಳ ರೂಪದಲ್ಲಿ ಶಿಷ್ಯನ ಎದುರಿಗೆ ದೇಹವನ್ನು ಧರಿಸಿ ನಿಂತುಕೊಂಡಿದ್ದಂತಿತ್ತು! ಶಿಷ್ಯನು ಆ ನಿರ್ಭಯ ಮೂರ್ತಿಯನ್ನು ದರ್ಶನಮಾಡಿ ಮನಸ್ಸಿನಲ್ಲಿಯೆ "ಈ ಮಹಾಪುರುಷರ ಹತ್ತಿರ ಇದ್ದರೆ ಮಾತು ಕೇಳಿದರೆ ಮೃತ್ಯು ಭಯವೂ ಎಲ್ಲಿಗೋ ಪಲಾಯನ ಮಾಡುವ ಹಾಗಿದೆ" ಎಂದುಕೊಂಡನು.

ಸ್ವಾಮಿಜಿ ಮತ್ತೂ ಹೇಳತೊಡಗಿದರು:—ಈ ದೇಹವನ್ನು ಧಾರಣ ಮಾಡಿ ಎಷ್ಟು ಸುಖದುಃಖಗಳ–ಎಷ್ಟು ಸಂಪತ್ತು ವಿಪತ್ತುಗಳ ತರಂಗಗಳಲ್ಲಿ ಸಿಕ್ಕಿಕೊಂಡಿರುವಿ! ಆದರೆ ತಿಳಿದುಕೊ – ಅವೆಲ್ಲಾ ಕ್ಷಣಮಾತ್ರವಿರ

ತಕ್ಕವು. ಇವುಗಳನ್ನೆಲ್ಲಾ ಗಮನಿಸತಕ್ಕ ಅಂಶಗಳಲ್ಲಿ ತರಬೇಡ. "ನಾನು ಅಜರಾಮರ ಚಿನ್ಮಯ ಆತ್ಮಾ"– ಎಂಬೀ ಭಾವವನ್ನು ಹೃದಯದಲ್ಲಿ ದೃಢವಾಗಿ ಇಟ್ಟುಕೊಂಡು ಜೀವನವನ್ನು ಕಳೆಯಬೇಕು. "ನನಗೆ ಜನ್ಮವಿಲ್ಲ, ಮೃತ್ಯುವಿಲ್ಲ, ನಿರ್ಲೇಪನಾದ ಆತ್ಮಾ" ಎಂಬೀ ಭಾವದಲ್ಲಿ ಪೂರ್ತಿಯಾಗಿ ತನ್ಮಯನಾಗಿಬಿಡು. ಒಟ್ಟಿಗೆ ತನ್ಮಯನಾಗಿ ಬಿಡಬಲ್ಲೆಯಾದರೆ, ದುಃಖ ಕಷ್ಟಗಳ ಕಾಲದಲ್ಲಿ ಈ ಭಾವ ತನ್ನಷ್ಟಕ್ಕೆ ತಾನೇ ಮನಸ್ಸಿನಲ್ಲಿ ಹುಟ್ಟುತ್ತದೆ–'ಪ್ರಯತ್ನ ಪೂರ್ವಕವಾಗಿ ಭಾವವನ್ನು ಹುಟ್ಟಿಸಬೇಕಾದುದಿಲ್ಲ.' ಆ ದಿವಸ ವೈದ್ಯನಾಥ ಕ್ಷೇತ್ರದಲ್ಲಿ ಪ್ರಿಯನಾಥ ಮುಖ್ಯನ ಮನೆಗೆ ಹೋಗಿದ್ದೆ. ಅಲ್ಲಿ ಉಬ್ಬಸ ಬಂದು ಪ್ರಾಣ ಹೋಗಿಬಿಡುತ್ತದೆಯೋ ಎನ್ನುವ ಹಾಗಾಯಿತು. ಆದರೆ ಒಳಗಿನಿಂದ ಮಾತ್ರ ಪ್ರತಿಶ್ವಾಸದಲ್ಲಿಯೂ ಗಂಭೀರ ಧ್ವನಿ ಬರುವುದಕ್ಕೆ ಮೊದಲಾಯಿತು.–"ಸೋಽಹಂ ಸೋಽಹಂ" ಎಂದು ದಿಂಬು ಒರಗಿಕೊಂಡು ಪ್ರಾಣ ಹೋಗುವುದನ್ನೆ ನಿರೀಕ್ಷಿಸುತ್ತಿದ್ದೆ; ಆಗಲೂ ನೋಡಿದೆನೇನೆಂದರೆ, ಒಳಗಿನಿಂದ ಕೇವಲ "ಸೋಽಹಂ ಸೋಽಹಂ" ಎಂಬ ಸದ್ದೇ ಬರುತ್ತಿತ್ತು.— ಹಾಗೇ ಸುಮ್ಮನೆ ಕೇಳುತ್ತ ಹೋದೆ— "ಏಕಮೇವಾದ್ವಯಂ ಬ್ರಹ್ಮ ನೇಹಾ ನಾನಾಸ್ತಿ ಕಿಂಚನ"

ಶಿಷ್ಯನು ಸ್ತಂಭಿತನಾಗಿ, "ಮಹಾಶಯರೆ ತಮ್ಮ ಜೊತೆಯಲ್ಲಿ ಮಾತನಾಡಿ ತಮ್ಮ ಅನುಭವಗಳನ್ನು ಕೇಳಿದಮೇಲೆ ಶಾಸ್ತ್ರ ಓದುವ ಅವಶ್ಯಕತೆಯಿರುವುದಿಲ್ಲ" ಎಂದನು.

ಸ್ವಾಮಿಜಿ:—ಹಾಗಲ್ಲವಯ್ಯಾ! ಶಾಸ್ತ್ರವನ್ನೂ ಓದಬೇಕು. ಜ್ಞಾನ ಸಂಪಾದನೆಗೆ ಶಾಸ್ತ್ರವನ್ನು ಓದುವುದು ಅತ್ಯಂತ ಆವಶ್ಯಕ. ನಾನು ಮಠದಲ್ಲಿ ಜಾಗ್ರತೆಯಾಗಿಯೆ ಪಾಠ ಹೇಳುವ ತರಗತಿಯನ್ನು ಆರಂಭಿಸುತ್ತೇನೆ. ವೇದ, ಉಪನಿಷತ್ತು, ಗೀತಾ, ಭಾಗವತ ಇವುಗಳನ್ನೆಲ್ಲಾ ಓದಬೇಕು. ಅಷ್ಟಾಧ್ಯಾಯಿಯನ್ನು ಓದಬೇಕು.

ಶಿಷ್ಯ:—ತಾವು ಪಾಣಿನಿಯ ಅಷ್ಟಾಧ್ಯಾಯಿಯನ್ನು ಓದಿದ್ದೀರಾ?

ಸ್ವಾಮಿಜಿ:—ಜಯಪುರದಲ್ಲಿದ್ದಾಗ, ಒಬ್ಬ ದೊಡ್ಡ ವೈಯಾಕರಣರ ಗುರುತಾಯಿತು. ಅವರ ಹತ್ತಿರ ವ್ಯಾಕರಣವನ್ನು ಓದಬೇಕೆಂಬ ಆಶೆಯಾಯಿತು. ವ್ಯಾಕರಣದಲ್ಲಿ ಮಹಾಪಂಡಿತನಾಗಿದ್ದರೂ ಪಾಠ ಹೇಳುವುದರಲ್ಲಿ ಆತನಿಗೆ ಅಷ್ಟು ಸಾಮರ್ಥ್ಯವಿರಲಿಲ್ಲ. ನನಗೆ ಮೊದಲನೆಯ ಸೂತ್ರದ ಭಾಷ್ಯವನ್ನು ಮೂರುದಿನ ಪರ್ಯಂತ ಹೇಳಿದರು, ಆದರೂ ನಾನು

ಅದನ್ನು ಸ್ವಲ್ಪವೂ ತಿಳಿದುಕೊಳ್ಳಲಾರದೆ ಹೋದೆನು. ನಾಲ್ಕನೆಯ ದಿವಸ ಉಪಾಧ್ಯಾಯನು ಬೇಸರ ಪಟ್ಟುಕೊಂಡು, "ಸ್ವಾಮಿಗಳೆ! ಮೂರುದಿನ ವಾದರೂ ತಮಗೆ ಪ್ರಥಮ ಸೂತ್ರದ ಅರ್ಥವನ್ನು ತಿಳಿಸಲಾರದೆ ಹೋದೆ. ನನ್ನ ಹತ್ತಿರ ಓದುವುದರಿಂದ ತಮಗೆ ಏನೂ ಪ್ರಯೋಜನವಾಗುವುದಿಲ್ಲ ವೆಂದು ತೋರುತ್ತದೆ" ಎಂದನು. ಈ ಮಾತನ್ನು ಕೇಳಿ ಮನಸ್ಸಿಗೆ ತುಂಬ ನೋವಾಯಿತು. ಆಹಾರ ನಿದ್ರೆಗಳನ್ನು ತ್ಯಜಿಸಿ, ಮೊದಲನೆಯ ಸೂತ್ರದ ಭಾಷ್ಯವನ್ನು ನನ್ನಷ್ಟಕ್ಕೆ ನಾನೇ ಓದುವುದಕ್ಕೆ ಮೊದಲುಮಾಡಿದೆ. ಮೂರು ಗಂಟೆಯ ಒಳಗೆ ಈ ಸೂತ್ರಭಾಷ್ಯದ ಅರ್ಥವು ಕರತಲಾಮಲಕದ ಹಾಗೆ ತಿಳಿದುಹೋಯಿತು; ಆಮೇಲೆ ಉಪಾಧ್ಯಾಯರ ಹತ್ತಿರ ಹೋಗಿ ಸಮಸ್ತ ವ್ಯಾಖ್ಯಾನದ ತಾತ್ಪರ್ಯವನ್ನೂ ಮಾತಾಡಿದಂತೆ ಹೇಳಿ ತಿಳಿಸಿ ಬಿಟ್ಟೆ. ಉಪಾಧ್ಯಾಯರು ಕೇಳಿ, 'ನಾನು ಮೂರುದಿನವಾದರೂ ತಿಳಿಸ ಲಾರದೆ ಇದ್ದದ್ದಕ್ಕೆ ತಾವು ಮೂರು ಘಂಟೆಯಲ್ಲಿ ಇಷ್ಟು ಚಮತ್ಕಾರವಾದ ವ್ಯಾಖ್ಯಾನವನ್ನು ಹೇಗೆ ತಿಳಿದುಕೊಂಡಿರಿ?' ಎಂದರು. ಆಮೇಲೆ ಪ್ರತಿ ನಿತ್ಯವೂ ಪ್ರವಾಹದ ಜಲದಂತೆ ಅಧ್ಯಾಯದ ಮೇಲೆ ಅಧ್ಯಾಯವನ್ನು ಓದುತ್ತ ಹೋದೆ. ಮನಸ್ಸಿಗೆ ಏಕಾಗ್ರತೆಯಿದ್ದರೆ ಎಲ್ಲವೂ ಸಾಧಿತವಾಗು ತ್ತದೆ–ಸುಮೇರುವನ್ನು ಬೇಕಾದರೂ ಪುಡಿ ಮಾಡಬಹುದು.

ಶಿಷ್ಯ:—ಮಹಾಶಯರೆ, ತಮ್ಮದೆಲ್ಲಾ ಅದ್ಭುತವೆ!

ಸ್ವಾಮಿಜಿ:—ಅದ್ಭುತವೆಂಬ ವಿಶೇಷವೇನೂ ಇಲ್ಲ. ಅಜ್ಞತೆಯೆ ಅಂಧಕಾರ. ಅದು ಎಲ್ಲವನ್ನೂ ಆವರಿಸಿಕೊಂಡಿರುವುದರಿಂದ ಎಲ್ಲಾ ಅದ್ಭುತ ವಾಗಿ ಕಾಣುತ್ತದೆ. ಜ್ಞಾನಾಲೋಕದಿಂದ ಎಲ್ಲಾ ಸ್ಪಷ್ಟವಾದರೆ, ಆಗ ಯಾವುದರಲ್ಲಿಯೂ ಅದ್ಭುತತ್ವವಿರುವುದಿಲ್ಲ. ಇಂಥ ಅಘಟನ–ಘಟನ–ಪಟೀಯಸಿಯಾದ ಮಾಯೆ ಅದೂ ಲುಪ್ತವಾಗಿಬಿಡುತ್ತದೆ. ಯಾವುದನ್ನು ತಿಳಿದುಕೊಂಡರೆ ಎಲ್ಲವೂ ತಿಳಿಯುತ್ತದೆಯೊ ಅದನ್ನು ತಿಳಿದುಕೊ–ಅದರ ವಿಚಾರವನ್ನು ಯೋಚಿಸು—ಆ ಆತ್ಮ ಪ್ರತ್ಯಕ್ಷವಾದರೆ ಶಾಸ್ತ್ರಾರ್ಥ ಕರತಲಾಮಲಕದ ಹಾಗೆ ಪ್ರತ್ಯಕ್ಷವಾಗುತ್ತದೆ. ಪುರಾತನ ಋಷಿಗಳಿಗೆ ಆಯಿತು, ನಮಗೆ ಆಗುವುದಿಲ್ಲವೆ? ನಾವು ಮನುಷ್ಯರೆ. ಒಂದು ಸಲ ಒಬ್ಬರ ಜೀವನದಲ್ಲಿ ಯಾವುದು ಆಗಿದೆಯೊ, ಪ್ರಯತ್ನಪಟ್ಟರೆ, ಅದು ಪುನಃ ಮತ್ತೊಬ್ಬರ ಜೀವನದಲ್ಲಿಯೂ ಅವಶ್ಯವಾಗಿ ಆಗಿಯೆ ಆಗುವುದು. ಯಾವುದು ಒಂದು ಸಲ ಆಗಿದೆಯೊ ಅದೇ ಪುನಃಪುನಃ ಆಗುತ್ತದೆ.

ಆ ಆತ್ಮ ಸರ್ವ ಪ್ರಾಣಿಗಳಿಗೂ ಸಮಾನವಾದದ್ದು. ಆದರೆ ಒಂದು ಪ್ರಾಣಿಗೂ ಮತ್ತೊಂದು ಪ್ರಾಣಿಗೂ ಅದರ ವಿಕಾಸದಲ್ಲಿ ತಾರತಮ್ಯ ವಿರುತ್ತದೆ, ಅಷ್ಟೆ. ಈ ಆತ್ಮನನ್ನು ವಿಕಾಸಗೊಳಿಸಿ ಕೊಳ್ಳುವ ಯತ್ನ ಮಾಡು ನೋಡುವೆ, ಆಗ ಬುದ್ಧಿ ವಿಷಯಗಳಲ್ಲಿಯೂ ಪ್ರವೇಶಿಸುತ್ತದೆ. ಆತ್ಮವನ್ನರಿಯದವನ ಬುದ್ಧಿ ಏಕದರ್ಶಿನೀ ಅಲ್ಪಸ್ವಲ್ಪವನ್ನು ತಿಳಿಯ ತಕ್ಕದು; ಆತ್ಮವನ್ನರಿತವನ ಬುದ್ಧಿಯು ಸರ್ವಗ್ರಾಸಿನೀ ಎಲ್ಲವನ್ನೂ ವ್ಯಾಪಿಸತಕ್ಕದ್ದು. ಅತ್ಮಪ್ರಕಾಶವಾದರೆ, ದರ್ಶನ ವಿಜ್ಞಾನ ಎಲ್ಲಾ ಅಧೀನ ವಾಗಿ ಬಿಡುವುದೆಂಬುದನ್ನು ನೋಡುವೆ. ಸಿಂಹ ಗರ್ಜನೆಯಂತೆ ಆತ್ಮದ ಮಹಿಮೆಯನ್ನು ಉದ್ಘೋಷಿಸು—ಜೀವಿಗಳಿಗೆ ಅಭಯವನ್ನು ಕೊಟ್ಟು ಹೀಗೆಂದು ಹೇಳು–"ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ"

---

## ಅಧ್ಯಾಯ ೧೮

**ಸ್ಥಳ:—ಬೇಲೂರು ಮಠ; (ಬಾಡಿಗೆ ಕಟ್ಟಡ) ವರ್ಷ:–ಕ್ರಿ. ಶ. ೧೮೯೮.**

ಶಿಷ್ಯನು ಈಗ ಎರಡು ದಿನಗಳಿಂದ ಬೇಲೂರು ನೀಲಾಂಬರ ಬಾಬು ಗಳ ಆರಾಮಗೃಹದಲ್ಲಿ ಸ್ವಾಮಿಜಿ ಹತ್ತಿರ ಇದ್ದಾನೆ. ಕಲ್ಕತ್ತೆಯಿಂದ ಅನೇಕ ಯುವಕರು ಈ ಸಮಯದಲ್ಲಿ ಸ್ವಾಮಿಜಿ ಹತ್ತಿರ ಹೋಗಿಬರುತ್ತಿದ್ದದ್ದರಿಂದ ಮಠದಲ್ಲಿ ಈಚೆಗೆ ನಿತ್ಯೋತ್ಸವವಿದ್ದಂತಿದೆ. ಎಷ್ಟೋ ಧರ್ಮ ಚರ್ಚೆ—ಸಾಧನ ಭಜನ ಪ್ರಯತ್ನ—ದೀನದುಃಖಿಗಳ ಕಷ್ಟನಿವಾರಣೆಯ ಉಪಾಯ ವಿಚಾರ ಇವೆಲ್ಲಾ ನಡೆಯುತ್ತಿವೆ. ಸನ್ಯಾಸಿಗಳಾದ ಗುರುಜನರೆಲ್ಲಾ ಮಹಾ ಉತ್ಸಾಹಿಗಳಾಗಿದ್ದಾರೆ—ಮಹಾದೇವನ ಗಣಗಳ ಹಾಗೆ ಸ್ವಾಮಿಜಿ ಆಜ್ಞೆಯನ್ನು ನಡೆಸುವುದಕ್ಕೆ ಉನ್ಮುಖರಾಗಿದ್ದಾರೆ. ಪ್ರೇಮಾನಂದ ಸ್ವಾಮಿಗಳು ದೇವರಪೂಜೆಯ ಭಾರವನ್ನು ವಹಿಸಿಕೊಂಡಿದ್ದಾರೆ. ಮಠದಲ್ಲಿ ಪೂಜಾ ಪ್ರಸಾದಗಳಿಗೆ ಬೇಕಾದಷ್ಟು ಏರ್ಪಾಡಾಗಿದೆ—ಬರುವ ಭಕ್ತಾದಿ ಗಳಿಗೋಸ್ಕರ ಪ್ರಸಾದ ಸರ್ವದಾ ಸಿದ್ಧವಾಗಿರುತ್ತದೆ.

ಇಂದು ರಾತ್ರಿ ಶಿಷ್ಯನು ತಮ್ಮ ಜೊತೆಯಲ್ಲಿಯೆ ಇರುವುದಕ್ಕೆ ಸ್ವಾಮಿಗಳು ಅನುಮತಿಯನ್ನು ಕೊಟ್ಟಿದ್ದಾರೆ. ಸ್ವಾಮಿಗಳ ಸೇವಾಧಿಕಾರ

ವನ್ನು ಪಡೆದು ಶಿಷ್ಯನ ಹೃದಯದಲ್ಲಿ ಇಂದು ಹಿಡಿಸಲಾರದಷ್ಟು ಆನಂದ. ಪ್ರಸಾದವನ್ನು ತೆಗೆದುಕೊಂಡ ಮೇಲೆ ಪಾದಸೇವೆಯನ್ನು ಮಾಡುತ್ತಿರಲು ಆ ಸಮಯದಲ್ಲಿ ಸ್ವಾಮಿಜಿ "ಇಂಥ ಸ್ಥಳವನ್ನು ಬಿಟ್ಟು ನೀನು ಕಲ್ಕತ್ತೆಗೆ ಹೋಗಬೇಕೆನ್ನುತ್ತೀಯಲ್ಲಾ !–ಇಲ್ಲಿ ಎಂಥ ಪವಿತ್ರಭಾವ–ಎಂಥ ಗಂಗೆಯ ಮೇಲಣ ಗಾಳಿ—ಎಂಥ ಸಾಧುಸಂತರ ಸಮಾಗಮ.—ಇಂಥ ಸ್ಥಳವನ್ನು ಮತ್ತೆ ಎಲ್ಲಿಯಾದರೂ ಹುಡುಕಿಕೊಂಡು ಬರಬಲ್ಲೆಯಾ?"

ಶಿಷ್ಯ:—ಮಹಾಶಯರೆ, ಬಹು ಜನ್ಮಗಳ ತಪಸ್ಸಿನಿಂದ ತಮ್ಮ ಸಂಗಲಾಭ ಪ್ರಾಪ್ತವಾಗಿದೆ. ಈಗ ಯಾತರಿಂದ ಮತ್ತೆ ಮಾಯಾ ಮೋಹಗಳ ಮಧ್ಯೆ ಬೀಳದಿರಬಹುದೊ ಅದನ್ನು ಕೃಪೆಯಿಟ್ಟು ನನಗೆ ಮಾಡಿ ಕೊಡಬೇಕು. ಈಗ ಪ್ರತ್ಯಕ್ಷಾನುಭವಕ್ಕೋಸ್ಕರ ಮನಸ್ಸು ಆಗಾಗ್ಯೆ ಬಹು ವ್ಯಾಕುಲಗೊಳ್ಳುತ್ತದೆ.

ಸ್ವಾಮಿಜಿ:—ನನಗೂ ಹೀಗೆ ಎಷ್ಟೋ ಆಗಿದೆ. ಕಾಶೀಪುರದ ತೋಟ ದಲ್ಲಿ ಒಂದು ದಿನ ತುಂಬ ವ್ಯಾಕುಲನಾಗಿ ಪರಮಹಂಸರಿಗೆ ನನ್ನ ಪ್ರಾರ್ಥನೆ ಯನ್ನು ತಿಳಿಸಿದೆ. ಆಮೇಲೆ ಸಾಯಂಕಾಲದ ಹೊತ್ತಿಗೆ ಧ್ಯಾನ ಮಾಡುತ್ತ ನನ್ನ ದೇಹವನ್ನೇ ತಿಳಿದುಕೊಳ್ಳಲಾರದೆ ಹೋದೆ. ದೇಹ ಇಲ್ಲವೇ ಇಲ್ಲ ವೆಂದು ತೋರಿತು. ಚಂದ್ರ, ಸೂರ್ಯ, ದೇಶ, ಕಾಲ, ಆಕಾಶ ಎಲ್ಲಾ ಒಂದೇ ರೂಪವಾಗಿ ಎಲ್ಲಿಯೋ ಸೇರಿಹೋಯಿತು; ದೇಹ ಬುದ್ಧಿ ಮುಂತಾ ದವು ಪ್ರಾಯಶಃ ಇರಲೇ ಇಲ್ಲವೆಂದು ಹೇಳಬಹುದು; ಪ್ರಾಯಶಃ ನಾನು ಲಯವಾಗಿ ಹೋಗಿಬಿಟ್ಟಿದ್ದೇನೆಂದು ತೋರುತ್ತದೆ, ಮತ್ತೇನು? ಸ್ವಲ್ಪ 'ಅಹಂ' ಇತ್ತು, ಅದರಿಂದಲೇ ಆ ಸಮಾಧಿಯಿಂದ ಹಿಂತಿರುಗಿದೆ. ಈ ವಿಧವಾದ ಸಮಾಧಿ ಕಾಲದಲ್ಲಿಯೆ 'ನಾನು' ಮತ್ತು 'ಬ್ರಹ್ಮ'ಗಳ ಭೇದ ಹೋಗಿ ಬಿಡುತ್ತದೆ–ಎಲ್ಲಾ ಒಂದಾಗಿಬಿಡುತ್ತದೆ–ಮಹಾಸಮುದ್ರದ ನೀರಿ ನಂತೆ–ನೀರು ಹೊರತು ಮತ್ತೇನೂ ಇಲ್ಲ–ಭಾವ ಭಾಷೆ ಎಲ್ಲಾ ಓಡಿಹೋಗಿ ಬಿಡುತ್ತವೆ. "ಅವಾಙ್ಮನಸಗೋಚರಂ" ಸಂಗತಿ ಈ ಸಮಯದಲ್ಲಿಯೇ ಸರಿಯಾಗಿ ಗೊತ್ತಾಗುವುದು. ಹಾಗಲ್ಲದೆ, 'ನಾನು ಬಹ್ಮ' ಎಂದು ಸಾಧಕ ಭಾವಿಸಿಕೊಳ್ಳುವಾಗ ಅಥವಾ ಹೇಳುವಾಗ 'ನಾನು' ಮತ್ತು 'ಬ್ರಹ್ಮ' ಈ ಎರಡು ಪದಾರ್ಥಗಳು ಬೇರೆ ಇರುತ್ತವೆ–ದ್ವೈತ ಭಾವವಿರು ತ್ತದೆ. ಆಮೇಲೆ ಈ ಸ್ಥಿತಿಯನ್ನು ಪಡೆಯುವುದಕ್ಕೆ ಮೇಲಿಂದ ಮೇಲೆ ಪ್ರಯತ್ನಪಟ್ಟರೂ ಪುನಃ ಪಡೆಯಲಾರದೆ ಹೋದೆ. ಪರಮಹಂಸರಿಗೆ

ತಿಳಿಸಲು ಅವರು, "ಹಗಲೂ ರಾತ್ರಿ ಈ ಸ್ಥಿತಿಯಲ್ಲಿ ಇದ್ದುಬಿಟ್ಟರೆ ಮಾತೆಯ ಕೆಲಸ ಆಗುವುದಿಲ್ಲ; ಆದ್ದರಿಂದ ಈಗ ಮತ್ತೆ ಆ ಸ್ಥಿತಿಯನ್ನು ಪಡೆಯಲಾರೆ; ಕಾರ್ಯಮಾಡುವುದೆಲ್ಲಾ ಮುಗಿದರೆ ಆಮೇಲೆ ಆ ಸ್ಥಿತಿ ಬರುತ್ತದೆ" ಎಂದು ಹೇಳಿದರು.

ಶಿಷ್ಯ :— ನಿಶ್ಶೇಷ ಸಮಾಧಿ ಅಥವಾ ನಿಜವಾದ ನಿರ್ವಿಕಲ್ಪ ಸಮಾಧಿಯಾದರೆ, ಆಗ ಯಾರೂ ಮತ್ತೆ ಅಹಂ ಜ್ಞಾನವನ್ನು ಆಶ್ರಯಿಸಿಕೊಂಡು ದ್ವೈತ ಪ್ರಪಂಚಕ್ಕೆ ಸಂಸಾರಕ್ಕೆ, ಹಿಂತಿರುಗಿ ಬರಲಾರರೆ ?

ಸ್ವಾಮಿಜಿ :— ಪರಮಹಂಸರು ಏನು ಹೇಳುತ್ತಿದ್ದರೆಂದರೆ, "ಅವತಾರಪುರುಷರು ಮಾತ್ರ ಜೀವಹಿತೇಚ್ಛೆಯಿಂದ ಈ ಸಮಾಧಿಯನ್ನು ಬಿಟ್ಟು ಕೆಳಗಿಳಿದು ಬರಬಲ್ಲರು. ಸಾಧಾರಣ ಜೀವರಿಗೆ ಅಲ್ಲಿಂದ ಬರುವುದಕ್ಕಾಗುವುದಿಲ್ಲ. ಅವರ ದೇಹ ಇಪ್ಪತ್ತೊಂದು ದಿನ ಮಾತ್ರ ಜೀವಿಸಿಕೊಂಡಿದ್ದು ಆಮೇಲೆ ತರಗೆಲೆಯ ಹಾಗೆ ಸಂಸಾರ ವೃಕ್ಷದಿಂದ ಉದುರಿಬಿದ್ದು ಹೋಗುತ್ತದೆ"

ಶಿಷ್ಯ :— ಮನಸ್ಸು ಲುಪ್ತವಾಗಿ ಸಮಾಧಿಯಾದಾಗ–ಮನಸ್ಸಿನ ಒಂದು ತರಂಗವೂ ಇಲ್ಲದಿರುವಾಗ–ವಿಕ್ಷೇಪದ, ಎಂದರೆ ಅಹಂಜ್ಞಾನದಿಂದ ಸಂಸಾರಕ್ಕೆ ಹಿಂತಿರುಗಿಬರುವ ಸಂಭವ ಎಲ್ಲಿಯದು? ಮನಸ್ಸೇ ಇಲ್ಲದಿರುವಾಗ ಏನುಕಾರಣದಿಂದ ಸಮಾಧಿ ಸ್ಥಿತಿಯನ್ನು ಬಿಟ್ಟು ದ್ವೈತ ಪ್ರಪಂಚಕ್ಕೆ ಇಳಿದುಬರುವರು ?

ಸ್ವಾಮಿಜಿ :— ವೇದಾಂತ ಶಾಸ್ತ್ರದ ಅಭಿಪ್ರಾಯವೇನೆಂದರೆ–ನಿಶ್ಶೇಷ ನಿರೋಧ ಸಮಾಧಿಯಿಂದು ಹಿಂದಿರುಗವಿಕೆಯಿಲ್ಲ; "ಅನಾವೃತ್ತಿಃ ಶಬ್ದಾತ್" ಹೇಗೋ ಹಾಗೆ. ಆದರೆ ಅವತಾರ ಪುರುಷರು ಜೀವಹಿತಕ್ಕೋಸ್ಕರವಾಗಿ ಅಲ್ಪಸ್ವಲ್ಪ ಸಾಮಾನ್ಯವಾಸನೆ ಆಶೆಯನ್ನು ಇಟ್ಟುಕೊಳ್ಳುತ್ತಾರೆ. ಅದನ್ನು ಅವಲಂಬಿಸಿಕೊಂಡೇ ಜ್ಞಾನಾತೀತ ಅದ್ವೈತ ಭೂಮಿಯಿಂದ 'ನಾನು ನೀನು' ಜ್ಞಾನ ಮೂಲಕವಾದ ದ್ವೈತ ಭೂಮಿಗೆ ಬರುತ್ತಾರೆ.

ಶಿಷ್ಯ :— ಆದರೆ, ಮಹಾಶಯರೆ, ಅಲ್ಪಸ್ವಲ್ಪ ವಾಸನಾ ಇದ್ದರೆ ಅದನ್ನು ನಿಶ್ಶೇಷನಿರೋಧ ಸಮಾಧಿಯೆಂದು ಹೇಳುವುದು ಹೇಗೆ? ಏಕೆಂದರೆ, ನಿಶ್ಶೇಷ ನಿರ್ವಿಕಲ್ಪ ಸಮಾಧಿಯಲ್ಲಿ ಮನಸ್ಸಿನ ಸರ್ವವೃತ್ತಿಗಳ, ವಾಸನೆಗಳ, ನಿರೋಧ ಅಥವಾ ಧ್ವಂಸವಾಗಿಬಿಡುವುದೆಂದು ಶಾಸ್ತ್ರದಲ್ಲಿ ಹೇಳಿದೆ.

ಸ್ವಾಮಿಜಿ:— ಹಾಗಾದರೆ ಮಹಾ ಪ್ರಳಯವಾದ ಮೇಲೆ ಪುನಃ ಸೃಷ್ಟಿಯಾಗುವುದು ಹೇಗೆ? ಮಹಾ ಪ್ರಳಯದಲ್ಲಿಯೂ ಎಲ್ಲಾ ಬ್ರಹ್ಮದಲ್ಲಿ ಸೇರಿಹೋಗುವುದಷ್ಟೆ? ಆಮೇಲೂ ಶಾಸ್ತ್ರದಲ್ಲಿ ಸೃಷ್ಟಿಯ ಪ್ರಸ್ತಾಪ ಕೇಳ ಬರುತ್ತದೆ–ಸೃಷಿಯೂ ಲಯವೂ ಪ್ರವಾಹದಂತೆ ಪುನಃ ಪುನಃ ಹೋಗುತ್ತಿರುತ್ತವೆ. ಮಹಾ ಪ್ರಳಯವಾದಮೇಲೆ ಸೃಷ್ಟಿ ಮತ್ತು ಲಯಗಳು ಮತ್ತೆ ಬರುವಹಾಗೆ ಪುರುಷರ ನಿರೋಧ ಮತ್ತು ವ್ಯುತ್ಥಾನಗಳೂ ಬರುತ್ತದೆ. ಇದು ಅಸಂಗತವೇಕಾಗುತ್ತದೆ?

ಶಿಷ್ಯ:— ಲಯಕಾಲದಲ್ಲಿ ಪುನಃ ಸೃಷ್ಟಿಯ ಬೀಜವು ಬ್ರಹ್ಮದಲ್ಲಿ ಲೀನಪ್ರಾಯವಾಗಿರುತ್ತದೆ. ಅದು ಮಹಾ ಪ್ರಳಯ ಅಥವಾ ನಿರೋಧ ಸಮಾಧಿಯಲ್ಲ: ಆದರೆ ಸೃಷ್ಟಿಯ ಬೀಜ ಮತ್ತು ಶಕ್ತಿಯ ಆಕಾರ ಧಾರಣ ಮಾತ್ರ–ಹೀಗೆಂದು ನಾನು ಹೇಳಿದರೆ?

ಸ್ವಾಮಿಜಿ:— ಹಾಗಾದರೆ ಅದಕ್ಕೆ ನಾನು ಹೇಳುವೆನೇನೆಂದರೆ, ಯಾವ ಬ್ರಹ್ಮದಲ್ಲಿ ಯಾವ ವಿಶೇಷಣದ ಆಭಾಸವೂ ಇಲ್ಲವೊ,– ಯಾವುದು ನಿರ್ಲೇಪ ಮತ್ತು ನಿರ್ಗುಣವೊ,–ಅದರ ಮೂಲಕ ಈ ಸೃಷ್ಟಿ ತಾನೇ ಹೇಗೆ ಬಹಿರ್ಗತ ಆಗುವುದು ಸಂಭವ?,–ಅದಕ್ಕೆ ಉತ್ತರಕೊಡು.

ಶಿಷ್ಯ:— ಇದು ತೋರಿಕೆಯ ಬಹಿರ್ಗತ. ಈ ಮಾತಿಗೆ ಉತ್ತರ ವಾಗಿ ಶಾಸ್ತ್ರದಲ್ಲಿ ಹೇಳಿರುವುದೇನೆಂದರೆ, ಬ್ರಹ್ಮದಿಂದ ಸೃಷ್ಟಿವಿಕಾಸ ಮರು ಮರೀಚಿಕೆಯಂತೆ ಕಂಡುಬರುವುದೇನೋ ನಿಜ, ಆದರೆ ವಸ್ತುತಃ ಸೃಷ್ಟಿ ಮುಂತಾದ್ದು ಯಾವುದೂ ಆಗಿಲ್ಲ. ಭಾವ ವಸ್ತುವಾದ ಬ್ರಹ್ಮದ ಅಭಾವ ಅಥವಾ ಮಿಥ್ಯಾಮಾಯಾ ಶಕ್ತಿಯಿಂದ ಈ ವಿಧವಾದ ಭ್ರಮವು ಕಾಣುತ್ತದೆ.

ಸ್ವಾಮಿಜಿ:— ಸೃಷ್ಟಿಯೆ ಮಿಥ್ಯೆಯಾದರೆ, ಜೀವದ ನಿರ್ವಿಕಲ್ಪ ಸಮಾಧಿ ಮತ್ತು ಸಮಾಧಿಯಿಂದ ವ್ಯುತ್ಥಾನ ಇವುಗಳೂ ಮಿಥ್ಯೆಯೆಂದು ನೀನು ತಿಳಿದುಕೊಳ್ಳಬಲ್ಲೆಯಷ್ಟೆ. ಜೀವವು ಸ್ವತಃ ಬ್ರಹ್ಮಸ್ವರೂಪ: ಅದಕ್ಕೆ ಇನ್ನು ಬಂಧನದ ಅನುಭವವೆಂಥಾದ್ದು? ಹಾಗಾದರೆ, 'ನಾನು ಆತ್ಮಾ' ಎಂಬುದನ್ನು ಅನುಭವ ಮಾಡಿಕೊಳ್ಳುವುದಕ್ಕೆ ನೀನು ಅಪೇಕ್ಷಿಸುತ್ತೀಯಷ್ಟೆ, ಅದೂ ಭ್ರಮವೆ,–ಏಕೆಂದರೆ ಶಾಸ್ತ್ರವು ನೀನು ಸರ್ವದಾ ಬ್ರಹ್ಮವಾಗಿಯೆ ಇದ್ದೀಯೆ ಎಂದು ಹೇಳುತ್ತದೆ. ಆದ್ದರಿಂದಲೆ "ಅಯಮೇವ ಹಿತೇ ಬಂಧಃ ಸಮಾಧಿಮನುತಿಷ್ಠಸಿ"–ನೀನು ಸಮಾಧಿ

ಯನ್ನು ಪಡೆಯುವುದಕ್ಕೆ ಅಪೇಕ್ಷಿಸುತ್ತೀಯಷ್ಟೆ ಇದೇ ನಿನಗೆ ಬಂಧನ.

ಶಿಷ್ಯ:— ಇದು ಒಳ್ಳೆಯ ಕಷ್ಟಕ್ಕೆ ಬಂತು; ನಾನು ಬ್ರಹ್ಮವಾದರೆ, ಈ ವಿಷಯ ಯಾವಾಗಲೂ ಅನುಭವವಾಗುತ್ತಿರುವುದಿಲ್ಲವೇಕೆ?

ಸ್ವಾಮಿಜಿ:— ದ್ವೈತ ಭೂಮಿಯಲ್ಲಿ ಈ ಸಂಗತಿಯನ್ನು ಅನುಭವ ಮಾಡಬೇಕಾದರೆ ಒಂದು ಕರಣಬೇಕು. ಮನಸ್ಸೇ ನಮಗೆ ಇರತಕ್ಕ ಅಂತಃ ಕರಣ, ಆದರೆ ಮನಸ್ಸು ಎಂಬ ಪದಾರ್ಥ ಜಡ. ಹಿಂದೆ ಇರುವ ಆತ್ಮದ ಪ್ರಭೆಯಿಂದ ಮನಸ್ಸು ಚೇತನದ ಹಾಗೆ ಕಾಣುತ್ತದೆ ಅಷ್ಟೆ. ಪಂಚದಶೀ ಕಾರರು ಅದನ್ನೇ ಹೇಳಿದ್ದಾರೆ, "ಚಿಚ್ಛಾಯಾವೇಶತಃ ಶಕ್ತಿಶ್ಚೇತನೇವ ವಿಭಾತಿಸಾ"– ಚಿತ್ಸ್ವರೂಪ ಆತ್ಮದ ಛಾಯೆ ಅಥವಾ ಪ್ರತಿಬಿಂಬದ ಆವೇಶ ಶಕ್ತಿಯೇ ಚೈತನ್ಯಮಯಿಯೆಂದು ತೋರುತ್ತದೆ– ಮತ್ತು ಇದ ರಿಂದಲೇ ಮನಸ್ಸೂ ಚೇತನ ಪದಾರ್ಥವೆಂದು ಕಾಣುತ್ತದೆ. ಅದರಿಂದಲೆ 'ಮನಸ್ಸಿ'ನಿಂದ ಶುದ್ಧ ಚೈತನ್ಯ ಸ್ವರೂಪವಾದ ಆತ್ಮವನ್ನು ತಿಳಿದುಕೊಳ್ಳ ಲಾಗುವುದಿಲ್ಲವೆಂಬಮಾತು ನಿಶ್ಚಯ. ಮನಸ್ಸಿನ ಆಚೆಗೆ ಹೋಗಬೇಕು. ಮನಸ್ಸಿನ ಆಚೆಗೆ ಮತ್ತಾವ ಕರಣವೂ ಇಲ್ಲ– ಆತ್ಮವೊಂದೇ ಇರುವುದು; ಆದ್ದರಿಂದ ಯಾವುದನ್ನು ತಿಳಿದುಕೊಳ್ಳಬೇಕೊ ಅದೇ ಕರಣಸ್ಥಾನದಲ್ಲಿದೆ. ಕರ್ತಾ, ಕರ್ಮ, ಕರಣ ಎಲ್ಲಾ ಒಂದಾಗಿವೆ. ಅದಕ್ಕೋಸ್ಕರವೇ ಶ್ರುತಿ "ವಿಜ್ಞಾತಾರಮರೇ ಕೇನ ವಿಜಾನೀಯಾತ್" ಎಂದು ಹೇಳಿರುವುದು. ಇದರಿಂದ ಫಲದಲ್ಲಿ ಏನು ಹೇಳಿದಹಾಗಾಯಿತೆಂದರೆ, ದ್ವೈತ ಭೂಮಿಯ ಮೇಲೆ ಒಂದು ಅವಸ್ಥೆ ಇದೆ; ಅಲ್ಲಿ ಕರ್ತ ಕರ್ಮ ಕರಣಾದಿಗಳಿಗೆ ದ್ವೈತ ಭಾವವಿಲ್ಲ. ಮನಸ್ಸು ನಿರುದ್ಧವಾದರೆ ಪ್ರತ್ಯಕ್ಷವಾಗುತ್ತದೆ. ಬೇರೆ ಮಾತಿಲ್ಲದ್ದರಿಂದ ಈ ಅವಸ್ಥೆಯನ್ನು ಪ್ರತ್ಯಕ್ಷಮಾಡಿಕೊಳ್ಳುವುದೆಂದು ಹೇಳಿದೆ. ಏಕೆಂದರೆ ಆ ಅನುಭವವನ್ನು ತಿಳಿಸುವುದಕ್ಕೆ ಮಾತುಗಳೇ ಇಲ್ಲ. ಶಂಕರಾಚಾರ್ಯರು ಅದಕ್ಕೆ 'ಅಪರೋಕ್ಷಾನುಭೂತಿ' ಎಂದು ಹೇಳಿದ್ದಾರೆ. ಈ ಪ್ರತ್ಯಕ್ಷಾನುಭೂತಿ ಅಥವಾ ಅಪರೋಕ್ಷಾನುಭೂತಿಯಾದರೂ ಅವತಾರ ಪುರುಷರು ಕೆಳಕ್ಕೆ ಇಳಿದುಬಂದು ದ್ವೈತಭೂಮಿಯಲ್ಲಿ ಅದರ ಆಭಾಸವನ್ನು ತಿಳಿಸುತ್ತಾರೆ– ಅದಕ್ಕೋಸ್ಕರವೇ ಆಪ್ತ ಪುರುಷರ ಅನುಭವದಿಂದಲೇ ವೇದಾದಿಶಾಸ್ತ್ರಗಳ ಉತ್ಪತ್ತಿಯೆಂದು ಹೇಳುವುದು. ಸಾಧಾರಣ ಜೀವರ ಅವಸ್ಥೆಯಾದರೊ ಉಪ್ಪಿನ ಬೊಂಬೆ ಸಮುದ್ರವನ್ನು ಅಳೆಯುವುದಕ್ಕೆ ಹೋಗಿ ಕರಗಿಹೋಗುವ ಹಾಗೆ; ತಿಳಿಯಿತೆ? ಒಟ್ಟಿನಮೇಲೆ ಏನು ಹೇಳ

ಬಹುದೆಂದರೆ, “ನೀನು ಸರ್ವದಾ ಬ್ರಹ್ಮ” ಎಂಬ ಸಂಗತಿಯನ್ನು “ತಿಳಿಯ” ಬೇಕು ಅಷ್ಟೆ; “ನೀನು ಸರ್ವದಾ ಅದೇ ಆಗಿದ್ದೀಯೆ, ಆದರೆ ಮಧ್ಯೆ ಶಾಸ್ತ್ರ ಮಾಯೆಯೆಂದು ಹೇಳುವ ಜಡಮನಸ್ಸು ಬಂದು ಅದನ್ನು ತಿಳಿಯಗೊಡಿಸುವುದಿಲ್ಲ; ಆ ಸೂಕ್ಷ್ಮ ಜಡರೂಪವಾದ ಕಾರಣ ವಸ್ತುವಿನಿಂದ ನಿರ್ಮಿತವಾದ ಮನಸ್ಸೆಂಬ ಪದಾರ್ಥ ಪ್ರಶಾಂತವಾದರೆ—ಆತ್ಮದ ಪ್ರಭೆಯಿಂದ ಆತ್ಮ ತಾನೇ ಪ್ರಕಾಶಿತವಾಗುತ್ತದೆ. ಈ ಮಾಯಾ ಅಥವಾ ಮನಸ್ಸು ಮಿಥ್ಯೆಯೆಂಬುದಕ್ಕೆ ಒಂದು ಪ್ರಮಾಣವೇನೆಂದರೆ, ಮನಸ್ಸು ಜಡ ಮತ್ತು ಅಂಧಕಾರಸ್ವರೂಪ; ಹಿಂದಿರುವ ಆತ್ಮದ ಪ್ರಭೆಯಿಂದ ಚೇತನದಹಾಗೆ ಗೋಚರವಾಗುತ್ತದೆ. ಇದನ್ನು ಯಾವಾಗ ತಿಳಿದುಕೊಳ್ಳಲು ಸಮರ್ಥನಾಗುವೆಯೋ, ಆಗ ಒಂದು ಅಖಂಡ ಚೇತನದಲ್ಲಿ ಮನಸ್ಸು ಲಯವಾಗಿಹೋಗುತ್ತದೆ; ಆಗಲೇ—“ಅಯಮಾತ್ಮಾ ಬ್ರಹ್ಮ” ಎಂಬ ಅನುಭೂತಿಯಾಗುತ್ತದೆ. ಆಮೇಲೆ ಸ್ವಾಮಿಜಿ, “ನಿನಗೆ ನಿದ್ರೆ ಬರುವಹಾಗಿದೆ ಎಂದು ಕಾಣುತ್ತದೆ—ಹಾಗಾದರೆ ಮಲಗಿಕೊ” ಎಂದರು. ಶಿಷ್ಯನು ಸ್ವಾಮಿಗಳ ಹತ್ತಿರ ಹಾಸಿಗೆಯ ಮೇಲೆ ಮಲಗಿಕೊಂಡು ನಿದ್ರೆಮಾಡಲಾರಂಭಿಸಿದನು. ರಾತ್ರಿ ಸ್ವಾಮಿಜಿಗೆ ಚೆನ್ನಾಗಿ ನಿದ್ರೆ ಬರದೆ ಇದ್ದದ್ದರಿಂದ ಮಧ್ಯೆಮಧ್ಯೆ ಏಳುತ್ತಿದ್ದರು. ಶಿಷ್ಯನೂ ಆಗ ನಿದ್ರೆಯಿಂದೆದ್ದು ಅವರಿಗೆ ಆವಶ್ಯಕವಿರುತ್ತಿದ್ದಂತೆ ಸೇವೆ ಮಾಡುತ್ತಿದ್ದನು. ಆ ರಾತ್ರಿ ಕಳೆಯಲು, ಅದರ ಕಡೆಯ ಭಾಗದಲ್ಲಿ ಒಂದು ಅದ್ಭುತವನ್ನು ನೋಡಿ ನಿದ್ರಾಭಂಗವಾಗಿ ಆನಂದದಿಂದ ಹಾಸಿಗೆ ಬಿಟ್ಟಿದ್ದನು. ಬೆಳಗ್ಗೆ ಗಂಗಾಸ್ನಾನವಾದ ಮೇಲೆ ಶಿಷ್ಯನು ಬಂದು ನೋಡಲು, ಸ್ವಾಮಿಜಿ ಮಠದ ಕೆಳಭಾಗದಲ್ಲಿ ಒಂದು ದೊಡ್ಡ ಬೆಂಚಿನಮೇಲೆ ಪೂರ್ವಮುಖನಾಗಿ ಕುಳಿತಿದ್ದರು. ಹಿಂದಿನರಾತ್ರಿ ಆದ ಸ್ವಪ್ನ ವೃತ್ತಾಂತವನ್ನು ಸ್ಮರಿಸಿಕೊಂಡು ಸ್ವಾಮಿಗಳ ಪಾದಪದ್ಮವನ್ನು ಅರ್ಚನೆ ಮಾಡುವುದಕ್ಕೋಸ್ಕರ ಅವರ ಮನಸ್ಸು ಈಗ ಕುತೂಹಲಗೊಂಡಿತು; ಈ ಅಭಿಪ್ರಾಯವನ್ನು ತಿಳಿಸಿ ಸ್ವಾಮಿಜಿ ಅನುಮತಿಯನ್ನು ಬೇಡಿದನು. ಅವನ ವಿಶೇಷವಾದ ನಿರ್ಬಂಧದಿಂದ ಸ್ವಾಮಿಜಿ ಒಪ್ಪಿಕೊಂಡರು; ಶಿಷ್ಯನು ಕೆಲವು ಪುಷ್ಪಗಳನ್ನು ತೆಗೆದುಕೊಂಡು ಬಂದು ಸ್ವಾಮಿಗಳ ದೇಹದಲ್ಲಿ ಮಹಾಶಿವನ ಅಧಿಷ್ಠಾನವನ್ನು ಭಾವಿಸುತ್ತಾ ವಿಧ್ಯುಕ್ತವಾದ ರೀತಿಯಲ್ಲಿ ಅವರನ್ನು ಪೂಜಿಸಿದನು.

ಪೂಜೆ ಮುಗಿದಮೇಲೆ ಸ್ವಾಮಿಜಿ ಶಿಷ್ಯನನ್ನು ಕುರಿತು, "ನಿನ್ನ ಪೂಜೆಯೇನೋ ಆಗಿಹೋಯಿತು; ಆದರೆ ಬಾಬೂರಾಮ (ಪ್ರೇಮಾನಂದ) ಬಂದು ನಿನ್ನನ್ನು ಈಗ ನುಂಗಿಹಾಕಿಬಿಡುತ್ತಾನೆ! ನೀನು ಪರಮಹಂಸರ ಪೂಜೆಗೆ ಇಟ್ಟುಕೊಳ್ಳುವ ಹೂವಿನ ಪಾತ್ರೆಯಲ್ಲಿ ನನ್ನ ಕಾಲನ್ನು ಇಟ್ಟು ಪೂಜೆಮಾಡಿದೆ ಅಲ್ಲವೆ?" ಎಂದರು. ಮಾತು ಮುಗಿಯಿತೊ ಮುಗಿಯ ಲಿಲ್ಲವೊ ಅಷ್ಟರೊಳಗೆ ಪ್ರೇಮಾನಂದ ಸ್ವಾಮಿಗಳು ಅಲ್ಲಿಗೆ ಬಂದರು; ಸ್ವಾಮಿಜಿ ಅವರಿಗೆ "ಅಯ್ಯಾ, ನೋಡು ಇಂದು ಏನು ಭಯಂಕರವಾದ ಕೆಲಸವನ್ನು ಮಾಡಿಬಿಟ್ಟಿದ್ದಾನೆ!!! ಪರಮಹಂಸರ ಪೂಜೆಯ ತಟ್ಟೆ, ಸುಗಂಧ, ಮುಂತಾದ್ದನ್ನೆಲ್ಲಾ ತಂದು ಇವೊತ್ತು ನನ್ನ ಪೂಜೆ ಮಾಡಿದ್ದಾನೆ" ಎಂದು ಹೇಳಿಬಿಟ್ಟರು. ಪ್ರೇಮಾನಂದಸ್ವಾಮಿಗಳು ನಗುತ್ತ ನಗುತ್ತ "ಅವನು ಮಾಡಿದ್ದು ಸರಿತಾನೆ; ನೀನೂ ಪರಮಹಂಸರು ಬೇರೆ ಬೇರೆಯೇನು?" ಎಂದರು. ಈ ಮಾತನ್ನು ಕೇಳಿ ಶಿಷ್ಯನು ನಿರ್ಭಯನಾದನು.

ಶಿಷ್ಯನು ತುಂಬ ಆಚಾರ ಶೀಲನಾದನು; ಆದ್ದರಿಂದ ಅಭಕ್ಷ್ಯವಸ್ತುಗಳನ್ನು ತಿನ್ನುವುದಿರಲಿ, ಯಾರಾದರೂ ಮುಟ್ಟಿದ ಪದಾರ್ಥಗಳನ್ನೂ ತಿನ್ನುತ್ತಿರಲಿಲ್ಲ; ಇದಕ್ಕೋಸರ ಸ್ವಾಮಿಗಳು ಶಿಷ್ಯನನ್ನು ಆಗಾಗ್ಗೆ 'ಭಟ್ಟಾಚಾರ್ಯ' ವೈದಿಕಬ್ರಾಹ್ಮಣ ಎಂದು ಕರೆಯುತ್ತಿದ್ದರು. ಬೆಳಗ್ಗೆ ಫಲಾಹಾರದ ಸಮಯದಲ್ಲಿ ವಿಲಾಯತಿಯ ಬಿಸ್ಕತ್ತು ಮೊದಲಾದ್ದನ್ನು ತಿನ್ನುತ್ತ ತಿನ್ನುತ್ತ ಸ್ವಾಮಿಗಳು ಸದಾನಂದ ಸ್ವಾಮಿಗಳಿಗೆ "ಭಟ್ಟಾಚಾರ್ಯನನ್ನು ಹಿಡಿದುಕೊಂಡು ಬಾ" ಎಂದು ಹೇಳಿದರು. ಅವರ ಆಜ್ಞೆಯನ್ನು ಕೇಳಿ ಶಿಷ್ಯನು ಹತ್ತಿರ ಬರಲು, ಸ್ವಾಮಿಗಳು ಈ ಪದಾರ್ಥಗಳಲ್ಲಿ ಸ್ವಲ್ಪವನ್ನು ಅವನಿಗೆ ಪ್ರಸಾದದಂತೆ ತಿನ್ನುವುದಕ್ಕೆ ಕೊಟ್ಟರು. ಶಿಷ್ಯನು ಸಂಕೋಚಪಡದೆ ಅದನ್ನು ತಿಂದನು. ಸ್ವಾಮಿಜಿ ಅದನ್ನು ನೋಡಿ ಅವನಿಗೆ "ಇವೊತ್ತು ನೀನು ಏನುತಿಂದೆ ಬಲ್ಲೆಯಾ? ಇವು ಕೋಳಿಯ ಮೊಟ್ಟೆಯಿಂದ ಮಾಡಿದವು!" ಎಂದು ಹೇಳಿದರು. "ಅದಕ್ಕೆ ಅವನು" ಏನಾದರೂ ಇರಲಿ ನಾನು ತಿಳಿದುಕೊಳ್ಳಬೇಕಾದದ್ದಿಲ್ಲ; ತಮ್ಮ ಪ್ರಸಾದ ರೂಪವಾದ ಅಮೃತವನ್ನು ತಿಂದು ಅಮರನಾದೆನು" ಎಂದು ಉತ್ತರ ಕೊಟ್ಟನು. ಅದನ್ನು ಕೇಳಿ ಸ್ವಾಮಿಗಳು "ಇಂದಿನಿಂದ ನಿನ್ನ ಜಾತಿ ವರ್ಣ ಕುಲ ಪಾಪ ಪುಣ್ಯ ಮೊದಲಾದವುಗಳ ಮೇಲಣ ಅಭಿಮಾನವೂ ಜನ್ಮವೂ ಹೋಗೆಬಿಡಲಿ–ನಾನು ಆಶೀರ್ವಾದ ಮಾಡಿದ್ದೇನೆ" ಎಂದು ಹೇಳಿದರು.

ಸ್ವಾಮಿಜಿ ಅಂದಿನ ಅಯಾಚಿತ ಮತ್ತು ಅಪಾರ ದಯೆಯ ವೃತ್ತಾಂತವನ್ನು ಸ್ಮರಿಸಿಕೊಂಡು ಶಿಷ್ಯ ತನ್ನ ಮನುಷ್ಯ ಜನ್ಮವು ಸಾರ್ಥಕವಾಯಿತೆಂದು ತಿಳಿದಿದ್ದಾನೆ.

ಮಧ್ಯಾಹ್ನದ ಮೇಲೆ ಸ್ವಾಮಿಜಿ ಹತ್ತಿರಕ್ಕೆ ಅಕೌಂಟೆಂಟ್ ಜನರಲ್ ಬಾಬು ಮನ್ಮಥನಾಥ ಭಟ್ಟಾಚಾರ್ಯರು ಬಂದರು. ಅಮೆರಿಕಾಕ್ಕೆ ಹೋಗುವುದಕ್ಕೆ ಮೊದಲು ಮದ್ರಾಸಿನಲ್ಲಿ ಸ್ವಾಮಿಜಿ ಅನೇಕದಿನ ಇವರ ಮನೆಯಲ್ಲಿ ಅತಿಥಿಯಾಗಿದ್ದರು; ಆಗಿನಿಂದ ಇವರು ಸ್ವಾಮಿಗಳಲ್ಲಿ ವಿಶೇಷ ಭಕ್ತಿ ಶ್ರದ್ಧೆಗಳನ್ನಿಟ್ಟುಕೊಂಡಿದ್ದರು. ಭಟ್ಟಾಚಾರ್ಯ ಮಹಾಶಯರು ಸ್ವಾಮಿಗಳನ್ನು ಪಾಶ್ಚಾತ್ಯ ದೇಶ ಮತ್ತು ಭರತ ಖಂಡಗಳ ಸಂಬಂಧವಾಗಿ ನಾನಾ ಸಂಗತಿಗಳನ್ನು ಕೇಳುವುದಕ್ಕೆ ಮೊದಲು ಮಾಡಿದರು. ಸ್ವಾಮಿಜಿ ಈ ಪ್ರಶ್ನೆಗಳಿಗೆ ಉತ್ತರಕೊಟ್ಟು ಮತ್ತು ಇತರ ನಾನಾ ವಿಧಗಳಲ್ಲಿಯೂ ಅವರನ್ನು ಸಂತೋಷಗೊಳಿಸಿ "ಒಂದು ದಿನ ಇಲ್ಲಿ ಇದ್ದು ಹೋಗಿ" ಎಂದರು. ಮನ್ಮಥಬಾಬುಗಳು ಅದಕ್ಕೆ "ಇನ್ನೊಂದು ದಿನ ಬಂದು ಇದ್ದು ಹೋಗುತ್ತೇನೆ" ಎಂದು ಹೇಳಿ ಅಪ್ಪಣೆ ಪಡೆದು ಕೆಳಕ್ಕೆ ಇಳಿದು ಹೋಗುತ್ತ ಹೋಗುತ್ತ ಸ್ನೇಹಿತರೊಬ್ಬರೊಡನೆ ಹೀಗೆಂದು ಹೇಳಿದರು. "ಇವರು ಭೂಮಂಡಲದಲ್ಲಿ ಒಂದು ದೊಡ್ಡ ಅವಾಂತರವನ್ನು ಮಾಡಿಬಿಡುವರೆಂದು ನಾವು ಮೊದಲೇ ಮದ್ರಾಸಿನಲ್ಲಿ ಚೆನ್ನಾಗಿ ತಿಳಿದುಕೊಂಡಿದ್ದೆವು; ಇಂಥ ಸರ್ವತೋಮುಖವಾದ ಪ್ರತಿಭೆ ಮನುಷ್ಯ ಮಾತ್ರರಲ್ಲಿ ಕಂಡುಬರುವುದಿಲ್ಲ."

ಸ್ವಾಮಿಜಿ ಮನ್ಮಥ ಬಾಬುಗಳ ಜೊತೆಯಲ್ಲಿ ಗಂಗೆಯ ತೀರದವರೆಗೆ ಬಂದು ಅವರಿಗೆ ಅಭಿವಾದನಮಾಡಿ ಅವರು ಹೋಗುವುದಕ್ಕೆ ಅಪ್ಪಣೆಯನ್ನು ಕೊಟ್ಟರು. ಅನಂತರ ಮೈದಾನದಲ್ಲಿ ಸ್ವಲ್ಪಹೊತ್ತು ತಿರುಗಾಡುತ್ತಿದ್ದು ಮೇಲೆ ವಿಶ್ರಾಂತಿ ಪಡೆಯುವುದಕ್ಕೆ ಹೊರಟುಹೋದರು.



# ಅಧ್ಯಾಯ ೧೯

**ಸ್ಥಳ:—ಬೇಲೂರು; ಮಠ (ಬಾಡಿಗೆ ಕಟ್ಟಡ.) ವರ್ಷ: ಕ್ರಿ. ಶ. ೧೮೯೮.**

ಶಿಷ್ಯನು ಈ ದಿವಸ ಬೆಳಗ್ಗೆ ಮಠಕ್ಕೆ ಬಂದಿದ್ದಾನೆ. ಸ್ವಾಮಿಜಿ ಪಾದ ಪದ್ಮಕ್ಕೆ ನಮಸ್ಕರಿಸಿ ನಿಂತುಕೊಂಡ ಕೂಡಲೆ, ಸ್ವಾಮಿಜಿ "ಇನ್ನು ನೌಕರಿ ಮಾಡಿ ಆಗುವುದೇನು? ಒಂದು ಕಸಬನ್ನು ಅವಲಂಬಿಸಬಾರದೆ?" ಎಂದರು. ಶಿಷ್ಯನು ಆಗ ಒಂದು ಕಡೆ ಮನೆಯಲ್ಲಿ ಪಾಠ ಹೇಳಿಕೊಡುತ್ತಿದ್ದನು, ಅಷ್ಟೆ. ಸಂಸಾರದ ಭಾರ ಆಗಲೂ ಇನ್ನೂ ಅವನ ಮೇಲೆ ಬಿದ್ದಿರಲಿಲ್ಲ. ಸುಖವಾಗಿ ಕಾಲ ಕಳೆದು ಹೊಗುತ್ತಿತ್ತು. ಶಿಕ್ಷಣಕಾರ್ಯ ಸಂಬಂಧವಾಗಿ ಶಿಷ್ಯನು ಪ್ರಶ್ನೆಮಾಡಲು, ಸ್ವಾಮಿಜಿ "ಬಹುಕಾಲ ಮೇಷ್ಟರ ಕೆಲಸ ಮಾಡಿದರೆ ಬುದ್ಧಿ ಕೆಟ್ಟು ಹೋಗುತ್ತದೆ; ಜ್ಞಾನ ವಿಕಾಸ ಉಂಟಾಗುವುದಿಲ್ಲ. ಹಗಲೂ ರಾತ್ರಿ ಹುಡುಗರ ಜೊತೆಯಲ್ಲಿ ಇದ್ದು ಇದ್ದು ಕ್ರಮೇಣ ಜಡ ರಂತಾಗಿಬಿಡಬೇಕಾಗುತ್ತದೆ. ಇನ್ನು ಮೇಲೆ ಮೇಷ್ಟರ ಕೆಲಸ ಮಾಡ ಬೇಡ" ಎಂದರು.

ಶಿಷ್ಯ:—ಆದರೆ ಏನುಮಾಡಲಿ?

ಸ್ವಾಮಿಜಿ:—ಏಕೆ? ನೀನು ಸಂಸಾರದಲ್ಲೇ ಇದ್ದುಕೊಂಡು ಧನಾರ್ಜನೆಯನ್ನು ಮಾಡಬೇಕೆಂಬ ಯೋಚನೆ ಇದ್ದರೆ, ಹೋಗು—ಅಮೆರಿಕಾಕ್ಕೆ ಹೊರಟುಹೋಗು. ಕಸಬು ಮಾಡುವುದಕ್ಕೆ ಸಲಹೆಗಳನ್ನು ಕೊಡುವೆನು. ನೋಡು ಐದು ವರ್ಷದಲ್ಲಿ ಎಷ್ಟು ರೂಪಾಯಿ ಶೇಖರಿಸುವೆ!

ಶಿಷ್ಯ:—ಏನು ಕಸಬನ್ನು ಅವಲಂಬಿಸಲಿ? ಹಣವನ್ನು ಎಲ್ಲಿಂದ ತರಲಿ?

ಸ್ವಾಮಿಜಿ:—ನೀನೇನು ಹುಚ್ಚನ ಹಾಗೆ ಮಾತನಾಡುತ್ತೀಯೆ? ಒಳಗೆ ಅದಮ್ಯವಾದ ಶಕ್ತಿಯಿದೆ. ಸುಮ್ಮನೆ 'ನಾನು ಏನೂ ಅಲ್ಲ' ಎಂದು ಕೊಂಡು ವೀರ್ಯಹೀನರಾಗಿ ಬಿದ್ದಿದ್ದೀರಿ. ನೀವೇ ಏಕೆ? - ಎಲ್ಲಾ ಜಾತಿ ಯವರೂ ಹಾಗೇ ಆಗಿದ್ದಾರೆ. ಒಂದು ಸಲ ಹೊರಗೆ ಸಂಚರಿಸಿಕೊಂಡು ಬಾ—ಭರತಖಂಡವನ್ನು ಬಿಟ್ಟು ಮಿಕ್ಕ ದೇಶಗಳ ಜನರಲ್ಲಿ ಜೀವನ ಪ್ರವಹಿ ಸುತ್ತಿದೆ ಎಂಬುದು ಗೊತ್ತಾಗುತ್ತದೆ. ನೀವು ಮಾಡುವುದೇನು?—ಇಷ್ಟು

ವಿದ್ಯೆ ಕಲಿತು ಅನ್ಯರ ಮನೆಯ ಬಾಗಿಲಿನಲ್ಲಿ ಭಿಕಾರಿಯಂತೆ "ನೌಕರಿ ಕೊಡಿ, ನೌಕರಿ ಕೊಡಿ" ಎಂದು ಅರಚಿಕೊಳ್ಳುವುದು. ಎಕ್ಕಡವನ್ನು ತಿಂದು ತಿಂದು–ಗುಲಾಮಗಿರಿಯನ್ನು ಮಾಡಿ ಮಾಡಿ ನೀವೇನು ಮನುಷ್ಯ ರಾಗಿದ್ದೀರಾ? ನಿಮ್ಮ ಬೆಲೆ ಒಂದು ಕುರುಡು ಕವಡೆಯೂ ಇಲ್ಲ. ಇಂಥ ಸಜಲ ಸಫಲ ದೇಶ; ಇಲ್ಲಿ ಪ್ರಕೃತಿ ಮಿಕ್ಕ ದೇಶಗಳಿಗಿಂತ ಕೋಟ್ಯಧಿಕವಾಗಿ ಧನಧಾನ್ಯವನ್ನು ಕೊಡುತ್ತಿದೆ; ಇಲ್ಲಿ ಪ್ರಾಣವನ್ನು ಧರಿಸಿಕೊಂಡಿರುವುದಕ್ಕೆ ನಿಮ್ಮ ಹೊಟ್ಟೆಗೆ ಅನ್ನವಿಲ್ಲ–ಬೆನ್ನಿನ ಮೇಲೆ ಬಟ್ಟೆಯಿಲ್ಲ! ಯಾವ ದೇಶದ ಧನಧಾನ್ಯಗಳು ಪ್ರಪಂಚದ ಇತರ ದೇಶಗಳಲ್ಲೆಲ್ಲಾ ನಾಗರಿಕತೆಯನ್ನು ಪ್ರಚಾರಪಡಿಸಿತೊ ಆ ಅನ್ನಪೂರ್ಣೆಯ ದೇಶದಲ್ಲಿ ನಿಮ್ಮಗಳಿಗೆ ಇಂಥ ದುರ್ದಶೆಯೆ? ಒಂದು ಗತಿಗೆಟ್ಟ ನಾಯಿಗಿಂತಲೂ ನಿಮ್ಮ ಸ್ಥಿತಿ ಕಡೆ ಯಾಗಿದೆ. ನೀವು ನಿಮ್ಮ ವೇದ ವೇದಾಂತಗಳ ಬಡಾಯಿಯನ್ನು ಹೇಳಿ ಕೊಳ್ಳುತ್ತೀರಿ. ಯಾವ ಜನಾಂಗ ಸಾಮಾನ್ಯ ಅನ್ನಬಟ್ಟೆಗಳನ್ನು ಸಂಪಾದಿಸ ಲಾರದೊ,—ಮತ್ತೊಬ್ಬರ ಮುಖವನ್ನು ನೋಡಿಕೊಂಡೇ ಹೊಟ್ಟೆಹೊರೆದು ಕೊಳ್ಳುತ್ತದೆಯೊ, ಆ ಜನಾಂಗಕ್ಕೆ ಬಡಾಯಿ ಏಕೆ? ಧರ್ಮಕರ್ಮಗಳನ್ನು ಈಗ ಗಂಗೆಯಲ್ಲಿ ತೇಲಿಬಿಟ್ಟು ಮೊದಲು ಜೀವನ ಸಂಗ್ರಾಮದಲ್ಲಿ ಮುಂದಾ ಗಿರಿ. ಭರತಖಂಡದಲ್ಲಿ ಎಷ್ಟು ಪದಾರ್ಥಗಳು ಉತ್ಪತ್ತಿಯಾಗುತ್ತವೆ! ಅನ್ಯದೇಶೀಯ ಜನರು ಈ ಕಚ್ಚಾ ಪದಾರ್ಥಗಳಿಂದ ಮತ್ತು ಅವುಗಳ ಸಹಾಯದಿಂದ ಬಂಗಾರವನ್ನು ಪಡೆಯುತ್ತಾರೆ. ನೀವೊ ಮೂಟೆ ಹೊರುವ ಕತ್ತೆಗಳಂತೆ ಅವರ ಪದಾರ್ಥಗಳನ್ನು ಎಳೆದು ಸಾಯುತ್ತೀರಿ. ಭರತಖಂಡ ದಲ್ಲಿ ಬೆಳೆಯುವ ಕಚ್ಚಾ ಪದಾರ್ಥಗಳನ್ನು ದೇಶವಿದೇಶಗಳ ಜನರು ತೆಗೆದು ಕೊಂಡು ಅವುಗಳ ಮೇಲೆ ತಮ್ಮ ಬುದ್ಧಿಯನ್ನು ಉಪಯೋಗಿಸಿ ನಾನಾ ಪದಾರ್ಥಗಳನ್ನು ತಯಾರುಮಾಡಿ ದೊಡ್ಡವರಾದರು; ನೀವೊ ನಿಮ್ಮ ಬುದ್ಧಿಯನ್ನು ಪೆಟ್ಟಿಗೆಯಲ್ಲಿ ಮುಚ್ಚಿಟ್ಟು ಮನೆಯಲ್ಲಿದ್ದ ಹಣವನ್ನು ಹೊರಗಿ ನವರಿಗೆ ಕೊಟ್ಟುಬಿಟ್ಟು "ಕವಳ" "ಕವಳ" ಎಂದು ಅಲೆಯುತ್ತೀರಿ!

ಶಿಷ್ಯ:— ಯಾವ ಮಾರ್ಗವನ್ನು ಅನುಸರಿಸಿದರೆ ಅನ್ನ ಸಂಪಾದನೆ ಯಾಗುತ್ತದೆ ಮಹಾಶಯರೆ?

ಸ್ವಾಮಿಜಿ:— ಮಾರ್ಗ ನಿಮ್ಮ ಕೈಯಲ್ಲಿಯೆ ಇದೆ. ಕಣ್ಣನ್ನು ಬಟ್ಟೆ ಯಿಂದ ಕಟ್ಟಿಕೊಂಡು 'ನಾನು ಕುರುಡ, ನಾನು ಏನನ್ನೂ ನೋಡಲಾರೆ' ಎಂದು ಹೇಳುತ್ತೀರಿ. ಕಣ್ಣಿನ ಕಟ್ಟನ್ನು ಕಿತ್ತುಹಾಕಿ–ನಡುಹಗಲ

ಸೂರ್ಯನ ಕಿರಣಗಳಿಂದ ಜಗತ್ತು ಬೆಳಗುತ್ತಿರುವುದು ಕಣ್ಣಿಗೆ ಬೀಳುತ್ತದೆ. ಹಣ ದೊರೆಯದಿದ್ದರೆ ಜಹಜಿನಲ್ಲಿ ಕೂಲಿಯಾಗಿ ವಿದೇಶಕ್ಕೆ ಹೊರಟು ಹೋಗಿ ಸ್ವದೇಶಿ ಬಟ್ಟೆ, ಚೌಕ, ಮೊರ, ಪೊರಕೆ ಇವುಗಳನ್ನು ತಲೆಯ ಮೇಲೆ ಹೊತ್ತುಕೊಂಡು ಅಮೇರಿಕಾ ಯೂರೋಪ್‌ಗಳ ರಸ್ತೆಗಳಲ್ಲಿ ತಿರುಗಿರಿ; ಹಿಂದೂ ದೇಶದ ಪದಾರ್ಥಗಳಿಗೆ ಈಗಲೂ ಎಷ್ಟು ಬೆಲೆಯಿದೆಯೆಂಬುದು ಗೊತ್ತಾಗುತ್ತದೆ. ಅಮೆರಿಕಾದಲ್ಲಿ ನೋಡಿದೆ—ಹೂಗ್ಲಿ ಜಿಲ್ಲೆಯ ಕೆಲವು ಜನ ಮುಸಲ್ಮಾನರು ಹೀಗೆ ತಿರುಗುತ್ತ ಹಣವಂತರಾಗಿಬಿಟ್ಟಿದ್ದಾರೆ. ಅವರದಕ್ಕಿಂತಲೂ ಕಡೆಯೇ ನಿಮ್ಮ ವಿದ್ಯಾಬುದ್ಧಿ? ಇದನ್ನೇ ನೋಡು. ಈ ದೇಶದಲ್ಲಿ ಬನಾರಿಸ್ ಶೀರೆಯಾಗುತ್ತದೆಯಷ್ಟೆ. ಅಂಥ ಉತ್ಕೃಷ್ಟವಾದ ಬಟ್ಟೆ ಪೃಥಿವಿಯಲ್ಲಿ ಮತ್ತೆಲ್ಲಿಯೂ ಆಗುವುದಿಲ್ಲ. ಈ ಬಟ್ಟೆಯನ್ನು ತೆಗೆದುಕೊಂಡು ಅಮೆರಿಕಾಕ್ಕೆ ಹೋಗಿಬಿಡಿ. ಆ ದೇಶದಲ್ಲಿ ಈ ಬಟ್ಟೆಯ ಲಂಗ ತಯಾರುಮಾಡಿ ಮಾರುತ್ತಾ ಬಾ, ನೋಡು ಎಷ್ಟು ದುಡ್ಡು ಸಿಕ್ಕುತ್ತದೆ.

ಶಿಷ್ಯ:—ಮಹಾಶಯರೆ, ಅವರು ಬನಾರಿಸ್ ಸೀರೆಯ ಲಂಗ ಏಕೆ ಹಾಕಿಕೊಳ್ಳುವರು? ಚಿತ್ರವಿಚಿತ್ರದ ಬಟ್ಟೆಗಳನ್ನು ಆ ದೇಶದ ಹೆಂಗಸರು ಮೆಚ್ಚುವುದಿಲ್ಲವೆಂದು ಕೇಳಿದ್ದೇನೆ.

ಸ್ವಾಮಿಜಿ:—ತೆಗೆದುಕೊಳ್ಳುತ್ತಾರೆಯೊ ಇಲ್ಲವೊ ಅದನ್ನು ನಾನು ನೋಡಿಕೊಳ್ಳುತ್ತೇನೆ. ನೀನು ಉದ್ಯಮಶೀಲನಾಗಿ ಹೊರಡು. ನನಗೆ ಆ ದೇಶದಲ್ಲಿ ಅನೇಕ ಸ್ನೇಹಿತರೂ ಇಷ್ಟರೂ ಇದ್ದಾರೆ. ನಾನು ನಿನಗೆ ಅವರೊಡನೆ ಪರಿಚಯ ಮಾಡಿಕೊಡುತ್ತೇನೆ. ಅವರೇ ಇವುಗಳನ್ನು ಮೊದಲು ತೆಗೆದುಕೊಳ್ಳುವಂತೆ ಕೇಳಿಕೊಳ್ಳುತ್ತೇನೆ. ಆಮೇಲೆ ನೋಡುವೆಯಂತೆ—ಎಷ್ಟು ಜನ ಅವರನ್ನು ಅನುಕರಣ ಮಾಡುತ್ತಾರೆ, ಎಂತ. ನೀನು ಆಮೇಲೆ ಪದಾರ್ಥಗಳನ್ನು ಒದಗಿಸಲಾರದೆ ಹೋಗುವೆ.

ಶಿಷ್ಯ:— ಕಸಬನ್ನು ಕೈಗೊಳ್ಳುವುದಕ್ಕೆ ಮೂಲಧನವೆಲ್ಲಿಂದ ತರೋಣ?

ಸ್ವಾಮಿಜಿ:—ನಾನು ಏನು ಮಾಡಬಹುದೆಂದರೆ, ನಿನಗೆ ಕಾರ್ಯಾರಂಭ ಮಾಡಿಕೊಡಬಹುದು. ಆಮೇಲೆ ಮಾತ್ರ ನಿನ್ನ ಸ್ವಂತ ಪ್ರಯತ್ನದ ಮೇಲೆ ಎಲ್ಲವೂ ಹೋಗುತ್ತದೆ. "ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ"—ಈ ಪ್ರಯತ್ನದಲ್ಲಿ ಸತ್ತುಹೋದರೆ ಅದೂ

ಉತ್ತಮವೆ–ನಿನ್ನನ್ನು ನೋಡಿ ಹತ್ತಾರು ಜನರು ಮುಂದಾಳುಗಳಾಗಿ ಹೊರಡುತ್ತಾರೆ. ಹಾಗಲ್ಲದೆ ಸಫಲವಾದರೆ ಮಹಾ ಭೋಗದಲ್ಲಿ ಜೀವನ ಮಾಡುವೆ.

ಶಿಷ್ಯ:—ಅಪ್ಪಣೆ; ಆದರೆ ಬರಿಯ ಸಾಹಸ ಸಾಲದು.

ಸ್ವಾಮಿಜಿ:—ಅದಕ್ಕೇ ಅಪ್ಪ ನಾನು ಹೇಳುವುದು, ನಿಮಗೆ ಶ್ರದ್ಧೆಯಿಲ್ಲ, ಆತ್ಮವಿಶ್ವಾಸವಿಲ್ಲ ಎಂದು. ನಿಮ್ಮಿಂದ ಏನು ನಡೆದೀತು? ಸಂಸಾರ ನಡೆಯುವುದಿಲ್ಲ, ಧರ್ಮ ನಡೆಯುವುದಿಲ್ಲ. ಇಲ್ಲವೇ ಹೀಗೆ ಉದ್ಯೋಗ ಉದ್ಯಮಗಳನ್ನು ಮಾಡಿಕೊಂಡು ಸಂಸಾರದಲ್ಲಿ ಗಣ್ಯರು, ಮಾನ್ಯರು, ಶ್ರೀಮಂತರು ಆಗಿ;—ಇಲ್ಲವೇ ಎಲ್ಲವನ್ನೂ ಕಿತ್ತು ಒಗೆದು ನಮ್ಮ ದಾರಿಗೆ ಬಂದುಬಿಡಿ; ದೇಶ ವಿದೇಶದ ಜನರಿಗೆ ಧರ್ಮೋಪದೇಶವನ್ನು ಕೊಟ್ಟು ಉಪಕಾರ ಮಾಡಿ; ಹಾಗಾದರೆ ನನಗೆ ಸಿಕ್ಕಿದಂತೆ ನಿಮಗೂ ಬಿಕ್ಷ ಸಿಕ್ಕುವುದು. ಆದಾನ ಪ್ರದಾನಗಳಿಲ್ಲದಿದ್ದರೆ ಯಾರೂ ಮತ್ತೊಬ್ಬರ ಕಡೆಗೆ ನೋಡುವುದಿಲ್ಲ. ನೋಡು, ನಾನು ಒಂದೆರಡು ಧರ್ಮ ವಾಕ್ಯಗಳನ್ನು ಕಿವಿಗೆ ಹಾಕುತ್ತೇನೆ–ಅದಕ್ಕೇ ಗೃಹಸ್ಥರು ನನಗೆ ಎರಡು ಹೊತ್ತು ಅನ್ನ ಹಾಕುತ್ತಾರೆ. ನೀವು ಏನೂ ಮಾಡುವುದಿಲ್ಲ, ನಿಮಗೆ ಜನರು ಅನ್ನವನ್ನೇಕೆ ಕೊಡುತ್ತಾರೆ? ನೌಕರಿಯಲ್ಲಿ, ಗುಲಾಮಗಿರಿಯಲ್ಲಿ ಇಷ್ಟು ಕಷ್ಟವನ್ನು ನೋಡಿಯೂ ನಿಮಗೆ ಬುದ್ಧಿ ಬರುವುದಿಲ್ಲ—ಆದ್ದರಿಂದ ಕಷ್ಟವೂ ಹೋಗುವುದಿಲ್ಲ. ಇದು ನಿಜವಾಗಿಯೂ ದೈವೀ ಮಾಯೆಯ ಲೀಲೆ! ಆ ದೇಶದಲ್ಲಿ ನಾನು ನೋಡಿದ್ದೇನೆಂದರೆ—ಯಾರು ನೌಕರಿ ಮಾಡುತ್ತಾರೋ ಅವರಿಗೆ ಪ್ರತಿನಿಧಿ ಸಭೆಯಲ್ಲಿ ಸ್ಥಳವು ಹಿಂದುಗಡೆ ಇರುತ್ತದೆ; ಯಾರು ತಮ್ಮ ಸ್ವಂತ ಪ್ರಯತ್ನದಿಂದಲೂ ವಿದ್ಯಾಬುದ್ಧಿಗಳಿಂದಲೂ ಪ್ರಸಿದ್ಧರಾಗಿದ್ದಾರೆಯೊ ಅವರು ಕುಳಿತುಗೊಳ್ಳುವುದಕ್ಕೆ ಮುಂದುಗಡೆಯಲ್ಲಿರುವ ಸ್ಥಳ. ಆ ದೇಶದಲ್ಲೆಲ್ಲಾ ಜಾತಿಗೀತಿಗಳ ಉತ್ಪಾತವಿಲ್ಲ. ಪ್ರಯತ್ನಪರಿಶ್ರಮಗಳಿಗಾಗಿ ಭಾಗ್ಯಲಕ್ಷ್ಮಿ ಯಾರಿಗೆ ಒಲಿದಿರುವಳೊ ಅವರೇ ದೇಶದ ನೇತೃಗಳು ನಿಯಂತೃಗಳು ಎಂದು ಗಣ್ಯರಾಗುತ್ತಾರೆ. ನಿಮ್ಮ ದೇಶದಲ್ಲಿ ಜಾತಿಯನ್ನು ದೊಡ್ಡದು ಮಾಡಿಕೊಂಡು ಮಾಡಿಕೊಂಡು, ನಿಮಗೆ ಅನ್ನವೂ ಹುಟ್ಟದಂತಾಗಿದೆ. ಒಂದು ಸೂಜಿ ತಯಾರುಮಾಡುವುದಕ್ಕೆ ಯೋಗ್ಯತೆ ಇಲ್ಲ—ನೀವು ಇಂಗ್ಲಿಷರನ್ನು ಟೀಕಿಸುತ್ತೀರಿ ಬುದ್ಧಿಯಿಲ್ಲದವರು! ಅವರ ಕಾಲು ಕಟ್ಟಿಕೊಂಡು ಜೀವನ

ಸಂಗ್ರಾಮೋಪಯೋಗಿಯಾದ ವಿದ್ಯೆಯನ್ನೂ ಶಿಲ್ಪಿವಿಜ್ಞಾನವನ್ನೂ ಕರ್ಮ ತತ್ಪರತೆಯನ್ನೂ ಕಲಿಯಿರಿ. ಯಾವಾಗ ಉಪಯುಕ್ತರಾಗುವಿರೊ ಆಗ ನಿಮಗೆ ಆದರ ಬರುವುದು. ಆದರೂ ಆಗ ನಿಮ್ಮ ಮಾತನ್ನು ನಡೆಸುತ್ತಾರೆ. ಯಾವುದೂ ಏನೂ ಇಲ್ಲದೆ ಕೇವಲ ಕಾಂಗ್ರೆಸ್ ಮಾಡಿಕೊಂಡು ಕೂಗಿಬಿಟ್ಟರೆ ಏನಾಗುತ್ತದೆ?

ಶಿಷ್ಯ:—ಮಹಾಶಯರೆ, ದೇಶದಲ್ಲಿರುವ ವಿದ್ಯಾವಂತರೆಲ್ಲಾ ಅದರಲ್ಲಿ ಸೇರಿರುತ್ತಾರಲ್ಲಾ ?

ಸ್ವಾಮಿಜಿ—ಸ್ವಲ್ಪ ಹರಟೆ ಹೊಡೆದರೆ ಅಥವಾ ಚೆನ್ನಾಗಿ ಮಾತನಾಡಿಬಿಟ್ಟರೆ ನಿಮ್ಮ ಪಾಲಿಗೆ ಶಿಕ್ಷಿತರಾದಂತಾಯಿತು! ಯಾವ ವಿದ್ಯೆಯ ಅಭಿವೃದ್ಧಿಯಿಂದ ಇತರ ಸಾಧಾರಣರನ್ನು ಜೀವನ ಸಂಗ್ರಾಮದಲ್ಲಿ ಸಮರ್ಥರನ್ನಾಗಿ ಮಾಡುವುದಕ್ಕಾಗುವುದಿಲ್ಲವೊ ಯಾವುದು ಮನುಷ್ಯನಿಗೆ ಚಾರಿತ್ರಬಲ, ಪರಸೇವಾತತ್ಪರತೆ, ಸಿಂಹಸಾಹಸಿಕತೆ ಇವುಗಳನ್ನು ಬರಗೊಡಿಸುವುದಿಲ್ಲವೊ ಅದು ವಿದ್ಯೆಯೇನು? ಯಾವ ವಿದ್ಯೆಯಿಂದ ಜೀವನದಲ್ಲಿ ತನ್ನ ಕಾಲಿನಮೇಲೆ ತಾನು ನಿಂತುಕೊಳ್ಳಬಹುದೋ, ಅದೇ ವಿದ್ಯೆ. ಈಗ ಈ ಸ್ಕೂಲು ಕಾಲೇಜುಗಳಲ್ಲೆಲ್ಲಾ ಓದಿ, ಓದಿ ನೀವು ಒಂದು ವಿಧವಾದ ಅಜೀರ್ಣ ರೋಗಗ್ರಸ್ತ ಜನರಾಗಿಬಿಟ್ಟಿದ್ದೀರಿ. ಕೇವಲ ಯಂತ್ರಗಳ ಹಾಗೆ ಕೆಲಸಮಾಡುತ್ತೀರಿ; 'ಜಾಯಸ್ವ' 'ಮ್ರಿಯಸ್ವ' ಎಂಬ ವಾಕ್ಯಗಳಿಗೆ ಸಾಕ್ಷಿಸ್ವರೂಪರಾಗಿ ನಿಂತುಕೊಂಡಿದ್ದೀರಿ. ಆರಂಬಗಾರರು ಜೋಡು ಹೊಲಿಯುವವರು, ಗುಡಿಸುವವರು ಇದ್ದಾರಲ್ಲಾ ಇವರ ಕರ್ಮ ತತ್ಪರತೆಯೂ ಆತ್ಮನಿಷ್ಠೆಯೂ ನಿಮ್ಮಗಳಲ್ಲಿ ಅನೇಕರದಕ್ಕಿಂತ ಎಷ್ಟೋ ಮೇಲು. ಅವರು ಸದ್ದಿಲ್ಲದೆ ಯಾವಾಗಲೂ ಕೆಲಸ ಮಾಡಿಕೊಂಡು ಹೊಗುತ್ತಿರುತ್ತಾರೆ. ದೇಶದ ಧನಧಾನ್ಯಗಳನ್ನು ಉಂಟುಮಾಡುತ್ತಾರೆ–ಬಾಯಲ್ಲಿ ಮಾತಿಲ್ಲ. ಅವರು ಜಾಗ್ರತೆಯಾಗಿಯೆ ನಿಮ್ಮ ಮೇಲೆ ಬಂದು ಬಿಡುತ್ತಾರೆ. ಬಂಡವಾಳ ಅವರ ಕೈಯಿಂದ ಬರುತ್ತದೆ–ನಿಮ್ಮ ಹಾಗೆ ಅವರಿಗೆ ಅದಿಲ್ಲ ಇದಿಲ್ಲ ಎಂಬ ಅಭಾವದ ಭಾಧೆಯಿಲ್ಲ. ಈಗಿನ ಶಿಕ್ಷಣ ಕ್ರಮದಿಂದ ನಿಮ್ಮ ಹೊರಗಿನ ಆಚಾರ ವಿಚಾರಗಳೂ ಸ್ಥಿತಿಗತಿಗಳೂ ಬದಲಾಗಿ ಬಿಟ್ಟಿವೆ. ಆದರೆ ಉದ್ಭಾವನ ಶಕ್ತಿಯಿಲ್ಲದಿರುವುದರಿಂದ ನಿಮಗೆ ದ್ರವ್ಯಸಂಪಾದನೆಗೆ ಮಾರ್ಗವಿಲ್ಲ. ನೀವು ಈ ಸಹಿಷ್ಣುಗಳಾದ ನೀಚ ಜಾತಿಗಳ ಮೆಲೇ ಇಷ್ಟುದಿನ ಅತ್ಯಾಚಾರ ನಡೆಸಿಕೊಂಡು ಬಂದಿದ್ದೀರಿ—

ಈಗ ಅವರು ನಿಮ್ಮ ಮೇಲೆ ಮುಯ್ಯಿ ತೀರಿಸಿಕೊಳ್ಳುವರು. ನೀವೊ 'ಹಾ ನೌಕರಿ; ಹೂ 'ನೌಕರಿ' ಎಂದುಕೊಂಡು ನಿರ್ನಾಮವಾಗಿ ಬಿಡುತ್ತೀರಿ.

ಶಿಷ್ಯ :—ಮಹಾಶಯರೆ ಇತರ ದೇಶದೊಡನೆ ಹೋಲಿಸಿದರೆ ನಮ್ಮ ದೇಶದ ಉದ್ಭಾವನ ಶಕ್ತಿ ಅಲ್ಪವಾದರೂ ಭರತಖಂಡದ ಇತರ ಜಾತಿಯ ಜನಗಳು ಮಾತ್ರ ನಮ್ಮ ಬುದ್ಧಿಯಿಂದಲೇ ನಡೆಸಲ್ಪಡುತ್ತಿದ್ದಾರೆ. ಆದ್ದರಿಂದ ಬ್ರಾಹ್ಮಣ ಕಾಯಸ್ಥ ಮುಂತಾದ ಮೇಲುಜಾತಿಯವರನ್ನು ಜೀವನ ಸಂಗ್ರಾಮದಲ್ಲಿ ಸೋಲಿಸುವ ಶಕ್ತಿಯೂ ಶಿಕ್ಷಣವೂ ಇತರ ಜಾತಿಯವರಿಗೆ ಎಲ್ಲಿಂದ ಬರಬೇಕು ?

ಸ್ವಾಮಿಜಿ :—ನಿಮ್ಮ ಹಾಗೆ ಅವರು ಕೆಲವು ಪುಸ್ತಕಗಳನ್ನು ಓದಿಲ್ಲದೆ ಇರಲಿ, ನಿಮ್ಮ ಹಾಗೆ ಷರ್ಟು ಕೋಟು ಹಾಕಿಕೊಂಡು ದೊಡ್ಡ ಮನುಷ್ಯರಾಗುವುದನ್ನು ಕಲಿತುಕೊಂಡಿಲ್ಲದೆ ಇರಲಿ, ಆದರೇನು? ಅವರೇ ಜನಾಂಗದ ಮೇರುದಂಡ–ಎಲ್ಲಾ ದೇಶದಲ್ಲಿಯೂ ಈ ಇತರ ಶ್ರೇಣಿಯ ಜನರು ಕೆಲಸಬಿಟ್ಟು ಕುಳಿತರೆ ನೀವು ಅನ್ನ ಬಟ್ಟೆಗಳನ್ನೆಲ್ಲಿಂದ ತರುವಿರಿ? ಕಲ್ಕತ್ತೆಯಲ್ಲಿ ಒಂದು ದಿವಸ ಗುಡಿಸುವವರು ಕೆಲಸ ಮಾಡದೆ ನಿಂತು ಬಿಟ್ಟರೆ ಹಾಹಾಕಾರ ಹುಟ್ಟಹೋಗುತ್ತದೆ–ಮೂರುದಿನ ಅವರು ಕೆಲಸ ಮಾಡದೆ ನಿಂತುಬಿಟ್ಟರೆ, ಮಹಾ ಮಾರಿಯಿಂದ ಊರಿಗೆ ಊರೇ ಹಾಳಾಗಿ ಹೋಗುತ್ತದೆ. ಕಷ್ಟ ಜೀವಿಗಳಾದವರು ಕೈಕಟ್ಟಿಕೊಂಡು ಕುಳಿತರೆ ನಿಮಗೆ ಅನ್ನ ಬಟ್ಟೆಗಳು ದೊರೆಯುವುದಿಲ್ಲ. ಇವರನ್ನು ನೀವು ಕೀಳು ಜನರೆಂದು ಭಾವಿಸುತ್ತೀರಿ! ನೀವು ವಿದ್ಯಾವಂತರೆಂದು ಬಡಾಯಿ ಕೊಚ್ಚಿಕೊಳ್ಳುತ್ತೀರಿ!

ಜೀವನ ಸಂಗ್ರಾಮದಲ್ಲಿಯೆ ಸರ್ವದಾ ಮುಳುಗಿ ಹೋಗಿರುವುದರಿಂದ ಕೆಳಗಿನ ಶ್ರೇಣಿಯ ಜನರಿಗೆ ಇಷ್ಟು ದಿನವೂ ಜ್ಞಾನೋದಯವಾಗಿಲ್ಲ. ಇವರು ಮಾನವ ಬುದ್ಧಿಯಿಂದ ನಡೆಸಲ್ಪಟ್ಟ ಯಂತ್ರಗಳ ಹಾಗೆ ಒಂದೇ ಭಾವದಲ್ಲಿ ಇಷ್ಟು ದಿನವೂ ಕೆಲಸ ಮಾಡಿಕೊಂಡು ಬಂದಿರುತ್ತಾರೆ–ಮತ್ತು ಬುದ್ಧಿವಂತರೂ ಚತುರರೂ ಇವರ ಪರಿಶ್ರಮ ಸಂಪಾದನೆಗಳ ಸಾರವನ್ನು ಪಡೆದುಕೊಂಡಿರುತ್ತಾರೆ; ಸಮಸ್ತ ದೇಶದಲ್ಲಿಯೂ ಹೀಗೇ ಆಗಿದೆ. ಆದರೆ ಈಗ ಆ ಕಾಲ ಹೋಯಿತು. ಇತರ ಜಾತಿಯವರು ಈ ಸಂಗತಿಯನ್ನು ಕ್ರಮೇಣ ತಿಳಿದುಕೊಳ್ಳುತ್ತಾ ಇದ್ದಾರೆ ಮತ್ತು ಅದಕ್ಕೆ ವಿರೋಧವಾಗಿ

ಎಲ್ಲರೂ ಸೇರಿ ನಿಂತು ತಮಗೆ ನ್ಯಾಯವಾಗಿ ಸಲ್ಲಬೇಕಾದ ಸ್ಥಾನವನ್ನು ಪಡೆಯುವುದಕ್ಕೆ ದೃಢ ಪ್ರತಿಜ್ಞೆಯನ್ನು ಕೈಗೊಂಡಿದ್ದಾರೆ. ಯೂರೋಪಿನಲ್ಲಿಯೂ ಅಮೆರಿಕಾದಲ್ಲಿಯೂ ಇತರ ಜಾತಿಯವರು ಮೊದಲು ಎಚ್ಚೆತ್ತು ಈ ಜಗಳವನ್ನು ಆರಂಭಮಾಡಿದ್ದಾರೆ. ಭರತಖಂಡದಲ್ಲಿಯೂ ಅದರ ಲಕ್ಷಣವು ಕಂಡುಬರುತ್ತಿದೆ—ಕೀಳುಜಾತಿಯವರಲ್ಲಿ ಈಗ ಎಷ್ಟು ಮುಷ್ಕರವಿದೆ ಎಂಬುದರಿಂದಲೇ ಇದು ಗೊತ್ತಾಗುತ್ತದೆ. ಇನ್ನು ಸಾವಿರ ಸಾರಿ ಪ್ರಯತ್ನ ಪಟ್ಟರೂ ಮೇಲು ಜಾತಿಯವರು ಕೀಳು ಜಾತಿಯವರನ್ನು ತಡೆಯುವುದಕ್ಕಾಗುವುದಿಲ್ಲ. ಈಗ ಇತರ ಜಾತಿಯವರು ತಮಗೆ ನ್ಯಾಯವಾದ ಅಧಿಕಾರವನ್ನು ಪಡೆಯುವುದರಲ್ಲಿ ಸಹಾಯ ಮಾಡಿದರೆ ಅದರಿಂದ ಮೇಲುಜಾತಿಯವರಿಗೆ ಒಳ್ಳೆಯದು ಆಗುತ್ತದೆ.

ಅದಕ್ಕೆ ನಾನು ಹೇಳುವುದು, ಯಾತರಿಂದ ಈ ಸಾಧಾರಣ ಜನರಲ್ಲಿ ಜ್ಞಾನೋದಯವಾಗುತ್ತದೆಯೊ ಅದನ್ನು ಕೈಗೊಳ್ಳಿರಿ ಎಂದು. ಅವರಿಗೆ "ನೀವು ನಮ್ಮ ಸಹೋದರರು—ಶರೀರದ ಒಂದು ಅಂಗ—ನಾವು ನಿಮ್ಮನ್ನು ಪ್ರೀತಿಸುತ್ತೇವೆ—ದ್ವೇಷಿಸುವುದಿಲ್ಲ" ಎಂದು ತಿಳಿಸಿ, ಹೇಳಿ. ನಿಮ್ಮಿಂದ ಈ ಸಹಾನುಭೂತಿಯನ್ನು ಪಡೆದರೆ ಅವರು ನೂರರಷ್ಟು ಉತ್ಸಾಹದಿಂದ ಕಾರ್ಯತತ್ಪರರಾಗುತ್ತಾರೆ. ಆಧುನಿಕ ವಿಜ್ಞಾನ ಶಾಸ್ತ್ರದ ಸಹಾಯದಿಂದ ಅವರಿಗೆ ಜ್ಞಾನೋದಯವನ್ನು ಮಾಡಿಕೊಡಿ. ಚರಿತ್ರೆ, ಭೂಗೋಳ, ವಿಜ್ಞಾನ, ಸಾಹಿತ್ಯ—ಜೊತೆಜೊತೆಯಲ್ಲಿ ಧರ್ಮದ ಗೂಢ ತತ್ತ್ವ ಇವುಗಳನ್ನು ಹೇಳಿಕೊಡಿ. ಈ ವಿದ್ಯೆಗೆ ಫಲವಾಗಿ ಉಪಾಧ್ಯಾಯರ ದಾರಿದ್ರ್ಯವೂ ಅಡಗುತ್ತದೆ. ಆದಾನ ಪ್ರದಾನಗಳಿಂದ ಇಬ್ಬರೂ ಪರಸ್ಪರ ಮಿತ್ರರಂತಾಗುವರಿ.

ಶಿಷ್ಯ:—ಆದರೆ, ಮಹಾಶಯರೆ, ಅವರಲ್ಲಿ ವಿದ್ಯೆಯು ಹರಡಿದರೆ, ಅವರೂ ಕಾಲಕ್ರಮದಲ್ಲಿ ನಮ್ಮಹಾಗೆ ಬುದ್ಧಿ ವಿಕಾಸವನ್ನು ಪಡೆದು ಉದ್ಯಮ ಹೀನರೂ ಅಲಸರೂ ಆಗಿ ತಮ್ಮ ಕೆಳಗಿರುವ ಜನರು ಪಡುವ ಪರಿಶ್ರಮದ ಸಾರವನ್ನು ತೆಗೆದುಕೊಳ್ಳುವರಲ್ಲವೆ?

ಸ್ವಾಮಿಜಿ:—ಹಾಗೆ ಏಕೆ ಆಗುತ್ತದೆ? ಜ್ಞಾನೋದಯವಾದರೂ ಕುಂಬಾರ ಕುಂಬಾರನಾಗಿಯೆ ಇರುತ್ತಾನೆ, ಬೆಸ್ತ ಬೆಸ್ತನಾಗಿಯೆ ಇರುತ್ತಾನೆ, ರೈತ ರೈತನಾಗಿಯೆ ಇರುತ್ತಾನೆ. ಜಾತಿಯ ಕರ್ಮವನ್ನು ಏಕೆ ಬಿಡುತ್ತಾನೆ? "ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್"

—ಈ ಭಾವದಲ್ಲಿ ಶಿಕ್ಷಣವನ್ನು ಪಡೆದರೆ, ಇವರು ತಮ್ಮ ತಮ್ಮ ವೃತ್ತಿಯನ್ನು ಏಕೆ ಬಿಡುವರು? ಜ್ಞಾನ ಬಲದಿಂದ ತಮ್ಮ ಸಹಜ ಕರ್ಮವನ್ನು ಹೇಗೆ ಉತ್ತಮಗೊಳಿಸಬಹುದೊ ಹಾಗೇ ಯತ್ನಮಾಡುತ್ತಾರೆ. ಕಾಲಕ್ರಮದಲ್ಲಿ ಹತ್ತಾರುಜನ ಪ್ರತಿಭಾಶಾಲಿಗಳಾದವರು ಅವರಲ್ಲಿ ಹುಟ್ಟಿಯೆ ಹುಟ್ಟುತ್ತಾರೆ. ಅವರನ್ನು ನೀವು ಮೇಲುಜಾತಿಯವರು ನಿಮ್ಮ ಶ್ರೇಣಿಯೊಳಕ್ಕೆ ತೆಗೆದುಕೊಳ್ಳುತ್ತೀರಿ. ಬ್ರಾಹ್ಮಣರು ತೇಜಸ್ವಿಯಾದ ವಿಶ್ವಾಮಿತ್ರನನ್ನು ಬ್ರಾಹ್ಮಣನೆಂದು ಒಪ್ಪಿಕೊಂಡಾಗ ಕ್ಷತ್ರಿಯರು ಅವರಿಗೆ ಎಷ್ಟು ಕೃತಜ್ಞರಾಗಿದ್ದಿರಬಹುದು ನೋಡು! ಹೀಗೆ ಸಹಾನುಭೂತಿ ಮತ್ತು ಸಹಾಯಗಳನ್ನು ಪಡೆದರೆ, ಮನುಷ್ಯರು ಹಾಗಿರಲಿ, ಪಶುಪಕ್ಷಿಗಳೂ ನಮ್ಮವುಗಳಾಗಿಬಿಡುವುವು.

ಶಿಷ್ಯ :—ಮಹಾಶಯರೆ, ತಾವು ಹೇಳುವುದು ಸತ್ಯವಾದರೂ ಮೇಲುಜಾತಿಗೆ ಸೇರದವರಲ್ಲಿಯೆ ಈಗಲೂ ಬಹು ತಾರತಮ್ಯವಿದೆ ಎಂದು ಕಾಣುತ್ತದೆ. ಭರತಖಂಡದ ಇತರ ಜಾತಿಯವರಲ್ಲಿ ಮೇಲು ಜಾತಿಯವರಿಗೆ ಸಹಾನುಭೂತಿಯನ್ನು ತೋರುವುದು ಬಹು ಕಷ್ಟದ ಕೆಲಸವೆಂದು ತೋರುತ್ತದೆ.

ಸ್ವಾಮಿಜಿ :—ಅದು ಆಗದಿದ್ದರೆ ನಿಮಗೆ (ಮೇಲು ಜಾತಿಯವರಿಗೆ) ಮಂಗಳವುಂಟಾಗುವುದಿಲ್ಲ. ನೀವು ಹಿಂದಿನಿಂದ ಮಾಡಿಕೊಂಡು ಬಂದಿರುವಂತೆ ಒಂದು ಮನೆಯಲ್ಲಿ ಪರಸ್ಪರ ಜಗಳ ಮಾಡಿಕೊಂಡು ಎಲ್ಲರೂ ಧ್ವಂಸವಾಗಿಬಿಡುವಿರಿ. ಈ ಸಾಧಾರಣ ಜನರು ಯಾವಾಗ ಎಚ್ಚೆತ್ತುಬಿಡುವರೊ ಆಗ ಅವರು ತಮ್ಮ ಮೇಲೆ ನಡೆದ ನಿಮ್ಮ ಅತ್ಯಾಚಾರವನ್ನು ತಿಳಿದುಕೊಳ್ಳುವರು—ಆಗ ಅವರು ಉಃಫ್ ಎಂದು ಊದಿದರೆ ನೀವು ಎಲ್ಲೋ ಹೋಗಿ ಬೀಳುವಿರಿ! ಅವರೆ ನಿಮ್ಮಲ್ಲಿ ನಾಗರಿಕತೆಯನ್ನು ತಂದು ಕೊಟ್ಟಿದ್ದಾರೆ, ಅವರೇ ಆಗ ಎಲ್ಲವನ್ನೂ ಹಾಳುಮಾಡುತ್ತಾರೆ. ಯೋಚಿಸಿ ನೋಡು—ದೋಣಿ ನಡೆಸುವ ಸ್ಥಾನವು ಜನಾಂಗದ ಅಧೀನದಲ್ಲಿದೆ—ಅಂಥ ಪ್ರಾಚೀನ ರೋಮನ್ ನಾಗರಿಕತೆ, ಅದು ಎಲ್ಲಿಯೊ ಧ್ವಂಸವಾಗಿ ಹೋಯಿತು! ಅದಕ್ಕೋಸ್ಕರವೆ ನಾನು ಹೇಳುವುದು, ಈ ಕೀಳುಜಾತಿಯವರಿಗೆಲ್ಲಾ ವಿದ್ಯಾದಾನ ಜ್ಞಾನದಾನಗಳನ್ನು ಮಾಡಿ ಇವರ ನಿದ್ರೆಯನ್ನು ತಪ್ಪಿಸುವುದಕ್ಕೆ ಯತ್ನಶೀಲರಾಗಿ, ಎಂದು. ಇವರು ಎಚ್ಚೆತ್ತುಕೊಂಡರೆಂದರೆ—ಒಂದು ದಿನ ನಿಜವಾಗಿಯೂ ಎಚ್ಚೆತ್ತುಕೊಳ್ಳುವರು—ಆಗ

ಅವರೂ ನಿಮ್ಮಿಂದ ಆದ ಉಪಕಾರವನ್ನು ಮರೆಯುವುದಿಲ್ಲ. ನಿಮಗೆ ಕೃತಜ್ಞರಾಗಿರುತ್ತಾರೆ.

ಹೀಗೆ ಕಥೋಪಕಥನಗಳು ಆದಮೇಲೆ, ಸ್ವಾಮಿಜಿ ಶಿಷ್ಯನನ್ನು ಕುರಿತು ಹೇಳಿದ್ದೇನೆಂದರೆ–"ಆ ಸಂಗತಿಯೆಲ್ಲಾ ಈಗ ಹಾಗಿರಲಿ–ನೀನು ಈಗ ಏನನ್ನು ಸ್ಥಿರವಮಾಡಿಕೊಂಡೆ ಅದನ್ನು ಹೇಳು; ಯಾವುದಾದರೊಂದನ್ನು ಮಾಡು, ಇಲ್ಲವೆ ಯಾವುದಾದರೊಂದು ಕಸಬಿನ ಪ್ರಯತ್ನ ಮಾಡು, ಇಲ್ಲದಿದ್ದರೆ ನನ್ನ ಹಾಗೆ "ಆತ್ಮನೋ ಮೋಕ್ಷಾರ್ಥಂ ಪರ ಹಿತಾಯ ಚ"–ನಿಜವಾದ ಸನ್ಯಾಸ ಮಾರ್ಗದಲ್ಲಿ ಹೊರಟು ಬಾ. ಈ ಎರಡನೆಯ ಮಾರ್ಗವೆ ನಿಜವಾಗಿಯೂ ಶ್ರೇಷ್ಠವಾದ ಮಾರ್ಗ; ಅಯೋಗ್ಯ ಸಂಸಾರಿಯಾಗಿ ಆಗುವುದೇನು? ವಿಚಾರ ಮಾಡಿದರೆ ಎಲ್ಲವೂ ಕ್ಷಣಿಕವೆಂಬುದು ಗೊತ್ತಾಗುವದು–"ನಳಿನೀದಳಗತ ಜಲಮತಿ ತರಳಂ ತದ್ವಜ್ಜೀವಿತ ಮತಿಶಯಚಪಲಂ" ಆದ್ದರಿಂದ ಈ ಆತ್ಮಜ್ಞಾನವನ್ನು ಪಡೆಯುವುದಕ್ಕೆ ಉತ್ಸಾಹವಿದ್ದರೆ ಇನ್ನು ಕಾಲವಿಳಂಬ ಮಾಡಬೇಡ; ಮುಂದಾಗು. "ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್" ಅನ್ಯರಿಗೋಸ್ಕರ ನಿನ್ನ ಜೀವನವನ್ನು ಬಲಿಕೊಟ್ಟು ಜನರ ಮನೆಯ ಬಾಗಿಲು ಬಾಗಿಲಿಗೂ ಹೋಗಿ ಅಭಯವಾಣಿಯನ್ನು ಹೇಳು–"ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ನಿಬೋಧತ" ಎಂದು.

---

## ಅಧ್ಯಾಯ ೨೦

**ಸ್ಥಳ:**— ಬೇಲೂರು ಮಠ (ಬಾಡಿಗೆ ಕಟ್ಟಡ.) **ವರ್ಷ:**—ಕ್ರಿ. ಶ. ೧೮೯೮.

ಆಲಂಬಜಾರಿನಿಂದ ಬೇಲೂರಿನ ನೀಲಾಂಬರ ಬಾಬುವಿನ ತೋಟಕ್ಕೆ ಮಠ ಬಂದ ಸ್ವಲ್ಪ ದಿನಕ್ಕೆ ಸ್ವಾಮಿಜಿ ಪರಮಹಂಸರ ಭಾವವನ್ನು ಜನಸಾಧಾರಣರಲ್ಲಿ ಪ್ರಚಾರ ಮಾಡುವುದಕ್ಕಾಗಿ ಬಂಗಾಳಿ ಭಾಷೆಯಲ್ಲಿ ಒಂದು ಪತ್ರಿಕೆಯನ್ನು ಹೊರಡಿಸಬೇಕೆಂದು ತಮ್ಮ ಗುರುಭ್ರಾತೃಗಳೊಡನೆ ಪ್ರಸ್ತಾಪ ಮಾಡಿದರು. ಸ್ವಾಮಿಜಿ ಮೊದಲು ಒಂದು ದೈನಿಕ ಸಮಾಚಾರ ಪತ್ರದ ಪ್ರಸ್ತಾಪವನ್ನೆತ್ತಿದರು. ಆದರೆ ಅದು ಬಹುಧನ ಸಾಧ್ಯವಾದ್ದರಿಂದ

ಪಾಕ್ಷಿಕ ಪತ್ರಿಕೆಯನ್ನು ಹೊರಡಿಸುವುದೇ ಎಲ್ಲರಿಗೂ ಒಪ್ಪಿಗೆಯಾಗಿ ತ್ರಿಗುಣಾತೀತ ಸ್ವಾಮಿಗಳ ಮೇಲೆ ಅದನ್ನು ನಡೆಸುವ ಭಾರವು ಬಿತ್ತು. ಸ್ವಾಮಿಗಳ ಹತ್ತಿರ ಒಂದು ಸಾವಿರ ರೂಪಾಯಿ ಇತ್ತು; ಪರಮಹಂಸರ ಗೃಹಸ್ಥ ಭಕ್ತರೊಬ್ಬರು ಮತ್ತೊಂದು ಸಾವಿರವನ್ನು ಸಾಲವಾಗಿ ಕೊಟ್ಟರು –ಈ ಹಣದಿಂದ ಕಾರ್ಯಾರಂಭವಾಯಿತು. ಒಂದು ಮುದ್ರಣಯಂತ್ರ ವನ್ನು ಕೊಂಡು ಕೊಂಡು ಶ್ಯಾಮ ಬಜಾರಿನ ರಾಮಚಂದ್ರ ಮೈತ್ರಗಲ್ಲಿ ಯಲ್ಲಿರುವ ಶ್ರೀಯುತ ಗಿರೀಂದ್ರನಾಥ ಬಸಾಕರ ಮನೆಯಲ್ಲಿ ಮುದ್ರಾಲಯ ವನ್ನು ಇಟ್ಟಿದ್ದಾಯಿತು. ತ್ರಿಗುಣಾತೀತ ಸ್ವಾಮಿಜಿ ಹೀಗೆ ಕಾರ್ಯ ಭಾರವನ್ನು ಸ್ವೀಕರಿಸಿ ಕ್ರಿ. ಶ. ೧೮೯೯ ಮಾಘ ಶುದ್ಧ ಪಾಡ್ಯಮಿಯ ದಿವಸ ಈ ಪತ್ರಿಕೆಯನ್ನು ಪ್ರಕಾಶಪಡಿಸಿದರು. ಸ್ವಾಮಿಜಿ ಈ ಪತ್ರಿಕೆಗೆ "ಉದ್ಬೋಧನ" ವೆಂಬ ಹೆಸರನ್ನು ಕೊಟ್ಟು ಅದರ ಅಭಿವೃದ್ಧಿಗಾಗಿ ತ್ರಿಗುಣಾತೀತರಿಗೆ ಬಹುವಾಗಿ ಆಶೀರ್ವದಿಸಿದರು. ಸರ್ವಶ್ರಮ ಸಹಿಷ್ಣು ಗಳಾದ ತ್ರಿಗುಣಾತೀತ ಸ್ವಾಮಿಗಳು ಸ್ವಾಮಿಜಿ ಅಪ್ಪಣೆಯ ಮೇರೆ ಅದರ ಮುದ್ರಣ ಮತ್ತು ಪ್ರಚಾರಕ್ಕಾಗಿ ಎಷ್ಟು ಪರಿಶ್ರಮ ಪಟ್ಟರೆಂಬುದನ್ನು ತಿಳಿಸುವುದಕ್ಕೆ ಮತ್ತೊಂದು ದೃಷ್ಟಾಂತವು ಹುಡುಕಿದರೂ ಸಿಕ್ಕುವುದು ಕಷ್ಟ. ಕೆಲವುವೇಳೆ ಭಕ್ತ ಗೃಹಸ್ಥರಲ್ಲಿ ಭಿಕ್ಷಾನ್ನವನ್ನು ಪಡೆಯುತ್ತಲೂ, ಮತ್ತೆ ಕೆಲವು ವೇಳೆ ಕಾಲುನಡಿಗೆಯಲ್ಲಿ ಹತ್ತು ಹನ್ನೆರಡು ಮೈಲಿಗಳನ್ನು ನಡೆಯುತ್ತಲೂ ತ್ರಿಗುಣಾತೀತ ಸ್ವಾಮಿಗಳು ಈ ಪತ್ರಿಕೆಯ ಪ್ರಚಾರ ಕ್ಕಾಗಿ ಪ್ರಾಣವನ್ನಾದರೂ ಕೊಡುವುದಕ್ಕೆ ಹಿಂತೆಗೆಯದೆ ಕೆಲಸ ಮಾಡು ತ್ತಿದ್ದರು. ಅಲ್ಲದೆ ಆಗ ಕೆಲಸ ಮಾಡುವವರನ್ನು ದುಡ್ಡುಕೊಟ್ಟು ಇಟ್ಟು ಕೊಳ್ಳುವುದಕ್ಕೆ ಅನುಕೂಲವಿರಲಿಲ್ಲ; ಪತ್ರಿಕೆಗಾಗಿ ಗೊತ್ತುಮಾಡಿ ಇಟ್ಟಿದ್ದ ಹಣದಲ್ಲಿ ಪತ್ರಿಕೆಗೆ ಹೊರತು ಮತ್ತಾವುದಕ್ಕೂ ಒಂದು ಕಾಸನ್ನು ಉಪ ಯೋಗಿಸಕೂಡದೆಂದು ಸ್ವಾಮಿಜಿ ಆಜ್ಞೆಮಾಡಿದ್ದರು. ಆದ್ದರಿಂದ ತ್ರಿಗುಣಾ ತೀತ ಸ್ವಾಮಿಗಳು ಭಕ್ತಾದಿಗಳ ಮನೆಯಲ್ಲಿ ಭಿಕ್ಷೆ ಶಿಕ್ಷೆಗಳನ್ನು ಮಾಡಿ ಕೊಂಡು ತಮ್ಮ ಹೊಟ್ಟೆಯ ಪಾಡನ್ನು ಹೇಗೋ ಕಳೆದುಕೊಳ್ಳುತ್ತ ಈ ಅಪ್ಪಣೆಯನ್ನು ಅಕ್ಷರಶಃ ನಡೆಸಿದರು.

ಪತ್ರಿಕೆಯ ಪ್ರಸ್ತಾವನೆಯನ್ನು ಸ್ವಾಮಿಗಳೇ ಸ್ವಂತವಾಗಿ ಬರೆದು ಕೊಟ್ಟರು; ಮತ್ತು ಸ್ವಾಮಿಗಳು ಪರಮಹಂಸರ ಸನ್ಯಾಸಿ ಮತ್ತು ಗೃಹಸ್ತ ಭಕ್ತರೇ ಈ ಪತ್ರಿಕೆಯಲ್ಲಿ ಲೇಖನಗಳನ್ನು ಬರೆಯಬೇಕೆಂದೂ

ಅಶ್ಲೀಲವ್ಯಂಜಕವಾದ ಯಾವ ಪ್ರಕಟನೆ ಮುಂತಾದುವುಗಳನ್ನೂ ಈ ಪತ್ರಿಕೆ ಯಲ್ಲಿ ಹಾಕಕೂಡದೆಂದೂ ತಿಳಿಸಿದಂತೆ ಹೇಳುತ್ತಾರೆ. ಸ್ವಾಮಿಜಿ ಸಂಘ ರೂಪವಾಗಿ ಪರಿಣಿತವಾದ ರಾಮಕೃಷ್ಣ ಮಿಷನ್‌ನ ಸಭ್ಯರನ್ನು ಈ ಪತ್ರದಲ್ಲಿ ಲೇಖನಗಳನ್ನು ಬರೆಯುವಂತೆಯೂ, ಪತ್ರಿಕೆಯ ಸಹಾಯದಿಂದ ಪರಮ ಹಂಸರ ಧರ್ಮಸಂಬಂಧವಾದ ಅಭಿಪ್ರಾಯಗಳನ್ನು ಜನಸಾಧಾರಣರಲ್ಲಿ ಹರಡುವಂತೆಯೂ ಹೇಳಿದರು. ಪತ್ರಿಕೆಯ ಮೊದಲನೆಯ ಸಂಚಿಕೆ ಪ್ರಕಾಶಿತವಾಗಲು ಶಿಷ್ಯನು ಒಂದು ದಿವಸ ಮಠಕ್ಕೆ ಹೋದನು. ಸ್ವಾಮಿಜಿಗೆ ನಮಸ್ಕಾರಮಾಡಿ ಕುಳಿತುಕೊಳ್ಳಲು ಅವರು ಅವನೊಡನೆ ಉದ್ಬೋಧನದ ಸಂಬಂಧವಾಗಿ ಹೀಗೆ ಮಾತುಕಥೆಗಳಿಗೆ ಆರಂಭಮಾಡಿದರು :—

ಸ್ವಾಮಿಜಿ :— (ಪತ್ರಿಕೆಯ ಹೆಸರನ್ನು ವಿಕಾರಪಡಿಸಿ, ಹಾಸ್ಯ ಕ್ಕೋಸ್ಕರ) "ಉದ್ಬಂಧನ" ವನ್ನು ನೋಡಿದೆಯೊ?

ಶಿಷ್ಯ :—ನೋಡಿದೆ; ಚೆನ್ನಾಗಿದೆ.

ಸ್ವಾಮಿಜಿ :—ಈ ಪತ್ರಿಕೆಯ ಭಾವ, ಭಾಷೆ ಎಲ್ಲಾ ಹೊಸದಾದರಿ ಯಲ್ಲಿ ಬರಬೇಕು.

ಶಿಷ್ಯ :—ಹೇಗೆ?

ಸ್ವಾಮಿಜಿ :—ಪರಮಹಂಸರ ಭಾವವನ್ನು ಎಲ್ಲರಿಗೂ ಕೊಡಲೇ ಬೇಕು; ಅಲ್ಲದೆ ಬಂಗಾಳಾ ಭಾಷೆಗೆ ನೂತನವಾದ ಓಜಸ್ವಿತೆಯನ್ನು ತಂದು ಕೊಡಬೇಕು. ಹೇಗೆಂದರೆ– ಹೆಚ್ಚಾಗಿ ಕ್ರಿಯಾಪದವನ್ನು ಉಪಯೋಗ ಮಾಡಿದರೆ ಭಾಷೆಯ ಸತ್ತ್ವ ಕಡಿಮೆಯಾಗಿಬಿಡುತ್ತದೆ. ವಿಶೇಷಣಗಳಿಂದ ಕ್ರಿಯಾಪದದ ಉಪಯೋಗವನ್ನು ಕಡಿಮೆಮಾಡಬೇಕು. ನಾನು ಮೊದಲು ನೋಡಿ ಆಮೇಲೆ ಉದ್ಬೋಧನದಲ್ಲಿ ಅಚ್ಚಿಗೆ ಕೊಡುತ್ತೇನೆ.

ಶಿಷ್ಯ :—ಮಹಾಶಯರೆ, ತ್ರಿಗುಣಾತೀತ ಸ್ವಾಮಿಗಳು ಈ ಪತ್ರಿಕೆ ಗಾಗಿ ಪಡುತ್ತಿರುವ ಶ್ರಮ ಅನ್ಯರಿಗೆ ಸಾಧ್ಯವಿಲ್ಲ.

ಸ್ವಾಮಿಜಿ :—ಪರಮಹಂಸರ ಈ ಸನ್ಯಾಸೀ ಸಂತಾನರೆಲ್ಲಾ ಸುಮ್ಮನೆ ಮರದ ಕೆಳಗೆ ಬೆಂಕಿಯನ್ನು ಹೊತ್ತಿಸಿಕೊಂಡು ಕುಳಿತುಕೊಳ್ಳುವುದಕ್ಕಾಗಿ ಹುಟ್ಟಿದ್ದಾರೆಂದು ನೀನು ತಿಳಿದುಕೊಂಡಿರುವ ಹಾಗಿದೆ? ಇವರಲ್ಲಿ ಯಾರು ಯಾವಾಗ ಯಾವ ಕ್ಷೇತ್ರಕ್ಕೆ ಹೋದರೂ ಆಗ ಅವರ ಉದ್ಯಮವನ್ನು ನೋಡಿ ಜನರು ಬೆರಗಾಗುವರು. ಕಾರ್ಯವನ್ನು ಹೇಗೆ ಮಾಡ ಬೇಕೆಂಬುದನ್ನು ಇವರಿಂದ ಕಲಿತುಕೊ. ನೋಡು, ನನ್ನ ಮಾತನ್ನು

ನಡೆಸುವುದಕ್ಕಾಗಿ ತ್ರಿಗುಣಾತೀತನು ಸಾಧನ ಭಜನೆಗಳನ್ನೂ ಧ್ಯಾನ ಧಾರಣೆಗಳನ್ನೂ ಸಹ ಬಿಟ್ಟು ಕಾರ್ಯವನ್ನು ಕೈಗೊಂಡಿದ್ದಾನೆ. ಇದೇನು ಕಡಿಮೆ ತ್ಯಾಗದ ಮಾತೆ? ನನ್ನಲ್ಲಿ ಎಷ್ಟು ವಿಶ್ವಾಸದಿಂದ ಈ ಕರ್ಮ ಪ್ರವೃತ್ತಿಯುಂಟಾಗಿದೆ ಬಲ್ಲೆಯಾ? ಕಾರ್ಯ ಸಿದ್ಧಿಮಾಡಿ ಆಮೇಲೆ ಬಿಡುತ್ತಾನೆ! ನಿನಗೆ ಇಷ್ಟೊಂದು ದಾರ್ಢ್ಯವಿದೆಯೆ?

ಶಿಷ್ಯ:—ಆದರೆ, ಮಹಾಶಯರೆ, ಕಾವಿಯನ್ನುಟ್ಟ ಸನ್ಯಾಸಿಗಳು ಹೀಗೆ ಗೃಹಸ್ಥರ ಮನೆಯ ಬಾಗಿಲು ಬಾಗಿಲಿಗೂ ಅಲೆಯುವುದು ನನಗೆ ಹೇಗೆ ಹೇಗೋ ಕಾಣುತ್ತದೆ.

ಸ್ವಾಮಿಜಿ:—ಏಕೆ? ಪತ್ರಿಕೆಯ ಪ್ರಚಾರ ಗೃಹಿಗಳ ಕಲ್ಯಾಣ ಕ್ಕೋಸ್ಕರವೆ. ದೇಶದಲ್ಲಿ ಹೊಸಭಾವಗಳನ್ನು ಪ್ರಚಾರಗೊಳಿಸುವುದರ ಮೂಲಕ ಜನ ಸಾಧಾರಣರ ಕಲ್ಯಾಣ ಸಾಧಿತವಾಗಬೇಕು. ಫಲಾ ಕಾಂಕ್ಷೆಯಿಲ್ಲದೆ ಮಾಡುವ ಈ ಕರ್ಮ ಸಾಧನ ಭಜನೆಗಳಿಗಿಂತ ಕಡಿಮೆ ಯೆಂದು ಯೋಚಿಸಿಕೊಂಡಿದ್ದೀಯೊ? ನಮ್ಮ ಉದ್ದೇಶ ಜೀವಹಿತ ಸಾಧನ; ನಮಗೆ ಈ ಪತ್ರಿಕೆಯ ಆದಾಯದಿಂದ ದುಡ್ಡು ಕೂಡಿಹಾಕುವ ಯೋಚನೆ ಇಲ್ಲ. ನಾವು ಸರ್ವವನ್ನೂ ತ್ಯಾಗಮಾಡಿದ ಸನ್ಯಾಸಿಗಳು—ನಮಗೇನು ಹೆಂಡತಿ ಮಕ್ಕಳಿಲ್ಲ; ಅವರಿಗೋಸ್ಕರ ಏನಾದರೂ ಇಟ್ಟಿರಬೇಕೆನ್ನುವುದಕ್ಕೆ; ಕಾರ್ಯಸಾಧನೆ ಮತ್ತು ಸಂಪಾದನೆ, ಆದರೆ ಇದರ ಆದಾಯವೆಲ್ಲವೂ ಪ್ರಾಣಿ ಸೇವೆಗಾಗಿ ಉಪಯೋಗಿಸಲ್ಪಡುತ್ತದೆ. ಅಲ್ಲಲ್ಲಿ ಸಂಘಗಳ ಏರ್ಪಾಟು, ಸೇವಾಶ್ರಮ ಸ್ಥಾಪನ ಮತ್ತು ಇನ್ನೂ ನಾನಾ ಹಿತಕರವಾದ ಕಾರ್ಯಗಳಲ್ಲಿ ಇದರಿಂದ ಬಂದ ಹಣ ಸದ್ವ್ಯಯವಾಗುತ್ತದೆ. ನಾವೇನು ಗೃಹಸ್ಥರ ಹಾಗೆ ಸ್ವಂತ ಸಂಪಾದನೆಯ ಉದ್ದೇಶ್ಯವನ್ನಿಟ್ಟುಕೊಂಡು ಈ ಕೆಲಸ ಮಾಡುತ್ತಿಲ್ಲ. ಕೇವಲ ಪರಹಿತಕ್ಕಾಗಿಯೆ ನಮ್ಮ ಕಾರ್ಯ ಎಲ್ಲಾ—ಇದನ್ನು ತಿಳಿದುಕೊ.

ಶಿಷ್ಯ:— ಹಾಗಿದ್ದರೂ ಎಲ್ಲರೂ ಈ ಭಾವವನ್ನು ಗ್ರಹಿಸಲಾರರು.

ಸ್ವಾಮಿಜಿ:— ಗ್ರಹಿಸಲಾರದಿದ್ದರೆ ಬಿಡಲಿ; ನಮಗೆ ಅದರಿಂದ ಬರುವದೇನು ಹೋಗುವುದೇನು? ನಾವು ನಿಂದೆ ಸ್ತುತಿ ಇವನ್ನು ಲೆಕ್ಕ ಮಾಡಿಕೊಂಡು ಕೆಲಸದಲ್ಲಿ ಪ್ರವೇಶಿಸುವುದಿಲ್ಲ.

ಶಿಷ್ಯ:— ಮಹಾಶಯರೆ, ಈ ಪತ್ರಿಕೆ ಹದಿನೈದು ದಿನಕ್ಕೊಂದು ಸಾರಿ ಬರುತ್ತದೆ; ಇದು ವಾರ ಪತ್ರಿಕೆಯಾಗಬೇಕೆಂಬುದು ನನ್ನ ಇಚ್ಛೆ.

ಸ್ವಾಮಿಜಿ:—ಅದೇನೋ ನಿಜ, ಆದರೆ ದುಡ್ಡು ಎಲ್ಲಿದೆ? ಪರಮಹಂಸರ ಇಚ್ಛೆಯಿಂದ ದುಡ್ಡು ಜೊತೆಯಾದರೆ ಇದನ್ನು ಆಮೇಲೆ ದೈನಿಕವೂ ಬೇಕಾದರೆ ಮಾಡಬಹುದು. ದಿನವೂ ಲಕ್ಷಪ್ರತಿಗಳನ್ನು ಅಚ್ಚುಮಾಡಿಸಿ ಕಲ್ಕತ್ತೆಯ ಗಲ್ಲಿಗಲ್ಲಿಯೂ ದುಡ್ಡಿಲ್ಲದೆ ಹಂಚಬಹುದು.

ಶಿಷ್ಯ:—ತಮ್ಮ ಈ ಯೋಚನೆ ಬಹಳ ಚೆನ್ನಾಗಿದೆ.

ಸ್ವಾಮಿಜಿ:—ಕಾಗದವನ್ನು ಮಗ್ಗುಲಲ್ಲಿ ರಾಶಿಮಾಡಿ ನಿಲ್ಲಿಸಿ, ನಿನ್ನನ್ನು ಸಂಪಾದಕನನ್ನಾಗಿ ಮಾಡಿಬಿಡಬೇಕೆಂದು ನನ್ನ ಇಚ್ಛೆ; ಯಾವುದಾದರೂ ಒಂದು ಸಂಗತಿಯನ್ನು ಮೂಲೆಗೆ ಒತ್ತರಿಸುವುದಕ್ಕೆ ನಿನಗೆ ಇನ್ನೂ ಸಾಮರ್ಥ್ಯವಿಲ್ಲ. ಅದನ್ನು ಮಾಡುವುದಕ್ಕೆ ಈ ಸರ್ವತ್ಯಾಗಿಗಳಾದ ಸಾಧುಗಳೇ ಸಮರ್ಥರು; ಇವರು ಕೆಲಸ ಮಾಡಿ ಸಾಯುವರೇ ಹೊರತು ಓಂಜರಿಯುವ ಜನರಲ್ಲ. ಸ್ವಲ್ಪ ಅಡ್ಡಿ ಅಥವಾ ಸ್ವಲ್ಪ ನಿಂದೆ ಬಂದರೆ ಅಷ್ಟಕ್ಕೇ ನೀವು ಪ್ರಪಂಚವೇ ಅಂಧಕಾರಮಯವಾದಂತೆ ಭಾವಿಸುವಿರಿ.

ಶಿಷ್ಯ:—ಆ ದಿವಸ ನೋಡಿದೆ, ಸ್ವಾಮಿ ತ್ರಿಗುಣಾತೀತರು ಪರಮಹಂಸರ ಚಿತ್ರಪಟವನ್ನು ಮುದ್ರಾಲಯದಲ್ಲಿ ಪೂಜಿಸಿ ಆಮೇಲೆ ಕಾರ್ಯವನ್ನು ಆರಂಭಿಸಿದರು, ಮತ್ತು ಕಾರ್ಯ ಸಫಲವಾಗುವುದಕ್ಕೋಸ್ಕರ ತಮ್ಮ ಕೃಪೆಯನ್ನು ಪ್ರಾರ್ಥಿಸಿದರು.

ಸ್ವಾಮಿಜಿ:— ನಮ್ಮ ಕೇಂದ್ರ ಪರಮಹಂಸರೆ; ನಾವು ಪ್ರತಿಯೊಬ್ಬರೂ ಆ ಕೇಂದ್ರ ಜ್ಯೋತಿಯ ಒಂದೊಂದು ಕಿರಣ. ಪರಮಹಂಸರ ಪೂಜೆಮಾಡಿ ಕಾರ್ಯವನ್ನು ಆರಂಭಿಸಿದನೊ ಒಳ್ಳೆಯದು ಮಾಡಿದ. ನನಗೆ ಮಾತ್ರ ಯಾರೂ ಪೂಜೆಯ ಸಂಗತಿಯನ್ನು ಕುರಿತು ಏನೂ ಹೇಳಲಿಲ್ಲ.

ಶಿಷ್ಯ:—ಮಹಾಶಯರೆ, ಅವರು ತಮಗೆ ಹೆದರುವರು. ತ್ರಿಗುಣಾತೀತ ಸ್ವಾಮಿಗಳು "ನೀನು ಮೊದಲು ಸ್ವಾಮಿಗಳ ಹತ್ತಿರ ಹೋಗಿ ತಿಳಿದುಕೊಂಡು ಬಾ, ಮೊದಲನೆಯ ಸಂಚಿಕೆಯ ವಿಚಾರವಾಗಿ ಅವರು ಏನು ಅಭಿಪ್ರಾಯ ಪಡುತ್ತಾರೆಂದು; ಆಮೇಲೆ ನಾನು ಅವರನ್ನು ದರ್ಶನ ಮಾಡುತ್ತೇನೆ" ಎಂದು ಈವೊತ್ತು ಬೆಳಗ್ಗೆ ನನಗೆ ಹೇಳಿದರು.

ಸ್ವಾಮಿಜಿ:—ಹೋಗಿ ಹೇಳು, ನಾನು ಅವನ ಕಾರ್ಯದಿಂದ ಬಹಳ ಸಂತೋಷಪಟ್ಟಿದೇನೆಂದು; ಅವನಿಗೆ ನನ್ನ ಸ್ನೇಹಾಶೀರ್ವಾದಗಳನ್ನು ತಿಳಿಸು; ಅಲ್ಲದೆ ನಿಮ್ಮಲ್ಲಿ ಪ್ರತಿಯೊಬ್ಬರೂ ಸಾಧ್ಯವಾದಷ್ಟು ಅವನಿಗೆ

ಸಹಾಯಮಾಡಿ; ಅದರಿಂದ ದೇವರ ಕೆಲಸವೇ ಆಗುತ್ತದೆ.

ಈ ಮಾತುಗಳನ್ನು ಹೇಳಿ ಸ್ವಾಮಿಜಿ, ಬ್ರಹ್ಮಾನಂದ ಸ್ವಾಮಿಗಳನ್ನು ಹತ್ತಿರಕ್ಕೆ ಕರೆದು ಆವಶ್ಯಕತೆ ಬಿದ್ದರೆ ಮುಂದೆ 'ಉದ್ಬೋಧನ' ಕ್ಕಾಗಿ ತ್ರಿಗುಣಾತೀತರಿಗೆ ಮತ್ತಷ್ಟು ದುಡ್ಡನ್ನು ಕೊಡುವಂತೆ ಹೇಳಿದರು. ಆ ದಿವಸ ರಾತ್ರಿ ಊಟವಾದ ಮೇಲೆ ಸ್ವಾಮಿಜಿ ಪುನಃ ಶಿಷ್ಯನೊಡನೆ 'ಉದ್ಬೋಧನ' ಪತ್ರಿಕೆಯ ಸಂಬಂಧವಾಗಿ ಆಲೋಚನೆ ಮಾಡಿದರು. ಈ ಸಂದರ್ಭದಲ್ಲಿ ಅದನ್ನೂ ನಾವು ಇಲ್ಲಿ ಪಾಠಕರಿಗೆ ಹೇಳುತ್ತೇವೆ.

ಸ್ವಾಮಿಜಿ:—"ಉದ್ಬೋಧನವು" ಸಾಧಾರಣರಿಗೆ ಸಕಲ ವಿಚಾರ ಗಳಲ್ಲಿಯೂ ಜೀವನ ಪೋಷಕ ಆದರ್ಶಗಳನ್ನು ಕೊಡಬೇಕು. ಅಲ್ಲ, ಇಲ್ಲ ಎಂಬ ಭಾವ ಮನುಷ್ಯನನ್ನು ನಿರ್ಜೀವ ಮಾಡಿಬಿಡುತ್ತದೆ. ನೋಡು ತ್ತಿಲ್ಲವೆ, ತಾಯಿ ತಂದೆಗಳು ಹುಡುಗರನ್ನು ಹಗಲೂ ರಾತ್ರೆ ಓದಿ ಬರೆಯ ಬೇಕೆಂದು ಹೊಡೆಯುತ್ತಾ, 'ಇವನಿಂದ ಏನೂ ಆಗುವುದಿಲ್ಲ', 'ಶುದ್ಧ ಕತ್ತೆ' ಎಂದು ಬಯ್ಯುತ್ತಾ ಅವರ ಹುಡುಗರು ಅನೇಕ ಕಡೆಗಳಲ್ಲಿ ಹಾಗೇ ಆಗಿಬಿಡುತ್ತಾರೆ. ಹುಡುಗರಿಗೆ ಒಳ್ಳೆಯದನ್ನು ಹೇಳಿದರೆ—ಉತ್ಸಾ ಹವನ್ನು ಕೊಟ್ಟರೆ, ಕಾಲ ಕ್ರಮದಲ್ಲಿ ನಿಜವಾಗಿಯೂ ಒಳ್ಳೆಯದಾಗುತ್ತದೆ. ಹುಡುಗರ ವಿಚಾರದಲ್ಲಿ ಯಾವ ನಿಯಮವೋ ಭಾವ ಪ್ರಪಂಚದ ಉಚ್ಚ ಅಧಿಕಾರದ ದೃಷ್ಟಿಯಿಂದ ಯಾರು ಮಕ್ಕಳ ಹಾಗಿರುತ್ತಾರೋ ಅವರ ವಿಚಾರದಲ್ಲಿಯೂ ಹೀಗೆಯೆ. ಜೀವನವನ್ನು ಕಟ್ಟುವ ಭಾವಗಳನ್ನು ಕೊಡುತ್ತ ಬಂದರೆ ಸಾಧಾರಣರು ಮನುಷ್ಯರಾಗಿ ತಮ್ಮ ಕಾಲಮೇಲೆ ತಾವು ನಿಲ್ಲುವುದನ್ನು ಕಲಿಯುವರು. ಭಾಷೆ, ಸಾಹಿತ್ಯ, ದರ್ಶನ, ಕವಿತೆ, ಶಿಲ್ಪ ಇವುಗಳಲ್ಲಿಯೂ ಮನುಷ್ಯನು ಯೋಚಿಸುವ ಅಥವಾ ಮಾಡುವ ಸಮಸ್ತ ವಿಚಾರಗಳಲ್ಲಿಯೂ ತಪ್ಪನ್ನು ತೋರಿಸದೆ, ಇವುಗಳನ್ನು ಹೇಗೆ ಕ್ರಮ ಕ್ರಮವಾಗಿ ಮತ್ತೂ ಚೆನ್ನಾಗಿ ಮಾಡಬಹುದು ಅದನ್ನೇ ಹೇಳಿ ಕೊಡಬೇಕು. ಭ್ರಮ ಪ್ರಮಾದಗಳನ್ನು ತೋರಿಸಿದರೆ ಮನುಷ್ಯನ ಮನ ಸ್ಸಿಗೆ ನೋವು ಆಗುತ್ತದೆ. ಪರಮಹಂಸರಲ್ಲಿ ನಾನು ಇದನ್ನು ನೋಡಿದ್ದೆ— ಯಾರನ್ನು ನಾವು ಹೇಯರೆಂದು ತಿಳಿದಿದ್ದೆವೋ ಅಂಥವರಿಗೂ ಅವರು ಪ್ರೋತ್ಸಾಹಕೊಟ್ಟು ಜೀವನದಲ್ಲಿ ಅವರ ಮತಿಗತಿಗಳನ್ನು ತಿರುಗಿಸಿಬಿಡು ತ್ತಿದ್ದರು. ಅವರು ಶಿಕ್ಷಣ ಕೊಡುತ್ತಿದ್ದ ತರವೇ ಒಂದು ಅದ್ಭುತ ವ್ಯಾಪಾರ!

ಈ ಮಾತುಗಳನ್ನು ಹೇಳಿ ಸ್ವಾಮಿಜಿ ಸ್ವಲ್ಪ ಸ್ಥಿರರಾದರು. ಸ್ವಲ್ಪ ಹೊತ್ತಿನಮೇಲೆ ಪುನಃ ಹೇಳತೊಡಗಿದರು :—

"ಧರ್ಮ ಪ್ರಚಾರವೆಂದರೆ ಕೇವಲ ಯಾವುದೆಂದರೆ ಅದನ್ನು ತೆಗೆದುಕೊಂಡು ಯಾರೆಂದರೆ ಅವರ ಮೊಲೆ ಮುಸುಡಿಯನ್ನು ತಿರುಗಿಸುವ ಕೆಲಸವೆಂದು ತಿಳಿದುಕೊಳ್ಳಬೇಡ. Physical, mental, spiritual ಶರೀರ ಮನಸ್ಸು ಮತ್ತು ಆಧ್ಯಾತ್ಮಿಕ ಸಕಲ ಕಾರ್ಯಗಳಲ್ಲಿಯೂ ಮನುಷ್ಯನಿಗೆ ಪೋಷಕ ಭಾವಗಳನ್ನು ಕೊಡಬೇಕು ; ಹಾಗಲ್ಲದೆ ದ್ವೇಷಿಸಬಾರದು. ಒಬ್ಬರನ್ನೊಬ್ಬರು ದ್ವೇಷಿಸಿ ದ್ವೇಷಿಸಿಯೇ ನಿಮಗೆ ಅಧಃಪತನವುಂಟಾಗಿದೆ. ಈಗ ಕೇವಲ ಬಲಪ್ರದವಾಗುವ ಮತ್ತು ಜೀವಪೋಷಕವಾಗುವ ಭಾವವನ್ನೇ ಕೊಟ್ಟು ಜನರನ್ನು ಮೇಲಕ್ಕೆ ಹತ್ತಿಸಬೇಕು. ಮೊದಲು ಸಮಸ್ತ ಹಿಂದೂ ಜನರನ್ನೂ ಹೀಗೆ ಎತ್ತಬೇಕು; ಆಮೇಲೆ ಜಗತ್ತನ್ನು ಎತ್ತಬೇಕು. ಪರಮಹಂಸರು ಅವತಾರ ಮಾಡುವುದಕ್ಕೆ ಕಾರಣವೆ ಇದು. ಅವರು ಜಗತ್ತಿನಲ್ಲಿ ಯಾರ ಭಾವವನ್ನೂ ನಾಶಪಡಿಸಲಿಲ್ಲ. ಮಹಾ ಅದಃಪತಿತನಾದ ಮನುಷ್ಯನಿಗೂ ಅವರು ಅಭಯವನ್ನು ಕೊಟ್ಟು ಉತ್ಸಾಹವನ್ನು ಕೊಟ್ಟು ಮೇಲೆತ್ತುತ್ತಿದ್ದರು. ನಾವೂ ಅವರ ಪದಾನುಸರಣ ಮಾಡಿಕೊಂಡು ಎಲ್ಲರನ್ನೂ ಮೇಲಕ್ಕೆತ್ತಬೇಕು – ಎಚ್ಚರಗೊಳಿಸಬೇಕು – ತಿಳಿಯಿತೆ ?

"ನಿಮ್ಮ ಚರಿತ್ರೆ, ಸಾಹಿತ್ಯ, ಪುರಾಣ ಮುಂತಾದ ಶಾಸ್ತ್ರ ಗ್ರಂಥಗಳೆಲ್ಲಾ ಮನುಷ್ಯನಿಗೆ ಕೇವಲ ಭಯವನ್ನೇ ತೋರಿಸುತ್ತವೆ! ಅವನನ್ನು ಕುರಿತು ನೀನು ನರಕಕ್ಕೆ ಹೋಗುವೆ, ನಿನಗೆ ಇನ್ನು ಮಾರ್ಗವಿಲ್ಲ ಎಂದು ಮಾತ್ರ ಹೇಳುತ್ತವೆ. ಅದರಿಂದಲೇ ಈ ಉತ್ಸಾಹರಾಹಿತ್ಯವೂ ದೌರ್ಬಲ್ಯವೂ ಭರತಖಂಡಕ್ಕೆ ಅಸ್ಥಿಗತವಾಗಿಬಿಟ್ಟವೆ. ಆದಕಾರಣ ವೇದ ವೇದಾಂತಗಳ ಉಚ್ಚ ಉಚ್ಚ ಭಾವಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕಾಗಿದೆ. ಸದಾಚಾರ ಸದ್ವ್ಯವಹಾರ ವಿದ್ಯೆ ಶಿಕ್ಷಣ ಇವುಗಳನ್ನು ಕೊಟ್ಟು ಬ್ರಾಹ್ಮಣನನ್ನೂ ಚಂಡಾಲನನ್ನೂ ಒಂದು ಸಮಕ್ಕೆ ತಂದು ನಿಲ್ಲಿಸಬೇಕು. "ಉದ್ಬೋಧನ" ಪತ್ರಿಕೆಯಲ್ಲಿ ಇದನ್ನೆಲ್ಲಾ ಬರೆದು ಹುಡುಗರು ಮಕ್ಕಳು ಮುದುಕರು ಹೆಂಗಸರು ಎಲ್ಲರನ್ನೂ ಉದ್ಧಾರ ಮಾಡಿ, ಮತ್ತೆ ನೋಡೋಣ. ಹಾಗಾದರೆ, ನಿಮ್ಮ ವೇದ ವೇದಾಂತ ವ್ಯಾಸಂಗ ಸಾರ್ಥಕವಾಯಿತೆಂದು ತಿಳಿಯುತ್ತೇನೆ. ಏನೆನ್ನುತ್ತೀಯೆ— ಕೈಲಾಗುತ್ತದೆಯೊ ?

ಶಿಷ್ಯ :—ತಮ್ಮ ಆಶೀರ್ವಾದ ಮತ್ತು ಆದೇಶಗಳಾದರೆ ಎಲ್ಲ ಸಂಗತಿಗಳಲ್ಲಿಯೂ ಜಯಶೀಲನಾಗುವೆನೆಂದು ತೋರುತ್ತದೆ.

ಸ್ವಾಮಿಜಿ :—ಮತ್ತೊಂದು ಮಾತು – ಶರೀರವನ್ನು ಬಲಯುತವಾಗಿ ಮಾಡಿಕೊಳ್ಳುವುದನ್ನು ನೀನು ಕಲಿಯಬೇಕು ಮತ್ತು ಇತರರಿಗೆ ಕಲಿಸಬೇಕು. ನೋಡಿಲ್ಲವೇ ಈಗಲೂ ನಾನು ನಿತ್ಯವೂ ಡಂಬೆಲ್ ಸಾಧನೆ ಮಾಡುತ್ತಿರುವುದನ್ನ? ನಿತ್ಯವೂ ಬೆಳಗ್ಗೆ ಸಾಯಂಕಾಲ ಸಂಚಾರ ಮಾಡು; ದೇಹಶ್ರಮಪಡು. ದೇಹವೂ ಮನಸ್ಸು ಸರಿಸಮನಾಗಿ ಅಭಿವೃದ್ಧಿಯಾಗುತ್ತ ಹೋಗಬೇಕು. ಎಲ್ಲದಕ್ಕೂ ಮತ್ತೊಬ್ಬರನ್ನು ನೆಚ್ಚಿಕೊಂಡು ಏಕೆ ಹೋಗುತ್ತಿರಬೇಕು? ಶರೀರವನ್ನು ಬಲಪಡಿಸಿಕೊಳ್ಳುವುದರ ಉಪಯೋಗವನ್ನು ತಿಳಿದುಕೊಂಡರೆ ಆಮೇಲೆ ತಾವೇ ಇದರಲ್ಲಿ ಪ್ರವರ್ತಿಸುತ್ತಾರೆ. ಉಪಯೋಗವನ್ನು ತಿಳಿಸುವುದಕ್ಕೇ ಈ ಶಿಕ್ಷಣ ಬೇಕಾಗಿರುವುದು.

---

## ಅಧ್ಯಾಯ ೨೧

**ಸ್ಥಳ :—ಕಲ್ಕತ್ತ, ವರ್ಷ :—ಕ್ರಿ.ಶ. ೧೮೯೮.**

ಈಗ ಮೂರು ದಿನಗಳಿಂದ ಸ್ವಾಮಿಜಿ ಬಾಗಬಜಾರಿನ ಬಲರಾಮಬಸುಗಳ ಮನೆಯಲ್ಲಿದ್ದಾರೆ. ಪ್ರತಿನಿತ್ಯವೂ ಅಸಂಖ್ಯ ಜನರ ಗುಂಪು. ಸ್ವಾಮಿ ಯೋಗಾನಂದರೂ ಸ್ವಾಮಿಜಿ ಜೊತೆಯಲ್ಲಿ ಇರುತ್ತಿದ್ದಾರೆ. ಇಂದು ಸಿಸ್ಟರ್ ನಿವೇದಿತಾಳನ್ನು ಜೊತೆಯಲ್ಲಿ ಕರೆದುಕೊಂಡು ಸ್ವಾಮಿಜಿ ಆಲಿಪುರದ ಮೃಗಶಾಲೆಯನ್ನು ನೋಡುವುದಕ್ಕೆ ಹೋಗುವರು. ಶಿಷ್ಯನು ಬರಲು ಅವನಿಗೂ ಯೋಗಾನಂದರಿಗೂ "ನೀವು ಮೊದಲು ಹೊರಟು ಹೋಗಿ – ನಾನು ನಿವೇದಿತಾಳನ್ನು ಕರೆದುಕೊಂಡು ಗಾಡಿಯಲ್ಲಿ ಸ್ವಲ್ಪ ಹೊತ್ತು ಬಿಟ್ಟುಕೊಂಡು ಬರುತ್ತೇನೆ" ಎಂದು ಹೇಳಿದರು.

ಯೋಗಾನಂದ ಸ್ವಾಮಿಜಿ ಶಿಷ್ಯನನ್ನು ಜೊತೆಯಲ್ಲಿ ಕರೆದುಕೊಂಡು ಸುಮಾರು ಎರಡೂವರೆ ಗಂಟೆಗೆ ಟ್ರಾಮ್ ಗಾಡಿಯ ಮೇಲೆ ಹೊರಟರು. ಆಗ ಕುದುರೆಯ ಟ್ರಾಮ್. ಸುಮಾರು ನಾಲ್ಕು ಗಂಟೆಯ ಹೊತ್ತಿಗೆ

ಮೃಗಶಾಲೆಗೆ ಬಂದು ಸೇರಿ ತೋಟಕ್ಕೆ ಆಗ ಸೂಪರಿಂಟೆಂಡೆಂಟರಾದ ಬಾಬು ರಾಮಬ್ರಹ್ಮ ಸಾನ್ಯಾಲ ರಾಯಬಹದ್ದೂರರನ್ನು ನೋಡಿದರು. ಸ್ವಾಮಿಜಿ ಬರುತ್ತಾರೆಂದು ಕೇಳಿ ರಾಮಬ್ರಹ್ಮ ಬಾಬುಗಳು ಬಹಳ ಸಂತೋಷಪಟ್ಟು ಸ್ವಾಮಿಜಿಯನ್ನು ಆದರಿಸಿ ಬರಮಾಡಿಕೊಳ್ಳುವುದಕ್ಕೋಸ್ಕರ ತೋಟದ ಬಾಗಿಲಲ್ಲಿ ನಿಂತುಕೊಂಡರು. ಸುಮಾರು ನಾಲ್ಕೂವರೆ ಗಂಟೆಯ ಹೊತ್ತಿಗೆ ಸ್ವಾಮಿಜಿ ನಿವೇದಿತಾಳನ್ನು ಕರೆದುಕೊಂಡು ಅಲ್ಲಿಗೆ ಬಂದರು. ರಾಮ ಬ್ರಹ್ಮ ಬಾಬುಗಳು ಪರಮ ಆದರದಿಂದ ಸ್ವಾಮಿಜಿಯನ್ನೂ ನಿವೇದಿ ತಾಳನ್ನೂ ಎದುರುಗೊಂಡು ಮೃಗಶಾಲೆಯೊಳಕ್ಕೆ ಕರೆದುಕೊಂಡು ಹೋದರು; ಮತ್ತು ಸುಮಾರು ಒಂದೂವರೆ ಗಂಟೆಯ ಹೊತ್ತು ಅವರ ಜೊತೆಯಲ್ಲಿ ತಿರುಗುತ್ತ ತೋಟದ ನಾನಾ ಸ್ಥಾನಗಳನ್ನು ತೋರಿಸುತ್ತ ಬಂದರು. ಯೋಗಾನಂದ ಸ್ವಾಮಿಗಳೂ ಶಿಷ್ಯನೊಡನೆ ಅವರ ಹಿಂದೆ ಹಿಂದೆಯೇ ಹೋದರು.

ರಾಮಬ್ರಹ್ಮ ಬಾಬುಗಳು ವನಸ್ಪತಿ ಶಾಸ್ತ್ರದಲ್ಲಿ ಒಳ್ಳೆಯ ಪಂಡಿತ ರಾಗಿದ್ದರು. ಆದ್ದರಿಂದ ಆ ತೋಟದಲ್ಲಿದ್ದ ನಾನಾ ವೃಕ್ಷಗಳನ್ನು ತೋರಿ ಸುತ್ತ ವನಸ್ಪತಿ ಶಾಸ್ತ್ರಾನುಸಾರವಾಗಿ ಮರಗಿಡಗಳಲ್ಲಿ ಕಾಲಕ್ರಮದಿಂದ ಎಂಥ ಕ್ರಮಪರಿಣತಿಯುಂಟಾಗುವುದೆಂಬುದನ್ನು ಆಗಾಗ್ಗೆ ವಿಚಾರ ಮಾಡುತ್ತ ಹೋಗುತ್ತಿದ್ದರು. ನಾನಾ ಜೀವ ಜಂತುಗಳನ್ನು ನೋಡುತ್ತ ಸ್ವಾಮಿಜಿ ಮಧ್ಯೆ ಮಧ್ಯೆ ಜೀವದ ಉತ್ತರೋತ್ತರ ಪರಿಣತಿಯ ಸಂಬಂಧ ವಾಗಿ ಡಾರ್ವಿನ್ ಮತವನ್ನು ವಿಚಾರ ಮಾಡುತ್ತ ಬಂದರು. ಶಿಷ್ಯನಿಗೆ ಇದು ಜ್ಞಾಪಕವಿದೆ, ಏನೆಂದರೆ–ಅವರು ಹಾವಿನ ಮನೆಗೆ ಬಂದು ಅಲ್ಲಿ ಚಕ್ರಾಕಾರವಾಗಿ ಸುತ್ತಿಕೊಂಡಿದ್ದ ಒಂದು ಘಟ ಸರ್ಪವನ್ನು ತೋರಿಸಿ "ಇದರಿಂದಲೆ ಆಮೇಲೆ ಆಮೆ ಬಂದದ್ದು. ಸರ್ಪ ಬಹುಕಾಲ ಒಂದೇ ಕಡೆ ಬಿದ್ದಿದ್ದು ಬಿದ್ದಿದ್ದು ಗಟ್ಟಿಯಾದ ಬೆನ್ನುಳ್ಳದ್ದಾಗಿದೆ" ಎಂದು ಹೇಳಿ ದರು. ಈ ಮಾತನ್ನು ಹೇಳಿ ಸ್ವಾಮಿಜಿ ಶಿಷ್ಯನನ್ನು ಕುರಿತು "ನೀವು ಆಮೆಯನ್ನು ತಿನ್ನುತ್ತೀರಿಯಲ್ಲವೆ? ಡಾರ್ವಿನ್ ಮತಾನುಸಾರವಾಗಿ ಈ ಹಾವೇ ಕಾಲಕ್ರಮದಲ್ಲಿ ಆಮೆಯಾಗಿ ಪರಿಣತವಾಗಿದೆ–ಆದ್ದರಿಂದ ನೀವು ಹಾವನ್ನೂ ತಿಂದ ಹಾಗಾಯಿತು!" ಎಂದು ಹಾಸ್ಯಮಾಡಿದರು.

ಶಿಷ್ಯನು ಈ ಮಾತನ್ನು ಕೇಳಿ ಅಸಹ್ಯದಿಂದ ಮುಖವನ್ನು ತಿರುಗಿಸಿ ಕೊಂಡು "ಮಹಾಶಯರೆ, ಒಂದು ಪದಾರ್ಥ ಕ್ರಮಪರಿಣತಿಯ ಮೂಲಕ

ಬೇರೆಯೊಂದು ಪದಾರ್ಥವಾಗಿ ಹೋದರೆ ಆಗ ಅದರ ಪೂರ್ವಾಕೃತಿ ಮತ್ತು ಸ್ವಭಾವಗಳು ಇರುವುದಿಲ್ಲ. ಆದ್ದರಿಂದ ಆಮೆಯನ್ನು ತಿಂದರೆ ಹಾವನ್ನು ತಿಂದಹಾಗಾಯಿತು ಎಂದು ಹೇಗೆ ಹೇಳುವಿರಿ?" ಎಂದು ಕೇಳಿದನು.

ಶಿಷ್ಯನ ಮಾತುಕೇಳಿ ಸ್ವಾಮಿಜಿ ರಾಮಬ್ರಹ್ಮ ಬಾಬುಗಳೂ ನಗುವುದಕ್ಕೆ ತೊಡಗಿದರು; ಮತ್ತು ಸಿಸ್ಟರ್ ನಿವೇದಿತಾಗೆ ಈ ಮಾತನ್ನು ತಿಳಿಸಲು ಆಕೆಯೂ ನಗುವುದಕ್ಕೆ ಮೊದಲು ಮಾಡಿದಳು. ಕ್ರಮವಾಗಿ ಎಲ್ಲರೂ ಹುಲಿ ಸಿಂಹಗಳನ್ನು ಇಟ್ಟಿದ್ದ ಮನೆಯ ಕಡೆಗೆ ತಿರುಗಿದರು.

ರಾಮಬ್ರಹ್ಮ ಬಾಬುಗಳ ಅಪ್ಪಣೆಯಂತೆ ಕಾವಲಿನವರು ಬೇಕಾದಷ್ಟು ಮಾಂಸವನ್ನು ತಂದು ನಮ್ಮಗಳೆದುರಿಗೆ ಹುಲಿ ಸಿಂಹಗಳಿಗೆ ಅದನ್ನು ತಿನ್ನಿಸುವುದಕ್ಕೆ ಮೊದಲುಮಾಡಿದರು. ಅವು ಸಂತೋಷದಿಂದ ಗರ್ಜಿಸುವುದನ್ನೂ ಮತ್ತು ಆತುರದಿಂದ ತಿನ್ನುವುದನ್ನೂ ನೋಡಿದ ಸ್ವಲ್ಪ ಹೊತ್ತಿಗೆ ಆ ತೋಟದ ಮಧ್ಯದಲ್ಲಿದ್ದ ರಾಮಬ್ರಹ್ಮ ಬಾಬುಗಳ ಮನೆಗೆ ನಾವೆಲ್ಲರೂ ಬಂದೆವು. ಅಲ್ಲಿ ಟೀ ಮತ್ತು ಫಲಾಹಾರಕ್ಕೆ ಏರ್ಪಾಡು ಆಗಿತ್ತು. ಸ್ವಾಮಿಜಿ ಸ್ವಲ್ಪವೇ ಸ್ವಲ್ಪ ಟೀಯನ್ನು ಕುಡಿದರು. ನಿವೇದಿತಾಳೂ ಟೀ ಕುಡಿದಳು. ಒಂದೇ ಮೇಜಿನ ಮೇಲೆ ಸಿಸ್ಟರ್ ನಿವೇದಿತಾ ಮುಟ್ಟಿದ ಪಕ್ವಾನ್ನ ಮತ್ತು ಟೀಯನ್ನು ತೆಗೆದುಕೊಳ್ಳುವುದಕ್ಕೆ ಶಿಷ್ಯನು ಸಂಕೋಚ ಪಡುತ್ತಿದ್ದುದನ್ನು ನೋಡಿ ಸ್ವಾಮಿಜಿ ಅವನಿಗೆ ಪುನಃ ಪುನಃ ಹೇಳಿ ಅದನ್ನು ತಿನ್ನಿಸಿದರು ಮತ್ತು ತಾವು ನೀರು ಕುಡಿದು ಮಿಕ್ಕದ್ದನ್ನು ಶಿಷ್ಯನಿಗೆ ಕುಡಿಯುವುದಕ್ಕೆ ಕೊಟ್ಟರು. ಆಮೇಲೆ ಡಾರ್ವಿನ್‌ನ ಕ್ರಮವಿಕಾಸವಾದದ ಮೇಲೆ ಸ್ವಲ್ಪ ಹೊತ್ತು ಮಾತು ಕಥೆಗಳು ನಡೆದುವು.

ರಾಮಬ್ರಹ್ಮ ಬಾಬು:—ಡಾರ್ವಿನ್ ಸಾಹೇಬನು ಕ್ರಮವಿಕಾಸ ಮತ್ತು ಅದಕ್ಕೆ ಕಾರಣ ಇವುಗಳ ಸಂಬಂಧವಾಗಿ ಹೇಳಿರುವುದರ ಮೇಲೆ ತಮ್ಮ ಅಭಿಪ್ರಾಯವೇನು?

ಸ್ವಾಮಿಜಿ:—ಡಾರ್ವಿನ್‌ನ ಮಾತು ನಿಜವಾದರೂ ಕ್ರಮವಿಕಾಸದ ಕಾರಣ ಸಂಬಂಧವಾಗಿ ಆತನು ಹೇಳಿರುವುದೇನು ಚರಮ ಸಿದ್ಧಾಂತವೆಂದು ನಾನು ಒಪ್ಪುವುದಿಲ್ಲ.

ರಾಮಬ್ರಹ್ಮ ಬಾಬು:—ಈ ವಿಷಯದಲ್ಲಿ ನಮ್ಮ ದೇಶದ ಪ್ರಾಚೀನ ಪಂಡಿತರು ಏನಾದರೂ ವಿಚಾರ ಮಾಡಿದ್ದಾರೆಯೇ?

ಸ್ವಾಮಿಜಿ:—ಸಾಂಖ್ಯದರ್ಶನದಲ್ಲಿ ಈ ವಿಷಯ ಸೊಗಸಾಗಿ ವಿಚಾರ

ಮಾಡಲ್ಪಟ್ಟಿದೆ. ಭರತಖಂಡದ ಪ್ರಾಚೀನ ದಾರ್ಶನಿಕರ ಸಿದ್ಧಾಂತವೇ ಕ್ರಮವಿಕಾಸವ ಕಾರಣ ಸಂಬಂಧವಾಗಿ ಚರಮ ಸಿದ್ಧಾಂತವೆಂಬುದು ನನ್ನ ಅಭಿಪ್ರಾಯ.

ರಾಮಬ್ರಹ್ಮ ಬಾಬು :—ಈ ಸಿದ್ಧಾಂತವನ್ನು ಸಂಕ್ಷೇಪವಾಗಿ ತಿಳಿಸುತ್ತಾಹೋದರೆ ಕೇಳಬೇಕೆಂದು ನನಗೆ ಆಶೆಯಾಗಿದೆ.

ಸ್ವಾಮಿಜಿ :—ನಿಮ್ಮ ಜಾತಿಯನ್ನು ಉಚ್ಚಜಾತಿಯಾಗಿ ಪರಿಣಿತಗೊಳಿಸುವುದಕ್ಕೆ ಪಾಶ್ಚಾತ್ಯರು ಹೇಳುವ ಜೀವನ ಸಂಗ್ರಾಮ, ಯೋಗ್ಯತಮವಾದದ್ದು ಮಾತ್ರ ಉಳಿದುಕೊಳ್ಳುವುದು, ಪ್ರಾಕೃತಿಕ ಚುನಾವಣೆ ಮುಂತಾದ ನಿಯಮಗಳೂ ಕಾರಣಗಳೂ ತಮಗೆ ಗೊತ್ತೇ ಇವೆ. ಪತಂಜಲಿ ದರ್ಶನದಲ್ಲಿ ಮಾತ್ರ ಇವೊಂದೂ ಕಾರಣವೆಂದು ತೋರಿಸಿಲ್ಲ. ಪತಂಜಲಿಗಳ ಮತವೇನೆಂದರೆ–ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಪರಿಣತಿಯು "ಪ್ರಕೃತಿಯ ಆಪೂರಣದಿಂದ" ಆಗುತ್ತದೆ. ಆವರಣದೊಡನೆ ಹಗಲೂ ರಾತ್ರಿ ಹೋರಾಡಿ ಅದು ಆಗುವುದೆಂಬುದಲ್ಲ. ನಾನು ವಿವೇಚನೆ ಮಾಡಿರುವುದರಲ್ಲಿ ಹೋರಾಟ ಮತ್ತು ಸ್ಪರ್ಧೆ ಇವು ಜೀವಕ್ಕೆ ಪೂರ್ಣತೆಯುಂಟಾಗುವುದರಲ್ಲಿ ಅನೇಕವೇಳೆ ಪ್ರತಿಬಂಧಕವಾಗಿ ನಿಲ್ಲುತ್ತವೆ. ಪಾಶ್ಚಾತ್ಯ ದರ್ಶನದಲ್ಲಿ ಹೇಳಿರುವಂತೆ ಸಾವಿರ ಜೀವಗಳ ಧ್ವಂಸವಾಗಿ ಒಂದು ಜೀವನದ ಕ್ರಮೋನ್ನತಿಯಾಗುವುದಾದರೆ-ಈ ಕ್ರಮವಿಕಾಸದಿಂದ ಸಂಸಾರದಲ್ಲಿ ವಿಶೇಷವಾದ ಯಾವುದೊಂದು ಉನ್ನತಿಯೂ ಆಗುವುದಿಲ್ಲವೆಂದು ಹೇಳಬೇಕಾಗುತ್ತದೆ. ಸಾಂಸಾರಿಕ ಉನ್ನತಿಯ ವಿಚಾರದಲ್ಲಿ ಇದನ್ನು ಒಪ್ಪಿಕೊಂಡರೂ ಆಧ್ಯಾತ್ಮಿಕ ವಿಕಾಸಕ್ಕೆ ಅದು ತುಂಬ ಪ್ರತಿಬಂಧಕವೆಂಬುದನ್ನು ಒಪ್ಪಿಕೊಳ್ಳಲೇ ಬೇಕು. ನಮ್ಮ ದೇಶದ ದಾರ್ಶನಿಕರ ಅಭಿಪ್ರಾಯವೇನೆಂದರೆ–ಜೀವ ಸಾಮಾನ್ಯವೂ ಪೂರ್ಣ ಆತ್ಮ; ಆತ್ಮ ವಿಕಾಸದ ತಾರತಮ್ಯವೆ ವಿಚಿತ್ರ ರೂಪದಲ್ಲಿ ಪ್ರಕೃತಿಯ ಅಭಿವ್ಯಕ್ತಿ ಮತ್ತು ವಿಕಾಸ. ಪ್ರಕೃತಿಯ ಅಭಿವ್ಯಕ್ತಿಗೂ ಮತ್ತು ವಿಕಾಸಕ್ಕೂ ಇರತಕ್ಕ ಪ್ರತಿಬಂಧಕಗಳನ್ನು ಪೂರ್ತಿಯಾಗಿ ತೆಗೆದುಹಾಕಿ ಬಿಟ್ಟ ಮೇಲೆ ಪೂರ್ತಿಯಾಗಿ ಆತ್ಮ ಪ್ರಕಾಶಿತವಾಗುವುದು. ಪ್ರಕೃತಿಯ ಅಭಿವ್ಯಕ್ತಿಯ ಕೆಳಗಣ ಮೆಟ್ಟಿಲುಗಳಲ್ಲಿ ಹೇಗಾದರೂ ಇರಲಿ, ಮೇಲಣ ಮೆಟ್ಟಿಲುಗಳಲ್ಲಿ ಪ್ರತಿಬಂಧಕಗಳನ್ನು ಅತಿಕ್ರಮಿಸಿ ಹೋಗುವುದು ಅವುಗಳೊಡನೆ ಹಗಲೂ ರಾತ್ರಿ ಯುದ್ಧಮಾಡುವುದರಿಂದಲ್ಲ; ಅಲ್ಲಿ ಶಿಕ್ಷೆ, ದೀಕ್ಷೆ, ಧ್ಯಾನಧಾರಣ,

ಮತ್ತು ಮುಖ್ಯವಾಗಿ ತ್ಯಾಗ ಇವುಗಳ ಮೂಲಕ ಪ್ರತಿಬಂಧಕಗಳು ಸರಿದುಹೋಗುವುದು ಅಥವಾ ಆತ್ಮವು ಹೆಚ್ಚು ಪ್ರಕಾಶಿತವಾಗುವುದು ಕಂಡು ಬರುತ್ತದೆ. ಆದ್ದರಿಂದ ಪ್ರತಿಬಂಧಕಗಳನ್ನು ಆತ್ಮ ಪ್ರಕಾಶದ ಕಾರ್ಯ ವೆಂದು ಹೇಳದೆ ಕಾರಣರೂಪವಾಗಿ ತಂದಿಡುವುದು ಮತ್ತು ಪ್ರಕೃತಿಯ ಈ ವಿಚಿತ್ರ ಅಭಿವ್ಯಕ್ತಿಯ ಸಹಾಯಕಾರಿಯೆಂದು ಹೇಳುವುದೂ ಯುಕ್ತಿ ಯುಕ್ತವಲ್ಲ. ಸಾವಿರ ಪಾಪಿಗಳನ್ನು ಸಂಹಾರಮಾಡಿ ಜಗತ್ತಿನಿಂದ ಪಾಪ ವನ್ನು ಹೋಗಲಾಡಿಸುವ ಪ್ರಯತ್ನದಿಂದ ಜಗತ್ತಿನಲ್ಲಿ ಪಾಪವು ಇನ್ನೂ ಹೆಚ್ಚುತ್ತದೆ. ಆದರೆ ಉಪದೇಶದ ಮೂಲಕ ಜೀವನನ್ನು ಪಾಪದಿಂದ ತಪ್ಪಿಸುವುದಾದರೆ ಆಮೇಲೆ ಪಾಪ ನಿಲ್ಲುವುದಿಲ್ಲ. ಈಗ ನೋಡಿ, ಪಾಶ್ಚಾತ್ಯರ ಜೀವಗಳ ಪರಸ್ಪರ ಸಂಗ್ರಾಮ ಮತ್ತು ಪೈಪೋಟಿಯ ಮೂಲಕ ಉತ್ತಮ ಸ್ಥಿತಿಯನ್ನು ಪಡೆಯುವ ಮತವು ಎಷ್ಟುಭಯಂಕರವಾಗಿ ಪರಿಣಮಿಸಿದೆ.

ರಾಮಬ್ರಹ್ಮ ಬಾಬುಗಳು ಸ್ವಾಮಿಜಿ ಮಾತನ್ನು ಕೇಳಿ ಸ್ತಂಭಿತ ರಾಗಿದ್ದು ಕೊನೆಗೆ ಹೇಳಿದ್ದೇನೆಂದರೆ:—'' ತಮ್ಮ ಹಾಗೆ ಪ್ರಾಚ್ಯ ಮತ್ತು ಪಾಶ್ಚಾತ್ಯ ದರ್ಶನಗಳಲ್ಲಿ ಅಭಿಜ್ಞರಾದ ಜನಗಳ ಅವಶ್ಯಕತೆಯು ಈಗ ಭರತಖಂಡದಲ್ಲಿ ವಿಶೇಷವಾಗಿದೆ. ಇಂಥವರು ಒಂದೇ ಮಾರ್ಗದಲ್ಲಿ ಶಿಕ್ಷಿತ ರಾದ ಜನರ ಭ್ರಮ ಪ್ರಮಾದಗಳನ್ನು ಬೆರಳಿನಿಂದ ತೋರಿಸಲು ಸಮ ರ್ಥರು. ತಮ್ಮ ಕ್ರಮವಿಕಾಸವಾದದ ನೂತನ ವ್ಯಾಖ್ಯಾನವನ್ನು ಕೇಳಿ ನನಗೆ ಪರಮ ಸಂತೋಷವಾಯಿತು.''

ಹೊರಡುವಾಗ ರಾಮಬ್ರಹ್ಮ ಬಾಬುಗಳು ತೋಟದ ಹೊಗಬಾಗಿಲಿನ ವರೆಗೆ ಬಂದು ಸ್ವಾಮಿಜಿಯನ್ನು ಕಳುಹಿಸಿಕೊಟ್ಟು ಇನ್ನೊಂದುಸಾರಿ ನಿದಾನ ವಾಗಿ ಒಬ್ಬರೇ ಇರುವಾಗ, ದರ್ಶನ ತೆಗೆದುಕೊಳ್ಳುವುದಾಗಿ ಮಾತು ಕೊಟ್ಟರು. ರಾಮಬ್ರಹ್ಮ ಬಾಬುಗಳಿಗೆ ಈ ಜೀವಮಾನದಲ್ಲಿ ಪುನಃ ಸ್ವಾಮಿಜಿ ಹತ್ತಿರ ಬರುವುದಕ್ಕೆ ಅವಕಾಶ ಸಿಕ್ಕಿತೋ ಇಲ್ಲವೋ ನನಗೆ ತಿಳಿಯದು; ಏಕೆಂದರೆ ಇದಾದ ಸ್ವಲ್ಪ ದಿನದ ಮೇಲೆ ಬಾಬುಗಳು ಸ್ವರ್ಗಸ್ಥರಾದರು.

ಶಿಷ್ಯನು ಯೋಗಾನಂದ ಸ್ವಾಮಿಗಳೊಡನೆ ಟ್ರಾಮ್‌ನಲ್ಲಿ ರಾತ್ರಿ ಎಂಟು ಗಂಟೆಯ ಹೊತ್ತಿಗೆ ಬಾಗಬಜಾರಿಗೆ ಹಿಂತಿರುಗಿ ಬಂದನು. ಸ್ವಾಮಿಜಿ ಇದಕ್ಕೆ ಸುಮಾರು ಹದಿನೈದು ನಿಮಿಷ ಮುಂಚೆ ಬಂದು

ವಿಶ್ರಾಂತಿಗೊಳ್ಳುತ್ತಿದ್ದರು. ಸುಮಾರು ಅರ್ಧಗಂಟೆ ವಿಶ್ರಮಿಸಿಕೊಂಡ ಮೇಲೆ ಅವರು ಬೈಠಕ್ ಖಾನೆಯಲ್ಲಿ ನಾವಿದ್ದ ಕಡೆಗೆ ಬಂದರು. ಆಗ ಅಲ್ಲಿ ಯೋಗಾನಂದ, ಶರಚ್ಚಂದ್ರ ಸರ್ಕಾರ್, ಶಶಿಭೂಷಣ ಘೋಷ್, ವಿಪಿನ ವಿಹಾರಿ ಘೋಷ್, ಶಾಂತಿರಾಮ ಘೋಷ್ ಮುಂತಾದ ಪರಿಚಿತರೂ ಸ್ನೇಹಿತರೂ ಮತ್ತು ಸ್ವಾಮಿಜಿ ದರ್ಶನಾರ್ಥವಾಗಿ ಬಂದಿದ್ದ ಅಪರಿಚಿತರಾದ ಐದು ಆರು ಜನರೂ ಇದ್ದರು. ಸ್ವಾಮಿಜಿ ಇಂದು ಮೃಗಶಾಲೆಯನ್ನು ನೋಡುವುದಕ್ಕೆ ಹೋಗಿ ರಾಮಬ್ರಹ್ಮ ಬಾಬುಗಳೊಡನೆ ಕ್ರಮ ವಿಕಾಸವಾದದ ಅಪೂರ್ವ ವಿಚಾರ ಮಾಡಿದ್ದರೆಂದು ಕೇಳಿ ಅವರೆಲ್ಲಾ ಈ ಪ್ರಸ್ತಾಪವನ್ನು ವಿಸ್ತಾರವಾಗಿ ಕೇಳಬೇಕೆಂದು ಮೊದಲೇ ಉತ್ಸುಕರಾಗಿದ್ದರು. ಆದ್ದರಿಂದ ಅವರು ಬಂದಕೂಡಲೆ ಎಲ್ಲರ ಅಭಿಪ್ರಾಯವನ್ನೂ ತಿಳಿದುಕೊಂಡ ಶಿಷ್ಯನು ಆ ಮಾತನ್ನೇ ಎತ್ತಿದನು.

ಶಿಷ್ಯ :—ಮಹಾಶಯರೆ, ಮೃಗಶಾಲೆಯಲ್ಲಿ ಕ್ರಮ ವಿಕಾಸದ ವಿಚಾರವಾಗಿ ತಾವು ಹೇಳಿದ್ದನ್ನು ನಾನು ಚೆನ್ನಾಗಿ ಅರ್ಥ ಮಾಡಿಕೊಳ್ಳುವುದಕ್ಕಾಗಲಿಲ್ಲ. ದಯೆಮಾಡಿ ಸುಲಭವಾದ ಮಾತಿನಲ್ಲಿ ಅದನ್ನು ಪುನಃ ಅಪ್ಪಣೆ ಕೊಡಿಸೋಣವಾಗುತ್ತದೆಯೆ ?

ಸ್ವಾಮಿಜಿ :—ಏಕೆ, ಅರ್ಥವಾಗಲಿಲ್ಲವೆ ?

ಶಿಷ್ಯ:—ತಾವೆ ಮಿಕ್ಕ ಅನೇಕ ಸಮಯಗಳಲ್ಲಿ ನನಗೆ ಹೇಳಿದ್ದೀರಿ– ಹೊರಗಿನ ಶಕ್ತಿಗಳೊಡನೆ ಯುದ್ಧ ಮಾಡುವುದಕ್ಕೆ ತಕ್ಕ ಸಾಮರ್ಥ್ಯವೆ ಜೀವನದ ಚಿಹ್ನೆ, ಅದೇ ಉನ್ನತಿಗೆ ಸೋಪಾನ ಎಂದು. ಈ ದಿವಸ ಅದಕ್ಕೆ ವಿರೋಧವಾಗಿ ಹೇಳಿದಂತಿತ್ತು.

ಸ್ವಾಮಿಜಿ :— ವಿರೋಧವಾಗಿ ಯಾಕೆ ಹೇಳಲಿ? ನೀನೇ ತಿಳಿದುಕೊಳ್ಳಲಾರದೆ ಹೋದೆ. ಪ್ರಾಣಿ ಜಗತ್ತಿನಲ್ಲಿ ನಾವು ನಿಜವಾಗಿಯೂ ಜೀವನ ಸ್ಪರ್ಧೆ, ಯೊಗ್ಯತಮವೇ ಉಳಿಯುವುದು ಮುಂತಾದ ನಿಯಮಗಳನ್ನು ಸ್ಪಷ್ಟವಾಗಿ ನೋಡಬಹುದು. ಅದರಿಂದಲೇ ಡಾರ್ವಿನ್‌ನ ಮತ ಕೆಲವು ಮಟ್ಟಿಗೆ ನಿಜವೆಂದು ತೋರುತ್ತದೆ. ಆದರೆ ಬುದ್ಧಿಯ ವಿಕಾಸವುಳ್ಳ ಮನುಷ್ಯ ಜಗತ್ತಿನಲ್ಲಿ ಈ ನಿಯಮದ ವಿರೋಧವೇ ಕಂಡುಬರುತ್ತದೆ. ಇದನ್ನು ಯೋಚಿಸಿನೋಡು, ಯಾರನ್ನು ನಾವು ನಿಜವಾಗಿಯೂ ಮಹಾತ್ಮರು ಅಥವಾ ಆದರ್ಶಪುರುಷರು ಎಂದು ಬಲ್ಲೆವೋ ಅವರಲ್ಲಿ ಬಾಹ್ಯ ಹೋರಾಟ ಸುತರಾಂ ಇರುವುದಿಲ್ಲ. ಮನುಷ್ಯೇತರ ಪ್ರಾಣಿ ಜಗತ್ತಿನಲ್ಲಿ

ಜ್ಞಾನದ ಪ್ರಾಬಲ್ಯ ಸ್ವಾಭಾವಿಕ. ಮನುಷ್ಯನಾದರೋ ಎಷ್ಟೆಷ್ಟು ದೊಡ್ಡವನಾದರೆ ಅಷ್ಟಷ್ಟು ಅವನಲ್ಲಿ ಬುದ್ಧಿಯ ವಿಕಾಸ. ಆದ್ದರಿಂದ ಪ್ರಾಣಿಗಳಂತೆ ಮಾನವ ಪ್ರಪಂಚದಲ್ಲೂ ಪರರನ್ನು ಧ್ವಂಸಮಾಡಿ ಅದರ ಮೂಲಕ ಉನ್ನತಿ ಆಗುವುದು ಸಾಧ್ಯವಲ್ಲ. ಮಾನವನ ಸರ್ವಶ್ರೇಷ್ಠ ಪೂರ್ಣ ವಿಕಾಸ ತ್ಯಾಗ ವೊಂದರಿಂದಲೇ ಸಾಧಿತವಾಗುತ್ತದೆ. ಯಾರು ಅನ್ಯರಿಗೋಸ್ಕರ ಎಷ್ಟೆಷ್ಟು ತ್ಯಾಗ ಮಾಡಬಲ್ಲರೊ ಅವರು ಮನುಷ್ಯರಲ್ಲಿ ಅಷ್ಟಷ್ಟು ಶ್ರೇಷ್ಠರಾಗುವರು. ಕೆಳಗಿನ ಮೆಟ್ಟಲಾದ ಪ್ರಾಣಿ ಜಗತ್ತಿನಲ್ಲಿ ಯಾವುದು ಎಷ್ಟನ್ನು ನಾಶಪಡಿಸಬಲ್ಲದೋ ಅದು ಅಷ್ಟು ಬಲಶಾಲಿಯಾದ ಮೃಗವಾಗುವುದು. ಆದ್ದರಿಂದ ಜೀವನ ಸಂಗ್ರಾಮ ಮತವು ಈ ಎರಡು ಪ್ರಪಂಚದಲ್ಲಿಯೂ ಒಂದೇ ಉಪಯೋಗವುಳ್ಳದ್ದು ಆಗಲಾರದು. ಮನುಷ್ಯನ ಸಂಗ್ರಾಮ ಆಗುವುದು ಮನಸ್ಸಿನಲ್ಲಿ. ಮನಸ್ಸನ್ನು ಯಾರು ಎಷ್ಟು ಸಂಯಮ ಮಾಡಿಕೊಂಡರೋ ಅವರು ಅಷ್ಟಷ್ಟು ದೊಡ್ಡವರಾಗಿದ್ದಾರೆ. ಮನಸ್ಸಿನ ವೃತ್ತಿಗಳೆಲ್ಲವೂ ಪೂರ್ತಿಯಾಗಿ ನಿರುದ್ಧವಾದರೆ ಆತ್ಮದ ವಿಕಾಸವುಂಟಾಗುವುದು. ಮಾನವೇತರ ಪ್ರಾಣಿ ಜಗತ್ತಿನಲ್ಲಿ ಸ್ಥೂಲ ದೇಹವನ್ನು ಕಾಪಾಡಿಕೊಳ್ಳುವುದಕ್ಕಾಗಿ ಸಂಗ್ರಾಮ ಕಂಡುಬರುತ್ತದೆ. ಮಾನವ ಜಗತ್ತಿನಲ್ಲಿ ಮನಸ್ಸಿನ ಮೇಲೆ ಆಧಿಪತ್ಯವನ್ನು ಪಡೆಯುವುದಕ್ಕೋಸ್ಕರ ಅಥವಾ ಸಾತ್ತ್ವಿಕ ವೃತ್ತಿಯನ್ನು ಪಡೆಯುವುದಕ್ಕೋಸ್ಕರ ಸಂಗ್ರಾಮ ನಡೆಯುವುದು. ಜೀವಂತ ವೃಕ್ಷ ಮತ್ತು ಕೊಳದ ನೀರಿನಲ್ಲಿ ಬಿದ್ದ ವೃಕ್ಷಚ್ಛಾಯೆ ಇವುಗಳ ಹಾಗೆ. ಮನುಷ್ಯೇತರ ಪ್ರಾಣಿ ಜಗತ್ತು ಮತ್ತು ಮನುಷ್ಯ ಜಗತ್ತು ಇವುಗಳಲ್ಲಿ ಸಂಗ್ರಾಮವು ವ್ಯತ್ಯಸ್ತವಾಗಿರುತ್ತದೆ.

ಶಿಷ್ಯ :—ಹಾಗಾದರೆ ತಾವು ನಮ್ಮ ಶಾರೀರಿಕ ಉನ್ನತಿಗೋಸ್ಕರ ಸಾಧನೆ ಮಾಡಬೇಕೆಂದು ಅಷ್ಟೊಂದೆಲ್ಲಾ ಹೇಳಿದ್ದೇಕೆ?

ಸ್ವಾಮಿಜಿ :—ನೀವೇನು ಮನುಷ್ಯರೆ? ಎಲ್ಲೋ ಸ್ವಲ್ಪ ಬುದ್ಧಿ ಇದೆ ಅಷ್ಟೆ; ದೇಹ ಚೆನ್ನಾಗಿಲ್ಲದಿದ್ದರೆ ಮನಸ್ಸಿನೊಡನೆ ಸಂಗ್ರಾಮ ಮಾಡುವುದು ಹೇಗೆ? ನೀವೇನು ಜಗತ್ತಿನ ಪೂರ್ಣವಿಕಾಸ ಎನ್ನಿಸಿಕೊಳ್ಳುವ ಮನುಷ್ಯರೆಂದುಕೊಂಡಿದ್ದೀರಾ? ಆಹಾರ ನಿದ್ರೆ ಹೆಂಗಸು ಇವುಗಳನ್ನು ಬಿಟ್ಟು ಮತ್ತೇನಿದೆ ನಿಮಗೆ? ಇನ್ನೂ ನಾಲ್ಕು ಕಾಲಿನಲ್ಲಿ ನಡೆಯುತ್ತಿಲ್ಲವಲ್ಲಾ ಅದೇ ಒಂದು ಪುಣ್ಯ. ಪರಮಹಂಸರು "ಯಾರಿಗೆ ಮಾನದಮೇಲೆ ಜ್ಞಾನವಿರುತ್ತದೆಯೊ ಅವನೇ ಮಾನುಷ" ಎಂದು ಹೇಳುತ್ತಿದ್ದರು; ನೀವೊ

'ಜಾಯಸ್ವ ಮ್ರಿಯಸ್ವ' ಎಂಬ ವಾಕ್ಯಗಳಿಗೆ ಸಾಕ್ಷೀಭೂತರಾಗಿ ಸ್ವದೇಶ ವಾಸಿಗಳಿಗೆ ಹಿಂಸಾ ಜನಕರೂ ವಿದೇಶೀಜನಗಳ ಅಗೌರವಕ್ಕೆ ಪಾತ್ರರೂ ಆಗಿದ್ದೀರಿ. ನೀವು ಮಾನವೇತರ ಪ್ರಾಣಿಗಳ ಮಧ್ಯೆ. ಅದಕ್ಕೋಸ್ಕರವೆ ಸಂಗ್ರಾಮ ಮಾಡಿರೆಂದೂ ಸಿದ್ಧಾಂತ ಗಿದ್ಧಾಂತ ಎಲ್ಲಾ ಕಟ್ಟಿ ಇಡಿ ಎಂದೂ ಹೇಳುವುದು. ನಿಮ್ಮ ನಿತ್ಯಗಟ್ಟಲೆಯ ಕೆಲಸವನ್ನೂ ನಡವಳಿಕೆ ಯನ್ನೂ ಸ್ಥಿರ ಬುದ್ಧಿಯಿಂದ ವಿವೇಚನೆ ಮಾಡಿನೋಡು ನೀವು ಮಾನವ ಮತ್ತು ಮಾನವೇತರ ಸ್ಥಾನಗಳ ಮಧ್ಯದಲ್ಲಿರುವ ಜೀವ ವಿಶೇಷಗಳು ಹೌದೊ ಅಲ್ಲವೊ ಎಂದು. ದೇಹವನ್ನು ಮೊದಲು ದೃಢಪಡಿಸು. ಆಮೇಲೆ ಮನಸ್ಸಿನ ಮೇಲೆ ಕ್ರಮೇಣ ಆಧಿಪತ್ಯ ಬರುತ್ತದೆ–"ನಾಯ ಮಾತ್ಮಾ ಬಲಹೀನೇನ ಲಭ್ಯಃ"; ತಿಳಿಯಿತೆ?

ಶಿಷ್ಯ:— ಮಹಾಶಯರೆ, "ಬಲಹೀನೇನ" ಎಂಬುದಕ್ಕೆ ಭಾಷ್ಯ ಕಾರರು ಮಾತ್ರ "ಬ್ರಹ್ಮಚರ್ಯ ಹೀನೇನ" ಎಂದು ಅರ್ಥಮಾಡಿದ್ದಾರೆ.

ಸ್ವಾಮಿಜಿ:— ಮಾಡಿಕೊಳ್ಳಲಿ; ನಾನು ದುರ್ಬಲವಾದ ಶರೀರ ವುಳ್ಳವರಿಗೆ ಆತ್ಮ ಸಾಕ್ಷಾತ್ಕಾರವಾಗುವುದಿಲ್ಲ ಎಂದು ಹೇಳುತ್ತೇನೆ.

ಶಿಷ್ಯ:— ಆದರೆ ಬಲವಿರುವ ಶರೀರದಲ್ಲಿ ಅನೇಕಸಾರಿ ಮಂದ ಬುದ್ಧಿಯೂ ಕಂಡುಬರುತ್ತದೆ.

ಸ್ವಾಮಿಜಿ:— ಅಂಥವರಿಗೆ ಕಷ್ಟಪಟ್ಟು ನೀನೇನಾದರೂ ಒಳ್ಳೆಯ ಭಾವವನ್ನು ಒಂದುಸಾರಿ ತಿಳಿಸಿಕೊಟ್ಟೆಯೆಂದರೆ ಅದನ್ನು ಅವರು ಎಷ್ಟು ಜಾಗ್ರತೆಯಾಗಿ ಕಾರ್ಯರೂಪದಲ್ಲಿ ಪರಿಣತವಾಡಬಲ್ಲರೊ ಅಷ್ಟು ಜಾಗ್ರತೆಯಾಗಿ ಹೀನವೀರ್ಯರಾದವರು ಮಾಡಲಾರರು. ನೋಡಿಲ್ಲವೇ– ಕ್ಷೀಣವಾದ ದೇಹದಲ್ಲಿ ಕಾಮಕ್ರೋಧಗಳ ವೇಗವನ್ನು ತಡೆಯುವುದಕ್ಕಾಗು ವುದಿಲ್ಲ. ಒಣಕಲಾಗಿರುವ ಜನರು ಬಹುಬೇಗ ರೇಗಿಬಿಡುತ್ತಾರೆ–ಬಹು ಬೇಗ ಕಾಮಮೋಹಿತರಾಗಿ ಬಿಡುತ್ತಾರೆ.

ಶಿಷ್ಯ:— ಆದರೆ ಈ ನಿಯಮದ ವ್ಯತಿಕ್ರಮವೂ ಕಂಡುಬರುತ್ತದೆ.

ಸ್ವಾಮಿಜಿ:— ಅದು ಇಲ್ಲವೆಂದು ಯಾರು ಹೇಳುತ್ತಾರೆ? ಮನಸ್ಸಿನ ಮೇಲೆ ಒಂದುಸಾರಿ ಆಧಿಪತ್ಯ ಬಂದುಬಿಟ್ಟಿತೆಂದರೆ ಆಮೇಲೆ ದೇಹ ಬಲ ವಾಗಿರಲಿ ಒಣಗಿಕೊಂಡೆ ಇರಲಿ, ಆದರಿಂದ ಏನೂ ಬರುವುದೂ ಇಲ್ಲ ಹೋಗುವುದೂ ಇಲ್ಲ. ಒಟ್ಟು ಮಾತೇನೆಂದರೆ, ದೇಹವು ಚೆನ್ನಾಗಿಲ್ಲದಿದ್ದರೆ ಅಂಥವನು ಆತ್ಮಜ್ಞಾನಕ್ಕೆ ಅಧಿಕಾರಿಯೇ ಆಗುವುದಿಲ್ಲ. ಪರಮಹಂಸರು

"ಶರೀರದಲ್ಲಿ ಸತ್ತ್ವವು ಅಲ್ಪ ಸ್ವಲ್ಪವಿದ್ದರೆ ಜೀವನು ಸಿದ್ಧನಾಗಲಾರನು" ಎಂದು ಹೇಳುತ್ತಿದ್ದರು.

ಈ ಮಾತುಗಳನ್ನು ಹೇಳುತ್ತ ಹೇಳುತ್ತ ಸ್ವಾಮಿಜಿ ಉತ್ತೇಜಿತರಾದದ್ದನ್ನು ನೋಡಿ, ಶಿಷ್ಯನು ಧೈರ್ಯವಾಗಿ ಮತ್ತಾವ ಮಾತನ್ನೂ ಹೇಳಲಾರದೇ ಹೋದನು. ಸ್ವಾಮಿಜಿ ಸಿದ್ಧಾಂತವನ್ನು ಒಪ್ಪಿಕೊಂಡು ಸುಮ್ಮನಾದನು. ಸ್ವಲ್ಪ ಹೊತ್ತಿನ ಮೇಲೆ ಸ್ವಾಮಿಜಿ ಅಲ್ಲಿದ್ದವರಿಗೆಲ್ಲಾ ಗುಟ್ಟಾಗಿ ಹೇಳಿದ್ದೇನೆಂದರೆ–"ಮತ್ತೊಂದು ಸಂಗತಿಯನ್ನು ಕೇಳಿದಿರಾ? ಇವೊತ್ತು ಈ ಭಟ್ಟಾಚಾರ್ಯ ಬ್ರಾಹ್ಮಣನು ನಿವೇದಿತೆಯ ಎಂಜಲನ್ನು ತಿಂದು ಬಂದಿದ್ದಾನೆ. ಆಕೆ ಮುಟ್ಟಿದ ಅನ್ನವನ್ನು ತಿನ್ನಲಿಲ್ಲವೆಂದು ತೋರುತ್ತದೆ–ಅದರಿಂದ ಆಗುವುದೇನು ಹೋಗುವುದೇನು–ಆದರೆ ಆಕೆ ಮುಟ್ಟಿದ ನೀರನ್ನು ಕುಡಿದದ್ದು ಹೇಗೆ?

ಶಿಷ್ಯ:—ಅದು ತಮ್ಮ ಆಜ್ಞೆಯಿಂದಲೇ ಮಾಡಿದ್ದು. ಗುರುವಿನ ಆಜ್ಞಾನುಸಾರವಾಗಿ ನಾನು ಏನು ಬೇಕಾದರೂ ಮಾಡುತ್ತೇನೆ. ನೀರು ಕುಡಿಯುವುದಕ್ಕೆ ನನಗೇನೋ ಇಷ್ಟವಿರಲಿಲ್ಲ; ಆದರೆ ತಾವು ಕುಡಿದು ಕೊಟ್ಟಿದ್ದರಿಂದ ಪ್ರಸಾದವೆಂದು ಕುಡಿದೆ.

ಸ್ವಾಮಿಜಿ:—ನಿನ್ನ ಜಾತಿ ಹಾಳಾಗಿ ಹೋಯಿತು; ಇನ್ನು ನೀನು ಭಟ್ಟಾಚಾರ್ಯ ಬ್ರಾಹ್ಮಣನೆಂದರೆ ಯಾರೂ ಒಪ್ಪುವುದಿಲ್ಲ.

ಶಿಷ್ಯ:—ಒಪ್ಪದಿದ್ದರೆ ಬಿಡಲಿ; ನಾನು ತಮ್ಮ ಆಜ್ಞೆಯನ್ನು ಅನುಸರಿಸಿ ಚಂಡಾಲನ ಮನೆಯ ಅನ್ನವನ್ನೂ ತಿನ್ನಬಲ್ಲೆ.

ಇದನ್ನು ಕೇಳಿ ಸ್ವಾಮಿಗಳೂ ಮತ್ತು ಅಲ್ಲಿದ್ದವರೂ ಗಟ್ಟಿಯಾಗಿ ನಗಲಾರಂಭಿಸಿದರು.

ಈ ಮಾತು ಕಥೆಗಳಲ್ಲಿ ರಾತ್ರಿ ಸುಮಾರು ಹನ್ನೆರಡೂವರೆ ಗಂಟೆಯಾಗಿಬಿಟ್ಟಿತು. ಶಿಷ್ಯನು ತಾನು ವಾಸನಾಗಿದ್ದ ಮನೆಗೆ ಹಿಂತಿರುಗಿ ಬಂದು ನೋಡಲು ಬಾಗಿಲು ಹಾಕಿಬಿಟ್ಟಿತ್ತು; ಎಷ್ಟು ಕೂಗಿದರೂ ಯಾರೂ ಏಳದಿರಲು ವಿಧಿಯಿಲ್ಲದೆ ಮನೆಯ ಜಗುಲಿಯ ಮೇಲೆ ಮಲಗಿಕೊಂಡು ರಾತ್ರಿಯನ್ನು ಕಳೆಯಬೇಕಾಗಿ ಬಂತು.

ಕಾಲಚಕ್ರದ ಕಠೋರ ಪರಿವರ್ತನದಿಂದ, ಸ್ವಾಮಿಜಿ ಯೋಗಾನಂದರೂ, ಸಿಸ್ಟರ್ ನಿವೇದಿತೆಯೂ ಈಗ ನರಶರೀರದಲ್ಲಿಲ್ಲ! ಅವರ ಜೀವನದ ಪವಿತ್ರ ಸ್ಮೃತಿಯೊಂದು ಮಾತ್ರ ಉಳಿದುಕೊಂಡಿದೆ–ಅವರ ಮಾತು

ಕಥೆಗಳನ್ನು ಅಲ್ಪಸ್ವಲ್ಪ ಬರೆಯುಲು ಸಮರ್ಥನಾದ್ದರಿಂದ ಶಿಷ್ಯನು ತಾನು ಧನ್ಯನೆಂದು ಭಾವಿಸುವನು.

---

## ಅಧ್ಯಾಯ ೨೨

**ಸ್ಥಳ:—ಬೇಲೂರು ಮಠ (ಬಾಡಿಗೆ ಕಟ್ಟಡ.) ವರ್ಷ:-ಕ್ರಿ. ಶ. ೧೮೯೮.**

ಇಂದು ಸುಮಾರು ಎರಡು ಗಂಟೆಯ ಹೊತ್ತಿಗೆ ಶಿಷ್ಯ ಮಠಕ್ಕೆ ನಡೆದು ಕೊಂಡು ಬಂದಿದ್ದಾನೆ. ನೀಲಾಂಬರ ಬಾಬುಗಳ ತೋಟದ ಮನೆಗೆ ಈಗ ಮಠವನ್ನು ವರ್ಗಾಯಿಸಿದೆ. ಈಗಿನ ಮಠದ ನಿವೇಶನವನ್ನು ಕೊಂಡು ಕೆಲವು ದಿನಗಳಾಗಿವೆ. ಸ್ವಾಮಿಜಿ ಸುಮಾರು ನಾಲ್ಕುಗಂಟೆಯ ಹೊತ್ತಿಗೆ ಶಿಷ್ಯನನ್ನು ಜೊತೆಯಲ್ಲಿ ಕರೆದುಕೊಂಡು ಮಠದ ನಿವೇಶನದಲ್ಲಿ ತಿರುಗಾಡಿಕೊಂಡು ಬರುವುದಕ್ಕೆಂದು ಹೊರಗೆ ಹೊರಟಿದ್ದಾರೆ. ಮಠದ ನಿವೇಶನದಲ್ಲಿ ಆಗ ಕಾಡು ಬೆಳೆದುಕೊಂಡಿತ್ತು. ಅದರ ಉತ್ತರ ಭಾಗದಲ್ಲಿ ಆಗ ಒಂದು ಅಂತಸ್ತಿನ ಗಾರೆಯ ಕಟ್ಟಡವೊಂದಿತ್ತು. ಅದನ್ನು ಉತ್ತಮ ಪಡಿಸಿ ಕೊಂಡೇ ಈಗಿನ ಮಠದ ಕಟ್ಟಡವು ನಿರ್ಮಿತವಾಗಿದೆ. ಮಠದ ನಿವೇಶನ ವನ್ನು ಖರೀದಿಗೆ ಕೊಟ್ಟವನೂ ಸ್ವಾಮಿಜಿ ಜೊತೆಯಲ್ಲಿ ಸ್ವಲ್ಪದೂರ ಬಂದು ಹಿಂತಿರುಗಿದನು. ಸ್ವಾಮಿಜಿ ಶಿಷ್ಯನೊಡನೆ ನಿವೇಶನದಲ್ಲಿ ತಿರುಗಾಡುವು ದಕ್ಕೆ ಮೊದಲು ಮಾಡಿದರು ಮತ್ತು ಮಾತಿಗೆ ಮಾತು ಬಂದು ಮುಂದಿನ ಮಠದ ಉಪಯುಕ್ತತೆ ಅದರ ವಿಧಿ ವಿಧಾನಗಳು ಇವುಗಳ ವಿಚಾರವನ್ನು ತೆಗೆದುಕೊಂಡರು.

ಕ್ರಮೇಣ ಆ ಒಂದಂತಸ್ತಿನ ಮನೆಯ ಪೂರ್ವದಕಡೆಯ ಅಂಗಳಕ್ಕೆ ಹೋಗಿ ಅಲ್ಲಿ ತಿರುಗಾಡುತ್ತ ಸ್ವಾಮಿಗಳು ಹೇಳಿದ್ದೇನೆಂದರೆ:– “ಇಲ್ಲಿ ಸಾಧುಗಳು ಇರುವುದಕ್ಕೆ ಸ್ಥಳವಾಗುವುದು; ಸಾಧನ, ಭಜನ, ಜ್ಞಾನ ವಿಚಾರ ಇವುಗಳಿಗೆ ಈ ಮಠ ಪ್ರಧಾನ ಕೇಂದ್ರಸ್ಥಾನವಾಗುವುದು– ಇದೇ ನನ್ನ ಅಭಿಪ್ರಾಯ. ಇಲ್ಲಿ ಉದಯಿಸುವ ಶಕ್ತಿಯಿಂದ ಜಗತ್ತು ತಲ್ಲಣಿಸಿ ಹೋಗುತ್ತದೆ; ಮನುಷ್ಯನ ಜೀವನ ಗತಿ ತಿರುಗಿಸಲ್ಪಡುತ್ತದೆ. ಜ್ಞಾನ, ಭಕ್ತಿ, ಯೋಗ, ಕರ್ಮ ಇವು ಒಂದುಕಡೆ ಸೇರಿ ಇಲ್ಲಿಂದ ಮಾನವ

ನಿಗೆ ಕಲ್ಯಾಣ ಪ್ರದವಾದ ಆದರ್ಶ ಹೊರಡುತ್ತವೆ; ಈ ಮಠಕ್ಕೆ ಸೇರಿದ ಜನಗಳ ಇಚ್ಛೆಯಿಂದ ಕಾಲಕ್ರಮದಲ್ಲಿ ದಿಕ್ಕು ದಿಕ್ಕುಗಳಲ್ಲೆಲ್ಲಾ ಪ್ರಾಣವು ಸಂಚಲಿಸುವುದು; ಯಥಾರ್ಥವಾದ ಧರ್ಮಶೀಲರೆಲ್ಲಾ ಇಲ್ಲಿ ಬಂದು ಸೇರುವರು—ಮನಸ್ಸಿಗೆ ಇಂಥ ಎಷ್ಟೆಷ್ಟೋ ಯೋಚನೆಗಳು ತೋರುತ್ತವೆ!

"ಮಠದ ದಕ್ಷಿಣ ಭಾಗದಲ್ಲಿ ಸ್ಥಳವಿದೆಯಲ್ಲಾ ಅಲ್ಲಿ ವಿದ್ಯೆಯ ಕೇಪ್ರಸ್ಥಾನವಾವುದು. ವ್ಯಾಕರಣ, ದರ್ಶನ, ವಿಜ್ಞಾನ, ಕಾವ್ಯ, ಅಲಂಕಾರ, ಸ್ಮೃತಿ, ಭಕ್ತಿಶಾಸ್ತ್ರ ಮತ್ತು ರಾಜಕೀಯ ಭಾಷೆ ಇವುಗಳು ಇಲ್ಲಿ ಬೋಧಿಸಲ್ಪಡುವುವು. ಹಿಂದಿನ ಹಳ್ಳಿಯ ಮಠಗಳ ಮಾದರಿಯಲ್ಲಿ ಈ ವಿದ್ಯಾಮಂದಿರವು ಸ್ಥಾಪಿಸಲ್ಪಡುವುದು. ಬಾಲ ಬ್ರಹ್ಮಚಾರಿಗಳು ಇಲ್ಲಿ ವಾಸಮಾಡಿಕೊಂಡು ಶಾಸ್ತ್ರವನ್ನು ಓದುವರು. ಅವರ ಅನ್ನ ಬಟ್ಟೆಗಳೆಲ್ಲವೂ ಮಠದಿಂದ ದೊರೆಯುವುವು. ಈ ಬ್ರಹ್ಮಚಾರಿಗಳೆಲ್ಲಾ ಐದುವರ್ಷ ಶಿಕ್ಷಣ ಪಡೆದ ಮೇಲೆ, ಇಷ್ಟವಿದ್ದರೆ ಮನೆಗೆ ಹೋಗಿ ಸಂಸಾರಿಗಳಾಗಬಹುದು. ಹಾಗಲ್ಲದೆ ಸನ್ಯಾಸದ ಮೇಲೆ ಇಷ್ಟವಿದ್ದು, ಮಠಾಧಿಪತಿಗಳು ಒಪ್ಪಿದರೆ, ಸನ್ಯಾಸವನ್ನು ತೆಗೆದುಕೊಳ್ಳಬಹುದು. ಈ ಬ್ರಹ್ಮಚಾರಿಗಳಲ್ಲಿ ಯಾರಲ್ಲಿಯಾದರೂ ಉಚ್ಛೃಂಖಲತೆಯಾಗಲಿ ದುಶ್ಚರಿತ್ರವಾಗಲಿ ಕಂಡುಬಂದರೆ ಅಂಥವರನ್ನು ಮಠದ ಸ್ವಾಮಿಗಳು ಆಗಲೇ ಹೊರಗೆ ಹೊರಡಿಸಿಬಿಡುವರು. ಇಲ್ಲಿ ಜಾತಿ ವರ್ಣಗಳ ಭೇದವಿಲ್ಲದೆ ವ್ಯಾಸಂಗ ನಡೆಯುವುದು. ಇದಕ್ಕೆ ಯಾರ ಆಕ್ಷೇಪಣೆ ಇದೆಯೊ ಅವರನ್ನು ತೆಗೆದುಕೊಳ್ಳುವುದಿಲ್ಲ. ಆದರೆ ಯಾರು ತಮ್ಮ ಜಾತಿ ವರ್ಣಾಶ್ರಮಾಚಾರಗಳನ್ನು ನಡೆಸಿಕೊಂಡು ಹೋಗಲು ಇಷ್ಟಪಡುವರೊ ಅವರು ತಮ್ಮ ಊಟ ಉಪಚಾರಾದಿಗಳ ಏರ್ಪಾಡನ್ನು ತಾವೇ ವಹಿಸಿಕೊಳ್ಳಬೇಕು. ಅವರು ವ್ಯಾಸಂಗವನ್ನು ಮಾತ್ರ ಎಲ್ಲರ ಜೊತೆಯಲ್ಲಿಯೂ ಒಂದೇಕಡೆ ಮಾಡುವರು. ಅವರ ಮೇಲೂ ಚಾರಿತ್ರ ವಿಚಾರಗಳಲ್ಲಿ ಸ್ವಾಮಿಗಳು ತೀಕ್ಷ್ಣ ದೃಷ್ಟಿಯನ್ನು ಇಟ್ಟಿ ಇರುವರು. ಇಲ್ಲಿ ಶಿಕ್ಷಿತರಾಗದೇ ಹೋದರೆ ಯಾರೂ ಸನ್ಯಾಸಕ್ಕೆ ಯೋಗ್ಯರಾಗುವುದಿಲ್ಲ. ಕ್ರಮೇಣ ಹೀಗೆ ಈ ಮಠದಲ್ಲಿ ಕಾರ್ಯ ನಡೆಯುವಾಗ ಹೇಗಿರಬಹುದು!"

ಶಿಷ್ಯ:—ಹಾಗಾದರೆ, ತಾವು ಹಿಂದಿನಕಾಲದಲ್ಲಿದ್ದಂತೆ ಗುರು ಗೃಹದಲ್ಲಿ ಬ್ರಹ್ಮಚರ್ಯಾಶ್ರಮದ ಆಚರಣೆಯನ್ನು ಪುನಃ ದೇಶದಲ್ಲಿ ಪ್ರಚಾರಕ್ಕೆ ತರಬೇಕೆಂದಿದ್ದೀರಿ?

ಸ್ವಾಮಿಜಿ:—ಅಲ್ಲದೆ ಮತ್ತೇನು? ಈಗಿನ ವಿದ್ಯಾಭ್ಯಾಸ ಪದ್ಧತಿಯಲ್ಲಿ ಬ್ರಹ್ಮವಿದ್ಯಾ ವಿಕಾಸಕ್ಕೆ ಅನುಕೂಲ ಸ್ವಲ್ಪವೂ ಇಲ್ಲ. ಹಿಂದಿನಂತೆ ಬ್ರಹ್ಮಚರ್ಯಾಶ್ರಮವನ್ನು ಸ್ಥಾಪಿಸಬೇಕಾಗಿದೆ. ಆದರೆ ಈಗ ಉದಾರ ಭಾವಗಳ ಮೇಲೆ ಅದರ ತಳಹದಿಯನ್ನು ಹಾಕಬೇಕು. ಎಂದರೆ ಈ ಕಾಲಕ್ಕೆ ಉಪಯೋಗವಾದ ಅನೇಕ ಬದಲಾವಣೆಗಳನ್ನು ಅದರಲ್ಲಿ ಸೇರಿಸಬೇಕು. ಅದನ್ನೆಲ್ಲಾ ಆಮೇಲೆ ಹೇಳುತ್ತೇನೆ.

ಸ್ವಾಮಿಜಿ ಪುನಃ ಹೇಳತೊಡಗಿದರು:—"ಮಠದ ದಕ್ಷಿಣಕ್ಕೆ ಇರುವ ಈ ಸ್ಥಳವನ್ನೂ ಕಾಲಕ್ರಮದಲ್ಲಿ ಕೊಂಡುಕೊಳ್ಳಬೇಕು. ಇಲ್ಲಿ ಮಠದ ಅನ್ನಸತ್ರವಾಗುವುದು. ಅಲ್ಲಿ ನಿಜವಾದ ಬಡಬಗ್ಗರಿಗೆ ನಾರಾಯಣ ಬುದ್ಧಿಯಿಂದ ಸೇವೆ ಮಾಡುವುದಕ್ಕೆ ಏರ್ಪಾಡು ಇರುವುದು. ಈ ಅನ್ನಸತ್ರವು ಪರಮಹಂಸರ ಹೆಸರಿನಲ್ಲಿ ಸ್ಥಾಪಿಸಲ್ಪಡುವುದು. ಜೊತೆಯಾದ ಹಣಕ್ಕೆ ತಕ್ಕಂತೆ ಮೊದಲು ಅನ್ನಸತ್ರ ಆರಂಭಿಸಲ್ಪಡುವುದು. ಮೊದಲು ಇಬ್ಬರು ಮೂವರನ್ನು ಇಟ್ಟುಕೊಂಡು ಪ್ರಾರಂಭ ಆದರೆ ಸಾಕು ಉತ್ಸಾಹಿಗಳಾದ ಬ್ರಹ್ಮಚಾರಿಗಳಿಗೆ ಈ ಅನ್ನಸತ್ರ ನಡೆಸುವುದರಲ್ಲಿ ಶಿಕ್ಷಣ ಕೊಡಬೇಕು. ಅವರು ಅಲ್ಲಿ ಇಲ್ಲಿ ಶೇಖರಿಸುವುದರಿಂದ–ಇಲ್ಲ ಭಿಕ್ಷೆ ಮಾಡುವುದರಿಂದ–ಈ ಅನ್ನಸತ್ರ ನಡೆಯುವುದು. ಮಠ ಈ ವಿಷಯಕ್ಕೆ ಯಾವ ವಿಧವಾದ ದ್ರವ್ಯ ಸಹಾಯವನ್ನೂ ಮಾಡುವುದಕ್ಕಾಗುವುದಿಲ್ಲ. ಬ್ರಹ್ಮಚಾರಿಗಳೇ ಅದಕ್ಕೋಸ್ಕರ ದುಡ್ಡನ್ನು ಸೇರಿಸಿಕೊಂಡು ಬರಬೇಕು. ಸೇವಾಸತ್ರದಲ್ಲಿ ಹೀಗೆ ಐದುವರ್ಷವೂ ವಿದ್ಯಾಶ್ರಮದಲ್ಲಿ ಐದುವರ್ಷವೂ ಒಂದೇ ಮಟ್ಟಿಗೆ ಹತ್ತುವರ್ಷ ಶಿಕ್ಷಣವಾದ ಮೇಲೆ ಮಠದ ಸ್ವಾಮಿಗಳಿಂದ ದೀಕ್ಷೆ ಪಡೆದು ಸನ್ಯಾಸಾಶ್ರಮವನ್ನು ಪಡೆಯುವುದಕ್ಕೆ ತಕ್ಕವರಾಗುವರು. ಅವರಿಗೂ ಸನ್ಯಾಸಿಗಳಾಗುವುದಕ್ಕೆ ಇಷ್ಟವಿದ್ದು, ಇವರು ತಕ್ಕ ಅಧಿಕಾರಿಗಳು ಇವರಿಂದ ಉಪಯೋಗವಾಗುವುದು ಎಂದು ತಿಳಿದು ಮಠಾಧ್ಯಕ್ಷರೂ ಸನ್ಯಾಸ ಕೊಡುವುದಕ್ಕೆ ಇಷ್ಟಪಟ್ಟರೆ ಅವರು ಆಗಬಹುದು. ಆದರೆ ಮಠಾಧ್ಯಕ್ಷರು ಕೆಲಕೆಲವು ವಿಶೇಷ ಸದ್ಗುಣ ಸಂಪನ್ನರಾದ ಬ್ರಹ್ಮಚಾರಿಗಳ ವಿಷಯದಲ್ಲಿ ಈ ನಿಯಮವನ್ನು ಮೀರಿ ಇಷ್ಟಬಂದಾಗ ಅವರಿಗೆ ಸನ್ಯಾಸ ಕೊಡಬಹುದು. ಸಾಧಾರಣ ಬ್ರಹ್ಮ ಚಾರಿಗಳಿಗೆ ಮಾತ್ರ ಹಿಂದೆ ಹೇಳಿದ ರೀತಿಯಲ್ಲಿ ಕ್ರಮಕ್ರಮವಾಗಿ ಸನ್ಯಾಸಾಶ್ರಮದಲ್ಲಿ ಪ್ರವೇಶ ಮಾಡಿಸಬೇಕು. ನನ್ನ ಮನಸ್ಸಿನಲ್ಲಿ ಈ ಭಾವನೆಗಳೆಲ್ಲಾ ಇವೆ."

ಶಿಷ್ಯ :—ಮಹಾಶಯರೆ, ಮಠದಲ್ಲಿ ಹೀಗೆ ಮೂರು ಶಾಖೆಗಳನ್ನು ಇಡುವುದರ ಉದ್ದೇಶ್ಯವೇನು ?

ಸ್ವಾಮಿಜಿ :—ಗೊತ್ತಾಗಲಿಲ್ಲವೆ ? ಮೊದಲು ಅನ್ನದಾನ; ಆಮೇಲೆ ವಿದ್ಯಾದಾನ; ಎಲ್ಲಕ್ಕೂ ಮೇಲೆ ಜ್ಞಾನದಾನ. ಈ ಮೂರು ಭಾವಗಳ ಸಮನ್ವಯವನ್ನು ಈ ಮಠದಿಂದ ಮಾಡಬೇಕಾಗಿದೆ. ಅನ್ನದಾನ ಮಾಡುವುದಕ್ಕೆ ಪ್ರಯತ್ನ ಮಾಡುತ್ತ ಮಾಡುತ್ತ ಬ್ರಹ್ಮಚಾರಿಗಳ ಮನಸ್ಸಿನಲ್ಲಿ ಪರೋದ್ದೇಶದಿಂದ ಕರ್ಮ ಮಾಡುವುದೂ ಈಶ್ವರ ಬುದ್ಧಿಯಿಂದ ಜೀವಸೇವೆ ಮಾಡುವುದೂ ದೃಢವಾಗುತ್ತವೆ. ಇದರಿಂದ ಅವರ ಚಿತ್ತ ಕ್ರಮೇಣ ನಿರ್ಮಲವಾಗಿ ಅದರಿಂದ ಸತ್ತ್ವಭಾವ ಅಭಿವೃದ್ಧಿ ಹೊಂದುತ್ತದೆ. ಹಾಗಾದರೆ ಬ್ರಹ್ಮಚಾರಿಗಳು ಸಕಾಲದಲ್ಲಿ ಬ್ರಹ್ಮವಿದ್ಯೆಯನ್ನು ಪಡೆಯುವುದಕ್ಕೆ ಯೋಗ್ಯತೆಯನ್ನೂ ಸನ್ಯಾಸಾಶ್ರಮದಲ್ಲಿ ಪ್ರವೇಶ ಮಾಡುವುದಕ್ಕೆ ಅಧಿಕಾರವನ್ನೂ ಹೊಂದುತ್ತಾರೆ.

ಶಿಷ್ಯ :—ಮಹಾಶಯರೆ, ಜ್ಞಾನದಾನವೇ ಶ್ರೇಷ್ಠವಾದದ್ದಾದರೆ, ಅನ್ನದಾನ ವಿದ್ಯಾದಾನದ ಶಾಖೆಗಳನ್ನು ಇಡಬೇಕಾದ ಅವಶ್ಯಕತೆ ಏನು ?

ಸ್ವಾಮಿಜಿ :—ಇಷ್ಟಾದರೂ ನೀನು ಈ ಸಂಗತಿಯನ್ನು ತಿಳಿದುಕೊಳ್ಳಲಾರದೆ ಹೋದೆಯಲ್ಲ ! ಕೇಳು—ಅನ್ನಕ್ಕೋಸ್ಕರ ಹಾಹಾಕಾರ ಪಡುತ್ತಿರುವ ಈ ಕಾಲದಲ್ಲಿ ನೀನು ಪರಾರ್ಥವಾಗಿ—ಸೇವೆಮಾಡಿಯೊ ಬಡಬಗ್ಗರಿಂದ ಭಿಕ್ಷೆ ಶಿಕ್ಷೆಗಳನ್ನು ಮಾಡಿಯೊ ಅಂತು ಹೇಗೊ—ಎರಡು ಹಿಡಿ ಅನ್ನವನ್ನು ಕೊಡಬಲ್ಲೆಯಾದರೆ, ಜೀವ ಜಗತ್ತಿಗೂ ನಿನಗೂ ಮಂಗಳ ಆಗುತ್ತದೆ—ಜೊತೆಯಲ್ಲಿ ಈ ಸತ್ಕಾರ್ಯಕ್ಕೋಸ್ಕರ ಎಲ್ಲರ ಸಹಾನುಭೂತಿಯನ್ನೂ ಪಡೆಯುವೆ. ಈ ಸತ್ಕಾರ್ಯಕ್ಕೋಸ್ಕರ ನಿನ್ನಲ್ಲಿ ವಿಶ್ವಾಸವನ್ನಿಟ್ಟು ಕಾಮಕಾಂಚನ ಬದ್ಧರಾದ ಸಂಸಾರಿಕರು ನಿನಗೆ ಸಹಾಯ ಮಾಡುವುದಕ್ಕೆ ಹೊರಡುತ್ತಾರೆ. ನೀನು ವಿದ್ಯಾದಾನ ಅಥವಾ ಜ್ಞಾನದಾನದಿಂದ ಎಷ್ಟು ಜನರನ್ನು ಆಕರ್ಷಿಸಬಲ್ಲೆಯೋ ಅದರ ಸಾವಿರದಷ್ಟು ಜನರು ಅಯಾಚಿತವಾಗಿ ಮಾಡಿದ ಈ ಅನ್ನದಾನದಿಂದ ಆಕರ್ಷಿಸಲ್ಪಡುವರು. ಈ ಕಾರ್ಯದಿಂದ ನೀನು ಎಷ್ಟು ಸಾಧಾರಣ ಜನರ ಸಹಾನುಭೂತಿಯನ್ನು ಪಡೆಯಬಹುದೊ ಅಷ್ಟನ್ನು ಮತ್ತಾವ ಕಾರ್ಯದಿಂದಲೂ ಪಡೆಯುವುದಕ್ಕಾಗುವುದಿಲ್ಲ. ಯಥಾರ್ಥವಾದ ಸತ್ಕಾರ್ಯಕ್ಕೆ, ಮನುಷ್ಯನೇ ಏಕೆ, ದೇವರೂ ಸಹಾಯವಾಗುವನು. ಹೀಗೆ

ಜನರು ಆಕರ್ಷಿತರಾದರೆ, ಆಗ ಅವರಲ್ಲಿ ವಿದ್ಯಾರ್ಜನೆ ಜ್ಞಾನಾರ್ಜನೆಗಳನ್ನು ಮಾಡುವುದಕ್ಕೆ ಆಶೆಯನ್ನು ಉದ್ದೀಪನಗೊಳಿಸಬಹುದು. ಆದ್ದರಿಂದಲೇ ಅನ್ನದಾನ ಮೊದಲು.

ಶಿಷ್ಯ :— ಅನ್ನಸತ್ರ ಮಾಡಬೇಕಾದರೆ, ಮೊದಲು ಸ್ಥಳಬೇಕು; ಆಮೇಲೆ ಇದಕ್ಕೋಸ್ಕರ ಮನೆ ಬಾಗಿಲು ಕಟ್ಟಿಯಾಗಬೇಕು; ಆಮೇಲೆ ಕೆಲಸ ನಡೆಸುವುದಕ್ಕೆ ಹಣ ಬೇಕು! ಇಷ್ಟು ಹಣ ಎಲ್ಲಿಂದ ಬರಬೇಕು?

ಸ್ವಾಮಿಜಿ :— ಮಠದ ದಕ್ಷಿಣ ದಿಕ್ಕನ್ನು ನಾನು ಈಗ ಬಿಟ್ಟು ಕೊಡುತ್ತೇನೆ ಮತ್ತು ಒಂದು ಸೋಗೆಯ ಗುಡಿಸಲನ್ನು ಹಾಕಿಸಿಕೊಡುತ್ತೇನೆ. ನೀನು ಒಬ್ಬಿಬ್ಬರು ಕುರುಡ ಕುಂಟರನ್ನು ಹುಡುಕಿಕೊಂಡು ಬಂದು ನಾಳಿನಿಂದಲೇ ಅವರ ಸೇವೆ ಮಾಡಿಕೊಂಡು ಬಾ ಹೋಗು ನೋಡೋಣ. ಸ್ವಂತವಾಗಿ ಹೋಗಿ ಅವರಿಗೋಸ್ಕರ ಭಿಕ್ಷೆ ಮಾಡಿಕೊಂಡು ಬರಬೇಕು. ಸ್ವಂತವಾಗಿ ಅಡಿಗೆಮಾಡಿ ಅವರಿಗೆ ಬಡಿಸಬೇಕು. ಹೀಗೆ ಕೆಲವುದಿನ ಮಾಡಿದರೆ ಸಾಕು ನೋಡು – ನಿನ್ನ ಈ ಕೆಲಸದಲ್ಲಿ ಎಷ್ಟುಜನ ಸಹಾಯ ಮಾಡುವುದಕ್ಕೆ ಮುಂದಾಗಿ ಬರುತ್ತಾರೆ, ಎಷ್ಟು ದುಡ್ಡು ಕಾಸನ್ನು ಕೊಡುತ್ತಾರೆ ಎಂತ. "ನ ಹಿ ಕಲ್ಯಾಣಕೃತ್ ಕಶ್ಚಿತ್ ದುರ್ಗತಿಂ ತಾತ ಗಚ್ಛತಿ."

ಶಿಷ್ಯ :— ಅದೇನೊ ನಿಜ; ಆದರೆ ಹೀಗೆ ಯಾವಾಗಲೂ ಕರ್ಮ ಮಾಡುತ್ತ ಮಾಡುತ್ತ ಕ್ರಮೇಣ ಕರ್ಮ ಬಂಧನವುಂಟಾಗುತ್ತದೆ.

ಸ್ವಾಮಿಜಿ :— ಕರ್ಮದ ಫಲದಲ್ಲಿ ನಿನಗೆ ದೃಷ್ಟಿಯಿಲ್ಲದಿದ್ದು, ಸಕಲ ವಿಧವಾದ ಆಶೆ ಅಭಿಲಾಷೆಗಳನ್ನೂ ದಾಟಿ ಹೋಗಿ ನಿಜವಾದ ಅನುರಾಗವನ್ನು ಪಡೆದಿದ್ದರೆ, ಈ ಸತ್ಕಾರ್ಯಗಳೆಲ್ಲಾ ನಿನ್ನ ಕರ್ಮ ಬಂಧನವನ್ನು ಬಿಡಿಸುವುದಕ್ಕೆ ಸಹಾಯ ಮಾಡುತ್ತವೆ. ಇಂಥ ಕರ್ಮದಿಂದ ಬಂಧನವುಂಟಾಗುತ್ತದೆಂದು ಹೇಗೆ ಹೇಳುತ್ತೀಯೆ? ಇಂಥ ಪರಾರ್ಥ ಕರ್ಮವೊಂದೇ ಕರ್ಮ ಬಂಧನದ ಮೂಲೋತ್ಪಾಟನೆ ಮಾಡುವುದಕ್ಕೆ ಇರುವ ಮಾರ್ಗ. "ನಾನ್ಯಃ ಪಂಥಾ ವಿದ್ಯತೇಽಯನಾಯ"

ಶಿಷ್ಯ :— ತಮ್ಮ ಮಾತಿನಿಂದ ಅನ್ನ ಸತ್ರ ಮತ್ತು ಸೇವಾಶ್ರಮ ಸಂಬಂಧವಾಗಿ ತಮ್ಮ ಮನೋಭಾವವನ್ನು ಹೆಚ್ಚಾಗಿ ತಿಳಿದುಕೊಳ್ಳಬೇಕೆಂದು ನನಗೆ ಬಹು ಕುತೂಹಲವುಂಟಾಗಿದೆ.

ಸ್ವಾಮಿಜಿ :— ಬಡಬಗ್ಗರಿಗೋಸ್ಕರ ಚೆನ್ನಾಗಿ ಗಾಳಿಯಾಡುವ ಸಣ್ಣ ಸಣ್ಣ ಮನೆಗಳನ್ನು ಕಟ್ಟಿಸಬೇಕು. ಒಂದೊಂದು ಮನೆಯಲ್ಲಿ ಅಂಥ

ಇಬ್ಬಿಬ್ಬರು ಅಥವಾ ಮೂರು ಮೂರು ಜನರು ಮಾತ್ರ ಇರಬೇಕು. ಅವರಿಗೆ ಒಳ್ಳೆಯ ಹಾಸಿಗೆ, ಬಟ್ಟೆ ಬರೆಗಳನ್ನು ಕೊಡಬೇಕು. ಅವರಿಗಾಗಿ ಒಬ್ಬ ವೈದ್ಯನಿರಬೇಕು. ವಾರಕ್ಕೆ ಒಂದುಸಾರಿ ಅಥವಾ ಎರಡುಸಾರಿ ಅನುಕೂಲವಾದಾಗ ಬಂದು ಆತನು ಅವರನ್ನು ನೋಡಿಕೊಂಡು ಹೋಗಬೇಕು. ಸೇವಾಶ್ರಮವು ಅನ್ನಸತ್ರದಲ್ಲಿ ವಿಭಾಗದ ಹಾಗೆ ಇರಬೇಕು. ಅದರಲ್ಲಿ ರೋಗಿಗಳ ಉಪಚಾರ ನಡೆಯಬೇಕು. ಕ್ರಮವಾಗಿ, ಹಣ ಬಂದು ಸೇರಿದಾಗ, ಒಂದು ದೊಡ್ಡ ಅಡಿಗೆಮನೆಯನ್ನು ಕಟ್ಟಿಸಬೇಕು. ಅನ್ನಸತ್ರದಲ್ಲಿ ಕೇವಲ "ದೀಯತಾಂ ನೀಯತಾಂ ಭುಜ್ಯತಾಂ" ಈ ಧ್ವನಿಯೇ ಬರುತ್ತಿರಬೇಕು. ಅನ್ನದ ಗಂಜಿಯು ಗಂಗೆಯಲ್ಲಿ ಹೋಗಿ ಬಿದ್ದು ಗಂಗೆಯ ನೀರೆಲ್ಲಾ ಬೆಳ್ಳಗೆ ಆಗಿಹೋಗಬೇಕು. ಹೀಗೆ ಅನ್ನಸತ್ರವಿರುವುದನ್ನು ನೋಡಿದರೆ, ಆಗ ನನ್ನ ಜೀವವು ಶಾಂತಿಯನ್ನು ಪಡೆಯುತ್ತದೆ.

ಶಿಷ್ಯ :—ತಮಗೆ ಯಾವಾಗ ಹೀಗೆ ಇಚ್ಛೆಯುಂಟಾಯಿತೊ, ಕಾಲಕ್ರಮದಲ್ಲಿ ಇದು ನಿಜವಾಗಿಯೆ ಆಗುತ್ತದೆಂದು ತೋರುತ್ತದೆ.

ಶಿಷ್ಯನ ಮಾತನ್ನು ಕೇಳಿ ಸ್ವಾಮಿಜಿ ಸ್ವಲ್ಪ ನೀರನ್ನು ಕುಡಿದು ಸ್ವಲ್ಪ ಹೊತ್ತು ಸುಮ್ಮನಿದ್ದರು. ಆಮೇಲೆ ನಗುಮುಖದಿಂದ ವಿಶ್ವಾಸಪೂರ್ವಕವಾಗಿ ಶಿಷ್ಯನಿಗೆ ಹೇಳಿದ್ದೇನೆಂದರೆ.—"ನಿಮ್ಮಲ್ಲಿ ಯಾರೊಳಗೆ ಯಾವಾಗ ಸಿಂಹವು ಎಚ್ಚರಗೊಂಡು ಎದ್ದು ಬಿಡುತ್ತದೆಯೋ ಅದನ್ನು ಯಾರು ಬಲ್ಲರು? ನಿಮ್ಮಗಳ ಒಬ್ಬರಲ್ಲಿ ಜಗನ್ಮಾತೆ ಶಕ್ತಿಯನ್ನು ಎಚ್ಚರಗೊಳಿಸಿ ಎಬ್ಬಿಸಿದಳೆಂದರೆ ಭೂಮಂಡಲದ ತುಂಬ ಇಂಥ ಎಷ್ಟೋ ಅನ್ನಸತ್ರಗಳಾಗುತ್ತವೆ. ಏನು ತಿಳಿದುಕೊಂಡಿದ್ದೀಯೆ, ಜ್ಞಾನ, ಶಕ್ತಿ, ಭಕ್ತಿ, ಇವೆಲ್ಲಾ ಎಲ್ಲರಲ್ಲಿಯೂ ಪೂರ್ಣಭಾವದಲ್ಲಿ ಇದ್ದುಕೊಂಡಿವೆ. ಅವುಗಳ ವಿಕಾಸದ ತಾರತಮ್ಯವನ್ನೇ ನಾವು ನೋಡುತ್ತ ಅವನು ದೊಡ್ಡವನು ಇವನು ಚಿಕ್ಕವನು ಎಂದುಕೊಳ್ಳುತ್ತೇವೆ, ಜೀವರ ಮನಸ್ಸಿನಲ್ಲಿ ಮಧ್ಯೆ ಒಂದು ಪರದೆ ಬಿಟ್ಟಂತಾಗಿ ಪೂರ್ಣವಿಕಾಸಕ್ಕೆ ಅಡ್ಡಿಯಾಗಿ ನಿಂತಿದೆ. ಅದು ಸರಿದು ಹೋದರೆ ಸಾಕು : ಎಲ್ಲಾ ಆಗಿಹೋಯಿತು. ಏನು ಬೇಕು ಏನು ಕೇಳುತ್ತೀಯೆ ಅದು ಅಗುತ್ತದೆ."

ಸ್ವಾಮಿಗಳ ಮಾತನ್ನು ಕೇಳಿ ಶಿಷ್ಯನು ತನ್ನ ಮನಸ್ಸಿನೊಳಗಿನ ಪರದೆ ಯಾವಾಗ ಸರಿದುಹೋಗಿ ಈಶ್ವರ ದರ್ಶನವಾಗುವುದೊ ಎಂದು ಯೋಚಿ

ಸುವುದಕ್ಕೆ ಮೊದಲು ಮಾಡಿದನು. ಸ್ವಾಮಿಜಿ ಮತ್ತೆ ಹೇಳಿದ್ದೇನೆಂದರೆ:– "ಈಶ್ವರನ ಸಂಕಲ್ಪವಿದ್ದರೆ ಈ ಮಠವನ್ನು ಮಹಾ ಸಮನ್ವಯ ಕ್ಷೇತ್ರವನ್ನಾಗಿ ಮಾಡಬಹುದು. ಪರಮಹಂಸರು ನಮ್ಮ ಸರ್ವಭಾವಗಳ ಸಾಕ್ಷಾತ್ ಸಮನ್ವಯ ಮೂರ್ತಿ, ಈ ಸಮನ್ವಯದ ಭಾವವನ್ನು ಇಲ್ಲಿ ಜಾಗ್ರತಗೊಳಿಸಿಬಿಟ್ಟರೆ ಪರಮಹಂಸರು ಜಗತ್ತಿನಲ್ಲಿ ಪ್ರತಿಷ್ಠಿತರಾಗಿ ನಿಲ್ಲುವರು. ಸರ್ವ ಮತ ಸರ್ವ ಪಥ. ಬ್ರಾಹ್ಮಣ ಚಂಡಾಲ ಎಲ್ಲರೂ ಹೇಗಾದರೂ ಇಲ್ಲಿಗೆ ಬಂದು ತಮ್ಮ ತಮ್ಮ ಆದರ್ಶಗಳನ್ನು ಕಾಣಬಹುದೊ ಹಾಗೆ ಮಾಡಬೇಕು. ಆವೊತ್ತು ಮಠದ ನಿವೇಶನದಲ್ಲಿ ಪರಮಹಂಸರನ್ನು ಪ್ರತಿಷ್ಠೆ ಮಾಡಿದಾಗ – ಇಲ್ಲಿಂದ ಅವರ ಭಾವ ವಿಕಾಸಗೊಂಡು ಚರಾಚರ ಪ್ರಪಂಚವನ್ನೆಲ್ಲವನ್ನೂ ಆವರಿಸಿಬಿಟ್ಟಂತೆ ನನ್ನ ಮನಸ್ಸಿಗೆ ಭಾವನೆಯುಂಟಾಯಿತು. ನಾನೇನೋ ಕೈಲಾದಷ್ಟು ಮಟ್ಟಿಗೆ ಮಾಡುತ್ತಿದೇನೆ, ಮುಂದೆಯೂ ಮಾಡುತ್ತೇನೆ; ನೀವೂ ಪರಮಹಂಸರ ಉದಾರ ಭಾವವನ್ನು ಜನರಿಗೆ ತಿಳಿಸಿಕೊಡಿ; ಸುಮ್ಮನೆ ವೇದಾಂತವನ್ನು ಓದಿ ಆಗುವುದೇನು? ಜೀವನದಲ್ಲಿ ಶುದ್ಧಾದ್ವೈತವಾದದ ಸತ್ಯತೆಯನ್ನು ಸಪ್ರಮಾಣವಾಗಿ ತೋರಿಸಿಕೊಡಬೇಕು. ಶಂಕರಾಚಾರ್ಯರು ಈ ಅದ್ವೈತವಾದವನ್ನು ಕಾಡುಮೇಡುಗಳಲ್ಲಿಯೂ ಬೆಟ್ಟಗುಡ್ಡಗಳಲ್ಲಿಯೂ ಇಟ್ಟು ಹೋಗಿದ್ದಾರೆ. ನಾನು ಈಗ ಅದನ್ನು ಇಲ್ಲಿಂದ ಸಂಸಾರದ ಮತ್ತು ಸಮಾಜದ ಎಲ್ಲಾ ಕಡೆಗಳಲ್ಲಿಯೂ ಇಟ್ಟು ಹೋಗೋಣವೆಂದು ಬಂದಿದ್ದೇನೆ. ಮನೆ, ಮಠ, ಮೈದಾನ, ಬೆಟ್ಟ, ಗುಡ್ಡ, ಕಾಡುಮೇಡು ಎಲ್ಲಾ ಕಡೆಯಲ್ಲಿಯೂ ಈ ಅದ್ವೈತವಾದದ ದುಂದುಭಿನಾದವನ್ನು ಎಬ್ಬಿಸಬೇಕು. ನೀವು ನನಗೆ ಸಹಾಯಕರಾಗಿ ಹೊರಡಿ."

ಶಿಷ್ಯ:—ಮಹಾಶಯರೆ, ಧ್ಯಾನದ ಸಹಾಯದಿಂದ ಈ ಭಾವವನ್ನು ಅನುಭವಮಾಡಿಕೊಂಡರೇ ನಮಗೆ ಒಳ್ಳೆಯದೆಂದು ತೋರುತ್ತದೆ. ನೆಗೆದಾಡುವುದರಲ್ಲಿ ಇಷ್ಟವಿಲ್ಲ.

ಸ್ವಾಮಿಜಿ:—ಅದು ಮತ್ತಿನಿಂದ ಅಚೇತನರಾಗಿದ್ದುಬಿಡುವುದರಂತೆ; ಸುಮ್ಮನೆ ಹೀಗಿದ್ದುಬಿಟ್ಟರೆ ಏನಾದ ಹಾಗಾಯಿತು? ಅದ್ವೈತದ ಪ್ರೇರಣೆಯಿಂದ ಕೆಲವುವೇಳೆ ತಾಂಡವನೃತ್ಯ ಮಾಡುವೆ ಮತ್ತೆ ಕೆಲವು ವೇಳೆ ಬಾಹ್ಯಜ್ಞಾನವಿಲ್ಲದೆ ಇರುವೆ. ಒಳ್ಳೆಯ ಪದಾರ್ಥ ಸಿಕ್ಕಿದರೆ, ಏನು ಒಬ್ಬನೇ ತಿಂದರೆ ಸುಖವಾಗುತ್ತದೆಯೆ? ಹತ್ತು ಜನಕ್ಕೆ ಕೊಡಬೇಕು

ತಾನೂ ತಿನ್ನಬೇಕು ಆತ್ಮಾನುಭವ ಮಾಡಿಕೊಂಡು ನೀನು ಮುಕ್ತನಾಗಿ ಬಿಡುತ್ತೀಯೆ – ಅದರಿಂದ ಜಗತ್ತಿಗೆ ಆದದ್ದೇನು ಹೋದದ್ದೇನು? ಮೂರು ಲೋಕಗಳಿಗೂ ಮುಕ್ತಿಕೊಟ್ಟು ಕರೆದುಕೊಂಡು ಹೋಗಬೇಕು. ಮಹಾ ಮಾಯೆಯ ರಾಜ್ಯಕ್ಕೆ ಬೆಂಕಿಹಾಕಿ ಹೊತ್ತಿಸಿಬಿಡಬೇಕು. ಆಗ ತಾನೇ ನಿತ್ಯವಾಗಿ ಸತ್ಯದಲ್ಲಿ ಪ್ರತಿಷ್ಠಿತನಾಗುವೆ. ಆ ಆನಂದಕ್ಕೆ ಸಮವುಂಟೇ! –"ನಿರವಧಿ ಗಗನಾಭಂ"–ಆಕಾಶ ಸಮಾನವಾದ ಮಹಾನಂದದಲ್ಲಿ ಪ್ರತಿಷ್ಠಿತನಾಗುವೆ. ಜೀವ ಜಗತ್ತಿನ ಎಲ್ಲಾ ಕಡೆಯಲ್ಲಿಯೂ ನಿನ್ನ ನಿಜಸತ್ತೆಯನ್ನು ನೋಡಿ ಬೆರಗಾಗಿ ನಿಲ್ಲುವೆ! ಸ್ಥಾವರ ಜಂಗಮ ಗಳೆಲ್ಲವೂ ನಿನಗೆ ನಿನ್ನ ಸತ್ತಾಬಲದಲ್ಲಿ ಬೋಧೆಯಾಗುತ್ತವೆ. ಆಗ ಮಿಕ್ಕವರನ್ನೂ ನಿನ್ನಹಾಗೆ ಯತ್ನಮಾಡಗೊಡಿಸದೇ ಇರುವುದಕ್ಕಾಗುವು ದಿಲ್ಲ. ಈ ಸ್ಥಿತಿಯೇ ಅನುಷ್ಠಾನ ವೇದಾಂತ. ತಿಳಿಯಿತೆ? ಬ್ರಹ್ಮ ಒಂದೆ ಆದರೂ ವ್ಯಾವಹಾರಿಕ ಸ್ಥಿತಿಯಲ್ಲಿ ನಾನಾರೂಪವಾಗಿ ಮುಂದೆ ನಿಂತಿದೆ. ನಾಮ ಮತ್ತು ರೂಪಗಳು ಈ ವ್ಯವಹಾರಕ್ಕೆ ಮೂಲವಾಗಿವೆ. ಹೇಗೆಂದರೆ, ಒಂದು ಗಡಿಗೆಯಲ್ಲಿ ನಾಮರೂಪಗಳನ್ನು ಬಿಟ್ಟು ಬಿಟ್ಟರೆ ಆಮೇಲೆ ಏನನ್ನು ನೋಡಬಲ್ಲೆ? ಅದರ ಪ್ರಕೃತ ಸತ್ತೆಯಾದ ಮಣ್ಣು ಒಂದೇ; ಅದರಂತೆ ಭ್ರಮದಿಂದ ಘಟ, ಪಟ, ಮಠ ಎಲ್ಲವನ್ನೂ ಭಾವಿಸುತ್ತಲೂ ನೋಡು ತ್ತಲೂ ಇರುವೆ. ನಿಜವಾದ ಯಾವ ಸತ್ತೆಯೂ ಇಲ್ಲದೆ ಜ್ಞಾನಕ್ಕೆ ಪ್ರತಿ ಬಂಧಕವಾಗಿರುವ ಈ ಅಜ್ಞಾನವಿದೆಯಲ್ಲಾ, ಇದನ್ನಿಟ್ಟುಕೊಂಡೇ ವ್ಯವ ಹಾರ ನಡೆಯುತ್ತಿರುವುದು. ಹೆಂಡತಿ ಮಕ್ಕಳು ದೇಹ ಮನಸ್ಸು ಏನೇನಿದೆ, ಎಲ್ಲಾ ನಾಮರೂಪ ಸಹಾಯದಿಂದ ಅಜ್ಞಾನದ ಸೃಷ್ಟಿಯಲ್ಲಿ ಕಂಡು ಬರು ತ್ತಿವೆ. ಅಜ್ಞಾನ ಸರಿದುಹೋದರೆ, ಆಗ ಬ್ರಹ್ಮ ಸತ್ತೆಯು ಅನುಭವಕ್ಕೆ ಬಂದುಬಿಡುತ್ತದೆ.

ಶಿಷ್ಯ:—ಈ ಅಜ್ಞಾನ ಎಲ್ಲಿಂದ ಬಂತು?

ಸ್ವಾಮಿಜಿ:—ಎಲ್ಲಿಂದ ಬಂತೊ ಅದನ್ನು ಆಮೇಲೆ ಹೇಳುತ್ತೇನೆ. ನೀನು ಹಗ್ಗವನ್ನು ಹಾವೆಂದುಕೊಂಡು ಹೆದರಿಕೆಯಿಂದ ಓಡುವುದಕೆ ತೊಡಗಿದಾಗ ಹಗ್ಗವೇನು ಹಾವಾಗಿ ಬಿಟ್ಟಿತೊ? ಇಲ್ಲ; ಅಜ್ಞತೆಯೆ ನಿನ್ನಿಂದ ಹಾಗೆ ಮಾಡಿಸಿತೊ?

ಶಿಷ್ಯ:—ಅಜ್ಞತೆಯಿಂದಲೆ ಹೀಗೆ ಮಾಡಿದೆ.

ಸ್ವಾಮಿಜಿ:—ಹಾಗಾದರೆ ಯೋಚಿಸಿನೋಡು—ನೀನು ಹಗ್ಗವನ್ನು

ಹಗ್ಗವೆಂದು ತಿಳಿದುಕೊಂಡಾಗ ನಿನ್ನ ಹಿಂದಿನ ಅಜ್ಞತೆಯನ್ನು ಜ್ಞಾಪಿಸಿ ಕೊಂಡು ನಗುವೆಯೊ ಇಲ್ಲವೊ? ಆಗ ನಾಮರೂಪಗಳು ಮಿಥ್ಯೆಯೆಂದು ತಿಳಿಯುವುದೊ ಇಲ್ಲವೊ?

ಶಿಷ್ಯ:—ಹೌದು

ಸ್ವಾಮಿಜಿ:—ಹಾಗಾದರೆ, ನಾಮರೂಪಗಳು ಮಿಥ್ಯೆಯಾಯಿತು. ಹೀಗೆ ಬ್ರಹ್ಮ ಸತ್ಯವೊಂದು ಮಾತ್ರ ಸತ್ಯವಾಗಿ ನಿಲ್ಲುತ್ತದೆ. ಈ ಅನಂತ ಸೃಷ್ಟಿ ವೈಚಿತ್ರ್ಯದಲ್ಲಿಯೂ ಅದರ ಸ್ವರೂಪ ಸ್ವಲ್ಪವೂ ಬದಲಾಯಿಸುವುದಿಲ್ಲ. ನೀನು ಮಾತ್ರ ಈ ಅಜ್ಞಾನದ ಗಾಢಾಂಧಕಾರದಲ್ಲಿ ಇವಳು ಹೆಂಡತಿ, ಇದು ಮಗು, ಇದು ನಾನು, ಇದು ಅನ್ಯ ಎಂದು ಭಾವಿಸಿಕೊಂಡು ಸರ್ವ ವಿಭಾಸಕವಾದ ಆತ್ಮದ ಸತ್ತೆಯನ್ನು ತಿಳಿದುಕೊಳ್ಳಲಾರೆ. ಗುರೂಪದೇಶ ದಿಂದಲೂ ನಿನ್ನ ನಂಬಿಕೆಯಿಂದಲೂ ಈ ನಾಮರೂಪಾತ್ಮಕವಾದ ಜಗತ್ತನ್ನು ನೋಡದೆ ಇದರ ಮೂಲವಾದ ಸತ್ತೆಯನ್ನು ಮಾತ್ರವೇ ಅನುಭವ ಮಾಡುವಾಗ ಆಬ್ರಹ್ಮಸ್ತಂಬ ಪರ್ಯಂತವಾದ ಸಕಲ ಪದಾರ್ಥದಲ್ಲಿಯೂ ನಿನಗೆ ಆತ್ಮಾನುಭವವುಂಟಾಗುತ್ತದೆ—ಆಗ "ಭಿದ್ಯತೇ ಹೃದಯ ಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ"

ಶಿಷ್ಯ:—ಮಹಾಶಯರೆ, ಈ ಅಜ್ಞಾನದ ಆದ್ಯಂತಗಳ ವಿಷಯ ವನ್ನು ತಿಳಿದುಕೊಳ್ಳಬೇಕೆಂದು ಆಶೆಯಾಗಿದೆ.

ಸ್ವಾಮಿಜಿ—ಯಾವ ವಸ್ತು ಆಮೇಲೆ ಇರುವುದಿಲ್ಲವೊ-ಯಾವ ವಸ್ತು ಮಿಥ್ಯೆಯೊ ಅದನ್ನು ಹೇಗೆ ತಿಳಿದುಕೊಳ್ಳಬಲ್ಲೆ? ಯಾರು ಯಥಾರ್ಥ ಬ್ರಹ್ಮಜ್ಞರೊ ಅವರು 'ಅಜ್ಞಾನವೆಲ್ಲಿದೆ?' ಎಂದು ಕೇಳುವರು. ಅವರು ಹಗ್ಗವನ್ನು ಹಗ್ಗವನ್ನಾಗಿಯೆ ನೋಡುವರು, ಹಾವೆಂದು ತಿಳಿಯ ಲಾರರು. ಯಾರು ಹಗ್ಗವನ್ನು ಹಾವೆಂದು ತಿಳಿಯುವರೊ, ಅವರ ಭಯ ಭೀತಿಗಳನ್ನು ನೋಡಿ ಅವರಿಗೆ ನಗು ಬರುವುದು! ಆದ್ದರಿಂದ ಅಜ್ಞಾನಕ್ಕೆ ವಾಸ್ತವವಾದ ಸ್ವರೂಪವಿಲ್ಲ. ಅಜ್ಞಾನವನ್ನು ಸತ್ ಎಂದು ಹೇಳುವುದಕ್ಕಾ ಗುವುದಿಲ್ಲ-ಅಸತ್ ಎಂದೂ ಹೇಳುವುದಕ್ಕಾಗುವುದಿಲ್ಲ. "ಸನ್ನಾಪ್ಯ ಸನ್ನಾಪ್ಯು ಭಯಾತ್ಮಿಕಾ ನೋ" ಯಾವ ವಸ್ತು ಹೀಗೆ ಮಿಥ್ಯೆಯೆಂದು ಗೊತ್ತಾಗಿದೆಯೋ ಅದರ ವಿಷಯವಾಗಿ ಪ್ರಶ್ನೆ ಮಾಡುವುದೇನು ಉತ್ತರ ತಾನೇ ಹೇಳುವುದೇನು? ಈ ವಿಷಯವಾಗಿ ಪ್ರಶ್ನೆ ಮಾಡುವುದೂ ಯುಕ್ತಿ ಯುಕ್ತವಾಗುವುದಿಲ್ಲ. ಏಕೆಂದರೆ, ಈ ಪ್ರಶ್ನೋತ್ತರಗಳೂ ನಾಮರೂಪ

ಅಥವಾ ದೇಶ ಕಾಲಗಳನ್ನು ಅವಲಂಬಿಸಿಕೊಂಡೇ ನಡೆಯುತ್ತವೆ. ಯಾವ ಬ್ರಹ್ಮವಸ್ತುವು ನಾಮರೂಪ ದೇಶಕಾಲಗಳನ್ನು ಮೀರಿದ್ದೊ ಅದನ್ನು ಪ್ರಶ್ನೋತ್ತರಗಳಿಂದ ತಿಳಿಸಲೇನು ಆಗುವುದೆ? ಆದ್ದರಿಂದ ಶಾಸ್ತ್ರ ಮಂತ್ರಾದಿಗಳು ವ್ಯಾವಹಾರಿಕ ಭಾವದಲ್ಲಿ ಸತ್ಯ—ಪಾರಮಾರ್ಥಿಕ ರೂಪದಲ್ಲಿ ಸತ್ಯವಲ್ಲ. ಅಜ್ಞಾನಕ್ಕೆ ಸ್ವಂತ ರೂಪವೇ ಇಲ್ಲ, ಅದನ್ನು ಹೇಗೆ ತಿಳಿಯುವೆ? ಬ್ರಹ್ಮದ ಪ್ರಕಾಶವಾದಾಗಂತೂ ಇಂಥ ಪ್ರಶ್ನೆಯನ್ನು ಹಾಕುವ ಅವಶ್ಯಕತೆಯೆ ಇರುವುದಿಲ್ಲ. ಪರಮಹಂಸರ "ಮೂಚೀ ಮೂಟೇರ" ಕಥೆಯನ್ನು ಕೇಳಿಲ್ಲವೆ? ಅದರ ಹಾಗೆಯೇ. ಅಜ್ಞಾನವನ್ನು ಯಾರಾದರೂ ಗುರುತಿಸಿದರೆ, ಆಗ ಅದು ಓಡಿಹೋಗುತ್ತದೆ.

ಶಿಷ್ಯ :— ಆದರೆ, ಮಹಾಶಯರೆ, ಅಜ್ಞಾನವು ಬಂದದ್ದು ಎಲ್ಲಿಂದ?

ಸ್ವಾಮಿಜಿ :— ಯಾವ ಪದಾರ್ಥವೆ ಇಲ್ಲವೊ ಅದು ಬರುವುದು ಹೇಗೆ? ಇದ್ದರೆ ತಾನೇ ಬರುವುದು.

ಶಿಷ್ಯ :— ಹಾಗಾದರೆ ಈ ಜೀವಜಗತ್ತಿನ ಉತ್ಪತ್ತಿ ಹೇಗೆ ಆಯಿತು?

ಸ್ವಾಮಿಜಿ :— ಬ್ರಹ್ಮಸತ್ತೆಯೊಂದೇ ಇರುವುದು; ನೀನು ಮಿಥ್ಯಾ ನಾಮರೂಪಗಳಿಂದ ಅದನ್ನು ಬೇರೆ ರೂಪದಲ್ಲಿಯೂ ಬೇರೆ ಹೆಸರಿನಲ್ಲಿಯೂ ನೋಡುವೆ.

ಶಿಷ್ಯ :— ಈ ಮಿಥ್ಯಾ ನಾಮರೂಪಗಳು ತಾನೇ ಏಕೆ? ಎಲ್ಲಿಂದ ಬಂದವು?

ಸ್ವಾಮಿಜಿ :— ಶಾಸ್ತ್ರದಲ್ಲಿ ಈ ನಾಮರೂಪಾತ್ಮಕವಾದ ಸಂಸ್ಕಾರ ಅಥವಾ ಅಜ್ಞತೆ ಪ್ರವಾಹ ರೂಪವಾಗಿ ನಿತ್ಯಪ್ರಾಯವಾಗಿರುವಂತೆ ಹೇಳಿದೆ. ಆದರೆ ಅದು ಸಾಂತ. ಬ್ರಹ್ಮಸತ್ತೆ ಮಾತ್ರ ಯಾವಾಗಲೂ ಹಗ್ಗದ ಹಾಗೆ ಸ್ವಸ್ವರೂಪದಲ್ಲಿಯೆ ಇರುತ್ತದೆ. ಆದ್ದರಿಂದ ವೇದಾಂತ ಶಾಸ್ತ್ರದ ಸಿದ್ಧಾಂತ ವೇನೆಂದರೆ, ಬ್ರಹ್ಮಾಂಡವೆಲ್ಲಾ ಬ್ರಹ್ಮದಲ್ಲಿ ಅಧ್ಯಸ್ತವಾಗಿದೆ. ಇಂದ್ರ ಜಾಲದಹಾಗೆ ಕಾಣುತ್ತಿದೆ. ಅದರಿಂದ ಬ್ರಹ್ಮದ ಸ್ವರೂಪಕ್ಕೆ ಸ್ವಲ್ಪವೂ ವೈಲಕ್ಷಣ್ಯ ಬರುವುದಿಲ್ಲ; ತಿಳಿಯಿತೆ?

ಶಿಷ್ಯ :— ಒಂದು ವಿಷಯವನ್ನು ಈಗಲೂ ತಿಳಿದುಕೊಳ್ಳುವುದಕ್ಕಾಗಲಿಲ್ಲ.

ಸ್ವಾಮಿಜಿ :— ಏನು ಹೇಳು.

ಶಿಷ್ಯ :— ಈ ಸೃಷ್ಟಿ ಸ್ಥಿತಿ ಲಯ ಮುಂತಾದುವುಗಳೆಲ್ಲಾ ಬ್ರಹ್ಮ

ದಲ್ಲಿ ಅಧ್ಯಸ್ತವಾಗಿದೆ, ಅವುಗಳಿಗೆ ಯಾವ ವಿಧವಾದ ಸ್ವರೂಪ ಸತ್ತೆಯೂ ಇಲ್ಲ, ಎಂದು ತಾವು ಹೇಳಿದಿರಲ್ಲಾ, ಅದು ಹೇಗೆ ಸಾಧ್ಯ? ಯಾರು ಯಾವುದನ್ನು ಮೊದಲು ನೋಡಿಲ್ಲವೋ. ಆ ಪದಾರ್ಥದ ಭ್ರಮವು ಅದರಿಂದಲೇ ಉಂಟಾಗುವುದಿಲ್ಲ. ಯಾರು ಹಾವನ್ನು ಎಂದೂ ನೋಡಿಲ್ಲವೊ ಅವನಿಗೆ ಹಗ್ಗದಲ್ಲಿ ಹಾವು ಎಂಬ ಭ್ರಮೆ ಹೇಗೆ ಉಂಟಾಗುವುದಿಲ್ಲವೊ ಹಾಗೆ ಯಾರು ಈ ಸೃಷ್ಟಿಯನ್ನು ನೋಡಿಲ್ಲವೊ ಅವನಿಗೆ ಬ್ರಹ್ಮದಲ್ಲಿ ಸೃಷ್ಟಿ ಭ್ರಮೆ ಹೇಗಾಗುತ್ತದೆ? ಆದ್ದರಿಂದ ಸೃಷ್ಟಿ ಇತ್ತೋ ಅಥವಾ ಇದೆಯೋ ಅದೇ ಸೃಷ್ಟಿ ಭ್ರಮವಾಗಿದೆ. ಇದರಿಂದಲೇ ದ್ವೈತ ವಿಚಾರ ಹುಟ್ಟುತ್ತದೆ.

ಸ್ವಾಮಿಜಿ:— ಬ್ರಹ್ಮಜ್ಞಾನಿ ನಿನ್ನ ಪ್ರಶ್ನೆಯನ್ನು ಮೊದಲೇ ಹೀಗೆ ನಿವಾರಣೆ ಮಾಡಿಬಿಡುವನು; ಹೇಗೆಂದರೆ, ಅವನ ದೃಷ್ಟಿಗೆ ಸೃಷ್ಟಿ ಮುಂತಾದವು ಒಟ್ಟಿಗೆ ಕಾಣುವುದೇ ಇಲ್ಲ; ಅವನು ಬ್ರಹ್ಮ ಸತ್ತೆಯೊಂದನ್ನು ಮಾತ್ರ ನೋಡುವನು; ಹಗ್ಗವನ್ನೇ ನೋಡುವನು ಹಾವನ್ನು ನೋಡುವುದಿಲ್ಲ–ಎಂದು. "ನಾನು ಮಾತ್ರ ಈ ಸೃಷ್ಟಿ ಅಥವಾ ಹಾವನ್ನು ನೋಡುತ್ತೇನೆ" ಎಂದು ನೀನು ಹೇಳಿದರೆ–ಆಗ, ನಿನ್ನ ದೃಷ್ಟಿ ದೋಷವನ್ನು ಹೋಗಲಾಡಿಸುವುದಕ್ಕೆ ಆತನು ನಿನಗೆ ಹಗ್ಗದ ಸ್ವರೂಪವನ್ನು ತಿಳಿಸಿಕೊಡುವುದಕ್ಕೆ ಪ್ರಯತ್ನಮಾಡುವನು. ಆತನ ಉಪದೇಶ ಮತ್ತು ವಿಚಾರಗಳ ಬಲದಿಂದ ನೀನು ರಜ್ಜುಸತ್ತೆ ಅಥವಾ ಬ್ರಹ್ಮ ಸತ್ತೆಯನ್ನು ತಿಳಿದುಕೊಳ್ಳುವ ಹಾಗಾದಾಗ ಈ ಭ್ರಮಾತ್ಮಕವಾದ ಸರ್ಪಜ್ಞಾನ ಅಥವಾ ಸೃಷ್ಟಿ ಜ್ಞಾನವು ನಾಶವಾಗಿ ಹೋಗುತ್ತದೆ. ಆಗ ಈ ಸೃಷ್ಟಿ ಸ್ಥಿತಿ ಲಯ ರೂಪವಾದ ಭ್ರಮಜ್ಞಾನವನ್ನು ಬ್ರಹ್ಮದಲ್ಲಿ ಆರೋಪಿತವೆಂದಲ್ಲದೆ ಮತ್ತೇನು ಹೇಳುವೆ? ಅನಾದಿ ಪ್ರವಾಹದಂತೆ ಈ ಸೃಷ್ಟಿಬಾಧಾದಿಗಳು ಏನೂ ಇಲ್ಲ. ಬ್ರಹ್ಮತತ್ತ್ವವು ಕರತಲಾಮಲಕದ ಹಾಗೆ ಪ್ರತ್ಯಕ್ಷವಾಗದೆ ಈ ಪ್ರಶ್ನೆಯು ಪೂರ್ಣವಾಗಿ ಸಿದ್ಧಾಂತವಾಗುವುದು ಸಾಧ್ಯವಲ್ಲ; ಮತ್ತು ಆಗ ಪ್ರಶ್ನೆಯೂ ಹುಟ್ಟುವುದಿಲ್ಲ; ಉತ್ತರದ ಆವಶ್ಯಕತೆಯೂ ಇರುವುದಿಲ್ಲ. ಬ್ರಹ್ಮತತ್ತ್ವಾಸ್ವಾದವು ಆಗ "ಮೂಕಾಸ್ವಾದನವತ್" ಆಗುತ್ತದೆ.

ಶಿಷ್ಯ:— ಹಾಗಾದರೆ ಇಷ್ಟು ವಿಚಾರಮಾಡಿ ಆಗುವುದೇನು?

ಸ್ವಾಮಿಜಿ:— ಈ ವಿಷಯವನ್ನು ತಿಳಿದುಕೊಳ್ಳುವುದಕ್ಕೋಸ್ಕರ ವಿಚಾರ. ಸತ್ಯವಸ್ತು (ಇರುವುದು) ಮಾತ್ರ ವಿಚಾರಕ್ಕಿಂತ ಹೊರಗೆ—

"ನೈಷಾ ತರ್ಕೇಣ ಮತಿರಾಪನೇಯಾ" ಹೀಗೆ ಮಾತನಾಡುತ್ತ ಆಡುತ್ತ ಶಿಷ್ಯನು ಸ್ವಾಮಿಜಿಯೊಡನೆ ಮಠಕ್ಕೆ ಬಂದನು. ಮಠಕ್ಕೆ ಬಂದು, ಸ್ವಾಮಿಜಿ ಮಠದ ಸನ್ಯಾಸಿ ಮತ್ತು ಬ್ರಹ್ಮಚಾರಿಗಳಿಗೆ ಇಂದಿನ ಬ್ರಹ್ಮ ವಿಚಾರದ ಮರ್ಮವನ್ನು ಸಂಕ್ಷೇಪವಾಗಿ ತಿಳಿಸಿದರು. ಮೇಲಕ್ಕೆ ಹೋಗುವಾಗ ಶಿಷ್ಯನನ್ನು ಕುರಿತು "ನಾಯಮಾತ್ಮಾ ಬಲಹೀನೇನಲಭ್ಯಃ" ಎಂದು ಹೇಳುತ್ತ ಹೋದರು.

---

# ಅಧ್ಯಾಯ ೨೪

**ಸ್ಥಳ:—**(ಬೇಲೂರು ಮಠವನ್ನು ಕಟ್ಟುತ್ತಿದ್ದಾಗ) **ವರ್ಷ:—ಕ್ರಿ. ಶ. ೧೮೯೮.**

ಶಿಷ್ಯ:— ಸ್ವಾಮಿಜಿ, ನೀವೇಕೆ ಈ ದೇಶದಲ್ಲಿ ಭಾಷಣ ಕೊಡುವುದಿಲ್ಲ ಯೂರೋಪ್ ಮತ್ತು ಅಮೆರಿಕಾ ದೇಶಗಳನ್ನು ನಿಮ್ಮ ವಾಗ್ಧಾರೆಯಿಂದ ಎಚ್ಚರಿಸಿದಿರಿ, ಇಲ್ಲಿಗೆ ಹಿಂತಿರುಗಿದ ಮೇಲೆ ಮೌನವನ್ನವಲಂಬಿಸಿರುವಿರಿ.

ಸ್ವಾಮಿಜಿ:— ಈ ದೇಶದಲ್ಲಿ ಮೊದಲು ಭೂಮಿ ಹಸನಾಗಬೇಕು. ನಂತರ ಬೀಜ ಬಿತ್ತಿದರೆ ಗಿಡ ಸೊಂಪಾಗಿ ಬೆಳೆಯುವುದು. ಪಾಶ್ಚಾತ್ಯ ದೇಶದಲ್ಲಿ, ಯೂರೋಪ್ ಮತ್ತು ಅಮೆರಿಕಾ ದೇಶಗಳಲ್ಲಿ ನೆಲ ತುಂಬಾ ಫಲವತ್ತಾಗಿದೆ. ಬೀಜ ಬಿತ್ತಲು ಯೋಗ್ಯವಾಗಿದೆ. ಅಲ್ಲಿ ಜನರು ಭೋಗದ ಪರಾಕಾಷ್ಠತೆಯನ್ನು ಮುಟ್ಟಿದ್ದಾರೆ. ಭೋಗದಲ್ಲಿ ಕಂಠಪೂರ್ತಿ ಸಂಪೂರ್ಣವಾಗಿ ತೃಪ್ತಿಹೊಂದಿ ಈಗ ಅವರ ಮನಸ್ಸಿಗೆ ಆ ಭೋಗದಿಂದ ಕೂಡ ಶಾಂತಿ ಸಿಗದೆ ಬೇರೇನೋ ಬೇಕೆಂದು ಅನ್ನಿಸಿದೆ. ಈ ದೇಶದಲ್ಲಿ ಭೋಗವೂ ಇಲ್ಲ ಯೋಗವೂ ಇಲ್ಲ. ಯಾರು ಸಂಪೂರ್ಣ ಭೋಗದಿಂದ ತೃಪ್ತರೋ ಅವರಿಗೆ ಮಾತ್ರ ಯೋಗದ ವಿಚಾರ ಹೇಳಲು ತಿಳಿದುಕೊಳ್ಳಲು ಸಾಧ್ಯ. ನಮ್ಮ ಹಿಂದೂ ದೇಶವಾದರೊ ದುಃಖ ಬೇನೆಗಳ ತೌರೂರಾಗಿ ಉಪವಾಸದಿಂದ ಕೊರಗಿ ದುರ್ಬಲ ಮನಸ್ಕರಾದ ಜನರಿಂದ ತುಂಬಿದೆ. ಇಂತಹ ಕಡೆ ಉಪನ್ಯಾಸದಿಂದಾಗುವ ಪ್ರಯೋಜನವೇನು?

ಶಿಷ್ಯ:— ಅದು ಹೇಗೆ? ನಮ್ಮದು ಧರ್ಮದ ತೌರೂರು. ನಮ್ಮ ದೇಶೀಯರು ಧರ್ಮವನ್ನು ಅರ್ಥಮಾಡಿಕೊಳ್ಳುವಷ್ಟು ಮತ್ತಾವ ಭಾಗದ

ಜನರೂ ಅರ್ಥಮಾಡಿಕೊಳ್ಳುವುದಿಲ್ಲವೆಂದು ನೀವೇ ಹೇಳುತ್ತೀರಿ? ಹಾಗಾದರೆ ನಮ್ಮ ದೇಶವೇಕೆ ತಮ್ಮ ಪ್ರಚಂಡ ವಾಗ್ವೈಖರಿಯಿಂದ ಸಚೇತನವಾಗಿ ಫಲಕಾರಿಯಾಗಬಾರದು?

ಸ್ವಾಮಿಜಿ:— ಈಗ ಧರ್ಮವೇನೆಂಬುದನ್ನು ತಿಳಿದುಕೊ. ಮೊದಲನೆಯದೇ ಕೂರ್ಮ (ಆಮೆ) ಅವತಾರದ ಪೂಜೆ ಆವಶ್ಯಕ. ಎಂದರೆ 'ಹೊಟ್ಟೆಯ ಪೂಜೆ'! ನೀನು ಅದನ್ನು ಸಮಾಧಾನಪಡಿಸುವವರೆಗೆ ಧರ್ಮದ ವಿಚಾರವಾಗಿ ನಿನ್ನ ಮಾತನ್ನಾರೂ ಕೇಳುವುದಿಲ್ಲ. ಭರತಖಂಡ ಈಗ ಈ ಹಸಿವೆಂಬ ಭೂತನನ್ನು ಹೇಗೆ ಎದುರಿಸುವುದೆಂದು ತಳಮಳಗೊಂಡಿದೆ. ಅನ್ಯದೇಶೀಯರಿಂದ ದೇಶದ ಅಮೌಲ್ಯ ಸಂಪತ್ತೆಲ್ಲಾ ಸೂರೆಯಾಗಿರುವುದರಿಂದಲೂ, ಸರಕುಗಳನ್ನು ತಡೆಯಿಲ್ಲದೆ ರಫ್ತುಮಾಡುತ್ತಿದ್ದುದರಿಂದಲೂ ಎಲ್ಲಕ್ಕಿಂತ ಹೆಚ್ಚಾಗಿ ದಾಸ್ಯ ಸ್ವಭಾವದಿಂದ ಪ್ರಾಪ್ತವಾದ ಹೊಲಸು ಅಸೂಯೆ, ಇವು ಭರತಖಂಡದ ಜೀವವನ್ನೆಲ್ಲ ಸೂರೆಗೊಳ್ಳುತ್ತಿದೆ. ನೀನು ಯಾರಿಗೆ ಬೋಧಿಸಲು ಹೊರಟಿರುವೆಯೋ ಅವರನ್ನು ಈ ಹಸಿವು ಉಪವಾಸದಿಂದ, ಕೇವಲ ಜೀವಿಸುವುದು ಹೇಗೆಂಬ ನಿರಂತರ ಯೋಚನೆಯಿಂದ ಪಾರು ಮಾಡಬೇಕು. ಇಲ್ಲದಿದ್ದಲ್ಲಿ ನಿನ್ನ ಉಪನ್ಯಾಸಗಳಿಂದ ಏನೊಂದೂ ಪ್ರಯೋಜನವಿಲ್ಲ.

ಶಿಷ್ಯ:— ಈ ಕೆಡಕನ್ನು ಹೋಗಲಾಡಿಸಲು ನಾವೇನು ಮಾಡಬೇಕು?

ಸ್ವಾಮಿಜಿ:— ಮೊದಲು ಪೂರ್ತಿ ತ್ಯಾಗಬುದ್ಧಿಯಿಂದ ಕೂಡಿದ ತಮ್ಮ ಸ್ವಾರ್ಥ ಸುಖವನ್ನು ಬಯಸದೆ ಇತರರಿಗಾಗಿ ತಮ್ಮ ಪ್ರಾಣವನ್ನೇ ಅರ್ಪಿಸಲು ಸಿದ್ಧರಾಗಿರುವ ಕೆಲವು ಯುವಕರು ಅಗತ್ಯ. ಈ ಉದ್ದೇಶವನ್ನು ಮುಂದಿಟ್ಟುಕೊಂಡು ತರುಣ ಸನ್ಯಾಸಿಗಳನ್ನು ತರಬೇತು ಮಾಡುವುದಕ್ಕಾಗಿ ನಾನು ಈ ಮಠವನ್ನು ಸ್ಥಾಪಿಸುತ್ತೇನೆ. ಅವರು ಮನೆಮನೆಗೂ ಹೋಗಿ ಜನರಿಗೆ ಸಕಾರಣವಾಗಿ ಅವರ ದುಃಸ್ಥಿತಿಯ ಅರಿವಾಗುವಂತೆ ಮಾಡಿ ಅವರ ಮೇಲ್ಮೆಗೆ ಶಿಕ್ಷಣ ಕೊಡಬೇಕು. ಅಲ್ಲದೆ ಸ್ಪಷ್ಟವಾಗಿ ಸರಳ ಮತ್ತು ಸುಲಭ ಭಾಷೆಯಲ್ಲಿ ಧರ್ಮದ ಅಮೋಘ ಸತ್ಯಗಳನ್ನು ವಿವರಿಸಬೇಕು. ನಮ್ಮ ದೇಶದ ಜನ ಸಾಮಾನ್ಯರು ಮಲಗಿರುವ ರಾಕ್ಷಸನಂತೆ. ಈಗಿನ ಕಾಲದ ವಿಶ್ವವಿದ್ಯಾನಿಲಯದಲ್ಲಿ ಕೊಡುವ ಶಿಕ್ಷಣ ಕೇವಲ ಶೇಕಡ ಒಂದು ಅಥವಾ ಎರಡರಷ್ಟು ಜನರಿಗೆ ಸಾಧ್ಯ. ಯಾರು ಇದನ್ನು ಪಡೆದಿರುವರೊ ಅವರು ಕೂಡ ದೇಶಕ್ಕೆ ಕಲ್ಯಾಣಕರವಾದ ಕೆಲಸಗಳನ್ನು

ಮಾಡುವ ಪ್ರಯತ್ನಗಳೆಲ್ಲಾ ನಿಷ್ಫಲ. ಆದರೆ ಇದು ಪಾಪ ಅವರ ತಪ್ಪಲ್ಲ! ಅವರು ಕಾಲೇಜು ಶಾಲೆಯನ್ನು ಬಿಟ್ಟು ಬರುವುದಕ್ಕಿಲ್ಲ, ಆಗಲೇ ಅವರು ಹಲವಾರು ಮಕ್ಕಳ ತಂದೆಯಾಗಿರುತ್ತಾರೆ. ಹೇಗೋ ಕಷ್ಟಪಟ್ಟು ಒಬ್ಬ ಗುಮಾಸ್ತ ಅಥವಾ ಹೆಚ್ಚೆಂದರೆ ಒಬ್ಬ ಉಪನ್ಯಾಯಾಧೀಶನ ಸ್ಥಾನವನ್ನು ಸಂಪಾದಿಸುತ್ತಾರೆ. ಇದೇ ಅವರ ವಿದ್ಯಾಭ್ಯಾಸದ ಚರಮಗುರಿ. ಸಂಸಾರದ ಭಾರವನ್ನು ಹೆಗಲ ಮೇಲೆ ಹೊತ್ತು ಅವರಿಗೆ ಏನಾದರೊಂದು ದೊಡ್ಡ ಕೆಲಸ ವನ್ನು ಮಾಡುವುದಕ್ಕಾಗಲಿ, ಯೋಚಿಸುವುದಕ್ಕಾಲಿ ಪುರಸತ್ತೇ ಇರುವು ದಿಲ್ಲ. ತಮ್ಮ ಸ್ವಂತ ಇಚ್ಛೆ ಆಸಕ್ತಿಗಳನ್ನು ಪುರೈಸಿಕೊಳ್ಳುವುದಕ್ಕೆ ಅವರಿಗೆ ದಾರಿಯಿಲ್ಲ—ಇಂತಹವರಿಂದ ಇತರರಿಗಾಗಿ ಏನಾದರೂ ಸಹಾಯವಾಗು ವುದೆಂದು ಹೇಗೆ ನಂಬುವುದು?

ಶಿಷ್ಯ:— ಹಾಗಾದರೆ ಇದರಿಂದ ಪಾರಾಗುವ ಹಾದಿಯೇ ಇಲ್ಲವೆ!

ಸ್ವಾಮಿಜಿ:—ಖಂಡಿತ ಇದೆ. ನಮ್ಮದು ನಿತ್ಯ ಪುಣ್ಯಭೂಮಿ. ನಮ್ಮ ದೇಶವೇನೊ ಅಧೋಗತಿಗಿಳಿದಿದೆ ನಿಜ. ಆದರೆ ಅದು ಖಂಡಿತವಾಗಿಯೂ ಅಷ್ಟೇ ಮೇಲಕ್ಕೇಳುತ್ತದೆ. ಆಗ ಅದರ ರಭಸ ಇಡೀ ಭೂಮಂಡಲವನ್ನೇ ದಿಗ್ಭ್ರಮೆಗೊಳಿಸುವುದು. ಸಮುದ್ರದಲ್ಲಿ ಅಲೆಗಳು ಎಷ್ಟು ರಭಸದಿಂದ ಇಳಿಯುವುವೋ ಅಷ್ಟೇ ರಸಭದಿಂದ ಮೇಲಕ್ಕೇಳುವುವು.

ಶಿಷ್ಯ:— ಭರತಖಂಡ ಹೇಗೆ ಮೇಲಕ್ಕೇಳುವುದು.

ಸ್ವಾಮಿಜಿ:—ನೀನು ನೋಡುತ್ತಿಲ್ಲವೆ? ಪೂರ್ವದಿಗಂತದಲ್ಲಿ ಆಗಲೇ ಸೂರ್ಯೋದಯವಾಗಿದೆ. ಇನ್ನೇನು ಸೂರ್ಯನು ಹುಟ್ಟುತ್ತಾನೆ. ನೀವೆಲ್ಲಾ ಚಕ್ರಕ್ಕೆ ಹೆಗಲುಕೊಡಿ. ಪ್ರಪಂಚವೇ ನಿನ್ನ ಸರ್ವಸ್ವವೆಂದೂ "ನನ್ನ ಸಂಸಾರ, ನನ್ನ ಸಂಸಾರ" ಎಂದು ಯೋಚಿಸುತ್ತಿದ್ದರೆ ಏನಾದಹಾಗಾ ಯಿತು? ದೇಶದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ, ಗ್ರಾಮ ಗ್ರಾಮಗಳಿಗೆ ಹೋಗಿ ಜನರಿಗೆ ಅವರು ಸುಮ್ಮನೆ ಸೋಮಾರಿಗಳಂತೆ ಕುಳಿತುಕೊಂಡರೆ ಏನೂ ಫಲವಿಲ್ಲವೆಂದು ಬೋಧಿಸುವುದೇ ನಿಮ್ಮ ಈಗಿನ ಕರ್ತವ್ಯ. ಅವರಿಗೆ ತಮ್ಮ ನೈಜಸ್ಥಿತಿಯ ಅರಿವುಂಟಾಗುವಂತೆ ಮಾಡಿ. "ಓ! ನನ್ನ ಸಹೋದರರೆ, ಎಲ್ಲರೂ ಎದ್ದೇಳಿ, ಎಚ್ಚರಗೊಳ್ಳಿ. ಇನ್ನೆಷ್ಟು ಕಾಲ ನಿದ್ರಿಸುವಿರಿ!" ಎಂದು ಬೋಧಿಸಿ ಅವರ ಸ್ಥಿತಿ ಉತ್ತಮಗೊಳ್ಳಲು ಏನು ಮಾಡಬೇಕೆಂಬುದನ್ನು ತಿಳಿಯ ಹೇಳಿ. ಸ್ಪಷ್ಟವಾದ ಮತ್ತು ಅರ್ಥ ವಾಗುವ ಭಾಷೆಯಲ್ಲಿ ಅವರಿಗೆ ಶಾಸ್ತ್ರಗಳಲ್ಲಿರುವ ಮಹತ್ತಾದ ಸತ್ಯಗಳ

ಪರಿಚಯ ಮಾಡಿಕೊಡಿ. ಇಲ್ಲಿಯವರೆಗೂ ಬ್ರಾಹ್ಮಣರ ಮೀಸಲಾಗಿತ್ತು ಧರ್ಮ. ಆದರೆ ಪ್ರಬಲ ಕಾಲಚಕ್ರಪ್ರವಾಹದಲ್ಲಿ ಅವರು ಇಂದು ಅದೇ ಸ್ಥಳದಲ್ಲಿ ಇರಲಾರರು. ದೇಶದ ಪ್ರತಿಯೊಬ್ಬರೂ ಧರ್ಮವನ್ನರಿಯುವಂತೆ ಮಾಡಲು ತೊಡಗಿ. ಬ್ರಾಹ್ಮಣರಷ್ಟೇ ತಮಗೂ ಹಕ್ಕಿದೆ ಎಂಬ ಭಾವನೆ ಅವರ ಮನಸ್ಸಿನಲ್ಲಿ ನಾಟುವಂತೆ ಮಾಡಿ. ಪ್ರತಿಯೊಬ್ಬರಿಗೂ ಚಂಡಾಲರಿಗೂ ಈ ಪ್ರಜ್ವಲಿಸುವ ಮಂತ್ರದೀಕ್ಷೆ ಕೊಡಿ. ಸರಳ ಮಾತಿನಲ್ಲಿ ಅವರಿಗೆ ಜೀವನ, ವ್ಯಾಪಾರ, ವ್ಯವಹಾರ, ವ್ಯವಸಾಯ ಮುಂತಾದುವುಗಳಲ್ಲಿ ಶಿಕ್ಷಣಕೊಡಿ. ಇದನ್ನು ನೀನು ಮಾಡಲಶಕ್ತನಾದಲ್ಲಿ ನಿನ್ನ ವಿದ್ಯಾಭ್ಯಾಸ, ಸಂಸ್ಕೃತಿಗೆ ಧಿಃಕಾರ! ನಿನ್ನ ವೇದ, ವೇದಾಂತಗಳ ವ್ಯಾಸಂಗಕ್ಕೆ ಧಿಃಕಾರ!

ಶಿಷ್ಯ:—ಆದರೆ ನಮಗೆ ಅಂತಹ ಶಕ್ತಿ ಎಲ್ಲಿದೆ? ನಿಮಗಿರುವುದರಲ್ಲಿ ನೂರರಲ್ಲಿ ಒಂದುಪಾಲು ಶಕ್ತಿ ನನಗಿದ್ದಿದ್ದರೆ ನಾನು ಧನ್ಯನಾಗುತ್ತಿದ್ದೆ.

ಸ್ವಾಮಿಜಿ:—ಎಂತಹ ತಿಳಿಗೇಡಿತನ! ಶಕ್ತಿ ವಸ್ತುಗಳು ತಮ್ಮಷ್ಟಕ್ಕೆ ತಾವೇ ಬರುವುವು. ನೀನು ಕೆಲಸಕ್ಕೆ ತೊಡಗು, ನಿನ್ನಲ್ಲಿ ಅದ್ಭುತ ಶಕ್ತಿ ಪ್ರವಹಿಸಿ ನಿನಗೆ ಅದನ್ನು ಸಹಿಸಿಕೊಳ್ಳುವುದಕ್ಕೇ ಆಗುವುದಿಲ್ಲವೆನ್ನಿಸುವುದು. ಇನ್ನೊಬ್ಬರಿಗಾಗಿ ಮಾಡುವ ಕೆಲಸ ಅದೆಷ್ಟೇ ಕ್ಷುದ್ರವಾಗಿರಲಿ, ನಿನ್ನ ಸುಪ್ತ ಶಕ್ತಿಯನ್ನು ಜಾಗ್ರತಗೊಳಿಸುವುದು. ಇತರರ ಕಲ್ಯಾಣಕ್ಕೆ ಕಿಂಚಿತ್ತು ನೀನು ಯೋಚಿಸಿದರೂ ಕೂಡ ಕ್ರಮೇಣ ಅದು ನಿನ್ನ ಹೃದಯದಲ್ಲಿ ಸಿಂಹ ಸದೃಶ ಶಕ್ತಿಯನ್ನುಂಟುಮಾಡುವುದು. ನಾನು ನಿಮ್ಮೆಲ್ಲರನ್ನೂ ನಿರಂತರ ಎಷ್ಟೊಂದು ಪ್ರೀತಿಸುವೆ. ಆದರೂ ನೀವೆಲ್ಲರೂ ಮತ್ತೊಬ್ಬರ ಹಿತಕ್ಕಾಗಿ ಸಾಯುವುದನ್ನು ಇಷ್ಟಪಡುವೆ. ನೀವು ಹಾಗೆ ಮಾಡುವುದರಿಂದ ನನಗೆ ಹೆಚ್ಚು ಸಂತೋಷ.

ಶಿಷ್ಯ:—ಹಾಗಾದರೆ ನನ್ನನ್ನೇ ನೆಚ್ಚಿಕೊಂಡಿರುವವರ ಗತಿ ಏನು?

ಸ್ವಾಮಿಜಿ:—ನೀನು ಇತರರಗಾಗಿ ನಿನ್ನ ಪ್ರಾಣವನ್ನರ್ಪಿಸಲು ಸಿದ್ಧನಾಗಿದ್ದರೆ ದೇವರು ಅವರಿಗೂ ಯಾವುದಾದರೊಂದು ಹಾದಿಯನ್ನು ಒದಗಿಸುವನು. ನೀನು ಗೀತೆಯಲ್ಲಿ ಶ್ರೀ ಕೃಷ್ಣನ ಮಾತನ್ನು ಓದಿಲ್ಲವೆ? "ನನ್ನ ಪ್ರಿಯತಮ, ಒಳ್ಳೆಯಕೆಲಸ ಮಾಡಿದವನು ಎಂದಿಗೂ ದುಃಖಪಡುವುದಿಲ್ಲ."

ಶಿಷ್ಯ:—ಸರಿ, ಸ್ವಾಮಿಜಿ.

ಸ್ವಾಮಿಜಿ:— ಮುಖ್ಯವಾದುದು ತ್ಯಾಗ — ತ್ಯಾಗಿಯಲ್ಲದವನು

ಮತ್ತೊಬ್ಬರಿಗಾಗಿ ಹೃತ್ಪೂರ್ವಕ ಸೇವೆ ಮಾಡಲಾಗುವುದಿಲ್ಲ. ತ್ಯಾಗಿ ಎಲ್ಲರನ್ನೂ ಒಂದೇಸಮನಾಗಿ ನೋಡುವನು, ಎಲ್ಲರ ಸೇವೆಗೂ ಸಿದ್ಧನಾಗಿರುವನು. ನಮ್ಮ ವೇದಾಂತವೂ ಎಲ್ಲರನ್ನೂ ಸಮದೃಷ್ಟಿಯಿಂದ ಕಾಣಬೇಕೆಂದು ಹೇಳುವುದಿಲ್ಲವೆ? ಹಾಗಾದಮೇಲೆ ನೀನೇಕೆ ನಿನ್ನ ಹೆಂಡತಿ ಮಕ್ಕಳು ಇತರರೆಲ್ಲರಿಗಿಂತ ಹೆಚ್ಚಾಗಿ ನಿನಗೇ ಸೇರಿದವರು ಎಂಬ ಭಾವನೆಯನ್ನು ಇನ್ನೂ ಹೊಂದಿದ್ದೀಯೆ? ನಿನ್ನ ಮನೆ ಅಂಗಳದಲ್ಲೇ ನಾರಾಯಣ ಬಡಭಿಕ್ಷುಕನ ರೂಪದಲ್ಲಿ ಉಪವಾಸದಿಂದ ಸಾಯುತ್ತಿದ್ದಾನೆ. ಅವನಿಗೇನನ್ನಾದರೂ ನೀಡುವ ಬದಲು ನಿನ್ನ ಹೆಂಡತಿ ಮಕ್ಕಳನ್ನು ಮಾತ್ರ ಮೃಷ್ಟಾನ್ನದಿಂದ ತೃಪ್ತಿಪಡಿಸುತ್ತೀಯೇನು? ಏಕೆ, ಅದು ಮೃಗೀಯರೀತಿ!

ಶಿಷ್ಯ:—ಇತರರಿಗಾಗಿ ಕೆಲಸ ಮಾಡಲು ಕೆಲವು ವೇಳೆ ಬಹಳ ಹಣ ಬೇಕಾಗುವುದು. ಅದನ್ನು ನಾನು ಪಡೆಯುವುದು ಹೇಗೆ?

ಸ್ವಾಮಿಜಿ:—ನಿನ್ನ ಕೈಯಲ್ಲಿ ಎಷ್ಟಾಗುವುದೊ ಅಷ್ಟನ್ನಾದರೂ ಮಾಡಬಾರದೇಕೆ? ದುಡ್ಡಿಲ್ಲದೆ ಅವರಿಗೆ ನೀನೇನನ್ನೂ ಕೊಡಲಾಗದೆ ಹೋದಲ್ಲಿ ಅವರಿಗೆ ಸ್ವಲ್ಪ ಒಳ್ಳೆಯ ಮಾತನ್ನೂ ಒಳ್ಳೆಯ ಬೋಧನೆಯನ್ನು ಹೇಳಬಾರದೇಕೆ? ಅಥವಾ ಅದಕ್ಕೂ ದುಡ್ಡು ಬೇಕೇನು?

ಶಿಷ್ಯ:—ಹೌದು ಸ್ವಾಮಿಜಿ, ಅದನ್ನು ನಾನು ಮಾಡಬಲ್ಲೆ.

ಸ್ವಾಮಿಜಿ:—ಆದರೆ ಕೇವಲ "ನಾನು ಮಾಡಬಲ್ಲೆ" ಎನ್ನುವುದರಿಂದೇನು ಪ್ರಯೋಜನವಿಲ್ಲ. ನೀನೇನು ಮಾಡಬಲ್ಲೆ ಎಂಬುದನ್ನು ಕಾರ್ಯತಃ ತೋರಿಸು. ಆಗ ಮಾತ್ರ ನೀನು ನ್ನನ್ನಲ್ಲಿಗೆ ಬಂದುದಕ್ಕೆ ಸಾರ್ಥಕವೆಂದು ತಿಳಿಯುವೆ. ಎದ್ದೇಳು, ಚಕ್ರಕ್ಕೆ ನಿನ್ನ ಹೆಗಲನ್ನು ಕೊಡು—ಈ ಜೀವನ ಎಷ್ಟು ದಿನ ಇರಬಲ್ಲದು? ನೀನೀ ಜಗತ್ತಿಗೆ ಬಂದುದಕ್ಕೆ ಒಂದಾದರೂ ಗುರುತನ್ನು ಬಿಟ್ಟುಹೋಗು. ಇಲ್ಲದಿದ್ದಲ್ಲಿ ನಿನಗೂ ಮರ ಕಲ್ಲುಗಳಿಗೂ ಏನು ವ್ಯತ್ಯಾಸ? ಅವೂ ಹುಟ್ಟುತ್ತವೆ, ಕೊಳೆಯುತ್ತವೆ, ಸಾಯುತ್ತವೆ. ನೀನೂ ಅದೇ ರೀತಿ ಹುಟ್ಟಿ ಸಾಯಬೇಕೆಂದು ಬಯಸಿದಲ್ಲಿ ನೀನು ಹಾಗೇ ಮಾಡಬಹುದು. ವೇದಾಂತವನ್ನೋದಿದುದರಿಂದ ಒಳ್ಳೆಯ ಫಲ ದೊರಕಿತೆಂದು ನಿನ್ನ ಕಾರ್ಯದಿಂದ ಮಾಡಿ ತೋರಿಸು. ಹೋಗು, ಎಲ್ಲರಿಗೂ ಹೇಳು, "ನಿಮ್ಮೆಲ್ಲರಲ್ಲೂ ಆ ಅನಂತ ಶಕ್ತಿ ಹುದುಗಿದೆ," ಎಂದು ಹೇಳಿ ಅದನ್ನು ಜಾಗ್ರತಗೊಳಿಸಲು ಯತ್ನಿಸು, ಕೇವಲ ಒಬ್ಬ ವ್ಯಕ್ತಿಯ ಮೋಕ್ಷದಿಂದೇನಾಗುವುದು? ಅದು ಕೇವಲ ಸ್ವಾರ್ಥತೆ. ನಿನ್ನ ಧ್ಯಾನವನ್ನು ಒಂದು

ಕಡೆ ಕಟ್ಟೆಡು. ನಿನ್ನ ಮೋಕ್ಷವೇ ಮುಂತಾದುವನ್ನು ದೂರ ಬಿಸುಡು. ನಾನು ದೀಕ್ಷೆಗೊಂಡಿರುವ ಈ ಕೆಲಸಕ್ಕೆ ಮನಃಪೂರ್ವಕ ತೊಡಗು.

ಈ ಸ್ಫೂರ್ತಿ ನುಡಿಗಳನ್ನು ಉಸಿರುಬಿಡದೆ ಶಿಷ್ಯ ಆಲಿಸಿದನು. ಸ್ವಾಮಿಜಿ ತನ್ನ ಸ್ವಾಭಾವಿಕವಾದ, ನಿರರ್ಗಳ, ಸ್ಫೂರ್ತಿದಾಯಕ ಬೋಧನೆಯನ್ನು ಮುಂದುವರಿಸಿದರು.

ಸ್ವಾಮಿಜಿ:—ಮೊದಲು ಭೂಮಿಯನ್ನು ಹದಗೊಳಿಸು. ಸಾವಿರಾರು ವಿವೇಕಾನಂದರು ಧರ್ಮ ಬೋಧಿಸಲು ಈ ಪ್ರಪಂಚದಲ್ಲಿ ಹುಟ್ಟುವರು. ನೀನೇನೂ ಆ ವಿಚಾರಕ್ಕೆ ಯೋಚಿಸಬೇಕಾದ್ದಿಲ್ಲ! ಅನಾಥಾಲಯ, ಕ್ಷಾಮ ನಿವಾರಣಾ ಕೆಲಸಗಳು ಮುಂತಾದುವನ್ನು ನಾನೇಕೆ ಪ್ರಾರಂಭಿಸುತ್ತಿರುವೆನೆಂಬುದನ್ನು ನೀನು ನೋಡುತ್ತಿಲ್ಲವೆ? ಆಂಗ್ಲ ಮಹಿಳೆ ಸಹೋದರಿ ನಿವೇದಿತಾ ಹಿಂದೂಗಳ ಸೇವೆ ಮಾಡುವುದನ್ನು, ಎಂತಹ ಕೀಳು ಕೆಲಸವನ್ನಾಗಲಿ ಮಾಡಲು ಎಷ್ಟರ ಮಟ್ಟಿಗೆ ಕಲಿತಿದ್ದಾಳೆ! ಹಿಂದೂ ದೇಶೀಯರಾದ ನೀವೇ ನಿಮ್ಮ ಜನರಿಗೆ ಸೇವೆ ಮಾಡಲಾಗುವುದಿಲ್ಲವೆ? ಎಲ್ಲೆಲ್ಲಿ ಪ್ಲೇಗ್ ಅಥವಾ ಕ್ಷಾಮವಿದೆಯೊ ಎಲ್ಲೆಲ್ಲಿ ಜನರು ಕೊಲೆಗೆ ಗುರಿಯಾಗಿದ್ದಾರೊ ಅಲ್ಲಿಗೆ ನೀವೆಲ್ಲಾ ಹೋಗಿ ಅವರ ನೋವನ್ನು ಕಡಿಮೆ ಮಾಡಲು ಯತ್ನಿಸಿ. ಹೆಚ್ಚೆಂದರೆ ನೀನೀಕೆಲಸದಲ್ಲಿ ಸಾಯಬಹುದು – ಸತ್ತರೇನಂತೆ? ಪ್ರತಿದಿನವೂ ನಿಮ್ಮಲ್ಲಿ ಎಷ್ಟು ಜನ ಹುಟ್ಟಿ ಹುಳುಗಳಂತೆ ಸಾಯುತ್ತಿಲ್ಲ! ಪ್ರಪಂಚಕ್ಕೆ ಇದರಿಂದಾಗುವ ನಷ್ಟವೇನು? ನೀನು ಸತ್ತೇತೀರಬೇಕು. ಆದರೆ ಸಾಯಲು ಒಂದು ಘನ ಉದ್ದೇಶವಿರಲಿ. ಜೀವನದಲ್ಲಿ ಒಂದು ಘನ ಉದ್ದೇಶಕ್ಕಾಗಿ ಸಾಯುವುದೊಳ್ಳೆಯದು. ಪ್ರತಿ ಮನೆಮನೆಯ ಬಾಗಿಲಿಗೂ ಹೋಗಿ ಇದನ್ನು ಬೋಧಿಸಿ. ಇದರಿಂದ ನಿಮಗೂ ಒಳ್ಳೆಯದಾಗುವುದಲ್ಲದೆ ದೇಶ ಸೇವೆಯನ್ನೂ ಮಾಡಿದಂತಾಗುವುದು. ನಮ್ಮ ದೇಶದ ಭವಿಷ್ಯದ ಆಸೆ ನಿಮ್ಮನ್ನೇ ಅವಲಂಬಿಸಿದೆ. ನೀವೀರೀತಿ ಜನಜೀವನ ನಡೆಸುವುದನ್ನು ನೋಡಿ ನನಗೆ ತುಂಬಾ ದುಃಖವಾಗುತ್ತದೆ– ಕೆಲಸಕ್ಕೆ ಹೊರಡಿ, ಹೊರಡಿ! ಹಿಂದೆ ನಿಲ್ಲಬೇಡಿ! – ದಿನ ಕಳೆದಂತೆ ಸಾವು ಸಮೀಪಿಸುತ್ತಿದೆ. ಸೋಮಾರಿತನದಿಂದ ಎಲ್ಲವೂ ಕಾಲಕ್ರಮೇಣ ಸರಿಹೋಗುವುದೆಂದು ಸುಮ್ಮನೆ ಕುಳಿತಿರಬೇಡಿ! ನೀವು ಹೀಗೆ ಮಾಡುವುದರಿಂದ ಯಾವ ಕೆಲಸವೂ ಆಗುವುದಿಲ್ಲ.

# ಅಧ್ಯಾಯ ೨೪

ಸ್ಥಳ :—( ಬೇಲೂರು ಮಠ ಕಟ್ಟುತ್ತಿದ್ದಾಗ ) ವರ್ಷ: ಕ್ರಿ. ಶ. ೧೮೯೬.

ಶಿಷ್ಯ :— ಸ್ವಾಮಿಜಿ ಜ್ಞಾನ ಭಕ್ತಿಯನ್ನು ಒಂದು ಗೂಡಿಸಲು ಹೇಗೆ ಸಾಧ್ಯ? ಭಕ್ತಿಮಾರ್ಗಾನುಯಾಯಿಗಳು ಶಂಕರನ ನಾಮವನ್ನು ಕೇಳಿದ ಕೂಡಲೇ ತಮ್ಮ ಕಿವಿಗಳನ್ನು ಮುಚ್ಚಿಕೊಳ್ಳುತ್ತಾರೆ. ಜ್ಞಾನ ಮಾರ್ಗ ವನ್ನವಲಂಬಿಸಿರುವರು ಭಗವನ್ನಾಮವನ್ನುಚ್ಚರಿಸುತ್ತಾ ಪ್ರವಾಹದೋ ಪಾದಿ ಕಣ್ಣೀರು ಸುರಿಸಿಕೊಂಡು ಮೈಮರೆತು ಹಾಡುತ್ತಾ ಕುಣಿಯುವ ಭಕ್ತರನ್ನು ಧರ್ಮಾಂಧರೆಂದು ಕರೆಯುವರು.

ಸ್ವಾಮಿಜಿ :— ಈ ವೈಮನಸ್ಯವೆಲ್ಲಾ ಜ್ಞಾನ ಮತ್ತು ಭಕ್ತಿಯ ಪ್ರಥಮಮಟ್ಟದಲ್ಲಿ ಮಾತ್ರ ಇರುವುದು. ನೀನು ಶ್ರೀ ರಾಮಕೃಷ್ಣರು ಹೇಳುತ್ತಿದ್ದ ಶಿವನ ಭೂತಗಣ ಮತ್ತು ರಾಮನ ಕಪಿಗಳ ತಂಡದ ಕಥೆ ಯನ್ನು ಕೇಳಿಲ್ಲವೆ ?

ಶಿಷ್ಯ :— ಕೇಳಿದ್ದೇನೆ ಸ್ವಾಮಿಜಿ.

ಸ್ವಾಮಿಜಿ :— ಪೂರ್ಣ ಜ್ಞಾನಕ್ಕೂ, ಪೂರ್ಣ ಭಕ್ತಿಗೂ ಏನೂ ವ್ಯತ್ಯಾಸವಿಲ್ಲ. ಪರಾಭಕ್ತಿಯೇ ದೇವರನ್ನು ಪ್ರೇಮ ಸ್ವರೂಪನೆಂದು ಸಾಕ್ಷಾತ್ಕರಿಸಿಕೊಳ್ಳುವುದು. ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಆ ಪ್ರೇಮ ರೂಪಿ ಭಗವಂತನ ಆವಿರ್ಭಾವನೆಯನ್ನು ನೀನು ನೋಡಿದರೆ ಇತರರನ್ನು ನೋಯಿಸಲು ಹೇಗೆ ಸಾಧ್ಯ? ಮನಸ್ಸಿನಲ್ಲಿ ಕಿಂಚಿತ್ತು ಆಸೆ ಇರುವವರೆಗೂ ಶ್ರೀರಾಮಕೃಷ್ಣರು ಹೇಳುತ್ತಿದ್ದ "ಕಾಮಿನಿ ಕಾಂಚನ"ದ ಮೋಹ ಕಿಂಚಿತ್ತಿದ್ದರೂ ಪ್ರೇಮ ಸಾಕ್ಷಾತ್ಕಾರವೆಂದಿಗೂ ಲಭಿಸುವುದಿಲ್ಲ. ಪೂರ್ಣ ಪ್ರೇಮದರ್ಶನದಲ್ಲಿ ನಮ್ಮ ದೇಹದ ಅರಿವೆಯೇ ಇರುವುದಿಲ್ಲ. ಎಲ್ಲೆಲ್ಲಿಯೂ ಏಕತ್ವವನ್ನು ನೊಡುವುದು, ಎಲ್ಲದರಲ್ಲಿಯೂ ನಿನ್ನ ಆತ್ಮವನ್ನು ನೋಡು ವುದು, ಇದೇ ಪೂರ್ಣಜ್ಞಾನ. ಅದೂ ಕೂಡ ಅಹಂಭಾವ ಕಿಂಚಿತ್ತು ಇರುವವರೆಗೂ ಬರುವುದಿಲ್ಲ.

ಶಿಷ್ಯ :— ಹಾಗಾದರೆ ನೀವು ಪ್ರೇಮವೆಂದು ಹೇಳುವುದೂ ಪೂರ್ಣ ಜ್ಞಾನ ಎರಡೂ ಒಂದೆಯೆ ?

ಸ್ವಾಮಿಜಿ :— ಅಹುದು. ಸಂಪೂರ್ಣವಾಗಿ ಅಹುದು. ಪೂರ್ಣ

ಜ್ಞಾನಿಯಾಗುವವರೆಗೂ ಪ್ರೇಮ ಸಾಕ್ಷಾತ್ಕಾರವಾಗುವುದಿಲ್ಲ. ಬ್ರಹ್ಮ ಸತ್ - ಚಿತ್ - ಆನಂದ, ಎಂದು ವೇದಾಂತ ಸಾರುವುದಿಲ್ಲವೆ?

ಶಿಷ್ಯ :— ಹೌದು ಸ್ವಾಮಿಜಿ.

ಸ್ವಾಮಿಜಿ :—ಸತ್ - ಚಿತ್ - ಆನಂದ ಇದೂ ಪ್ರೇಮವೆ. ಬ್ರಹ್ಮನ ಸತ್ ಸ್ವಭಾವದಲ್ಲಿ ಭಕ್ತನಿಗೂ, ಜ್ಞಾನಿಗೂ ಏನೊಂದೂ ಭೇದವಿಲ್ಲ. ಕೇವಲ ಜ್ಞಾನಿಯು ಚಿತ್ ಸ್ವಭಾವಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುತ್ತಾನೆ. ಭಕ್ತರು ಆನಂದ ಪ್ರೇಮಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡುವರು. ಆದರೆ ಯಾವಾಗ ಚಿತ್ ಸಾಕ್ಷಾತ್ಕಾರವಾಗುವುದೊ ಆಗ ಆನಂದದ ಸಾಕ್ಷಾತ್ಕಾರವೂ ಆಗುವುದು. ಏಕೆಂದರೆ ಚಿತ್ ಮತ್ತು ಆನಂದ ಎರಡೂ ಒಂದೇ.

ಶಿಷ್ಯ :—ಹಾಗಾದರೆ ಭರತಖಂಡದಲ್ಲೇಕೆ ಇಷ್ಟೊಂದು ಪಂಗಡಗಳು ಹರಡಿವೆ? ಶಾಸ್ತ್ರದಲ್ಲಿ ಭಕ್ತಿ ಜ್ಞಾನದ ಮೇಲೆ ಏಕೆ ಎಷ್ಟೊಂದು ಭೇದವಿದೆ?

ಸ್ವಾಮಿಜಿ :— ನಿಜವಾದ ಭಕ್ತಿ ಮತ್ತು ಜ್ಞಾನವನ್ನು ಹೊಂದಲು ಜನರಿಗಿರಬೇಕಾದ ಪ್ರಥಮ ಸೋಪಾನಗಳ ವಿಚಾರವಾಗಿ ಕುರಿತು ಇಷ್ಟೊಂದು ವಾಗ್ವಾದ ಜಗಳಗಳು. ನೀನು ಇದರಲ್ಲಿ ಯಾವುದನ್ನು ದೊಡ್ಡದೆಂದು ಯೋಚಿಸುವೆ? — ಅದೇ ಗುರಿಯೇ ಅಥವಾ ಅದನ್ನು ಮುಟ್ಟಲು ಇದು ಒಂದು ಸಾಧನವೆ? ಏಕೆಂದರೆ ಒಂದೇ ಗುರಿಗೆ ಪ್ರತಿಯೊಬ್ಬ ವ್ಯಕ್ತಿಯ ಮಾನಸಿಕ ಸಾಮರ್ಥ್ಯಕ್ಕನುಸಾರವಾಗಿ ಹಲವಾರು ಸಾಧನಗಳಿವೆ. ಜಪಮಾಲೆಯನ್ನೆಣಿಸುವುದು, ಧ್ಯಾನ, ಪೂಜೆ, ಹೋಮಾಗ್ನಿಯಲ್ಲಿ ಅರ್ಪಿಸುವ ನೈವೇದ್ಯ ಮುಂತಾದುವೆಲ್ಲ ಧರ್ಮ ಸೋಪಾನಗಳು. ಅವೆಲ್ಲಾ ಕೇವಲ ಸಾಧನ ಮಾತ್ರ. ಪರಾಭಕ್ತಿ ಅಥವಾ ಪರಬ್ರಹ್ಮನ ಸಾಕ್ಷಾತ್ಕಾರವೇ ಸರ್ವೋತ್ಕೃಷ್ಟವಾದ ಗುರಿ. ನೀನಿನ್ನೂ ಗಾಢವಾಗಿ ಯೋಚಿಸಿದರೆ ಅವರು ಯಾವುದಕ್ಕೆ ಹೊಡೆದಾಡುತ್ತಿರುವರೆಂಬುದು ನಿನಗೇ ಅರ್ಥವಾಗುವುದು. ಒಬ್ಬ ಹೇಳುತ್ತಾನೆ "ನೀನು ಪೂರ್ವಾಭಿಮುಖವಾಗಿ ನಿಂತು ದೇವರನ್ನು ಪ್ರಾರ್ಥಿಸಿದರೆ ದೇವರನ್ನು ನೋಡುವೆ." ಇನ್ನೊಬ್ಬ ಹೇಳುತ್ತಾನೆ, "ಇಲ್ಲ, ನೀನು ಪಶ್ಚಿಮದ ಕಡೆ ತಿರುಗಿ ಕುಳಿತುಕೊಳ್ಳಬೇಕು. ಆಗ ಮಾತ್ರ ನೀನು ದೇವರನ್ನು ನೋಡುವೆ." ಬಹುಶಃ ಯಾರೋ ಯುಗಾಂತರಗಳ ಹಿಂದೆ ಪೂರ್ವಾಭಿಮುಖವಾಗಿ ಕುಳಿತು ಧ್ಯಾನ ಮಾಡುತ್ತಾ ಸಾಕ್ಷಾತ್ಕಾರ ಹೊಂದಿರಬೇಕು. ಆತನ ಶಿಷ್ಯರು ಅಂದಿನಿಂದಲೂ ಯಾರು ಈ ಸ್ಥಿತಿಯಲ್ಲಿ

ಕುಳಿತುಕೊಳ್ಳುವುದಿಲ್ಲವೋ ಅವರಿಗೆ ದೇವರ ದರ್ಶನವಾಗುವುದಿಲ್ಲೆಂದು ಸಾರುತ್ತಾ ಹೊರಟಿರಬೇಕು. ಇನ್ನೊಂದು ಪಂಗಡ ಬಂದು ವಿಚಾರಿಸುತ್ತದೆ, "ಅದು ಹೇಗೆ ಸಾಧ್ಯ? ಪಶ್ಚಿಮಾಭಿಮುಖವಾಗಿ ಕುಳಿತು ಇಂಥವನೊಬ್ಬನು ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡಿದ್ದನ್ನು ನಾವೇ ಕಣ್ಣಾರ ನೋಡಿದ್ದೇವೆ." ಹೀಗೆ ಈ ಪಂಗಡಗಳೆಲ್ಲಾ ಹುಟ್ಟಿಕೊಂಡಿವೆ. ಯಾರೋ ಹರಿನಾಮೋಚ್ಚಾರಣೆ ಮಾಡಿದುದರಿಂದ ಪರಮಭಕ್ತಿಯನ್ನು ಪಡೆದಿರಬಹುದು. ತಕ್ಷಣವೇ ಶಾಸ್ತ್ರದಲ್ಲಿ ಹೀಗೆ ಬಂತು:

ಹರಿರ್ನಾಮ ಹರಿರ್ನಾಮ ಹರೇರ್ನಾಮೈವ ಕೇವಲಮ್
ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ॥

"ಹರಿನಾಮ, ಹರಿನಾಮ, ಕೇವಲ ಹರಿನಾಮ ಮಾತ್ರ, ಈ ಕಲಿಯುಗದಲ್ಲಿ ಫಲಕಾರಿ. ಬೇರಾವ ಹಾದಿಯೂ ಇಲ್ಲವೇ ಇಲ್ಲ."

ಪುನಃ ಮತ್ತೊಬ್ಬರು ಅಲ್ಲಾನ ಹೆಸರನ್ನುಚ್ಚರಿಸುತ್ತಾ ಪರಮ ಪದವಿಯನ್ನೈದಿರಬಹುದು. ತಕ್ಷಣವೇ ಅವನಿಂದ ಪ್ರಾರಂಭವಾದ ಮತ್ತೊಂದು ಪಂಗಡ ಹರಡಿತು. ಆದರೆ ನಾವು ಈ ಪೂಜಾ ವಿಧಾನಗಳು, ಧರ್ಮಸಾಧನೆಗಳು ಎಲ್ಲಿಗೆ ಒಯ್ಯುತ್ತವೆ, ಅವುಗಳ ಗುರಿಯಾವುದು ಎಂಬುದರ ಕಡೆ ಹೆಚ್ಚು ಗಮನ ಕೊಡಬೇಕು. ಗುರಿಯೇ ಶ್ರದ್ಧೆ. ಸಂಸ್ಕೃತದ ಶ್ರದ್ಧಾ ಎಂಬ ಪದಕ್ಕೆ ಬಂಗಾಳಿಯಲ್ಲಿ ಸರಿಯಾದ ಪರ್ಯಾಯ ಪದವೇ ಇಲ್ಲ. ನಚಿಕೇತನ ಹೃದಯಕ್ಕೆ ಶ್ರದ್ಧೆ ಹೊಕ್ಕಿತು ಎಂದು ಉಪನಿಷತ್ತುಗಳು ಹೇಳುತ್ತವೆ. ಏಕಾಗ್ರತೆ ಎಂಬ ಪದವೂ ಶ್ರದ್ಧೆ ಎಂಬ ಪದದ ಅರ್ಥವನ್ನು ಕೊಡುವುದಿಲ್ಲ. ಏಕಾಗ್ರನಿಷ್ಠ ಎಂದರೆ ಸ್ವಲ್ಪಮಟ್ಟಿಗೆ ಶ್ರದ್ಧೆ ಎಂಬ ಪದದ ಅರ್ಥ ಬರುತ್ತದೆ. ಯಾವ ಸತ್ಯವನ್ನಾದರೂ ಅಚಲ ಭಕ್ತಿ ಮತ್ತು ಚಿತ್ತೈಕಾಗ್ರತೆಯಿಂದ ಧ್ಯಾನಿಸಿದರೆ ಮನಸ್ಸು [illegible]ತೆಯಕಡೆ ಹೆಚ್ಚು ವಾಲುತ್ತದೆ. ಅಖಂಡ ಸಚ್ಚಿದಾನಂದದ ಸಾಕ್ಷಾತ್ಕಾರವಾಗುತ್ತದೆ. ಭಕ್ತಿ ಮತ್ತು ಜ್ಞಾನದ ಮೇಲೆ ಶಾಸ್ತ್ರಗಳು ಅಂಥಹ ನಿಷ್ಠೆಯಿಂದ ಯಾವುದಾದರೊಂದು ದಾರಿಯನ್ನು ಹಿಡಿಯುವಂತೆ ಪ್ರತ್ಯೇಕ ಸಲಹೆಗಳನ್ನು ಕೊಡುವುವು. ಕಾಲ ಕಳೆದಂತೆಲ್ಲಾ ಈ ಮಹಾ ಸತ್ಯಗಳು ವಿರೂಪಹೊಂದಿ ಕ್ರಮೇಣ ದೇಶಾಚಾರಗಳಾಗಿ ಮಾರ್ಪಟ್ಟಿವೆ. ಇದು ನಮ್ಮ ಭರತಖಂಡದಲ್ಲಿ ಮಾತ್ರವೇ ಅಲ್ಲ, ಪ್ರಪಂಚದ ಪ್ರತಿಯೊಂದು ಜನಾಂಗದಲ್ಲೂ ಪ್ರತಿಯೊಂದು ಸಮಾಜದಲ್ಲೂ ನಡೆದಿದೆ. ಸಾಮಾನ್ಯ

ಜನರು ವಿಚಾರಮಾಡದೆ ಇದನ್ನೇ ಹೋರಾಟದ ವಸ್ತುವಾಗಿ ಮಾಡಿಕೊಂಡು ತಮ್ಮಲ್ಲೇ ಹೊಡೆದಾಡುತ್ತಾರೆ. ಅವರಿಗೆ ಗುರಿಯೇ ಮರೆತುಹೋಗಿದೆ. ಆದಕ್ಕೇ ಈ ಮತಭೇದ, ಜಗಳ, ಹೊಡೆದಾಟ.

ಶಿಷ್ಯ :—ಇದರಿಂದ ಪಾರಾಗುವ ಬಗೆ ಹೇಗೆ, ಸ್ವಾಮಿಜಿ?

ಸ್ವಾಮಿಜಿ :—ಆ ನಿಜವಾದ ಶ್ರದ್ಧೆ ಹಿಂದಿನಂತೆ ಈಗ ನಮಗೆ ಬರಬೇಕು. ಕಳೆಯನ್ನೆಲ್ಲಾ ಬೇರುಸಹಿತ ಕೀಳಬೇಕು. ಪ್ರತಿಯೊಂದು ಮತ ಪ್ರತಿಯೊಂದು ಪಂಥದಲ್ಲೂ ಕಾಲ ದೇಶಗಳನ್ನು ಮೀರಿದ ಸತ್ಯಗಳಿವೆ ಎಂಬುದೇನೋ ಖಂಡಿತವಾಗಿಯೂ ನಿಜ. ಆದರೆ ಅದರ ಮೇಲೆ ಕಲ್ಮಷ ತುಂಬಿಕೊಂಡಿದೆ. ಅವುಗಳನ್ನು ತೊಳೆದು ಶುಚಿಮಾಡಬೇಕು. ಜನರ ಮುಂದೆ ಸತ್ಯವಾದ ಶಾಶ್ವತವಾದ ಸತ್ಯಗಳನ್ನು ಇಡಬೇಕು. ಆಗ ಮಾತ್ರ ನಮ್ಮ ದೇಶ ನಮ್ಮ ಧರ್ಮ ಉದ್ಧಾರವಾಗುವುದು.

ಶಿಷ್ಯ ;— ಅದನ್ನು ಹೇಗೆ ಕಾರ್ಯರೂಪಕ್ಕೆ ತರುವುದು?

ಸ್ವಾಮಿಜಿ :— ಏಕೆ? ನಾವು ಮೊದಲು ಮಹಾತ್ಮರಾದ ಸಾಧುಗಳ ಪೂಜೆಯನ್ನು ಆರಂಭಿಸಬೇಕು. ಭರತಖಂಡದಲ್ಲಿ ಶಾಶ್ವತವಾಗಿರುವ ಸತ್ಯವನ್ನು ಪ್ರತ್ಯಕ್ಷಮಾಡಿಕೊಂಡರು. ಶ್ರೀ ರಾಮಚಂದ್ರ, ಶ್ರೀ ಕೃಷ್ಣ, ಮಹಾವೀರ, ಶ್ರೀ ರಾಮಕೃಷ್ಣ ಮುಂತಾದ ಪ್ರಖ್ಯಾತ ಮಹಾತ್ಮರೇ ನಮ್ಮ ಗುರಿಯಾಗಿರಬೇಕೆಂದು ಜನರಿಗೆ ತಿಳಿಸಬೇಕು. ಶ್ರೀ ರಾಮಚಂದ್ರ ಮಹಾವೀರರ ಪೂಜೆಯನ್ನು ಈ ದೇಶದಲ್ಲಿ ಜಾರಿಗೆ ತರಬಲ್ಲೆಯಾ? ಶ್ರೀ ಕೃಷ್ಣನ ಬೃಂದಾವನದ ಲೀಲೆಯನ್ನು ಈಗ ಕಟ್ಟಿಡು. ಸಿಂಹವಾಣಿಯಲ್ಲಿ ಗೀತೆಯನ್ನು ಘೋಷಿಸಿದ ಆ ಶ್ರೀ ಕೃಷ್ಣನ ಪೂಜೆಯನ್ನು ಎಲ್ಲೆಡೆಯಲ್ಲೂ ಹರಡು. ಪ್ರತಿದಿನ ಶಕ್ತಿಪೂಜೆಯನ್ನು, ಶಕ್ತಿಸ್ವರೂಪಿಣಿಯಾದ ಮಹಾಮಾತೆಯ ಪೂಜೆಯನ್ನು ಅನುಷ್ಠಾನಕ್ಕೆ ತನ್ನಿ.

ಶಿಷ್ಯ:– ಹಾಗಾದರೆ ಬೃಂದಾವನದ ಗೋಪಿಗಳೊಡನಿದ್ದ ಶ್ರೀ ಕೃಷ್ಣನ ದಿವ್ಯಲೀಲೆ ಒಳ್ಳೆಯದಲ್ಲವೆ?

ಸ್ವಾಮಿಜಿ:— ಈಗಿನ ಸಂದರ್ಭದಲ್ಲಿ ನಿಮಗೆ ಆ ಪೂಜೆಯು ಒಳ್ಳೆಯದಲ್ಲ. ಕೊಳಲೂದುವುದರಿಂದ ದೇಶವನ್ನು ಪುನರುಜ್ಜೀವನಗೊಳಿಸಲಾಗುವುದಿಲ್ಲ. ಯಾರ ನಾಡಿ ನಾಡಿಗಳಲ್ಲಿ ಅದ್ಭುತ ರಾಜಸ ಸ್ವಭಾವ ತುಂಬಿ ತುಳುಕಾಡುತ್ತಿದೆಯೊ, ಯಾರು ಸತ್ಯ ಸಾಕ್ಷಾತ್ಕಾರಕ್ಕಾಗಿ ತಮ್ಮ ಪ್ರಾಣವನ್ನೇ ಅರ್ಪಿಸಲು ಸಿದ್ಧರಾಗಿರುವರೊ, ಯಾರಿಗೆ ತ್ಯಾಗವೇ

ಆಯುಧವಾಗಿದೆಯೊ ಧರ್ಮವೇ ಖಡ್ಗವಾಗಿದೆಯೊ ಅಂತಹವರು ದೇಶಕ್ಕೆ ಬೇಕಾಗಿದೆ. ಜೀವನ ಸಂಗ್ರಾಮದಲ್ಲಿ ಹೋರಾಡಬಲ್ಲ ವೀರಸ್ವಭಾವದ ಮನುಷ್ಯ ನಮಗೀಗ ಬೇಕಾಗಿದೆ. ಜೀವನವನ್ನು ನಂದನವನದಂತೆ ನೋಡುವ ಪ್ರೇಮಿ ಬೇಕಾಗಿಲ್ಲ.

ಶಿಷ್ಯ :— ಹಾಗಾದರೆ ಗೋಪಿಯರ ಧ್ಯೇಯವಾಗಿದ್ದ ಆ ಪ್ರೇಮದ ಹಾದಿ ತಪ್ಪೆ?

ಸ್ವಾಮಿಜಿ :— ಹಾಗೆಂದವರಾರು? ಖಂಡಿತ ನಾನಲ್ಲ! ಅದು ಅತ್ಯಂತ ಶ್ರೇಷ್ಠವಾದ ಸಾಧನ. ವಿಷಯಸುಖ ಭೋಗಗಳಿಗೆ ಹೆಚ್ಚು ಮೋಹಗೊಂಡಿರುವ ಈ ಯುಗದಲ್ಲಿ ಆ ಮಹತ್ತಾದ ಗುರಿಯನ್ನು ಅರಿಯ ತಕ್ಕವರು ಅತಿ ವಿರಳ.

ಶಿಷ್ಯ :— ಹಾಗಾದರೆ ಪ್ರಿಯತಮನಂತೆ ಪತಿಯಂತೆ ದೇವರನ್ನು ಪೂಜಿಸುತ್ತಿರುವವರೆಲ್ಲ ಸರಿಯಾದ ಹಾದಿಯಲ್ಲಿ ಹೋಗುತ್ತಿಲ್ಲವೆ!

ಸ್ವಾಮಿಜಿ :— ನಾನು ಇಲ್ಲವೆನ್ನಲಾರೆ. ಅವರಲ್ಲಿ ಕೊಂಚಮಂದಿ ಅಂತಹ ಗೌರವಕ್ಕೆ ಅರ್ಹರಾಗಿದ್ದಾರೆಯೆ ಹೊರತು ಬಹು ಮಂದಿ ಜಡ ತಾಮಸಿಕ ಸ್ವಭಾವದಿಂದ ತುಂಬಿರುವರು. ಅವರಲ್ಲಿ ಮುಕ್ಕಾಲು ಪಾಲೆಲ್ಲಾ ಈ ಜಾಡ್ಯದಿಂದ ತುಂಬಿ, ಅತಿ ದುರ್ಬಲರಾಗಿದ್ದಾರೆ! ದೇಶವು ಉದ್ರಿಕ್ತವಾಗಬೇಕು! ಮಹಾವೀರನ ಪೂಜೆಯನ್ನು ತರಬೇಕು. ನಮ್ಮ ನಿತ್ಯ ಸಾಧನೆಯಲ್ಲಿ ಶಕ್ತಿಪೂಜೆಯೂ ಒಂದು ಅಂಗವಾಗಿರಬೇಕು. ಪ್ರತಿಯೊಂದು ಮನೆಯಲ್ಲೂ ಶ್ರೀರಾಮನ ಪೂಜೆ ನಡೆಯಬೇಕು. ಅಲ್ಲೇ ನಿನ್ನ ಏಳ್ಗೆ ಇರುವುದು, ದೇಶದ ಏಳ್ಗೆ ಇರುವುದು—ಅದಲ್ಲದಿನ್ನಾವ ಹಾದಿಯೂ ಇಲ್ಲ.

ಶಿಷ್ಯ :— ಭಗವಾನ್ ಶ್ರೀರಾಮಕೃಷ್ಣರು ದೇವರ ನಾಮೋಚ್ಚಾರಣೆಯನ್ನು ಹೆಚ್ಚಾಗಿ ಮಾಡುತ್ತಿದ್ದರೆಂದು ಕೇಳಿರುವೆ.

ಸ್ವಾಮಿಜಿ :— ಹೌದು, ಆದರೆ ಅವರ ಸ್ಥಿತಿಯೇ ಬೇರೆ-ಸಾಧಾರಣ ಮನುಷ್ಯರಿಗೂ ಅವರಿಗೂ ಯಾವ ಸಾದೃಶ್ಯವಿದೆ? ಅವರು ತಮ್ಮ ಜೀವನದಲ್ಲೇ ಎಲ್ಲಾ ಧರ್ಮಗಳ ಗುರಿಯನ್ನೂ ಸಾಧನೆಮಾಡಿ ಪ್ರತಿಯೊಂದೂ ಒಂದೇ ಸತ್ಯಸಾಕ್ಷಾತ್ಕಾರಕ್ಕೆ ಒಯ್ಯುತ್ತವೆ ಎಂಬುದನ್ನು ತೋರಿಸಿದರು. ಅವರು ಮಾಡಿದುದನ್ನು ನಾನಾಗಲಿ, ನೀನಾಗಲಿ ಎಂದಾದರೂ ಮಾಡುವುದಕ್ಕೆ ಸಾಧ್ಯವೆ? ನಮ್ಮಲ್ಲಿ ಯಾರೂ ಅವರನ್ನು

ಸಂಪೂರ್ಣವಾಗಿ ಅರ್ಥಮಾಡಿಕೊಂಡಿಲ್ಲ. ಅದಕ್ಕೇ ನಾನೂ ಎಲ್ಲೆಂದರಲ್ಲಿ ಅವರ ವಿಚಾರ ಮಾತನಾಡಲು ಹಿಂಜರಿಯುವೆನು. ಕೇವಲ ಅವರಿಗೆ ಮಾತ್ರ ಅವರ ನಿಜಸ್ಥಿತಿ ಗೊತ್ತು. ಅವರ ದೇಹ ಕೇವಲ ಹೊರಗಡೆ ನೋಡಲು ನಮ್ಮಂತಿತ್ತು. ಉಳಿದುದೆಲ್ಲಾ ನಮಗಿಂತ ಪೂರ್ತಿವ್ಯತ್ಯಾಸ.

ಶಿಷ್ಯ :— ಅವರು ಅವತಾರಪುರುಷರೆಂದು ನಂಬುವಿರಾ?

ಸ್ವಾಮಿಜಿ:— ಅವತಾರ ಎಂದರೆ ನೀನು ಏನು ಅರ್ಥಮಾಡಿಕೊಂಡಿರುವೆ?

**ಶಿಷ್ಯ :—** ಏಕೆ, ಶ್ರೀರಾಮಚಂದ್ರ, ಶ್ರೀಕೃಷ್ಣ, ಶ್ರೀಗೌರಾಂಗ, ಬುದ್ಧ, ಅಥವಾ ಜೀಸಸ್ ಇವರ ಹಾಗೆ.

ಸ್ವಾಮಿಜಿ:— ನೀನೀಗ ಹೇಳಿದ ಎಲ್ಲರಿಗಿಂತ ಶ್ರೀ ರಾಮಕೃಷ್ಣರು ಇನ್ನೂ ದೊಡ್ಡವರು. ಎಂದಮೇಲೆ ಇನ್ನು ನಾನು ನಂಬುವಂತಹ ಕ್ಷುದ್ರ ವಿಷಯವನ್ನೇನು ಹೇಳುವುದು? ಸದ್ಯಕ್ಕೆ ಈ ಮಾತನ್ನು ಇಲ್ಲಿಗೆ ನಿಲ್ಲಿಸೋಣ ಮತ್ತೊಮ್ಮೆ ಮಾತನಾಡೋಣ.

ಸ್ವಲ್ಪಕಾಲದ ನಂತರ ಸ್ವಾಮಿಜಿ ಮುಂದುವರಿಸಿದರು. 'ಧರ್ಮವನ್ನು ಪುನರುದ್ಧಾರಗೊಳಿಸಲು ಮಹಾಪುರುಷರು ಕಾಲ ಸಮಾಜಕ್ಕನುಗುಣವಾಗಿ ಬರುವರು. ಅವರನ್ನು ಮಹಾಪುರುಷರು ಅವತಾರಪುರುಷರು ಎಂದು ಹೇಗೆ ಬೇಕಾದರೂ ಕರೆಯಿರಿ. ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಜೀವನದಲ್ಲಿ ಆ ಮಹಾ ಧ್ಯೇಯವನ್ನು ತೋರಿಸಿಕೊಡುವರು. ನಂತರ ಕ್ರಮೇಣ ಅವರ ಅಚ್ಚಿಯಲ್ಲಿ ಮನುಷ್ಯರು ರೂಪುಗೊಳ್ಳುವಂತೆ ಮಾಡುತ್ತಾರೆ. ಕ್ರಮೇಣ ಪಂಥಗಳು ಬೆಳೆದು ಹರಡುತ್ತವೆ. ಕಾಲ ಕಳೆದಂತೆಲ್ಲಾ ಈ ಪಂಗಡಗಳು ಜೀರ್ಣಹೊಂದಿ ಪುನಃ ಉದ್ಧಾರಗೊಳಿಸಲು ಸುಧಾರಕರು ಬರುವರು. ಹೀಗೆ ಯುಗಯುಗಾಂತರಗಳಿಂದ ನಿರರ್ಗಳವಾಗಿ ಪ್ರವಾಹ ಹರಿದು ಬರುತ್ತಿದೆ.

ಶಿಷ್ಯ :— ಶ್ರೀರಾಮಕೃಷ್ಣರು ಅವತಾರವೆಂದು ನೀವೇಕೆ ಬೋಧಿಸುವುದಿಲ್ಲ.— ನಿಮಗೆ ಶಕ್ತಿ, ವಾಕ್ಚಾತುರ್ಯ ಎಲ್ಲಾ ಇದೆಯಲ್ಲ.

ಸ್ವಾಮಿಜಿ :— ನಿಜವಾಗಿ ನಾನು ಅವರನ್ನು ಬಹು ಸ್ವಲ್ಪ ಅರ್ಥಮಾಡಿಕೊಂಡಿರುವೆ. ಅವರು ನನಗೆ ಎಷ್ಟು ದೊಡ್ಡವರಾಗಿ ಕಾಣಿಸುವರೆಂದರೆ ನಾನು ಯಾವಾಗಲಾದರೂ ಅವರ ವಿಚಾರ ಮಾತನಾಡುವಾಗ ನನಗೆ ಹೆದರಿಕೆಯಾಗುತ್ತದೆ. ನಾನೆಲ್ಲಿ ನಿಜಸ್ಥಿತಿಯನ್ನು ಬಿಟ್ಟು ಅಲಕ್ಷ್ಯ

ದಿಂದಿ ಮಾತನಾಡುವೆನೊ, ನನ್ನ ಈ ಕ್ಷುದ್ರಶಕ್ತಿಗೆ ಅದೆಲ್ಲಿ ನಿಲುಕುವುದಿಲ್ಲವೊ, ಅವರನ್ನು ಹೊಗಳುವಾಗ ಅವರ ಚಿತ್ರವನ್ನು ನನ್ನಿಷ್ಟಾನುಸಾರ ಚಿತ್ರಿಸಿ ಅವರನ್ನು ಅಲ್ಪವಾಗಿ ಎಲ್ಲಿ ಮಾಡುತ್ತೇನೊ ಎಂದು ಹೆದರುವೆ.

ಶಿಷ್ಯ :—ಆದರೆ ಎಷ್ಟೋ ಮಂದಿ ಈಗ ಅವರನ್ನು ಅವತಾರ ಪುರುಷರೆಂದು ಪ್ರಚಾರಮಾಡುತ್ತಿದ್ದಾರೆ.

ಸ್ವಾಮಿಜಿ:— ಅವರಿಷ್ಟ ಬಂದಂತೆ ಮಾಡಲಿ. ಅವರು ತಾವು ಹೇಗೆ ಅವರನ್ನು ಅರ್ಥಮಾಡಿಕೊಂಡಿದ್ದಾರೊ ಹಾಗೆ ಪ್ರಚಾರಮಾಡುತ್ತಿದ್ದಾರೆ. ನೀನೂ ಅವರನ್ನು ಅರ್ಥಮಾಡಿಕೊಂಡಿದ್ದಲ್ಲಿ ಹಾಗೆಯೇ ಹೋಗಿ ಅವರಂತೆಯೇ ಮಾಡಬಹುದು.

ಶಿಷ್ಯ :—ನನಗೆ ನಿಮ್ಮನ್ನೆ ಅರ್ಥಮಾಡಿಕೊಳ್ಳಲಾಗುತ್ತಿಲ್ಲ. ಇನ್ನು ಶ್ರೀ ರಾಮಕೃಷ್ಣರ ಮಾತೇಕೆ? ನಿಮ್ಮ ಕೃಪೆ ಕಿಂಚತ್ತಾದರೂ ನನ್ನ ಮೇಲೆ ಬಿದ್ದರೆ ಈ ಜನ್ಮದಲ್ಲಿ ನಾನು ಧನ್ಯನೆಂದು ಭಾವಿಸುವೆ.

---

## ಅಧ್ಯಾಯ ೨೫

**ಸ್ಥಳ :—( ಬೇಲೂರು ಮಠ ಕಟ್ಟಲ್ಪಡುತ್ತಿದ್ದಾಗ ) ವರ್ಷ : ಕಿ. ಶ. ೧೮೯೮.**

ಶಿಷ್ಯ :—ಬ್ರಹ್ಮನು ಏಕಮಾತ್ರ ಸತ್ಯವಾಗಿದ್ದರೆ ಪ್ರಪಂಚದಲ್ಲೇಕೆ ಇಷ್ಟೊಂದು ಭಿನ್ನತೆಗಳಿವೆ?

ಸ್ವಾಮಿಜಿ :— ಬಾಹ್ಯವಸ್ತುಗಳನ್ನು ನೋಡಿ ಈ ಪ್ರಶ್ನೆಯನ್ನು ಹಾಕುತ್ತಿದ್ದೀಯಲ್ಲವೆ? ಬಾಹ್ಯರೂಪದಲ್ಲಿ ವಸ್ತುಗಳನ್ನು ವಿಚಾರ ಮತ್ತು ಕಾರಣಗಳ ದೃಷ್ಟಿಯಿಂದ ವಿಮರ್ಶಿಸಿದರೆ ಕ್ರಮೇಣ ಪೂರ್ಣತ್ವದ ಕಡೆ ಬರುತ್ತೇವೆ. ನೀನು ಆ ಪೂರ್ಣತ್ವದಲ್ಲಿ ಲಯನಾಗಿ ಹೋಗಿದ್ದರೆ ಈ ಭಿನ್ನತೆ ನಿನಗೆ ಹೇಗೆ ಕಾಣಲು ಸಾಧ್ಯ?

ಶಿಷ್ಯ :—ನಿಜ, ನಾನು ಪೂರ್ಣತ್ವದೊಂದಿಗೆ ಐಕ್ಯನಾಗಿದ್ದರೆ "ಏಕೆ" ಎನ್ನುವ ಪ್ರಶ್ನೆಯನ್ನು ಎತ್ತಲು ಹೇಗೆ ಸಾಧ್ಯವಾಗುತ್ತಿತ್ತು? ನಾನು ಈಗ ಆ ಭಿನ್ನತೆಯನ್ನು ನೋಡಿ ಅದನ್ನು ಒಪ್ಪಿಕೊಂಡು ಪ್ರಶ್ನೆಯನ್ನು ಕೇಳುತ್ತಿದ್ದೇನಲ್ಲ.

ಸ್ವಾಮಿಜಿ:— ಸರಿ. ಏಕತ್ವವನ್ನು ಈ ಬಾಹ್ಯರೂಪದ ಭಿನ್ನದೃಷ್ಟಿಯಿಂದ ನೋಡುವುದನ್ನು, ಶಾಸ್ತ್ರಗಳು ವ್ಯತಿರೇಕಿ ಕಾರಣ ಅಥವಾ ಆರೋಪ ಎನ್ನುತ್ತವೆ. ಎಂದರೆ ಯಾವುದನ್ನಾದರೂ ಅದು ಇಲ್ಲದೇ ಇದ್ದರೂ ಇದೆ ಎಂದು ಭಾಪಿಸಿ ನಂತರ ವಿಮರ್ಶೆ ಮಾಡಿ ಅದು ಇಲ್ಲವೆಂದು ಹೇಳುವುದು. ನೀನು ಮಾಡುತ್ತಿರುವುದು ಯಾವುದೋ ಒಂದು, ಅದು ಸತ್ಯವಲ್ಲದಿದ್ದರೂ ಸತ್ಯವೆಂದು ಭಾವಿಸಿ ಅನಂತರ ಸತ್ಯಕ್ಕೆ ಬರುವ ಮಾರ್ಗವನ್ನು ಕೇಳುತ್ತಿದ್ದೀಯೆ. ಅಲ್ಲವೆ?

ಶಿಷ್ಯ:— ನನ್ನ ಮನಸ್ಸಿಗೆ ನಾನೀಗ ನೋಡುತ್ತಿರುವುದೆಲ್ಲಾ ನಿಜವೆಂದು ಅನ್ನಿಸುತ್ತದೆ. ಆದಕಾರಣ ಅದು ಸತ್ಯವೆಂದು ಹೇಳುವೆ. ಇದಕ್ಕೆ ವಿರುದ್ಧವಾಗಿರುವುದು ನಿಜವಲ್ಲವೆಂದೂ ಅನ್ನಿಸುತ್ತದೆ.

ಸ್ವಾಮಿಜಿ:— ಆದರೆ ವೇದಗಳು "ಏಕಮೇವಾದ್ವಿತೀಯಃ" ಎನ್ನುತ್ತವೆ. ಸತ್ಯವಾಗಿ ಒಂದೇ ಇದ್ದಿದ್ದರೆ–ಬ್ರಹ್ಮನು ಮಾತ್ರ ಇದ್ದಿದ್ದರೆ–ನಿನ್ನ ಭಿನ್ನಭಾವ ತಪ್ಪು–ನೀನು ವೇದಗಳನ್ನು ನಂಬುವೆ, ಅಲ್ಲವೆ?

ಶಿಷ್ಯ:— ಓ, ಖಂಡಿತವಾಗಿ ನನಗೇನೊ ವೇದಗಳೆ ಪರಮ ಶ್ರೇಷ್ಠ ಪ್ರಮಾಣಗಳು. ಆದರೆ ವಾಗ್ವಾದ ಮಾಡುವಾಗ ಅದನ್ನು ಒಪ್ಪಿಕೊಳ್ಳದಿದ್ದಲ್ಲಿ ಇತರ ಕಾರಣಗಳನ್ನು ಕೊಟ್ಟಾದರೂ ಅದನ್ನು ಖಂಡಿಸಬೇಕು.

ಸ್ವಾಮಿಜಿ:— ಅದೂ ಕೂಡ ಆಗಬಹುದು. ನೋಡು ಮಗು, ಒಂದು ದಿನ ನೀನು ಈ ಭೇದಗಳೆಲ್ಲಾ ಮಾಯವಾಗುವುದನ್ನು ನೋಡುವೆ. ಅದನ್ನು ನಾವು ನೋಡಲಿಕ್ಕೆ ಕೂಡ ಆಗುವುದಿಲ್ಲ. ನನ್ನೀ ಜೀವನದಲ್ಲೇ ನಾನು ಅಂತಹ ಸ್ಥಿತಿಯನ್ನು ಅನುಭವಿಸಿರುವೆ.

ಶಿಷ್ಯ:— ನಿಮಗೆ ಯಾವಾಗ ಹಾಗೆ ಆಗಿತ್ತು?

ಸ್ವಾಮಿಜಿ:— ಒಂದು ದಿನ ದಕ್ಷಿಣೇಶ್ವರದ ದೇವಾಲಯದ ತೋಟದಲ್ಲಿ ಶ್ರೀ ರಾಮಕೃಷ್ಣರು ನನ್ನ ಎದೆಯನ್ನು ಮುಟ್ಟಿದರು. ಮೊದಲು ನಾನು ಮನೆ ಕೊಠಡಿ, ಬಾಗಿಲು, ಕಿಟಕಿ, ವರಾಂಡ–ಗಿಡ, ಸೂರ್ಯ ಚಂದ್ರ–ಎಲ್ಲವೂ ಚೂರುಚೂರಾಗಿ ಒಡೆದು ಅಣುಮಾತ್ರವಾಗಿ ಹಾರಿ ಹೋಗಿ ಕೊನೆಗೆ ಆಕಾಶದಲ್ಲಿ ಲೀನವಾದುದನ್ನು ನೋಡಿದೆ. ಕ್ರಮೇಣ ಆಕಾಶವೂ ಮಾಯವಾಯಿತು. ನಂತರ ನನ್ನ ಚೇತನದ ಭಾವವೂ ಹೊರಟು ಹೋಯಿತು. ಆ ಮೇಲೆ ನನಗೇನಾಯಿತೆಂಬ ಅರಿವಿಲ್ಲ. ನನಗೆ ಮೊದಲು ತುಂಬಾ ಹೆದರಿಕೆಯಾಯಿತು. ಆ ಸ್ಥಿತಿಯಿಂದ ಕೆಳಗಿಳಿದು

ಬಂದ ಮೇಲೆ ಪುನಃ ಮೊದಲಿನಂತೆ ನಾನು ಮನೆ, ಕಿಟಕಿ, ಬಾಗಿಲು, ವರಾಂಡ ಮುಂತಾದೆಲ್ಲವನ್ನೂ ನೋಡತೊಡಗಿದೆ. ಮತ್ತೊಮ್ಮೆ ಅಮೆರಿಕಾ ದೇಶದಲ್ಲಿ ಒಂದು ಸರೋವರದ ಪಕ್ಕದಲ್ಲಿ ನನಗೆ ಪುನಃ ಅದೇ ಅನುಭವ ವಾಯಿತು.

ಶಿಷ್ಯ :—ಆ ಸ್ಥಿತಿಯನ್ನು ಕೂಡ ಮೆದುಳಿನ ನರಗಳ ದುರ್ಬಲತೆ ಯಿಂದಾದುದೆಂದು ಹೇಳಲಾಗುವುದಿಲ್ಲವೆ? ಅಂತಹ ಸ್ಥಿತಿಯನ್ನು ಪಡೆ ದುದರಿಂದ ಆವ ಆನಂದವುಂಟಾಗುವುದೋ ನನಗರ್ಥವಾಗುವುದಿಲ್ಲ.

ಸ್ವಾಮಿಜಿ :—ಮೆದುಳಿನ ಅವ್ಯವಸ್ಥೆ! ಅದು ಯಾವ ಖಾಯಿಲೆಯೂ ಉಲ್ಬಣವಾಗಿ ಅದರಿಂದ ಭ್ರಮೆಯುಂಟಾಗಿ ಬಂದುದಲ್ಲ. ಕುಡಿತದ ಅಮಲೇರಿ ಬಂದುದಲ್ಲ. ವಿಲಕ್ಷಣವಾದ ವ್ಯಾಯಾಮದ ಅಭ್ಯಾಸ ಗಳಿಂದುಂಟಾದ ಕಣ್ಣು ಕಟ್ಟನಿಂದಲೂ ಬಂದುದಲ್ಲ-ಕೇವಲ ಒಬ್ಬ ಆರೋಗ್ಯವಂತನಾದ, ದೃಢಕಾಯನಾದ, ಬುದ್ಧಿ ನೆಟ್ಟಗಿರುವ ಮನುಷ್ಯ ನಿಗೆ ಈ ಸ್ಥಿತಿಯುಂಟಾದರೆ, ಅದನ್ನು ಹೇಗೆ ಮೆದುಳಿನ ಅವ್ಯವಸ್ಥೆಯಿಂದ ಉಂಟಾದುದೆಂದು ಹೇಳುವೆ? ವೇದಗಳಲ್ಲೂ ಇದೇ ಭಾವವನ್ನು ವಿವರಿಸಿದೆ. ಹಿಂದಿನಕಾಲದ ದೇವರ ಸಾಕ್ಷಾತ್ಕಾರ ಪಡೆದ ಋಷಿಗಳು, ಆಚಾರ್ಯರುಗಳ ಹೇಳಿಕೆಗೂ ಸರಿಹೊಂದುತ್ತದೆ. ನನ್ನನ್ನು ಒಬ್ಬ ಮೆದುಳು ಕೆಟ್ಟಿರುವ ಮನುಷ್ಯನೆಂದು ಹೇಳುವೆಯೇನು? (ನಗುತ್ತಾರೆ)

ಶಿಷ್ಯ :—ಇಲ್ಲ, ಇಲ್ಲ, ನಾನು ಅದನ್ನು ಈ ಉದ್ದೇಶದಿಂದ ಹೇಳ ಲಿಲ್ಲ-ಶಾಸ್ತ್ರಗಳಲ್ಲಿ ಇಂತಹ ನೂರಾರು ಏಕತ್ವದ ಸಾಕ್ಷಾತ್ಕಾರ ನಿದರ್ಶನಗಳನ್ನು ಕಾಣಬಹುದು. ಅಂಗೈಮೇಲಿನ ನಲ್ಲೀಕಾಯಂತೆ ನೀವು ಅದನ್ನು ಸಾಕ್ಷಾತ್ಕರಿಸಿಕೊಂಡಿರುವಿರಿ. ಇದು ನಿಮ್ಮ ಜೀವನದಲ್ಲೇ ಸ್ವಂತ ಅನುಭವವಾಗಿದೆ. ಇತರ ಶಾಸ್ತ್ರಗಳು ವೇದಗಳಲ್ಲಿ ಹೇಳಿರುವುದಕ್ಕೆ ಸಂಪೂರ್ಣ ಹೊಂದಾವಣೆ ಇದೆ-ಎಂದಮೇಲೆ ಇದು ಸುಳ್ಳೆಂದು ಹೇಳಲು ನನಗಾವ ಧೈರ್ಯ? ಶ್ರೀ ಶಂಕರಾಚಾರ್ಯರೂ ಈ ಸ್ಥಿತಿಯನ್ನು ಸಾಕ್ಷಾತ್ಕರಿಸಿ ಕೊಂಡಮೇಲೆ, ಭೂಮಂಡಲವೆಲ್ಲಾ ಎಲ್ಲಿಗೆ ಹೋಯಿತು? ಎನ್ನುತ್ತಾರೆ.

ಸ್ವಾಮಿಜಿ :—ಇದನ್ನು ತಿಳಿ- ಇದೇ, ಈ ಏಕತ್ವದ ಜ್ಞಾನವೇ ಶಾಸ್ತ್ರ ಗಳು ಹೇಳುವ ಬ್ರಹ್ಮಸಾಕ್ಷಾತ್ಕಾರ. ಅದನ್ನು ತಿಳಿಯುವುದರಿಂದ ಅಂಜಿಕೆಯಿಂದ ಪಾರಾಗುವೆವು, ಹುಟ್ಟು ಸಾವುಗಳ ಸಂಕೋಲೆಯಿಂದ ನಿರಂತರವಾಗಿ ಬಿಡುಗಡೆ ಹೊಂದುವೆವು. ಈ ಪರಮಾನಂದದ ಸಾಕ್ಷಾ

ತ್ಕಾರವಾದಮೇಲೆ ಈ ಪ್ರಪಂಚದ ದುಃಖ ಸುಖಗಳು ತೃಣಮಾತ್ರವೂ ತಾಕುವುದಿಲ್ಲ. ಕ್ಷುದ್ರ ಕಾಮ ಕಾಂಚನದ ಬಂಧನದಲ್ಲಿ ಮುಳುಗಿರುವ ಜನರಿಗೆ ಈ ಬ್ರಹ್ಮಾನಂದವನ್ನು ಸವಿಯಲಾಗುವುದಿಲ್ಲ.

ಶಿಷ್ಯ:—ಇದು ಹೀಗಿದ್ದ ಪಕ್ಷಕ್ಕೆ ಆ ಪರಬ್ರಹ್ಮನ ಅಂಶವೇ ನಮ್ಮಲ್ಲೂ ಇದ್ದ ಪಕ್ಷಕ್ಕೆ ನಾವೇಕೆ ಆ ಆನಂದವನ್ನು ಪಡೆಯಲು ಹೋರಾಡುವುದಿಲ್ಲ? ನಾವೇಕೆ ಈ ಕ್ಷುದ್ರ ಕಾಮಿನಿ ಕಾಂಚನದ ಬಲೆಗೆ ಮೋಹಗೊಂಡು ಮೃತ್ಯುವಿನ ದವಡೆಗೆ ಪುನಃ ಪುನಃ ಓಡಿಹೋಗಿ ಬೀಳುತ್ತೇವೆ.

ಸ್ವಾಮಿಜಿ:—ನೀನೀಗ ಹೇಳುತ್ತಿರುವುದು ಮನುಷ್ಯ ಆ ಸಚ್ಚಿದಾನಂದದ ಸವಿಗೆ ಆಸೆ ಪಡುತ್ತಿಲ್ಲವೆಂದು! ಗಾಢವಾಗಿ ಯೋಚಿಸು. ಯಾರಾದರಾಗಲಿ, ಅವನೇನನ್ನು ಮಾಡುತ್ತಿದ್ದಾನೆಯೋ ಅದನ್ನು ಸಚ್ಚಿದಾನಂದವನ್ನು ಪಡೆಯುವ ಆಸೆಯಿಂದಲೇ ಮಾಡುತ್ತಿದ್ದಾನೆಂದು ನಿನಗೆ ತಿಳಿಯುವುದು. ಆದರೆ ಎಲ್ಲರೂ ಅದನ್ನು ಅರಿತು ಮಾಡುತ್ತಿಲ್ಲ. ಅದಕ್ಕೇ ಅದನ್ನು ಅರ್ಥಮಾಡಿಕೊಳ್ಳಲಾರರು. ಬ್ರಹ್ಮನಿಂದ ಹಿಡಿದು ಒಂದು ಹುಲ್ಲುಕಡ್ಡಿಯವರೆಗೆ ಎಲ್ಲರಲ್ಲೂ ಸಚ್ಚಿದಾನಂದವು ಪೂರ್ಣವಾಗಿ ಇದ್ದೇ ಇದೆ. ನೀನೂ ಕೂಡ ಆ ಆಖಂಡ ಬ್ರಹ್ಮ. ನೀನು ನಿಜವಾಗಿಯೂ ಪ್ರಮಾಣವಾಗಿ ಹೀಗೆಂದು ತಿಳಿದುಕೊಂಡಲ್ಲಿ ಈ ಕ್ಷಣದಲ್ಲಿಯೇ ಅದನ್ನು ಸಾಕ್ಷಾತ್ಕರಿಸಿಕೊಳ್ಳಬಹುದು. ಕೇವಲ ಸ್ಪಷ್ಟವಾದ ಅನುಭವ ಜ್ಞಾನ ಬೇಕಾಗಿದೆ. ನಿನ್ನ ಸತಿಸುತರಿಗಾಗಿ ಇಷ್ಟೊಂದು ಕಷ್ಟಪಟ್ಟು ಕೆಲಸ ಮಾಡುತ್ತಿರುವುದೂ ಕೂಡ ಅಂತ್ಯದಲ್ಲಿ ಆ ಸಚ್ಚಿದಾನಂದ ಬ್ರಹ್ಮನನ್ನು ಪಡೆಯುವುದಕ್ಕಾಗಿಯೆ. ಬಾರಿಬಾರಿಗೂ ಮಾಯೆಯ ಜಟಿಲ ತೊಡಕಿನಲ್ಲಿ ಸಿಕ್ಕಿ ದುಃಖ ಕೋಟಲೆಗಳ ಪೆಟ್ಟನ್ನು ತಿಂದಾಗ ತನ್ನಷ್ಟಕ್ಕೆ ತಾನೇ ಮನಸ್ಸು ತನ್ನ ನಿಜಸ್ವರೂಪವಾದ ಆತ್ಮನ ಕಡೆ ತಿರುಗುತ್ತದೆ. ನಮ್ಮ ಹೃದಯದಲ್ಲಿರುವ ಈ ಸಚ್ಚಿದಾನಂದವನ್ನು ಪಡೆಯುವ ಆಸೆಯಿರುವುದರಿಂದಲೇ ಮಾನವನು ಒಂದಾದ ಮೇಲೊಂದು ಪೆಟ್ಟನ್ನು ತಿಂದು ತನ್ನ ಕಣ್ಣನ್ನು ಅಂತರ್ ದೃಷ್ಟಿಯ ಕಡೆ ತಿರುಗಿಸುವನು. ಪ್ರತಿಯೊಬ್ಬರಿಗೂ ವಿನಾಯತಿ ಇಲ್ಲದೆ ಒಂದಲ್ಲ ಒಂದುಸಾರಿ ಬಂದೇ ಬರುವುದು. ಆಗ ಅವನು ಇದನ್ನು ಮಾಡುವನು. ಒಬ್ಬನಿಗೆ ಈ ಜನ್ಮದಲ್ಲೇ ಬರಬಹುದು. ಇನ್ನೊಬ್ಬನಿಗೆ ಸಾವಿರಾರು ಜನ್ಮಗಳಾದ ನಂತರ ಬರಬಹುದು.

ಶಿಷ್ಯ:—ಎಲ್ಲವೂ ಗುರು ಮತ್ತು ಭಗವಂತನ ಕೃಪಾದೃಷ್ಟಿಯ ಮೇಲೆ ನಿಂತಿದೆ.

ಸ್ವಾಮಿಜಿ:—ಭಗವಂತನ ಕೃಪೆ ಎಂಬ ಗಾಳಿ ನಿರಂತರವಾಗಿ ಬೀಸುತ್ತಿದೆ. ನೀನು ನಿನ್ನ ಧ್ವಜವನ್ನು ಎತ್ತಿ ಕಟ್ಟಿರುವೆಯಾ? ನೀನು ಯಾವ ಕೆಲಸವನ್ನು ಮಾಡಬೇಕಾದರೂ ಅದನ್ನು ಹೃತ್ಪೂರ್ವಕವಾಗಿ ಮಾಡು. ಹಗಲೂ ರಾತ್ರೆ "ನಾನು ಅಖಂಡ ಸಚ್ಚಿದಾನಂದ ಪರಬ್ರಹ್ಮನ ಅಂಶ; ನನಗಾವ ಹೆದರಿಕೆ, ಕಳವಳ? ಈ ದೇಹ, ಮನಸ್ಸು, ಬುದ್ಧಿ ಎಲ್ಲಾ ಕ್ಷಣಿಕ, ಇವೆಲ್ಲವನ್ನೂ ಮೀರಿದುದು ನನ್ನ ಆತ್ಮ" ಎಂದು ಯೋಚಿಸು.

ಶಿಷ್ಯ:—ಈ ಬಗೆಯ ಆಲೋಚನೆಗಳು ಒಮ್ಮೊಮ್ಮೆ ಬರುತ್ತವೆ. ಆದರೆ ತಕ್ಷಣ ಮಾಯವಾಗಿ ಏನೇನೊ ಕೆಲಸಕ್ಕೆ ಬಾರದ ಅರ್ಥವಿಲ್ಲದ ಯೋಚನೆ ಬರುತ್ತದೆ.

ಸ್ವಾಮಿಜಿ:—ಪ್ರಾರಂಭದಲ್ಲಿ ಹೀಗೆ ಆಗುತ್ತದೆ. ಆದರೆ ಕ್ರಮೇಣ ನೀನು ಇದನ್ನು ಮೀರಿಹೋಗುವೆ. ಆದರೆ ಮೊದಲಿನಿಂದಲೂ ಮನಸ್ಸಿನಲ್ಲಿ ಅದರ ಆಸೆ ತೀವ್ರವಾಗಿರಬೇಕು. ಯಾವಾಗಲೂ ಹೀಗೆ ಯೋಚಿಸು "ನಾನು ನಿತ್ಯ ಪವಿತ್ರ, ನಿತ್ಯ ಜ್ಞಾನಿ,—ನಿತ್ಯ ಮುಕ್ತ. ನಾನು ಕೆಡಕನ್ನು ಮಾಡಲು ಹೇಗೆ ಸಾಧ್ಯ? ಸಾಮಾನ್ಯ ಜನರಂತೆ ಕ್ಷುದ್ರ ಕಾಮಿನಿ ಕಾಂಚನದ ಮೋಹಕ್ಕೆ ನಾನೆಲ್ಲಾದರೂ ಸಿಕ್ಕಿ ಬೀಳುವೆನೆ?" ನಿನ್ನ ಮನಸ್ಸನ್ನು ಈ ಬಗೆಯ ಆಲೋಚನೆಗಳಿಂದ ದೃಢಪಡಿಸು. ಇದರಿಂದ ಖಂಡಿತ ಒಳ್ಳೆಯದಾಗುವುದು.

ಶಿಷ್ಯ:—ಯಾವಾಗಲಾದರೊಮ್ಮೆ ದೃಢ ಮನಸ್ಸು ಬರುವುದು. ಆದರೆ ಪುನಃ ನಾನು ಆ ಉಪನ್ಯಾಯಾಧಿಪತಿಯ ಪರೀಕ್ಷೆಗೆ ಕುಳಿತುಕೊಂಡರೆ ಎಂದು ಯೋಚಿಸಿದಾಗ ನನಗೆ ಐಶ್ವರ್ಯ, ಹೆಸರು, ಕೀರ್ತಿ ಎಲ್ಲ ಬಂದು ನಾನು ಸುಖವಾಗಿ ಬದುಕುತ್ತೇನೆ ಅನ್ನಿಸುತ್ತದೆ.

ಸ್ವಾಮಿಜಿ:—ನಿನಗೆ ಈ ರೀತಿ ಯೋಚನೆಗಳು ಬಂದಾಗಲೆಲ್ಲಾ ನಿತ್ಯಾನಿತ್ಯ ವಸ್ತುವಿವೇಕ ಜ್ಞಾನದ ವಿಚಾರ ಮಾಡು. ನೀನು ವೇದಾಂತವನ್ನು ಓದಿಲ್ಲವೆ? ನೀನು ನಿದ್ರಿಸುತ್ತಿರುವಾಗಲೂ ವಿಚಾರದ ಖಡ್ಗವು ನಿನ್ನ ಶಿರದ ಮೇಲಿರಲಿ. ಆಗ ನಿನ್ನ ಸ್ವಪ್ನದಲ್ಲಿಯೂ ದುರಾಶೆ ನಿನ್ನ ಹತ್ತಿರ ಸುಳಿಯಲಾರದು. ಈ ಬಗೆಯ ಶಕ್ತಿಯನ್ನು ನೀನು ವೃದ್ಧಿಗೊಳಿಸುತಿದ್ದಲ್ಲಿ ತ್ಯಾಗ ಬುದ್ಧಿ ಕ್ರಮೇಣ ನಿನಗೆ ಬರುವುದು. ಆಗ ಸ್ವರ್ಗದ್ವಾರ

ನಿನಗಾಗಿ ತೆರೆಯುವುದನ್ನು ನೋಡುವೆ.

ಶಿಷ್ಯ:— ಅದು ಹೀಗಿದ್ದ ಪಕ್ಷಕ್ಕೆ ಏಕೆ ಭಕ್ತಿ ಗ್ರಂಥಗಳು ಅತಿ ತ್ಯಾಗಬುದ್ಧಿ ಮೃದುಸ್ವಭಾವವನ್ನೇ ನಿರ್ಮೂಲ ಮಾಡುತ್ತದೆ ಎಂದು ಹೇಳುತ್ತವೆ?

ಸ್ವಾಮಿಜಿ:— ಈರೀತಿ ಹೇಳುವ ಪುಸ್ತಕಗಳನ್ನು ಬಿಸಾಡು! ತ್ಯಾಗ ವಿಲ್ಲದೆ, ವಿಷಯ ಸುಖಗಳಲ್ಲಿ ಜಿಗುಪ್ಸೆಯಿಲ್ಲದೆ ಕಾಮ ಕಾಂಚನ ಹೇಸಿಗೆ ಸಮಾನವೆಂದು ಭಾವಿಸದೆ ಇದ್ದರೆ 'ನ ಸಿದ್ಧತಿ ಬ್ರಹ್ಮಶತಾಂತರೇಪಿ' ನೂರಾರು ಕಲ್ಪಗಳಲ್ಲಿಯೂ ಮುಕ್ತಿ ಪಡೆಯಲಾರರು. ಭಗವನ್ನಾಮ ಸ್ಮರಣೆ, ಧ್ಯಾನ, ಪೂಜೆ, ಹೋಮಾಗ್ನಿಯಲ್ಲಿ ತರ್ಪಣಕೊಡುವುದು ಇವೆಲ್ಲಾ ತ್ಯಾಗಬುದ್ಧಿಯನ್ನು ಹೊಂದುವುದಕ್ಕೆ. ಯಾರಿಗೆ ಈ ತ್ಯಾಗ ಭಾವನೆ ಯಿಲ್ಲವೊ ಅವರ ಸ್ಥಿತಿ ಲಂಗರು ಹಾಕಿರುವ ದೋಣಿಯನ್ನು ಹುಟ್ಟು ಹಾಕಲೆತ್ನಿಸುತ್ತಿರುವ ಮನುಷ್ಯನಂತಾಗುತ್ತದೆ. "ನ ಪ್ರಜಯಾ ನ ಧನೇನ ತ್ಯಾಗೇನೈಕೇ ಅಮೃತತ್ವ ಮಾನುಷಃ"

"ಸಂತತಿಯಿಂದಲ್ಲ, ಐಶ್ವರ್ಯದಿಂದಲ್ಲ, ಕೇವಲ ತ್ಯಾಗದಿಂದ ಮಾತ್ರ ಕೆಲವರು ಅಮರತ್ವವನ್ನೈದಿದರು."

ಶಿಷ್ಯ:— ಕೇವಲ ಕಾಮಕಾಂಚನ ತ್ಯಾಗ ಮಾಡಿಬಿಟ್ಟರೆ ಎಲ್ಲವೂ ಮುಗಿದಂತಾಗುತ್ತದೆಯೆ?

ಸ್ವಾಮಿಜಿ:— ಅವೆರಡನ್ನೂ ತ್ಯಜಿಸಿದಮೇಲೂ ಹಾದಿಯಲ್ಲಿ ಇತರ ಆತಂಕಗಳಿವೆ. ಉದಾಹರಣೆಗೆ–ಹೆಸರು ಕೀರ್ತಿಗಳ ಆಸೆ. ಅಪೂರ್ವವಾದ ಶಕ್ತಿಯುಳ್ಳ ಕೆಲವರು ಹೊರತು ಮಿಕ್ಕವರು ಈ ಮಟ್ಟದಲ್ಲಿ ತಮ್ಮನ್ನು ಹಿಡಿತದಲ್ಲಿಟ್ಟುಕೊಳ್ಳಲು ಅಸಾಧ್ಯ–ಜನರು ಅವರ ಮೇಲೆ ಗೌರವದ ಮಳೆ ಸುರಿಸುವರು–ಮೆಟ್ಟಲು ಮೆಟ್ಟಲಾಗಿ ಇತರ ಭೋಗ ಲಾಲಸೆಗಳೂ ಕಾಲಿಡುವುವು. ಇದರ ಫಲವಾಗಿ ಮುಕ್ಕಾಲುಪಾಲು ಮಂದಿ ತ್ಯಾಗಿ ಗಳೆಲ್ಲಾ ತಮ್ಮ ಮುಂದಿನ ಪ್ರಗತಿಗೆ ಧಕ್ಕೆ ತಂದುಕೊಂಡಿರುವರು. ಈ ಮಠ ಮುಂತಾದುವುಗಳನ್ನು ಸ್ಥಾಪಿಸಿದುದರಿಂದ ನಾನೇ ಪುನಃ ಬರಬೇಕಾಗು ವುದೊ ಯಾರಿಗೆ ಗೊತ್ತು!

ಶಿಷ್ಯ:—ನೀವೇ ಈ ರೀತಿ ಮಾತನಾಡಿದರೆ ನಮ್ಮ ಸಿತಿ ಮುಗಿ ದಂತೆಯೆ!

ಸ್ವಾಮಿಜಿ:— ಅಂಜಿಕೆಯೇನು? ಧೈರ್ಯದಿಂದಿರು. ಧೈರ್ಯದಿಂದಿರು,

ನೀನು ನಾಗಮಹಾಶಯರನ್ನು ನೋಡಿರುವೆಯಲ್ಲವೆ-ಗೃಹಸ್ಥ ಜೀವನದ ಮಧ್ಯೆ ಇದ್ದರೂ ಕೂಡ ಅವರು ಸನ್ಯಾಸಿಗಳನ್ನು ಮೀರಿಸಿರುವರು. ಇದು ಅತಿ ವಿರಳ. ನಾನು ಇವರಂತಹ ಮನುಷ್ಯರನ್ನು ನೋಡೇ ಇಲ್ಲ. ಯಾರಾದರೂ ಗೃಹಸ್ಥರಾಗಬೇಕೆಂದು ಇಚ್ಛಿಸಿದರೆ ಅವರು ನಾಗಮಹಾಶಯರಂತಿರಲಿ. ಪೂರ್ವ ಬಂಗಾಳದ ಆಧ್ಯಾತ್ಮಿಕ ಆಗಸದಲ್ಲಿ ಥಳಥಳಿಸುತ್ತಿರುವ ಜ್ಯೋತಿರ್ಮಯ ಪ್ರದೀಪದಂತಿರುವರು. ಆ ಭಾಗದಲ್ಲಿ ವಾಸಿಸುವ ಜನರಿಗೆ ಅವರ ದರ್ಶನ ಮಾಡಲು ಹೇಳು. ಅದರಿಂದ ಅವರಿಗೆ ಶುಭವಾಗುವುದು.

ಶಿಷ್ಯ:—ಶ್ರೀ ರಾಮಕೃಷ್ಣ ದೇವರ ಲೀಲಾನಾಟಕದಲ್ಲಿ ನಾಗಮಹಾಶಯರು ನಮ್ರತೆಯ ಅವತಾರವೆಂಬಂತಿದ್ದರೆಂದು ಹೇಳುವರು.

ಸ್ವಾಮಿಜಿ:—ಖಂಡಿತವಾಗಿ ಅದರಲ್ಲಿ ಕಿಂಚಿತ್ತೂ ಅನುಮಾನವಿಲ್ಲ. ಒಮ್ಮೆ ಅವರನ್ನು ಹೋಗಿ ನೋಡಬೇಕೆನ್ನಿಸಿದೆ. ನೀನೂ ನನ್ನೊಡನೆ ಬರುವೆಯಾ? ಮಳೆಯನೀರು ಬಂದು ಗದ್ದೆಯಲ್ಲೆಲ್ಲಾ ಹಾಯುತ್ತಿರುವುದನ್ನು ನೋಡಬೇಕೆಂದು ಆಸೆಯಾಗಿದೆ. ನೀನು ಅವರಿಗೆ ಬರೆಯುವೆಯಾ?

ಶಿಷ್ಯ:—ಖಂಡಿತವಾಗಿ ಬರೆಯುವೆ. ನಿಮ್ಮ ವಿಷಯ ಕೇಳಿದಾಗಲೆಲ್ಲ ಅವರು ಸಂತೋಷದಿಂದ ಉನ್ಮತ್ತರಾಗುವರು. ಪೂರ್ವ ಬಂಗಾಳ ತಮ್ಮ ಪಾದಧೂಳಿಯಿಂದ ಪವಿತ್ರವಾಗುವುದೆಂದು ಹೇಳುವರು.

ಸ್ವಾಮಿಜಿ:— ನಿನಗೆ ಗೊತ್ತೆ? ಶ್ರೀ ರಾಮಕೃಷ್ಣರು ನಾಗಮಹಾಶಯರನ್ನು "ಅಗ್ನಿಜ್ವಾಲೆ" ಎನ್ನುತ್ತಿದ್ದರು.

ಶಿಷ್ಯ:— ಹೌದು, ಹಾಗೆಂದು ನಾನು ಕೇಳಿರುವೆ.

ಸ್ವಾಮಿಜಿಯವರ ಅಪ್ಪಣೆಯಂತೆ ಶಿಷ್ಯ ಸ್ವಲ್ಪ ಪ್ರಸಾದ ಸ್ವೀಕರಿಸಿ, ಸಂಜೆ ಹೊತ್ತಾಗಿ ಕಲ್ಕತ್ತೆಗೆ ಹಿಂತಿರುಗಿದನು. ಸ್ಫೂರ್ತಿಯುತ ಗುರುಮುಖದಿಂದ ಕೇಳಿದ "ನಾನು ಮುಕ್ತ, ನಾನು ಮುಕ್ತ" ಎಂಬ ಅಭಯವಾಣಿಯನ್ನೇ ಕುರಿತು ಗಾಢವಾಗಿ ಚಿಂತಿಸುತ್ತಿದ್ದನು.

# ಅಧ್ಯಾಯ ೨೬

ಸ್ಥಳ:— ಬೇಲೂರು ಮಠ (ಬಾಡಿಗೆ ಕಟ್ಟಡ.) ವರ್ಷ:—ಕ್ರಿ. ಶ. ೧೮೯೮.

ಶಿಷ್ಯ:—ಸ್ವಾಮಿಜಿ, ಕಾಮಕಾಂಚನವನ್ನು ಸಂಪೂರ್ಣವಾಗಿ ವರ್ಜಿಸಿದ ಹೊರತು ಆಧ್ಯಾತ್ಮಿಕ ಸಾಕ್ಷಾತ್ಕಾರದಲ್ಲಿ ಬಹುದೂರ ಮುಂದು ವರಿಯಲಾರ ಎಂದು ಶ್ರೀ ರಾಮಕೃಷ್ಣರು ಹೇಳುತ್ತಿದ್ದರು. ಹಾಗಿದ್ದರೆ ಗೃಹಸ್ಥರ ಗತಿಯೇನು? ಅವರ ಮನಸ್ಸು ಈ ಎರಡು ವಸ್ತುಗಳ ಮೇಲೇ ನಿಂತಿದೆ.

ಸ್ವಾಮಿಜಿ:—ಗೃಹಸ್ಥನಾಗಲಿ ಸನ್ಯಾಸಿಯಾಗಲಿ ಕಾಮಕಾಂಚನದ ಮೇಲಿನ ವ್ಯಾಮೋಹ ಸಂಪೂರ್ಣವಾಗಿ ತೊಲಗಿಹೋಗುವವರೆಗೂ ಮನಸ್ಸು ಖಂಡಿತವಾಗಿಯೂ ದೇವರ ಕಡೆ ತಿರುಗುವುದಿಲ್ಲ. ಇದನ್ನು ಖಂಡಿತವಾಗಿ ತಿಳಿ. ಎಲ್ಲಿಯವರೆಗೆ ಮನಸ್ಸು ಇವುಗಳಲ್ಲೇ ಮುಳು ಗಿರುತ್ತದೆಯೋ ಅಲ್ಲಿಯವರೆಗೆ ನಿಜವಾದ ಭಕ್ತಿ, ಸ್ಥಿರಚಿತ್ತ, ಮತ್ತು ಶ್ರದ್ಧೆ ಎಂದಿಗೂ ಬರುವುದಿಲ್ಲ.

ಶಿಷ್ಯ:— ಹಾಗಾದರೆ ಗೃಹಸ್ಥರ ಸ್ಥಿತಿಯೇನು? ಅವರು ಯಾವ ಮಾರ್ಗವನ್ನನುಸರಿಸಬೇಕು?

ಸ್ವಾಮಿಜಿ:— ನಮ್ಮ ಕ್ಷುದ್ರ ಆಸೆಗಳ ತೃಪ್ತಿಗಾಗಿ, ಮತ್ತಿನ್ನೆಂದೂ ಅವುಗಳ ಬಲೆಗೆ ಬೀಳದಿರಲು ಮತ್ತು ಇನ್ನೂ ದೊಡ್ಡವುಗಳಾದರೆ ಅವನ್ನು ವಿಚಾರದಿಂದ ವರ್ಜಿಸಲು ಅದೇ ಸರಿಯಾದ ಮಾರ್ಗ. ತ್ಯಾಗವಿಲ್ಲದೆ ದೇವರ ಸಾಕ್ಷಾತ್ಕಾರ ಎಂದಿಗೂ ಅಸಂಭವ. ಬ್ರಹ್ಮನೇ ಬಂದು ಬೇರೆ ರೀತಿ ಅಪ್ಪಣೆಮಾಡಿದರೂ ಅಸಾಧ್ಯ!

ಶಿಷ್ಯ:— ಸನ್ಯಾಸಿಯಾದ ಕೂಡಲೇ ಎಲ್ಲಾ ವಸ್ತುಗಳ ಮೇಲಿನ ಮೋಹವೂ ಹೋಗುತ್ತದೆಯೆ?

ಸ್ವಾಮಿಜಿ:— ಸನ್ಯಾಸಿಗಳು ಕಡೆಗೆ ತ್ಯಾಗಜೀವನಕ್ಕಾದರೂ ಸಿದ್ಧತೆ ಮಾಡಿಕೊಳ್ಳಲು ಹೆಣಗಾಡುತ್ತಿದ್ದಾರೆ. ಗೃಹಸ್ಥರಾದರೋ ಈ ವಿಚಾರದಲ್ಲಿ ಲಂಗರು ಕಟ್ಟಿದ ದೋಣಿಯನ್ನು ಹುಟ್ಟುಹೊಡೆಯುವವರ ಗುಂಪಿಗೆ ಸೇರಿದವರು. ಭೋಗಲಾಲಸೆಯನ್ನು ಎಂದಿಗಾದರೂ ಶಾಂತಿಗೊಳಿಸಲು ಸಾಧ್ಯವೆ? "ಅದು ನಿರಂತರ ಹೆಚ್ಚುತ್ತಾ ಹೋಗುವುದು."

ಶಿಷ್ಯ :— ಏಕೆ ? ಬಹುಕಾಲ ವಿಷಯಸುಖವನ್ನು ಅನೇಕ ಬಾರಿ ಅನುಭವಿಸಿದ ಮೇಲೆ ಪ್ರಪಂಚದ ಮೇಲೆ ಜಿಗುಪ್ಸೆ ಹುಟ್ಟಬಹುದಲ್ಲವೆ ?

ಸ್ವಾಮಿಜಿ :— ಆದರೆ ಎಷ್ಟು ಮಂದಿಗೆ ಈ ಭಾವನೆ ಬರುವುದು ? ಬಹುಕಾಲ ವಿಷಯ ವಸ್ತುಗಳ ಸಂಪರ್ಕದಿಂದ ಮನಸ್ಸು ಕಲುಷಿತವಾಗಿ ಅದರ ಮುದ್ರೆ ಮನಸ್ಸಿನ ಮೇಲೆ ಚಿರಮುದ್ರಿತವಾಗುವುದು. ತ್ಯಾಗ, ಸಂಪೂರ್ಣ ತ್ಯಾಗವೇ ಎಲ್ಲಾ ಸಾಕ್ಷಾತ್ಕಾರಗಳ ಮೂಲ ಮಂತ್ರದ ನಿಜ ವಾದ ರಹಸ್ಯ.

ಶಿಷ್ಯ :— ಆದರೆ ಶಾಸ್ತ್ರಗಳಲ್ಲಿ ಈ ಕೆಲವು ನಿಯಮಗಳಿವೆಯಲ್ಲ? "ಗೃಹೇಶು ಪಂಚೇಂದ್ರಿಯ ನಿಗ್ರಹಸ್ತಪಃ" "ಹೆಂಡತಿ ಮಕ್ಕಳೊಡನೆ ಇರುವಾಗ ಪಂಚೇಂದ್ರಿಯಗಳನ್ನು ಸಂಯಮಮಾಡುವುದೇ ತಪಸ್ಸು" "ನಿವೃತ್ತ ರಾಗಸ್ಯ ಗೃಹಂ ತಪೋವನಂ" "ಯಾರು ಇಂದ್ರಿಯ ನಿಗ್ರಹ ಮಾಡಿರುವರೋ ಅವರಿಗೆ ಸಂಸಾರ ಮಧ್ಯದಲ್ಲಿರುವುದೂ, ಕಾಡಿನಲ್ಲಿ ತಪಸ್ಸನ್ನಾಚರಿಸುವುದೂ ಎರಡೂ ಒಂದೇ."

ಸ್ವಾಮಿಜಿ :—ಯಾರು ಸಂಸಾರ ಮಧ್ಯದಲ್ಲಿದ್ದುಕೊಂಡು ಕಾಮಿನಿ ಕಾಂಚನ ತ್ಯಾಗಮಾಡಲು ಸಮರ್ಥರಾಗಿರುವರೋ ಅವರು ನಿಜವಾಗಿಯೂ ಧನ್ಯರು. ಆದರೆ ಎಷ್ಟುಮಂದಿ ಅದನ್ನು ಮಾಡಬಲ್ಲರು ?

ಶಿಷ್ಯ :—ಆದರೆ ಸನ್ಯಾಸಿಗಳ ವಿಷಯವೇನು ? ಅವರು ಸಂಪೂರ್ಣ ವಾಗಿ ಕಾಮ ಕಾಂಚನ ತ್ಯಾಗಮಾಡಲು ಸಮರ್ಥರಾಗಿರುವರೆ ?

ಸ್ವಾಮಿಜಿ :—ನಾನು ಈಗ ತಾನೆ ಹೇಳಿದಂತೆ ಸನ್ಯಾಸಿಗಳು ತ್ಯಾಗ ಜೀವನವನ್ನಪ್ಪಿದ್ದಾರೆ. ಗುರಿಗಾಗಿ ಹೋರಾಡಲು ಅವರು ಆ ರಂಗಕ್ಕೆ ಬಂದಿ ದ್ದಾರೆ. ಆದರೆ ಗೃಹಸ್ಥರಿಗೆ ಕಾಮಿನಿ ಕಾಂಚನದಿಂದುಂಟಾಗುವ ಅಪಾಯ ಪರಿಜ್ಞಾನ ಇನ್ನೂ ಬಂದಿಲ್ಲ. ಆತ್ಮ ಸಾಕ್ಷಾತ್ಕಾರಕ್ಕೆ ಕೂಡ ತೊಡಗುವು ದಿಲ್ಲ. ಇವುಗಳ ತ್ಯಾಗಕ್ಕಾಗಿ ತಾವು ಹೋರಾಡಬೇಕಾಗುವುದೆಂಬ ಭಾವನೆ ಅವರ ಮನಸ್ಸಿಗೆ ಇನ್ನೂ ಬಂದಿಲ್ಲ.

ಶಿಷ್ಯ :— ಆದರೆ ಅದಕ್ಕಾಗಿ ಬಹುಮಂದಿ ಹೆಣಗುತ್ತಿದ್ದಾರೆ.

ಸ್ವಾಮಿಜಿ :—ಅದು ನಿಜ. ಯಾರು ಆ ರೀತಿ ಮಾಡುತ್ತಿರುವರೊ ಅವರು ಖಂಡಿತ ಕ್ರಮೇಣ ತ್ಯಜಿಸುವರು. ಅವರ ಕಾಮಿನಿ ಕಾಂಚನದ ತೀವ್ರ ಮೋಹ ಕ್ರಮೇಣ ಕಡಿಮೆಯಾಗುವುದು. ಆದರೆ ಯಾರು "ಇಷ್ಟು ಬೇಗ ಬೇಡ; ಕಾಲ ಬಂದಾಗ ಅದನ್ನು ಮಾಡಿದರಾಯಿತು" ಎಂದು

ವಿಳಂಬ ಮಾಡುವರೊ ಅಂತಹವರಿಗೂ ಆತ್ಮ ಸಾಕ್ಷಾತ್ಕಾರಕ್ಕೊ ಬಹು ದೂರ. "ಈಕ್ಷಣ ನನಗೆ ಸತ್ಯಸಾಕ್ಷಾತ್ಕಾರವಾಗಬೇಕು. ಈ ಜನ್ಮದಲ್ಲೇ ಆಗಬೇಕು" ಇದು ವೀರರ ಮಾತುಗಳು. ಅಂತಹ ವೀರರು ಯಾವ ಗಳಿಗೆಯಲ್ಲಿ ಬೇಕಾದರೂ ತ್ಯಜಿಸಲು ಸಿದ್ಧರಾಗಿರುವರು. ಅಂತಹವರಿಗೆ ಶಾಸ್ತ್ರ "ನಿನಗೆ ಯಾವ ಕ್ಷಣ ವೈರಾಗ್ಯ ವುಂಟಾಗುವುದೋ ಆ ಕ್ಷಣ ಪ್ರಪಂಚವನ್ನು ಪರಿತ್ಯಜಿಸು" ಎನ್ನುವುದು.

ಶಿಷ್ಯ:—ಆದರೆ ಶ್ರೀ ರಾಮಕೃಷ್ಣರು, "ದೇವರನ್ನು ಪ್ರಾರ್ಥಿಸಿದರೆ ಭಗವತ್ಕೃಪೆಯಿಂದ ಈ ಮೋಹವೆಲ್ಲಾ ಮಾಯವಾಗುವುವು" ಎಂದು ಹೇಳುತ್ತಿದ್ದರಲ್ಲವೆ?

ಸ್ವಾಮಿಜಿ:—ಹೌದು, ಅವನ ಕೃಪೆಯಿಂದ ಖಂಡಿತ ಸಾಧ್ಯ. ಆತನ ಕೃಪೆಗೆ ಪಾತ್ರರಾಗಬೇಕಾದರೆ ಮೊದಲು ನಾವೂ ಪವಿತ್ರರಾಗಬೇಕು. ಕಾಯಾ ವಾಚಾ ಮನಸಾ ಪವಿತ್ರರಾಗಿದ್ದರೆ ಮಾತ್ರ ಆತನ ಕೃಪಾಕಟಾಕ್ಷ ನಮ್ಮ ಮೇಲೆ ಬೀಳುವುದು.

ಶಿಷ್ಯ:—ಆದರೆ ಯಾರು ಕಾಯಾ ವಾಚಾ ಮನಸಾ ತನ್ನ ಮನಸ್ಸನ್ನು ನಿಗ್ರಹ ಮಾಡುವನೊ ಅವನಿಗೆ ದೇವರ ಕೃಪೆಯ ಆವಶ್ಯಕತೆ ಏನಿದೆ? ಕೇವಲ ತನ್ನ ಸಾಧನೆಯಿಂದಲೇ ಅವನು ಆಧ್ಯಾತ್ಮಿಕ ಪ್ರಗತಿ ಹೊಂದಬಹುದು.

ಸ್ವಾಮಿಜಿ:—ಯಾರು ಹೃತ್ಪೂರ್ವಕ ತನ್ನೆಡೆಗೆ ಬರಲು ಹೋರಾಡುತ್ತಿರುವನೋ ಅವನ ಮೇಲೆ ದೇವರು ಅಪಾರ ಕರುಣೆ ಬೀರುವನು. ನೀನು ಸೋಮಾರಿಯಾಗಿ ಏನನ್ನೂ ಮಾಡದೇ ಇದ್ದರೆ ಅವನು ಎಂದಿಗೂ ಬರುವುದಿಲ್ಲವೆಂದು ನಿನಗೇ ತಿಳಿಯುವುದು.

ಶಿಷ್ಯ:— ಎಲ್ಲರೂ ಒಳ್ಳೆಯವರಾಗಬೇಕೆಂದಿಚ್ಛಿಸುವರು. ಆದರೆ ಯಾವುದೋ ಒಂದು ಗಹನವಾದ ಕಾರಣದಿಂದ ಕೆಟ್ಟಹಾದಿ ಹಿಡಿಯುತ್ತಾರೆ. ಎಲ್ಲರೂ ಒಳ್ಳೆಯವರಾಗಲು, ಪೂರ್ಣತ್ವ ಪಡೆಯಲು, ದೇವರ ದರ್ಶನ ಹೊಂದಲು ಇಚ್ಛಿಸುತ್ತಾರಲ್ಲವೆ?

ಸ್ವಾಮಿಜಿ:— ಯಾರು ಇದನ್ನು ಇಚ್ಛಿಸುವರೊ ಅವರಾಗಲೇ ಹೋರಾಡುತ್ತಿರುವರೆಂದು ಭಾವಿಸು. ಈ ಹೋರಾಟ ಮುಂದುವರಿಸುತ್ತಿದ್ದರೆ ದೇವರು ತನ್ನ ಕೃಪಾದೃಷ್ಟಿಯನ್ನು ಬೀರುವನು.

ಶಿಷ್ಯ:— ಅವತಾರಪುರುಷರ ಚರಿತ್ರೆಯಲ್ಲಿ ಹಲವಾರು ಮಂದಿ

ವ್ಯರ್ಥ ಜೀವನ ನಡೆಸಿಯೂ ಹೆಚ್ಚು ಶ್ರಮವಿಲ್ಲದೆ, ಹೆಚ್ಚು ಸಾಧನೆ, ಭಕ್ತಿಯನ್ನೂ ಸಾಧಿಸದೆ ದೇವರ ದರ್ಶನ ಪಡೆದಿರುವುದನ್ನು ನೋಡುತ್ತೇವೆ. ಇದಕ್ಕೆ ಏನು ಕಾರಣ ?

ಸ್ವಾಮಿಜಿ:— ಹೌದು, ಆದರೆ ಅವರಲ್ಲಿ ಆಗಲೇ ಘೋರ ಕಳವಳ ಪ್ರಾಪ್ತವಾಗಿರಬೇಕು. ಬಹುಕಾಲ ಇಂದ್ರಿಯ ಭೋಗವಲ್ಲಿ ಮುಳುಗಿದ್ದ ಅವರಿಗೆ ಅವುಗಳ ಮೇಲೆ ತೀವ್ರ ಜಿಗುಪ್ಸೆ ಹುಟ್ಟಿರಬೇಕು. ಶಾಂತಿಗಾಗಿ ಅವರು ತವಕಿಸುತ್ತಿರಬೇಕು. ದೈವಕಟಾಕ್ಷದಿಂದ ದೊರಕುವ ಆ ಶಾಂತಿ ಇಲ್ಲದೆ ಇನ್ನು ಅವರಿಗೆ ಒಂದುಕ್ಷಣ ಈ ಜೀವನದಲ್ಲಿರುವುದೂ ಅಸಾಧ್ಯವೆಂದು ಮನವರಿಕೆಯಾಗಿರಬೇಕು. ಆದ್ದರಿಂದ ದೇವರು ಅಂತಹವರ ವಿಷಯದಲ್ಲಿ ದಯೆ ತೋರುವನು. ಅಂಥಹರಲ್ಲಿ ತಾಮಸ ಸ್ವಭಾವ ನೇರವಾಗಿ ಸತ್ತ್ವಕ್ಕೆ ತಿರುಗುವುದು.

ಶಿಷ್ಯ:— ಯಾವ ಹಾದಿಯೋ ಆಗಲಿ ಆ ಮಾರ್ಗದಲ್ಲಿಯೋ ಅವರು ಸಾಕ್ಷಾತ್ಕಾರ ಪಡೆಯುವರೆಂದಾಯಿತಲ್ಲವೆ?

ಸ್ವಾಮಿಜಿ:— ಹೌದು, ಏಕಾಗಬಾರದು? ಆದರೆ ಅರಮನೆಯನ್ನು ಹೀನ ಹಿಂಬಾಗಿಲಿನಿಂದ ಪ್ರವೇಶಿಸುವುದಕ್ಕಿಂತ ಮುಂದಿನ ಯೋಗ್ಯವಾದ ಹೆಬ್ಬಾಗಿಲಿನಿಂದ ಪ್ರವೇಶಿಸುವುದು ಒಳ್ಳೆಯದಲ್ಲವೆ?

ಶಿಷ್ಯ:— ಅದೇನೊ ನಿಜ. ಆದರೂ ಕೇವಲ ದೇವರ ಕೃಪೆಯಿಂದ ಮಾತ್ರವೇ ಅವನನ್ನು ಪಡೆಯಲು ಸಾಧ್ಯ ಎಂಬುದು ಸಿದ್ಧಾಂತವಾಗಿದೆ.

ಸ್ವಾಮಿಜಿ:— ಹೌದು. ಹಾಗೂ ಆಗಬಹುದು. ಆದರೆ ಅಂತಹವರು ಬಹಳ ವಿರಳ.

ಶಿಷ್ಯ:— ಯಾರು ಇಂದ್ರಿಯ ನಿಗ್ರಹ, ಕಾಮಕಾಂಚನ ತ್ಯಾಗಮಾಡಿ ದೇವರ ಸಾಕ್ಷಾತ್ಕಾರ ಪಡೆಯಲು ಹೊರಟಿರುವರೋ ಅವರು ಹೆಚ್ಚಾಗಿ ಸ್ವಂತಶ್ರಮ, ಸ್ವಪ್ರಯತ್ನಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರುವವರ ಗುಂಪಿಗೆ ಸೇರಿದವರೆಂದು ನನಗನ್ನಿಸುವುದು. ಯಾರು ಭಗವನ್ನಾಮಸ್ಮರಣೆ ಮಾಡಿ ಆತನನ್ನೇ ಶರಣುಹೋಗಿರುವರೊ ಅವರನ್ನು ದೇವರೆ ಈ ಪ್ರಾಪಂಚಿಕ ಮೋಹದಿಂದ ಬಿಡುಗಡೆ ಮಾಡಿ ಆ ಪರಮಗುರಿಯಾದ ಸಾಕ್ಷಾತ್ಕಾರದ ಕಡೆಗೆ ಕರೆದೊಯ್ಯುವನು.

ಸ್ವಾಮಿಜಿ:— ನಿಜ. ಇವೆರಡೂ ಭಿನ್ನ ದೃಷ್ಟಿಗಳು. ಮೊದಲನೆಯದು ಜ್ಞಾನಿಯ ದೃಷ್ಟಿ. ಎರಡನೆಯದು ಭಕ್ತನ ದೃಷ್ಟಿ. ಎರಡರಲ್ಲೂ

ತ್ಯಾಗಕ್ಕೆ ಹೆಚ್ಚು ಪ್ರಾಮುಖ್ಯತೆ.

ಶಿಷ್ಯ:— ಅದರಲ್ಲಿ ಸಂದೇಹವೇ ಇಲ್ಲ. ಆದರೆ ಒಮ್ಮೆ ಶ್ರೀಯುತ ಗಿರೀಶಚಂದ್ರ ಘೋಷರು ದೇವರ ಕರುಣೆಗೆ ಯಾವ ನಿರ್ಬಂಧವೂ ಇಲ್ಲ ವೆಂದು ಹೇಳಿದರು. ಅದಕ್ಕೊಂದು ಕಾಯಿದೆ ಇಲ್ಲ! ಇದ್ದಿದ್ದರೆ ಅದನ್ನು "ಕರುಣೆ" ಎನ್ನಲಾಗುತ್ತಿರಲಿಲ್ಲ. ಕರುಣೆ ಅಥವಾ ದಯೆಯ ರಾಜ್ಯ ಎಲ್ಲಾ ಕಟ್ಟುಗಳನ್ನೂ ಮೀರಿದುದು.

ಸ್ವಾಮಿಜಿ:— ಆದರೆ ಗೀರೀಶರು ಹೇಳಿದ ಆ ರಾಜ್ಯದಲ್ಲೂ ನಮಗೆ ತಿಳಿಯದಿರುವ ಬೇರೆ ಮಹತ್ತಾದ ಕಾಯಿದೆಗಳಿದ್ದೇ ಇವೆ. ಅದು ಚರಮ ಸೀಮೆಗೆ ಸೇರಿದುದು. ಕಾಲದೇಶ ನಿಮಿತ್ತಾತೀತವಾದುದು. ನಾವು ಅಲ್ಲಿಗೆ ಹೋದಾಗ ಕಾರಣಗಳೇ ಇಲ್ಲದ ಸ್ಥಳವಲ್ಲಿ ಯಾರು ಕರುಣಾಮಯ? ಕರುಣೆ ತೋರುವುದು ಯಾರಿಗೆ? ಅಲ್ಲಿ ಭಗವಂತ ಭಕ್ತ, ಧ್ಯಾನಿ ಧ್ಯಾನ, ಜ್ಞಾನ ಜ್ಞಾನಿ, ಎಲ್ಲಾ ಒಂದಾಗಿರುವುದು. ಅದನ್ನು ಬ್ರಹ್ಮ, ಅಥವಾ ಕೃಪೆ, ಹೇಗೆಬೇಕಾದರೂ ಕರೆ. ಅದೆಲ್ಲ ಸಮರಸವಾಗಿರುವುದು.

ಶಿಷ್ಯ:—ನಿಮ್ಮಿಂದ ಈ ಮಾತನ್ನು ಕೇಳಿದಮೇಲೆ ಸಕಲ ವೇದ ವೇದಾಂತಗಳ ಸಾರವನ್ನು ತಿಳಿದಂತಾಯಿತು. ಇಂದಿನವರೆಗೂ ನಾನು ಯಾವುದೋ ಅರ್ಥವಿಲ್ಲದ ಶಬ್ದಜಾಲದಲ್ಲಿ ಜೀವಿಸುತ್ತಿದ್ದೆ ಎನ್ನಿಸುತ್ತದೆ.

---

## ಅಧ್ಯಾಯ ೨೭

**ಸ್ಥಳ:**—ಬೇಲೂರು; ಮಠ (ಬಾಡಿಗೆ ಕಟ್ಟಡ.) ವರ್ಷ: ಕ್ರಿ. ಶ. ೧೮೯೮.

ಶಿಷ್ಯ:— ಸ್ವಾಮಿಜಿ, ದಯವಿಟ್ಟು ನನಗೆ ಹೇಳಿ, ನಾವು ಸೇವಿಸುವ ಆಹಾರಕ್ಕೂ ಮಾನವನ ಆಧ್ಯಾತ್ಮಿಕ ಬೆಳವಣಿಗೆಗೂ ಏನಾದರೂ ಸಂಬಂಧವಿದೆಯೆ?

ಸ್ವಾಮಿಜಿ:—ಹೌದು, ಹೆಚ್ಚು ಕಡಿಮೆ ಇದೆ ಎನ್ನಬಹುದು.

ಶಿಷ್ಯ:— ಮೀನು ಮಾಂಸವನ್ನು ತೆಗೆದುಕೊಳ್ಳುವುದು ಸರಿಯೆ? ಆವಶ್ಯಕವೆ?

ಸ್ವಾಮಿಜಿ:— ಓಹೊ! ಅದಕ್ಕೇನಂತೆ ತೆಗೆದುಕೊ ಮಗು! ಅದ

ರಿಂದೇನಾದರೂ ಹಾನಿಯುಂಟಾದರೆ ನಾನು ಅದರ ಜವಾಬ್ದಾರಿಯನ್ನು ವಹಿಸಿಕೊಳ್ಳುತ್ತೇನೆ. ನಮ್ಮ ದೇಶದ ಜನಸಾಮಾನ್ಯರ ಕಡೆ ನೋಡು. ಎಂತಹ ಒಣಮುಖ; ಎದೆಯಾದರೋ ಸತ್ತ್ವಹೀನ, ಉತ್ಸಾಹ ಶೂನ್ಯ, ಹೊಟ್ಟೆ ಮಾತ್ರ ದೊಡ್ಡದು, ಕೈ ಕಾಲುಗಳೆಲ್ಲಾ ಶಕ್ತಿಹೀನ—ಕ್ಷುದ್ರವಾದೊಂದು ಸನ್ನಿವೇಶವಾದರೂ ಸರಿಯೆ, ಭಯಪಟ್ಟು ಓಡಿಹೋಗುವ ಹೇಡಿಗಳ ಗುಂಪು!

ಶಿಷ್ಯ—ಮೀನು ಮಾಂಸ ತಿನ್ನುವುದರಿಂದ ಶಕ್ತಿಬರುವುದೆ? ಬೌದ್ಧ ಮತ ವೈಷ್ಣವ ಮತಗಳೇಕೆ "ಅಹಿಂಸೆಯೇ ಪರಮ ಧರ್ಮ" ಎಂದು ಸಾರುತ್ತವೆ?

ಸ್ವಾಮಿಜಿ:—ಬೌದ್ಧಮತ ವೈಷ್ಣವ ಮತಗಳೆರಡೂ ಬೇರೆಬೇರೆಯಲ್ಲ. ಬೌದ್ಧ ಮತ ಹೀನಸ್ಥಿತಿಯಲ್ಲಿದ್ದಾಗ ಹಿಂದೂ ಮತ ಅದರಿಂದ ಕೆಲವು ಮುಖ್ಯ ನೀತಿಯ ತತ್ತ್ವಗಳನ್ನು ತೆಗೆದುಕೊಂಡು ಅದನ್ನು ತನ್ನದನ್ನಾಗಿ ಮಾಡಿಕೊಂಡು ವೈಷ್ಣವ ಧರ್ಮ ಎಂದು ಹೆಸರು ಪಡೆಯಿತು. ಬೌದ್ಧರ ತತ್ತ್ವವಾದ, "ಅಹಿಂಸೆಯೇ ಶ್ರೇಷ್ಠಮಾರ್ಗ" ಎಂಬುದು ಬಹಳ ಒಳ್ಳೆಯದೆ. ಆದರೆ ಬೌದ್ಧ ಮತ ಎಲ್ಲರ ಮೇಲೂ ಯೋಗ್ಯಾಯೋಗ್ಯತೆಯನ್ನು ವಿಮರ್ಶಿಸದೆ ಇದನ್ನು ಬಲಾತ್ಕರಿಸಿ ಭರತ ವರ್ಷವನ್ನೇ ಹಾಳು ಮಾಡಿತು! ನಾನು ಹಿಂದೂ ದೇಶದಲ್ಲಿ ಅನೇಕ ಮಂದಿ ಈ ಬಗೆಯ ಧಾರ್ಮಿಕ ಆಷಾಢಭೂತಿ ನೋಡಿದ್ದೇನೆ. ಅವರು ಇರುವೆಗಳಿಗೆ ಸಕ್ಕರೆಯನ್ನು ಹಾಕುತ್ತಾರೆ. ಆದರೆ ತುಚ್ಛವಾದ ಹಣದಾಸೆಗಾಗಿ ತಮ್ಮ ಸಹೋದರರ ರಕ್ತ ಹೀರಲು ಹಿಂದೆ ಮುಂದೆ ನೋಡುವುದಿಲ್ಲ.

ಶಿಷ್ಯ:—ಆದರೆ ವೇದ ಮನುಧರ್ಮಶಾಸ್ತ್ರದಲ್ಲಿ ಮೀನು ಮಾಂಸ ತಿನ್ನಬೇಕೆಂದು ಹಲವು ಕಟ್ಟಳೆಗಳಿವೆಯಲ್ಲ?

ಸ್ವಾಮಿಜಿ:— ಅದೂ ಇದೆ. ಕೊಲ್ಲದಿರಬೇಕೆಂಬುದೂ ಇದೇ ವೇದಗಳಲ್ಲಿ "ಯಾವ ಜೀವಿಗೂ ನೋವುಂಟುಮಾಡಬೇಡ" ಎಂದು ಹೇಳಿದೆ ಮನುಕೂಡ, "ಆಸೆಗಳನ್ನು ತೊರೆಯುವುದರಿಂದ ಮಹತ್ತಾದ ಪರಿಣಾಮವುಂಟಾಗುವುದು" ಎಂದಿದ್ದಾನೆ. ಹಿಂಸೆ ಅಹಿಂಸೆ ಎರಡೂ ವ್ಯಕ್ತಿಯು ಅವಲಂಬಿಸುವ ಸಾಧನೆಗನುಗುಣವಾಗಿ ಆತನ ಯೋಗ್ಯತೆ, ಸಾಮರ್ಥ್ಯತೆ, ಹೊಂದಿಕೆಗನುಸಾರವಾಗಿ ವಿಧಿಸಲ್ಪಟ್ಟಿವೆ.

ಶಿಷ್ಯ:— ಈಗಿನ ಕಾಲದಲ್ಲಿ ಧರ್ಮವನ್ನವಲಂಬಿಸಿದ ಕೂಡಲೇ

ಮೀನುಮಾಂಸವನ್ನು ಬಿಡುವುದೊಂದು ಸಂಪ್ರದಾಯವಾಗಿದೆ. ಕೆಲವರಿಗಂತೂ ಇದನ್ನು ಮಾಡದಿದ್ದಲ್ಲಿ ವ್ಯಭಿಚಾರದಂತಹ ಘೋರಪಾತಕವೂ ಕೂಡ ಇದಕ್ಕಿಂತ ದೊಡ್ಡದಲ್ಲ ಎನ್ನುವಷ್ಟುರಮಟ್ಟಿಗಾಗಿದೆ.

ಸ್ವಾಮಿಜಿ :— ನಮ್ಮ ದೇಶ, ನಮ್ಮ ಸಮಾಜ ಈ ಬಗೆಯ ನಂಬಿಕೆಗಳಿಂದ ಹಾಳಾಗಿ ಹೋಗುತ್ತಿರುವುದನ್ನು ನೋಡುತ್ತಿಲ್ಲವೆ ? ಈಗ ಅವು ಹೇಗೆ ಬಂತೆಂದು ತಿಳಿಯುವುದರಿಂದ ಪ್ರಯೋಜನವೇನು ? ನೀನು ನೋಡು ಪೂರ್ವ ಬಂಗಾಳಿಗಳು ಮೀನು ಮಾಂಸ ಆಮೆ ಮುಂತಾದುವನ್ನು ತಿನ್ನುತ್ತಾರೆ. ಅವರು ಈ ಭಾಗದ ಬಂಗಾಳಿಗಳಿಗಿಂತ ಹೆಚ್ಚು ದೃಢಕಾಯರಾಗಿರುವರು. ಪೂರ್ವ ಬಂಗಾಳದ ದೊಡ್ಡ ದೊಡ್ಡ ಬಾಬುಗಳೂ ಕೂಡ ರಾತ್ರಿಯೂಟಕ್ಕೆ ರೊಟ್ಟಿ ಚಪಾತಿಗಳನ್ನು ಉಪಯೋಗಿಸುತ್ತಿಲ್ಲ. ಅವರು ನಮ್ಮಂತೆ ಅಗ್ನಿಮಾಂದ್ಯ ಮುಂತಾದ ರೋಗಗಳಿಂದ ನರಳುತ್ತಿಲ್ಲ. ಪೂರ್ವ ಬಂಗಾಳದ ಹಳ್ಳಿಗಳಲ್ಲಿ ಈ ಅಜೀರ್ಣ ರೋಗದ ಹೆಸರೇ ಗೊತ್ತಿಲ್ಲವೆಂದು ಕೇಳಿದ್ದೇನೆ.

ಶಿಷ್ಯ :— ಹೌದು ಸ್ವಾಮಿಜಿ, ನಮ್ಮ ಕಡೆ ಈ ಅಗ್ನಿಮಾಂದ್ಯ ರೋಗವೇ ಇಲ್ಲ. ಈ ಭಾಗಕ್ಕೆ ಬಂದಮೇಲೆ ನಾನು ಅದರ ವಿಚಾರ ಕೇಳಿದ್ದು. ನಾವು ಅನ್ನದೊಂದಿಗೆ ಮೀನನ್ನು ಬೆಳಿಗ್ಗೆ ಸಂಜೆ ಎರಡು ಹೊತ್ತೂ ತೆಗೆದುಕೊಳ್ಳುತ್ತೇವೆ.

ಸ್ವಾಮಿಜಿ :— ಟೀಕೆಗಳಿಗೆ ಗಮನಕೊಡದೆ ನಿನಗಿಷ್ಟಬಂದಷ್ಟು ತೆಗೆದುಕೊ. ದೇಶವೆಲ್ಲಾ ಒಂದೇ ತರಕಾರಿಯಲ್ಲಿ ಜೀವಿಸುವ ಅಜೀರ್ಣಂದಿದ ನೆರಳುವ ಬಾಬಾಜಿಗಳಿಂದ ತುಂಬಿ ಹೋಗಿದೆ. ಸತ್ತ್ವಗುಣದ ಚಿಹ್ನೆಯೇ ಇಲ್ಲ. ಬರೀ ತಮಸ್ಸು.–ಮೃತ್ಯುವಿನ ಛಾಯೆ. ನಗುಮುಖ, ಅಭಯೋತ್ಸಾಹ ತೃಪ್ತಿ, ಉತ್ಕಟ ಚಟುವಟಿಕೆ – ಇವೆಲ್ಲಾ ಸತ್ತ್ವಗುಣದ ಪರಿಣಾಮ. ಸೋಮಾರಿತನ, ಆಲಸ್ಯ, ಉತ್ಕಟ ಮೋಹ, ನಿದ್ರೆ ಇವೆಲ್ಲಾ ತಾಮಸದ ಚಿಹ್ನೆ.

ಶಿಷ್ಯ :— ಆದರೆ ಮಾಂಸ ಮೀನು ಮನುಷ್ಯನ ರಾಜಸ ಸ್ವಭಾವವನ್ನು ಉದ್ರೇಕಗೊಳಿಸುವುದಿಲ್ಲವೆ ?

ಸ್ವಾಮಿಜಿ:— ಆ ಸ್ವಭಾವ ನಿಮಗೆಲ್ಲಾ ಬರಲೆಂದೇ ನಾನು ಆಶಿಸುವುದು. ಈಗ ರಾಜಸ ಸ್ವಭಾವ ಬಹಳ ಬೇಕಾಗಿದೆ. ನೀನು ಸತ್ತ್ವಗುಣಿಗಳೆಂದು ತಿಳಿದಿರುವವರಲ್ಲಿ ಶೇಕಡ ತೊಂಭತ್ತುಮಂದಿ

ಘೋರ ತಾಮಸದಿಂದಾವೃತರಾಗಿದ್ದಾರೆ! ಅವರಲ್ಲಿ ಹದಿನಾರರಲ್ಲಿ ಒಂದು ಪಾಲು ಸತ್ತ್ವಗುಣಿಗಳು ಸಿಕ್ಕಿದರೆ ಸಾಕು. ತೀವ್ರವಾದ ರಾಜಸಿಕ ಶಕ್ತಿಯು ಉದ್ದೀಪನವಾಗಬೇಕು. ಇಡೀ ದೇಶವೆಲ್ಲಾ ತಮೋಗುಣದಿಂದ ಆಚ್ಛಾದಿತ ವಾಗಿದೆ. ದೇಶಾದ್ಯಂತ ಜನರಿಗೆಲ್ಲಾ ಆಹಾರ, ಬಟ್ಟೆ ಬೇಕು – ದೇಶ ಜಾಗೃತಗೊಳ್ಳಬೇಕು. ಚಟುವಟಿಕೆಯಿಂದ ಕೆಲಸಮಾಡುವಂತೆ ಪ್ರೇರೇ ಪಿಸಬೇಕು. ಇಲ್ಲದಿದ್ದಲ್ಲಿ ಅವರು ಮತ್ತಷ್ಟು ಜಡರಾಗಿ ಮರಕಲ್ಲುಗಳಾಗು ತ್ತಾರೆ. ಆದ್ದರಿಂದಲೇ ಹೆಚ್ಚು ಮೀನುಮಾಂಸ ತಿನ್ನಬೇಕೆಂದು ನಾನು ಹೇಳುವುದು.

ಶಿಷ್ಯ:—ಸತ್ತ್ವಗುಣ ವೃದ್ಧಿಗೊಳಿಸಿಕೊಂಡ ಮೇಲೂ ಈ ಮೀನು ಮಾಂಸದ ಬಯಕೆ ಇದ್ದೇ ಇರುವುದೆ?

ಸ್ವಾಮಿಜಿ:—ಇಲ್ಲ, ಇರುವುದಿಲ್ಲ. ಪವಿತ್ರನಾಗಿ ಪೂರ್ಣ ಸತ್ತ್ವಶಾಲಿ ಯಾದಾಗ ಈ ಮೀನು ಮಾಂಸದ ಬಯಕೆಯೆಲ್ಲಾ ಮಾಯವಾಗುವುದು. ಅದು ಒಂದು ವ್ಯಕ್ತಿಯಲ್ಲಿ ಆವಿರ್ಭವಿಸಿದಾಗ ಅವನಲ್ಲಿ ಈ ಗುಣಗಳೆಲ್ಲಾ ಇರುವುವು: ಇತರರಿಗಾಗಿ ಸರ್ವಸ್ವ ತ್ಯಾಗ, ಕಾಮಿನಿ ಕಾಂಚನದಲ್ಲಿ ಸಂಪೂರ್ಣ ವಿರಕ್ತಿ, ಹೆಮ್ಮೆ ಅಹಂಭಾವಗಳ ಅಭಾವ. ಯಾವಾಗ ಈ ಗುಣಗಳೆಲ್ಲಾ ಮನುಷ್ಯನಲ್ಲಿ ಕಾಣಬರುವುದೋ ಆಗ ಮಾಂಸಾಹಾರದ ಆಸೆ ಹೋಗುವುದು. ಈ ಚಿಹ್ನೆಗಳೊಂದೂ ಇಲ್ಲದೆ ಅಹಿಂಸೆಯ ಪರವಾಗಿ ಜನರು ಮಾತನಾಡುತ್ತಿದ್ದಾರೆ. ಆಗ ಅದೆಲ್ಲಾ ಕೇವಲ ಕಾಪಟ್ಯ, ಧರ್ಮದ ಸೋಗೆಂದು ತಿಳಿ. ನೀನು ಶುದ್ಧ ಸಾತ್ತ್ವಿಕನಾದಮೇಲೆ ಮೀನು ಮಾಂಸ ವನ್ನು ಖಂಡಿತವಾಗಿಯೂ ಬಿಡು.

ಶಿಷ್ಯ:—ಆದರೆ ಛಾಂದೋಗ್ಯ ಉಪನಿಷತ್ತಿನಲ್ಲಿ ಪವಿತ್ರವಾದ ಆಹಾರದಿಂದ ಮನುಷ್ಯನಲ್ಲಿರುವ ಸತ್ತ್ವಗುಣ ಪವಿತ್ರವಾಗುವುದು ಎಂಬ ಹೇಳಿಕೆ ಇದೆಯಲ್ಲ?

ಸ್ವಾಮಿಜಿ:—ಹೌದು, ನನಗೆ ಅದು ಗೊತ್ತಿದೆ. ಶಂಕರಾಚಾರ್ಯರು ಆಹಾರವೆಂಬ ಮಾತಿಗೆ "ಇಂದ್ರಿಯ ವಸ್ತುಗಳು" ಎಂದು ಅರ್ಥ ಮಾಡು ತ್ತಾರೆ. ರಾಮಾನುಜಾಚಾರ್ಯರು ಆಹಾರವೆಂಬ ಪದಕ್ಕೆ ಆಹಾರವೆಂದೇ ತೆಗೆದುಕೊಳ್ಳುತ್ತಾರೆ. ನನಗೆ ತೋರುವುದೇನೆಂದರೆ ನಾವು ಇವೆರಡೂ ಪದ ಗಳ ಅರ್ಥವನ್ನೂ ಹೊಂದಿರುವ ಪದ ತೆಗೆದುಕೊಳ್ಳಬೇಕೆಂದು. ಜೀವ ಮಾನವನ್ನೆಲ್ಲಾ ಒಳ್ಳೆಯ ಆಹಾರ ಕೆಟ್ಟ ಆಹಾರ ಇವುಗಳ ವಾದ ವಿವಾದ

ಗಳಲ್ಲೇ ಕಳೆಯಬೇಕೇನು? ಅಥವಾ ಇಂದ್ರಿಯ ನಿಗ್ರಹವನ್ನು ಮಾಡುವಿರೊ? ಖಂಡಿತವಾಗಿ ಇಂದ್ರಿಯ ನಿಗ್ರಹ ಮುಖ್ಯ. ಒಳ್ಳೆಯ ಅಥವಾ ಕೆಟ್ಟ, ಪವಿತ್ರ ಅಥವಾ ಅಪರಿಶುದ್ಧವಾದ ಆಹಾರ ಇವುಗಳ ತಾರತಮ್ಯವು ಸ್ವಲ್ಪ ಮಟ್ಟಿಗೆ ಮಾತ್ರ ಗುರಿಯನ್ನು ಸೇರುವುದಕ್ಕೆ ಸಹಾಯ ಮಾಡುತ್ತದೆ. ಶಾಸ್ತ್ರಗಳ ಪ್ರಕಾರ ಮೂರು ವಿಷಯಗಳು ನಮ್ಮ ಮನಸ್ಸನ್ನು ಕಲುಷಿತಗೊಳಿಸುತ್ತವೆ. (೧) ಜಾತಿದೋಷ – ಈರುಳ್ಳಿ, ಬೆಳ್ಳುಳ್ಳಿಯಂತಹ ಉದ್ರೇಕಗೊಳಿಸುವ ದುರ್ವಾಸನೆಯಿಂದ ಕೂಡಿದ್ದು. ಇದರಿಂದ ಆಹಾರ ಕಲುಷಿತವಾಗುವುದು. (೨) ನಿಮಿತ್ತದೋಷ – ಕ್ರಿಮಿ ಕೀಟ ಧೂಳು ಕೊಳೆ ಕುಳಿತ ಆಹಾರದಿಂದುಂಟಾಗುವ ಕಲ್ಮಷ. ಉದಾಹರಣೆಗೆ – ಪೇಟೆಯಿಂದ ತಂದ ಮಿಠಾಯಿ ಮುಂತಾದುವು. (೩) ಆಶ್ರಯದೋಷ – ಆಹಾರವು ಕೆಟ್ಟವರಿಂದ ಬಂದರೆ ಅದರಿಂದುಂಟಾಗುವ ಕಲ್ಮಷ. ಉದಾಹರಣೆಗೆ, ದುಷ್ಟ ಅಥವಾ ದುರಾತ್ಮನು ಮುಟ್ಟಿದ ಪದಾರ್ಥ. ಒಂದು ಎರಡನೆ ಕಾರಣಗಳಿಂದ ದೂರವಾಗಲು ಪ್ರತ್ಯೇಕ ಗಮನ ಕೊಡಬೇಕು. ಆದರೆ ಈ ದೇಶದಲ್ಲಿ ಅವೆರಡಕ್ಕೂ ಹೆಚ್ಚಾಗಿ ಗಮನ ಕೊಡುವುದಿಲ್ಲ. ಮೂರನೆಯದಕ್ಕೇ ಹೊಡೆದಾಡುತ್ತೇವೆ; ಕೇವಲ ಯೋಗಿಯೊಬ್ಬನಿಗೆ ಮಾತ್ರ ಮೂರನೆಯದನ್ನು ವಿಚಾರಿಸಲು ಸಾಧ್ಯ; ಇಡೀ ದೇಶವೆಲ್ಲಾ ಕೇವಲ "ಮುಟ್ಟ ಬೇಡ, ಮುಟ್ಟ ಬೇಡ," ಎಂಬ ನುಡಿಯುವರ ಕ್ರಂದನ ಆಟಾಟೋಪದಿಂದ ತುಂಬಿಹೋಗಿದೆ. ಅವರ ಆ ಪ್ರತ್ಯೇಕ ಆವರಣದಲ್ಲಿ ಕೂಡ ಒಳ್ಳೆಯ ಕೆಟ್ಟ ಮನುಷ್ಯರ ತಾರತಮ್ಯ ಇಲ್ಲ. ಏಕೆಂದರೆ ಅವರು ಯಾರಾದರೂ ಆಗಲಿ ಕತ್ತಿನಲ್ಲಿ ಜನಿವಾರವಿದ್ದರೆ ಬ್ರಾಹ್ಮಣನೆಂದರೆ ಸಾಕು ಅವರ ಕೈಯಲ್ಲಿ ತಾರತಮ್ಯವಿಲ್ಲದೆ ಆಹಾರ ಸ್ವೀಕರಿಸುತ್ತಿದ್ದರು. ಶ್ರೀ ರಾಮಕೃಷ್ಣರು ಯಾರೆಂದರೆ ಅವರಿಂದ ಆಹಾರವನ್ನು ಸ್ವೀಕರಿಸುತ್ತಿರಲಿಲ್ಲ. ಅನೇಕವೇಳೆ ಅವರಿಗೆ ಕೆಲವರು ಆಹಾರ ತಂದರೆಂದರೆ ಸ್ವೀಕರಿಸುತ್ತಲೇ ಇರಲಿಲ್ಲ – ಸರಿಯಾಗಿ ವಿಚಾರಿಸಿದಾಗ ಆ ತಂದಂತಹ ಮನುಷ್ಯ ಕಲುಷಿತನಾಗೇ ಇರುತ್ತಿದ್ದ. ಈಗ ವರ್ತಮಾನಕಾಲದಲ್ಲಿ ಧರ್ಮ ಅಡಿಗೆಯ ಪಾತ್ರೆಯಲ್ಲಿ ಮಾತ್ರ ಇದೆ – ಧರ್ಮದ ಮಹತ್ತಾದ ಸತ್ಯಗಳನ್ನು ಒಂದೆಡೆಯಿಟ್ಟು ನೀವು ಹೋರಾಡುವಿರಿ – ಕೇವಲ ಸಿಪ್ಪೆಗೆ, ತಿರುಳಿಗಲ್ಲ.

ಶಿಷ್ಯ:— ಹಾಗಾದರೆ ನಾವು ಯಾರ ಹತ್ತಿರವೆಂದರೆ ಅವರ ಹತ್ತಿರ ಆಹಾರ ತಿನ್ನಬೇಕೇನು?

ಸ್ವಾಮಿಜಿ:— ಅದೇಕೆ! ಇಲ್ಲಿ ನೋಡು, ನೀವು ಉದಾಹರಣೆಗೆ ಪುರೋಹಿತವರ್ಗಕ್ಕೆ ಸೇರಿದವರು, ಎಲ್ಲಾ ವರ್ಗದ ಬ್ರಾಹ್ಮಣರು ಮಾಡಿದ ಅನ್ನವನ್ನೇಕೆ ಊಟ ಮಾಡುವುದಿಲ್ಲ? ರಾಢ್ರೀ ಪಂಥಕ್ಕೆ ಸೇರಿದ ನೀವು ವಾರೇಂದ್ರ ಪಂಥಕ್ಕೆ ಸೇರಿರುವವರಲ್ಲಿ ಏಕೆ ಊಟಮಾಡಬಾರದು? ಅಥವಾ ವಾರೇಂದ್ರರು ತಾನೆ ಏಕೆ ನಿಮ್ಮಲ್ಲಿ ಉಣಲು ಆಕ್ಷೇಪಿಸ ಬೇಕು? ಪಶ್ಚಿಮ ಮತ್ತು ದಕ್ಷಿಣ ಇಂಡಿಯಾದಲ್ಲಿರುವ ಒಳಪಂಗಡಗಳು ಉದಾಹರಣೆಗೆ, ಮರಾಠಿ ತೆಲುಗರು ಕನೂಜಿಗಳು ಉಳಿದವರೂ ಏಕೆ ಹೀಗೆ ಮಾಡಬಾರದು? ಬಂಗಾಳದಲ್ಲಿ ನೂರಾರು ಮಂದಿ ಬ್ರಾಹ್ಮಣರು ಕಾಯಸ್ಥರು ಎಂದು ಹೇಳಿಕೊಳ್ಳುವವರು ಸಾರ್ವಜನಿಕ ಫಲಾಹಾರ ಮಂದಿರಗಳಿಗೆ ಗೋಪ್ಯವಾಗಿ ಹೋಗಿ ರುಚಿರುಚಿಯಾದ ತಿಂಡಿ ತಿಂದು ನಂತರ ಹೊರಕ್ಕೆ ಬಂದು ತಾವು ಸಮಾಜದ ನಾಯಕರೆಂದು ಹೇಳಿಕೊಂಡು "ಹೊಲೆಯ ಮುಟ್ಟಬಾರದು" ಎಂಬ ತತ್ತ್ವಕ್ಕೆ ಉತ್ತೇಜನ ಕೊಡುತ್ತಿರು ವುದನ್ನು ನೀನು ನೋಡುತ್ತಿಲ್ಲವೆ? ಇಂತಹ ಕಪಟಿಗಳು ಆಜ್ಞಾಪಿಸಿದ ಕಾಯಿದೆಗಳು ನಮ್ಮ ಸಮಾಜಕ್ಕೆ ಮಾರ್ಗದರ್ಶಕವಾಗಬೇಕೇನು? ಅದಕ್ಕೆ ಬದಲಾಗಿ ನಾವು ಅವರನ್ನು ಹೊಡೆದಟ್ಟಬೇಕು. ನಮ್ಮ ಮಹಾ ಋಷಿಗಳು ಮಾಡಿದ ಕಾನೂನುಗಳನ್ನು ಪುನಃ ತಂದು ಅವಕ್ಕೆ ಹೆಚ್ಚು ಪ್ರಾಮುಖ್ಯತೆ ಕೊಡಬೇಕು. ಹೀಗೆ ಮಾಡಿದರೆ ಮಾತ್ರ ನಮ್ಮ ಜನಾಂಗ ಉದ್ಧಾರ ವಾಗುವುದು.

ಶಿಷ್ಯ:— ಹಾಗಾದರೆ ಹಿಂದಿನ ಋಷಿಗಳು ಮಾಡಿದ ಕಾನೂನುಗಳೇ ಈಗ ನಮ್ಮ ಸಮಾಜಕ್ಕೆ ಮಾರ್ಗದರ್ಶಕಗಳಾಗಿಲ್ಲವೆ?

ಸ್ವಾಮಿಜಿ:— ಎಂತಹ ಭ್ರಾಂತಿ! ಈಗಿನ ಕಾಲದಲ್ಲಿ ಹಾಗೆಲ್ಲಿ ಇದೆ? ನಾನು ಭರತಖಂಡವನ್ನೆಲ್ಲಾ ಸಂಚರಿಸುತ್ತಿದ್ದಾಗ ಎಷ್ಟೊಂದು ಎಚ್ಚರಿಕೆ ಯಿಂದ ಸಂಪೂರ್ಣವಾಗಿ ಹುಡುಕಿದರೂ ಎಲ್ಲಿಯೂ ಋಷಿಗಳ ನ್ಯಾಯ ಸೂತ್ರಗಳು ಬಳಕೆಯಲ್ಲಿದ್ದುದು ಕಾಣಲಿಲ್ಲ. ಮುಕ್ಕಾಲು ಪಾಲು ಅರ್ಥ ವಿಲ್ಲದ ವಾಡಿಕೆಯಲ್ಲಿರುವ ಅಂಧ ಸಂಪ್ರದಾಯಗಳು, ಸ್ಥಳದ ಪಕ್ಷಪಾತ ಭಾವನೆಗಳು, ಹೆಂಗಸರಲ್ಲಿ ಹೆಚ್ಚುವಾಡಿಕೆಯಲ್ಲಿರುವ ಪದ್ಧತಿಗಳು, ಸಂಸ್ಕಾರಗಳು, ಇವೇ ಸಮಾಜವನ್ನು ಎಲ್ಲೆಡೆಯಲ್ಲೂ ಆಳುತ್ತಿರುವುವು. ಅವರಲ್ಲಿ ಶಾಸ್ತ್ರಗಳನ್ನು ಓದಲು ಗಮನಕೊಡುವವರೆಷ್ಟು ಮಂದಿ? ಅಥವಾ ಎಚ್ಚರಿಕೆಯಿಂದ ಓದಿದ ಮೇಲೆ ಕಾಯಿದೆಗನುಸಾರ ಸಮಾಜವನ್ನು

ನಡೆಸಬೇಕೆಂದು ಲಕ್ಷಿಸುವವರಾರು ?

ಶಿಷ್ಯ:— ಹಾಗಾದರೆ ನಾನೇನು ಮಾಡಬೇಕು.

ಸ್ವಾಮಿಜಿ:—ನಾವು ಪೂರ್ವದ ಋಷಿಗಳ ಕಾಯಿದೆಗಳನ್ನು ಪುನರುಜ್ಜೀವನಗೊಳ್ಳುವಂತೆ ಮಾಡಬೇಕು. ಮನು ಯಾಜ್ಞವಲ್ಕ್ಯರ ಧರ್ಮಶಾಸ್ತ್ರಗಳನ್ನು ಕಾಲಪರಿಸ್ಥಿತಿಗೆ ತಕ್ಕಂತೆ ಕೆಲವು ಕಡೆ ಸ್ವಲ್ಪ ಬದಲಾವಣೆ ಮಾಡಿ ಜನಾಂಗವೆಲ್ಲಾ ಅದನ್ನು ಅನುಸರಿಸುವಂತೆ ಮಾಡಬೇಕು. ಭರತಖಂಡದಲ್ಲೆಲ್ಲಿಲ್ಲಿಯೂ ಮೂಲ ಚಾತುರ್ವರ್ಣಗಳು ಕಾಣಬರುವುದಿಲ್ಲ. ನಾವು ಪುನಃ ಭರತಖಂಡದ ಜನರನ್ನೆಲ್ಲಾ ಹಿಂದಿನಂತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ಮುಖ್ಯ ಪಂಗಡಗಳಾಗಿ ವಿಂಗಡಿಸಬೇಕು. ಇಂದಿನ ಬ್ರಾಹ್ಮಣರಲ್ಲಿರುವ ಲೆಕ್ಕವಿಲ್ಲದಷ್ಟು ಒಳಪಂಗಡಗಳೆಲ್ಲಾ ಅಳಿಸಿಹೋಗಿ ಬ್ರಾಹ್ಮಣರೆಲ್ಲಾ ಸೇರಿ ಒಂದೇ ಪಂಗಡವಾಗಬೇಕು. ಇತರ ಉಳಿದಿರುವ ಮೂರು ಪಂಗಡಗಳೂ ಹಾಗೇ ವೇದಗಳ ಕಾಲದಲ್ಲಿದ್ದಂತೆ ಒಂದೊಂದೇ ಪಂಗಡಗಳಾಗಿ ಮಾರ್ಪಡಬೇಕು. ಹೀಗೆ ಮಾಡಿದಲ್ಲದೆ ಕೇವಲ "ನಾವು ನಿಮ್ಮನ್ನು ಮುಟ್ಟುವುದಿಲ್ಲ." "ಅವನನ್ನು ನಮ್ಮ ಜಾತಿಗೆ ಸೇರಿಸಿಕೊಳ್ಳುವುದಿಲ್ಲ." ಎಂದು ಕೂಗಿಕೊಳ್ಳುವುದರಿಂದ ನಿನ್ನ ಮಾತೃಭೂಮಿಗೆ ಉಪಕಾರಮಾಡಿದಂತಾಗುವುದೇನು ? ಎಂದಿಗೂ ಇಲ್ಲ. ಮಗು !

---

## ಅಧ್ಯಾಯ ೨೮

**ಸ್ಥಳ:**—ಬೇಲೂರು ಮಠ; **ವರ್ಷ:** ಕ್ರಿ. ಶ. ೧೮೯೯.

ಶಿಷ್ಯ:—ಸ್ವಾಮಿಜಿ, ನಮ್ಮ ಸಮಾಜ ನಮ್ಮ ದೇಶ ಇಷ್ಟೊಂದು ಅಧೋಗತಿಗಿಳಿಯಲು ಕಾರಣವೇನು ?

ಸ್ವಾಮಿಜಿ:—ಅದಕ್ಕೆ ನೀವೇ ಕಾರಣರು.

ಶಿಷ್ಯ:— ಅದು ಹೇಗೆ ಸ್ವಾಮಿಜಿ? ನನಗೆ ಆಶ್ಚರ್ಯವಾಗುತ್ತಿದೆ.

ಸ್ವಾಮಿಜಿ:—ಬಹುಕಾಲದಿಂದ ನೀವು ನಮ್ಮ ದೇಶದ ಕೆಳಗಿನ ಶ್ರೇಣಿಯ ಜನರನ್ನು ಹೀನಾಯವಾಗಿ ಕಾಣುತ್ತಿದ್ದಿರಿ. ಅದಕ್ಕೇ ನೀವು

ಜಗತ್ತಿನ ದೃಷ್ಟಿಯಲ್ಲಿ ತಿರಸ್ಕೃತರಾಗಿದ್ದೀರಿ.

ಶಿಷ್ಯ:—ನಾವು ಹಾಗೆ ಕೀಳಾಗಿ ಕಂಡದ್ದನ್ನು ನೀವು ಯಾವಾಗ ನೋಡಿದಿರಿ?

ಸ್ವಾಮಿಜಿ:—ಏಕೆ? ಪುರೋಹಿತ ವರ್ಗದವರು ಬ್ರಾಹ್ಮಣೇತರರಿಗೆ ವೇದ ಉಪನಿಷತ್ ಮುಂತಾದ ಶಾಸ್ತ್ರಗಳನ್ನು ಓದಲು ಅವಕಾಶ ಕೊಡಲಿಲ್ಲ. ಅವುಗಳನ್ನು ಮುಟ್ಟಲೂ ಬಿಡಲಿಲ್ಲ. ಅವರನ್ನು ಕೆಳಕ್ಕೆ ತುಳಿದಿದ್ದೀರಿ. ಕೇವಲ ಸ್ವಾರ್ಥತೆಯಿಂದ ನೀವೇ ಈ ರೀತಿ ಮಾಡಿದ್ದೀರಿ.. ಪುರೋಹಿತ ವರ್ಗದವರೇ ಎಲ್ಲಾ ಧರ್ಮ ಗ್ರಂಥಗಳ ಏಕಮಾತ್ರ ಅಧಿಕಾರಿಗಳಾಗಿ ವಿಧಿ ನಿಷೇಧಗಳನ್ನೆಲ್ಲಾ ತಮ್ಮ ಹಿಡಿತದಲ್ಲೇ ಇಟ್ಟುಕೊಂಡಿದ್ದಾರೆ. ಮತ್ತು ಬಾರಿಬಾರಿಗೂ ಇತರ ಜಾತಿಯವರನ್ನು ಕೀಳೆಂದು, ನೀಚರೆಂದು ಕರೆದು ಅವರ ತಲೆಯಲ್ಲಿ ಅವರು ನಿಜವಾಗಿಯೂ ಅಂತಹವರೆಂಬ ಭಾವನೆ ಬರುವಂತೆ ಮಾಡಿದ್ದೀರಿ. ನೀನು ಒಬ್ಬ ಮನುಷ್ಯನನ್ನು ಯಾವಾಗಲೂ "ನೀನು ತುಚ್ಛ, ನೀಚ" ಎಂದು ಹೇಳುತ್ತಿದ್ದರೆ ಅವನು ಕ್ರಮೇಣ ತಾನು ನೀಚನೆಂದೇ ಭಾವಿಸುವ ಹಾಗೆ ಆಗುತ್ತದೆ. ಇದೆ ಆ ಸಮ್ಮೋಹಿನಿ ವಿದ್ಯೆ (hypnotism). ಈಗ ಬ್ರಾಹ್ಮಣೇತರ ವರ್ಗದವರು ನಿಧಾನವಾಗಿ ಎಚ್ಚೆತ್ತುಕೊಳ್ಳುತ್ತಿದ್ದಾರೆ. ಬ್ರಾಹ್ಮಣ, ಪುರಾಣ, ಮಂತ್ರಗಳ ಮೇಲಿನ ಶ್ರದ್ಧೆ ಕಡಿಮೆಯಾಗುತ್ತಿದೆ. ಪಾಶ್ಚಾತ್ಯ ವಿದ್ಯಾಭ್ಯಾಸದ ಹರಡುವಿಕೆಯಿಂದ ಪುರೋಹಿತ ವರ್ಗದವರ ತಂತ್ರವೆಲ್ಲಾ ಕುಸಿದುಬೀಳುತ್ತಿದೆ— ಮಳೆಗಾಲದಲ್ಲಿರುವ ಪದ್ಮಾನದಿಯ ದಡದಂತೆ, ನೀನದನ್ನು ನೋಡುತ್ತಿಲ್ಲವೆ?

ಶಿಷ್ಯ:—ಸನಾತನಿಗಳ ದೋಷಾರೋಪಣೆಗಳೆಲ್ಲಾ ಕ್ರಮೇಣ ಈಗ ಕಡಿಮೆಯಾಗುತ್ತಿದೆ.

ಸ್ವಾಮಿಜಿ:—ಅದು ಹಾಗೇ ಆಗಬೇಕು. ಬ್ರಾಹ್ಮಣರು ತೀವ್ರ ದುರ್ಮಾರ್ಗವರ್ತಿಗಳಾದರು. ಸ್ವಾರ್ಥ ದೃಷ್ಟಿಯಿಂದ ಅನೇಕ ವಿಚಿತ್ರ ವಾದ, ವೇದಗಳಲ್ಲಿಲ್ಲದ ದುರಾಚಾರ, ಅಧರ್ಮ ಮತ್ತು ಕುಯುಕ್ತಿಗಳನ್ನು ತಮ್ಮ ಪ್ರತಿಷ್ಠೆ ಕಾಪಾಡಿಕೊಳ್ಳುವುದಕ್ಕಾಗಿ ಪ್ರಚಾರಕ್ಕೆ ತಂದರು. ಈಗ ಅದರ ಫಲವನ್ನುಣ್ಣುತ್ತಿದ್ದಾರೆ.

ಶಿಷ್ಯ:—ಆ ಫಲಗಳು ಯಾವುವು ಸ್ವಾಮಿಜಿ?

ಸ್ವಾಮಿಜಿ:—ನಿನಗೆ ಕಾಣಿಸುತ್ತಿಲ್ಲವೆ! ಹಿಂದೂ ದೇಶದ ಸಾಧಾರಣ

ಜನರನ್ನು ಕೀಳು ದೃಷ್ಟಿಯಿಂದ ಕಂಡುದರಿಂದಲೇ ಸಾವಿರಾರು ವರುಷಗಳಿಂದಲೂ ಈ ಗುಲಾಮಗಿರಿಯ ಜೀವನವನ್ನು ನಡೆಸುತ್ತಿರುವಿರಿ. ಅದಕ್ಕೇ ವಿದೇಶೀಯರ ಕಣ್ಣಲ್ಲಿ ನೀವು ದೋಷಕ್ಕೆ ಪಾತ್ರರಾಗಿರುವಿರಿ. ನಿಮ್ಮ ಸ್ವದೇಶೀಯರೇ ನಿಮ್ಮನ್ನು ಉಪೇಕ್ಷಿಸುತ್ತಿದ್ದಾರೆ.

ಶಿಷ್ಯ:—ಆದರೆ ಈಗಲೂ ಬ್ರಾಹ್ಮಣರೇ ಎಲ್ಲಾ ಬಗೆಯ ವಿಧಿನಿಯಮ ವ್ರತಗಳನ್ನು ನಡೆಸುತ್ತಿರುವರು. ಬ್ರಾಹ್ಮಣರ ಅಭಿಪ್ರಾಯದಂತೆಯೇ ಜನರು ಅವುಗಳನ್ನು ಆಚರಿಸುತ್ತಿರುವರು. ನೀವೇಕೆ ಹೀಗೆ ಮಾತನಾಡುವಿರಿ?

ಸ್ವಾಮಿಜಿ:— ನನಗೇನೊ ಅದು ಕಾಣಿಸುತ್ತಿಲ್ಲ. ಶಾಸ್ತ್ರಗಳಲ್ಲಿ ಹೇಳಿರುವ ಆ ಹತ್ತುಬಗೆಯ ಸಂಸ್ಕಾರಗಳು ಈಗೆಲ್ಲಿ ಬಳಕೆಯಲ್ಲಿವೆ? ನಾನು ಇದೇ ಭರತಖಂಡವನ್ನೆಲ್ಲಾ ಸುತ್ತಿದ್ದೇನೆ. ಎಲ್ಲಾ ಕಡೆಯೂ ಶ್ರುತಿ, ಸ್ಮೃತಿಗಳಲ್ಲಿ ನಿಷೇಧಿಸಲ್ಪಟ್ಟಿರುವ ಸ್ಥಳೀಯ ಸಂಪ್ರದಾಯಗಳೇ ಸಮಾಜಕ್ಕೆ ಮಾರ್ಗದರ್ಶಿಗಳಾಗಿವೆ. ಬಳಕೆಯಲ್ಲಿರುವ ಪದ್ಧತಿಗಳು, ಸ್ಥಳೀಯ ಸಂಪ್ರದಾಯಗಳು ಹೆಂಗಸರಲ್ಲಿ ವಾಡಿಕೆಯಲ್ಲಿರುವ ಪದ್ಧತಿಗಳು ಇವೇ ಎಲ್ಲಾ ಕಡೆಯೂ ಸ್ಮೃತಿಗಳ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ಅವುಗಳನ್ನು ಆಚರಿಸುವವರು ಯಾರು? ನೀನು ಸಾಕಷ್ಟು ಹಣವನ್ನು ಖರ್ಚುಮಾಡುವಹಾಗಿದ್ದರೆ ಈ ಪುರೋಹಿತವರ್ಗದವರು ನೀನಿಷ್ಟಪಡುವ ಯಾವ ಕಾನೂನು, ನಿಷೇಧನಿಯಮಗಳನ್ನಾದರೂ ಬರೆಯಲು ಸಿದ್ಧರಾಗಿರುವರು. ಅವರಲ್ಲಿ ಎಷ್ಟು ಮಂದಿ ವೈದಿಕ ಕಲ್ಪ, ಗೃಹ್ಯ, ಶ್ರೌತ ಶಾಸ್ತ್ರಗಳನ್ನು ಓದಿದ್ದಾರೆ? ಅದಲ್ಲದೆ ಬಂಗಾಳದಲ್ಲಿ ರಘುನಂದನನ ಶಾಸ್ತ್ರವನ್ನು ಅನುಸರಿಸುವರು. ಇನ್ನು ಕೊಂಚ ದೂರದಲ್ಲಿ ಮಿತಾಕ್ಷರ ಕಾಯಿದೆ ಪ್ರಚಾರದಲ್ಲಿದೆ. ದೇಶದ ಮತ್ತೊಂದು ಭಾಗದಲ್ಲಿ ಮನುಧರ್ಮಶಾಸ್ತ್ರ ರೂಢಿಯಲ್ಲಿದೆ! ಒಂದೇ ಬಗೆಯ ಕಾಯಿದೆಗಳು ಎಲ್ಲಾ ಕಡೆಗೂ ಅನ್ವಯಿಸುವುದೆಂದು ನೀವು ಯೋಚಿಸುವಿರಿ! ಆದ್ದರಿಂದ ನನಗೆ ಬೇಕಾಗಿರುವುದು ಜನರ ಮನಸ್ಸಿನಲ್ಲಿ ವೇದಗಳಮೇಲೆ ಹೆಚ್ಚು ಗೌರವ ಹುಟ್ಟುವಂತೆ ಮಾಡಿ ವೇದಾಭ್ಯಾಸ ಪ್ರಚಾರ ಮಾಡಬೇಕು. ವೇದಗಳ ಕಾಯಿದೆಗಳನ್ನು ಎಲ್ಲೆಡೆಯಲ್ಲೂ ಪ್ರಚಾರ ಮಾಡಬೇಕು.

ಶಿಷ್ಯ:—ಈ ವರ್ತಮಾನ ಕಾಲದಲ್ಲಿ ಅವುಗಳನ್ನು ರೂಢಿಗೆ ತರಲು ಸಾಧ್ಯವೆ?

ಸ್ವಾಮಿಜಿ :—ಎಲ್ಲಾ ಪುರಾತನ ವೇದಗಳ ಕಾಯಿದೆಗಳನ್ನೂ ಪ್ರಚಾರಕ್ಕೆ ತರಲಾಗುವುದಿಲ್ಲೆಂಬುದು ನಿಜ. ಆದರೆ ಅವುಗಳನ್ನು ಕಾಲಧರ್ಮಕ್ಕೆ ತಕ್ಕಂತೆ ಬದಲಾಯಿಸಿ ಸಮಾಜಕ್ಕೆ ಹೊಸ ವಿಧಾನದಂತೆ ಎತ್ತಿಹಿಡಿದರೆ ಅವನ್ನು ಬಳಕೆಗೆ ತರಬಹುದು.

ಶಿಷ್ಯ :—ಸ್ವಾಮಿಜಿ, ಮನುಧರ್ಮ ಶಾಸ್ತ್ರವಾದರೂ ಭರತಖಂಡದ ಎಲ್ಲೆಡೆಯಲ್ಲಿಯೂ ಸಂಪ್ರದಾಯದಲ್ಲಿದೆ ಎಂದು ತಿಳಿದಿದ್ದೆ.

ಸ್ವಾಮಿಜಿ :—ಖಂಡಿತ ಇಲ್ಲ. ನಿನ್ನ ಸೀಮೆಯ ಕಡೆಯೇ ನೋಡು. ತಂತ್ರದ ವಾಮಾಚಾರ ಪದ್ಧತಿ ನಿಮ್ಮ ನಾಡಿನಾಡಿಗಳಲ್ಲೂ ಹಬ್ಬಿದೆ. ನಶಿಸಿ ಹೋದ ಬೌದ್ಧ ಧರ್ಮದ ಅವಶೇಷವಾದ ವರ್ತಮಾನಕಾಲದ ವೈಷ್ಣವ ಪದ್ಧತಿ ಕೂಡ ವಾಮಾಚಾರದಿಂದ ಕಲುಷಿತವಾಗಿದೆ. ವೇದಗಳಿಗೆ ವಿರೋಧವಾದ ಈ ವಾಮಾಚಾರ ಪದ್ಧತಿಯನ್ನು ನಿರ್ಮೂಲಮಾಡಬೇಕು.

ಶಿಷ್ಯ :—ಅಷ್ಟು ದಿನಗಳಿಂದ ಬೇರು ಬಿಟ್ಟಿರುವುದನ್ನು ಪೂರ್ತಿ ತೆಗೆದುಹಾಕಲು ಸಾಧ್ಯವೆ?

ಸ್ವಾಮಿಜಿ—ಹೇಡಿ! ಏನು ಅಸಂಬದ್ಧವಾಗಿ ಮಾತನಾಡುತ್ತಿರುವೆ! "ಇದು ಅಸಾಧ್ಯ" "ಇದು ಅಸಾಧ್ಯ" ಎಂಬ ಕೂಗಿನಿಂದ ನೀವು ಇಡೀ ದೇಶವನ್ನೇ ಮುಕ್ಕಾಲುಪಾಲು ಹಾಳುಮಾಡಿರುವಿರಿ. ಮನುಷ್ಯ ಪ್ರಯತ್ನಕ್ಕೆ ಅಸಾಧ್ಯವಾದುದು ಯಾವುದು ?

ಶಿಷ್ಯ :— ದೇಶದಲ್ಲಿ ಮನು ಯಾಜ್ಞವಲ್ಕ್ಯರಂಥ ಋಷಿಗಳು ಪುನಃ ಹುಟ್ಟಿಬರುವವರೆಗೆ ಅಂತಹ ಸ್ಥಿತಿ ಅಸಾಧ್ಯವೆಂದೆನಿಸುತ್ತದೆ.

ಸ್ವಾಮಿಜಿ :—ಅಯ್ಯೋ ದೇವರೆ! ಮನು ಯಾಜ್ಞವಲ್ಕ್ಯರಾದುದು ಅವರ ಪವಿತ್ರತೆ, ನಿಷ್ಕಾಮಕರ್ಮದಿಂದಲ್ಲವೆ? ಅಥವಾ ಬೇರೆಯೊ? ನಾವೇ ಪ್ರಯತ್ನಪಟ್ಟರೆ ಮನು – ಯಾಜ್ಞವಲ್ಕ್ಯರಿಗಿಂತ ಹೆಚ್ಚು ಪ್ರಖ್ಯಾತರಾಗಬಹುದು. ಆಗ ನಮ್ಮ ಧ್ಯೇಯಗಳೇ ರೂಢಿಗೆ ಬರಬಹುದು.

ಶಿಷ್ಯ :— ನೀವು ಈಗ ತಾನೆ ಹೇಳಿದಿರಲ್ಲ, ಪುರಾತನ ಪದ್ಧತಿಗಳು ಸಂಪ್ರದಾಯಗಳನ್ನು ನಮ್ಮ ದೇಶದಲ್ಲಿ ಪುನರುಜ್ಜೀವನಗೊಳಿಸಬೇಕೆಂದು. ಹಾಗಿದ್ದಮೇಲೆ ಮನು ಮುಂತಾದ ಋಷಿಗಳನ್ನು ಗೌರವ ದೃಷ್ಟಿಯಿಂದ ನೋಡಬೇಕಲ್ಲವೆ ?

ಸ್ವಾಮಿಜಿ :— ಎಂತಹ ಹುಚ್ಚು ತರ್ಕ! ನೀನು ನಾನು ಹೇಳುವುದನ್ನು ಅರ್ಥಮಾಡಿಕೊಳ್ಳಲೇ ಇಲ್ಲ. ನಾನು ಹೇಳಿದ್ದು ಪುರಾತನ ವೇದದ

ಸಂಪ್ರದಾಯಗಳನ್ನು ಸಮಾಜದ ಆವಶ್ಯಕತೆಗೆ ತಕ್ಕಂತೆ ಸರಿಪಡಿಸಿ ಹೊಸ ರೂಪದಲ್ಲಿ ದೇಶದಲ್ಲಿ ಜಾರಿಗೆ ಬರುವಂತೆ ಮಾಡಬೇಕು ಎಂದಲ್ಲವೆ ನಾನು ಹೇಳಿದ್ದು.

ಶಿಷ್ಯ:— ಹೌದು.

ಸ್ವಾಮಿಜಿ:— ಹಾಗಾದರೆ ನೀನು ಮಾತಾಡುತ್ತಿದ್ದುದೇನು ? ನೀನು ಶಾಸ್ತ್ರಾಭ್ಯಾಸ ಮಾಡಿರುವೆ. ನನ್ನ ಆಸೆ ಶ್ರದ್ಧೆಗಳೆಲ್ಲ ನಿನ್ನಂತಿರುವ ಜನರನ್ನು ಅವಲಂಬಿಸಿದೆ. ನನ್ನ ಮಾತುಗಳನ್ನು ಸರಿಯಾಗಿ ತಿಳಿದು ಕೊಂಡು ಆ ಹಾದಿಯಲ್ಲೇ ಕೆಲಸಕ್ಕೆ ತೊಡಗು.

ಶಿಷ್ಯ:— ಆದರೆ ನಮ್ಮ ಮಾತಿಗೆ ಯಾರು ಕಿವಿಗೊಡುತ್ತಾರೆ? ನಮ್ಮ ದೇಶೀಯರು ಅವನ್ನೇಕೆ ಒಪ್ಪಿಕೊಳ್ಳಬೇಕು ?

ಸ್ವಾಮಿಜಿ :—ನೀನು ಅವರಿಗೆ ಇದನ್ನು ಮನಮುಟ್ಟುವಂತೆ ತಿಳಿಸಿ ನೀನೂ ನಿನ್ನ ಮಾತಿನಂತೆಯೇ ನಡೆದರೆ ಅವರು ಒಪ್ಪಿಕೊಂಡೇ ತೀರುವರು. ಅದನ್ನು ಬಿಟ್ಟು ಹೇಡಿಯಂತೆ ಕೇವಲ ಶ್ಲೋಕಗಳನ್ನು ಗಿಳಿ ಪಾಠದಂತೆ ಪಠಿಸಿದರೆ ಕೇವಲ ಬರಿಯ ಮಾತುಗಾರನಾಗಿ ಸ್ವಲ್ಪವೂ ಕೆಲಸದ ಮೂಲಕ ತೋರಿಸದೆ ನಿಯಮಗಳನ್ನು ಬಾಯಿಯಿಂದ ಮಾತ್ರ ಪಠಿಸಿದರೆ ಯಾರು ತಾನೆ ನಿನ್ನ ಮಾತಿಗೆ ಕಿವಿಗೊಡುವರು.

ಶಿಷ್ಯ:—ದಯವಿಟ್ಟು ಸಮಾಜ ಸುಧಾರಣೆ ವಿಷಯವಾಗಿ ನನಗೆ ಕೆಲವು ಸಲಹೆಗಳನ್ನು ಕೊಡಿ.

ಸ್ವಾಮಿಜಿ :—ಏಕೆ? ನಾನು ನಿನಗೆ ಸಾಕಷ್ಟು ಸಲಹೆ ನೀಡಿರುವೆ. ಕಡೆಯಪಕ್ಷ ಒಂದನ್ನಾದರೂ ಕಾರ್ಯರೂಪಕ್ಕೆ ತಾ. ನಿನ್ನ ಶಾಸ್ತ್ರ ವ್ಯಾಸಂಗ ನನ್ನ ಮಾತುಗಳಿಗೆ ಕಿವಿಗೊಟ್ಟಿದ್ದರ ಫಲವಾಗಿ ಎಲ್ಲಾ ಸಾರ್ಥಕವಾಯಿ ತೆಂಬುದನ್ನು ಜಗಕ್ಕೆ ತೋರು. ನೀನು ಓದಿರುವ ಮನುಧರ್ಮಶಾಸ್ತ್ರ ಮತ್ತು ಇತರ ಪುಸ್ತಕಗಳ ತಳಹದಿ ಮತ್ತೆ ಅವುಗಳಲ್ಲಡಗಿರುವ ಉದ್ದೇಶ ವೇನು ? ಆ ತಳಹದಿಯನ್ನು ಭದ್ರವಾಗಿಟ್ಟು ಪೂರ್ವಿಕ ಋಷಿಗಳಂತೆ ಅವು ಗಳ ಮುಖ್ಯ ಸತ್ಯಗಳನ್ನು ಸಂಗ್ರಹಿಸು. ಆದುನಿಕ ಕಾಲಕ್ಕೆ ಹೊಂದು ಕೊಳ್ಳುವ ಭಾವನೆಗಳನ್ನೂ ಅದರೊಡನೆ ಸೇರಿಸು. ಆದರೆ ಒಂದನ್ನು ಎಚ್ಚರಿಕೆಯಿಂದ ನೆನಪಿನಲ್ಲಿಡು. ಆ ನಿಯಮಗಳನ್ನು ಪಾಲಿಸುವುದರಿಂದ ಇಡೀ ಭರತವರ್ಷದ ಎಲ್ಲಾ ಪಂಗಡಗಳಿಗೂ ಉಪಕಾರವಾಗಬೇಕು. ಅಂತಹುದೊಂದು ಸ್ಮೃತಿಯನ್ನು ಬರೆ. ನಾನದನ್ನು ತಿದ್ದಿಕೊಡುತ್ತೇನೆ.

ಶಿಷ್ಯ :—ಸ್ವಾಮಿಜಿ ಅದೇನು ಸುಲಭದ ಕೆಲಸವಲ್ಲ. ಒಂದು ವೇಳೆ ಅಂತಹ ಸ್ಮೃತಿಯನ್ನು ಬರೆದರೆ ತಾನೇ ಅದನ್ನು ಸ್ವೀಕರಿಸುವರೆ?

ಸ್ವಾಮಿಜಿ :—ಸ್ವೀಕರಿಸದೆ ಏನು? ನೀನು ಸುಮ್ಮನೆ ಬರೆ. "ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ" ಕಾಲ ಅನಂತ, ಪ್ರಪಂಚ ವಿಶಾಲವಾಗಿದೆ. ನೀನು ಅದನ್ನು ಸರಿಯಾಗಿ ಬರೆದರೆ ಒಂದು ದಿನ ಬಂದೇ ಬರುವುದು, ಆಗ ಅದು ಸ್ವೀಕೃತವಾಗುವುದು. ನಿನ್ನಲ್ಲಿ ನಿನಗೆ ಆತ್ಮವಿಶ್ವಾಸವಿರಲಿ. ಒಮ್ಮೆ ನೀವೆಲ್ಲ ವೇದಗಳ ಋಷಿಗಳಾಗಿದ್ದಿರಿ. ಈಗ ಕೇವಲ ಬಾಹ್ಯದಲ್ಲಿ ಬದಲಾವಣೆ ಹೊಂದಿ ಬಂದಿರುವಿರಿ. ನನಗೆ ಸೂರ್ಯನ ಬೆಳಕಿನಂತೆ ಅದು ಸ್ಪಷ್ಟವಾಗಿ ಕಾಣಿಸುತ್ತಿದೆ. ನಿಮ್ಮಲ್ಲಿ ಅನಂತ ಶಕ್ತಿ ಇದೆ. ಅದನ್ನು ಜಾಗೃತಗೊಳಿಸಿ. ಏಳಿ, ಹೃತ್ಪೂರ್ವಕವಾಗಿ ಸೊಂಟಕಟ್ಟಿ ಸಿದ್ಧರಾಗಿ. ಕ್ಷಣಿಕವಾದ ಸಿರಿ ಕೀರ್ತಿಯಿಂದೇನು ಮಾಡುವಿರಿ? ನಾನೇನು ಯೋಚಿಸುತ್ತಿರುವೆನೆಂದು ಬಲ್ಲೆಯ? ನಾನು ಮುಕ್ತಿ ಮುಂತಾದುವೊಂದಕ್ಕೂ ಗಮನ ಕೊಡುವುದಿಲ್ಲ. ನನ್ನ ಧ್ಯೇಯ ನಿಮ್ಮಲ್ಲೆಲ್ಲಾ ಈ ಭಾವನೆಯನ್ನು ಜಾಗೃತಿಗೊಳಿಸುವುದು. ಕೇವಲ ಒಬ್ಬ ಮನುಷ್ಯನನ್ನು ಆ ರೀತಿ ತರಬೇತುಮಾಡಲು ನಾನು ಸಾವಿರಾರು ಪುನರ್ಜನ್ಮಗಳನ್ನು ಹೊಂದಿ ಬರಲು ಸಿದ್ಧನಿದ್ದೇನೆ.

ಶಿಷ್ಯ :—ಆದರೆ ಇಂತಹ ಕೆಲಸಗಳನ್ನು ಕೈಗೊಳ್ಳುವುದರಿಂದ ಪ್ರಯೋಜನವೇನು? ಮೃತ್ಯು ಅವುಗಳ ಹಿಂದೆಯೇ ಚಾಚಿ ನಿಂತಿಲ್ಲವೆ?

ಸ್ವಾಮಿಜಿ :—ನಿನಗೆ ಧಿಃಕಾರ! ನೀನು ಸಾಯುವೆಯಾದರೆ ನೀನು ಸಾಯುವುದು ಒಂದೇ ಬಾರಿ. ಹೇಡಿಯಂತೆ ಸಾವಿನ ಯೋಚನೆಯನ್ನೇ ಮೆಲಕು ಹಾಕುತ್ತಾ ನಿನ್ನ ಜೀವನದ ಪ್ರತಿ ಕ್ಷಣವೂ ಸಾಯುವೆಯೇಕೆ?

ಶಿಷ್ಯ :— ಹಾಗೇ ಆಗಲಿ ಸ್ವಾಮಿಜಿ ನಾನು ಮೃತ್ಯುವಿನ ಯೋಚನೆ ಮಾಡದಿರಬಹುದು. ಆದರೆ ಈ ನಶ್ವರ ಪ್ರಪಂಚದಲ್ಲಿ ಯಾವ ಬಗೆಯ ಕೆಲಸ ಮಾಡಿದರೂ ಆಗುವ ಪ್ರಯೋಜನವೇನು?

ಸ್ವಾಮಿಜಿ :—ನನ್ನ ಮಗು! ಸಾವು ಅನಿವಾರ್ಯವಾದರೆ ಸಸ್ಯಪ್ರಾಣಿಗಳಂತೆ ಸಾಯುವುದಕ್ಕಿಂತ ವೀರನಂತೆ ಮಡಿಯುವುದು ಲೇಸಲ್ಲವೆ? ಈ ಕ್ಷಣಭಂಗುರುವಾದ ಪ್ರಪಂಚದಲ್ಲಿ ಒಂದೆರಡುದಿನ ಜಾಸ್ತಿ ಬದುಕಿದರೆ ತಾನೆ ಏನು? ಸಾಯುವವರೆಗೆ ಕೊಳೆಯುವುದಕ್ಕಿಂತ ಇತರರಿಗೆ ಕೈಲಾದಷ್ಟು ಸಹಾಯಮಾಡಿ ಬೇಗ ಸಾಯುವುದು ಮೇಲು.

ಶಿಷ್ಯ :—ನಿಜ ಸ್ವಾಮಿಜಿ, ನಿಮಗೆ ಇಷ್ಟು ತೊಂದರೆ ಕೊಟ್ಟಿದ್ದಕ್ಕಾಗಿ ಕ್ಷಮೆ ಬೇಡುವೆ.

ಸ್ವಾಮಿಜಿ :—ಯಾರು ಇಚ್ಛೆಪಟ್ಟು ಕೇಳುವರೊ ಅವರೊಡನೆ ಇಡೀ ಎರಡು ರಾತ್ರಿ ಮಾತನಾಡಿದರೂ ನನಗೆ ದಣಿವಾಗುವುದಿಲ್ಲ. ಬೇಕಾದರೆ ಅನ್ನ ನಿದ್ರೆಯನ್ನೆಲ್ಲಾ ಬಿಟ್ಟು ಮಾತನಾಡುವೆ. ನಾನಿಚ್ಛೆಪಟ್ಟರೆ ಹಿಮಾಲಯದ ಗುಹೆಯಲ್ಲಿ ಸಮಾಧಿಸ್ಥಿತಿಯಲ್ಲಿ ಕುಳಿತಿರಬಲ್ಲೆ. ನೀನೇ ನೋಡುತ್ತಿರುವೆ. ಈಗೀಗಲಂತೂ ನನಗೆ ಆಹಾರದ ವಿಷಯವಾಗಿಯೂ ಯೋಚನೆಯಿಲ್ಲ. ತಾಯಿಯ ಕೃಪೆಯಿಂದ ಹೇಗೋ ಬರುತ್ತದೆ. ನಾನೇಕೆ ಹಾಗೆ ಮಾಡುವುದಿಲ್ಲ? ನಾನೇಕೆ ಇಲ್ಲಿರುವೆ? ದೇಶದ ದುಃಸ್ಥಿತಿ, ಅದರ ಭವಿಷ್ಯದ ಯೋಚನೆ ಇವು ನನ್ನನ್ನು ಸುಮ್ಮನೆ ಇರಲು ಬಿಡುವುದಿಲ್ಲ. ಸಮಾಧಿ ಮುಂತಾದುವು ಕೂಡ ಕ್ಷುದ್ರ ಎನ್ನಿಸುತ್ತದೆ. ಬ್ರಹ್ಮಜ್ಞಾನ ಬ್ರಹ್ಮಾನಂದವೂ ಕೂಡ ಸಪ್ಪೆಯಾಗಿ ತೋರುವುದು. ನನ್ನ ಜೀವನದ ಏಕಮಾತ್ರ ಧ್ಯೇಯ ನಿಮ್ಮ ಅಭಿವೃದ್ಧಿಗಾಗಿ. ಎಂದು ನನ್ನ ವ್ರತ ಸಫಲವಾಗುವುದೋ ಅಂದೇ ನಾನೀ ದೇಹವನ್ನು ತ್ಯಜಿಸಿ ಒಂದೇ ಸಲಿ ಪರಾರಿಯಾಗುವೆನು.

ಸ್ವಾಮಿಜಿ ಮಾತನ್ನು ಕೇಳುತ್ತಾ ಶಿಷ್ಯ ಸ್ವಲ್ಪ ಹೊತ್ತು ಅವರನ್ನೇ ದಿಟ್ಟಿಸಿ ನೋಡುತ್ತಾ ಆಶ್ಚರ್ಯಹೊಂದಿ ಮೂಕನಂತೆ ಕುಳಿತಿದ್ದ. ನಂತರ ಭಕ್ತಿಯಿಂದ ಅವರಿಗೆ ನಮಸ್ಕಾರಮಾಡಿ ಹೋಗಲು ಅಪ್ಪಣೆ ಬೇಡಿದ.

ಸ್ವಾಮಿಜಿ :—ನೀನೇಕೆ ಹೋಗಲಿಚ್ಛಿಸುವೆ? ಮಠದಲ್ಲೇ ಏಕೆ ಇರಬಾರದು? ಪ್ರಾಪಂಚಿಕ ಮನಸ್ಸುಳ್ಳವರ ಹತ್ತಿರ ಹೋಗುವುದರಿಂದ ನಿನ್ನ ಮನಸ್ಸು ಪುನಃ ಕಲುಷಿತವಾಗುವುದು. ಇಲ್ಲಿ ನೋಡು, ಗಾಳಿ ಎಷ್ಟು ನಿರ್ಮಲವಾಗಿದೆ, ಅಲ್ಲೇ ಗಂಗಾ ನದಿಯಿದೆ–ಸಾಧುಗಳು ಧ್ಯಾನ ಸಾಧನೆ ಮಾಡುತ್ತಾ ಸತ್ಕಥೆಗಳಲ್ಲಿ ನಿರತರಾಗಿರುವರು. ನೀನು ಕಲ್ಕತ್ತೆಗೆ ಹೋದ ಮರುಗಳಿಗೆಯಲ್ಲೇ ಕೆಟ್ಟ ಯೋಚನೆಗಳು ನಿನ್ನ ಮನಸ್ಸಿಗೆ ಬರುತ್ತವೆ.

ಶಿಷ್ಯ :—(ಸಂತೋಷದಿಂದ) "ಆಗಲಿ ಗುರುಗಳೆ ಇಂದು ನಾನು ಮಠದಲ್ಲೇ ಉಳಿಯುವೆ" ಎಂದ.

ಸ್ವಾಮಿಜಿ :—ಇಂದು ಮಾತ್ರವೇ ಏಕೆ? ಎಂದೆಂದೂ ನೀನು

ಇಲ್ಲಿಯೆ ಇರಲಾರೆಯೇನು? ಪ್ರಪಂಚಕ್ಕೆ ಹಿಂತಿರುಗುವುದರಿಂದಾಗುವ ಪ್ರಯೋಜನವೇನು?

ಸ್ವಾಮಿಗಳ ಮಾತನ್ನು ಕೇಳಿ ತಲೆ ತಗ್ಗಿಸಿದ. ಅನೇಕ ಆಲೋಚನೆಗಳು ಅವನ ತಲೆಯಲ್ಲಿ ತುಂಬಿ ಬಂದು ಅವನು ಮೂಕನಂತಾದ.

---

## ಅಧ್ಯಾಯ ೨೯

**ಸ್ಥಳ:—ಬೇಲೂರು ಮಠ. ವರ್ಷ:–ಕ್ರಿ. ಶ. ೧೮೯೯ ರ ಪ್ರಾರಂಭದಲ್ಲಿ**

ಇಂದು ಮಧ್ಯಾಹ್ನ ಸ್ವಾಮಿಜಿ ಶಿಷ್ಯನೊಡನೆ ಹೊಸಮಠದ ಸುತ್ತಲೂ ಸುತ್ತಾಡುತ್ತಿದ್ದಾರೆ. ಬಿಲ್ವ ವೃಕ್ಷಕ್ಕೆ ಕೊಂಚ ದೂರದಲ್ಲಿ ನಿಂತು ಸ್ವಾಮಿಗಳು ನಿಧಾನವಾಗಿ ಒಂದು ಬಂಗಾಳಿ ಹಾಡನ್ನು ಹಾಡಲಾರಂಭಿಸಿದರು. "ಓ ಹಿಮಾಲಯ, ಗಣೇಶನು ನನಗೆ ಮಂಗಳಮಯನಾಗಿರುವನು" ಎಂದು ಹಾಡಿದರು. ಕೊನೆಗೆ "ಅನೇಕ ಜಡೆಗಳನ್ನು ಬಿಟ್ಟ ಯೋಗಿಗಳೂ, ಜೋಗಿಗಳೂ, ಬರುವರು" ಎಂದು ಹಾಡಿ ಸ್ವಾಮಿಗಳು ಶಿಷ್ಯನಕಡೆ ತಿರುಗಿ "ನಿನಗೆ ಅರ್ಥವಾಯಿತೆ? ಕಾಲಕ್ರಮದಲ್ಲಿ ಇಲ್ಲಿಗೂ ಅನೇಕ ಸನ್ಯಾಸಿಗಳೂ, ಯೋಗಿಗಳೂ ಬರುವರು" ಎಂದರು. ಹೀಗೆ ಹೇಳುತ್ತಾ ಸ್ವಾಮಿಗಳು ಅಲ್ಲಿ ಒಂದು ಮರದ ಕೆಳಗೆ ಕುಳಿತುಕೊಂಡು "ಬಿಲ್ವವೃಕ್ಷದ ಕೆಳಗಿರುವ ಸ್ಥಳ ಪವಿತ್ರವಾದುದು. ಇದರ ಕೆಳಗೆ ಕುಳಿತು ಧ್ಯಾನಮಾಡಿದರೆ ಬಹುಬೇಗ ಆಧ್ಯಾತ್ಮಿಕ ಪ್ರವೃತ್ತಿ ಜಾಗ್ರತಗೊಳ್ಳುವುದು. ಶ್ರೀ ರಾಮಕೃಷ್ಣರು ಈ ರೀತಿ ಹೇಳುತ್ತಿದ್ದರು" ಎಂದರು.

ಶಿಷ್ಯ:— ಸ್ವಾಮಿಜಿ, ಆತ್ಮ ಅನಾತ್ಮಗಳ ವಿವೇಚನಾಜ್ಞಾನವುಳ್ಳವರಿಗೂ ದೇಶಕಾಲ ಮುಂತಾದುವುಗಳ ಪವಿತ್ರತೆಯನ್ನೆಣಿಸುವ ಆವಶ್ಯಕತೆ ಯಿದೆಯೆ?

ಸ್ವಾಮಿಜಿ:—ಆತ್ಮ ಪರಿಜ್ಞಾನವುಳ್ಳವರಿಗೆ ಈ ಬಗೆಯ ವಿವೇಚನೆಯ ಆವಶ್ಯಕತೆಯಿಲ್ಲ. ಆದರೆ ಆ ಸ್ಥಿತಿ ಪೂರ್ವಸಿದ್ಧತೆಯಿಲ್ಲದೆ ಬರುವುದಿಲ್ಲ.– ದೀರ್ಘಕಾಲದ ಸಾಧನೆಯಿಂದ ಬರುವುದು. ಆದ್ದರಿಂದ ಪ್ರಾರಂಭದಲ್ಲಿ

ಬಾಹ್ಯಸಹಾಯವನ್ನು ಹೊಂದಿ ನಮ್ಮ ಕಾಲಮೇಲೆ ನಾವು ನಿಲ್ಲುವಂತಾಗ ಬೇಕು. ಆಮೇಲೆ ಆತ್ಮಪರಿಜ್ಞಾನದಲ್ಲಿ ನುರಿತಮೇಲೆ ಹೊರಗಣ ಸಹಾಯದ ಆವಶ್ಯಕತೆ ಇರುವುದಿಲ್ಲ.

ಶಾಸ್ತ್ರಗಳಲ್ಲಿ ಹೇಳಿರುವ ಅನೇಕ ಬಗೆಯ ಆಧ್ಯಾತ್ಮಿಕ ಸಾಧನೆಗಳೆಲ್ಲ ಬ್ರಹ್ಮಜ್ಞಾನ ಸಿದ್ಧಿಗಾಗಿ. ಸಹಜವಾಗಿ ಈ ಸಾಧನೆಗಳು ಆಯಾ ಸಾಧಕ ರಿಗೆ ತಕ್ಕಂತೆ ವೈವಿಧ್ಯತೆ ಹೊಂದಿರುತ್ತವೆ. ಆದರೆ ಅವೂ ಒಂದು ಬಗೆಯ ಕರ್ಮಗಳು. ಎಲ್ಲಿಯವರೆಗೆ ಕರ್ಮವಿರುವುದೋ ಅಲ್ಲಿಯವರೆಗೂ ಆತ್ಮ ಸಾಕ್ಷಾತ್ಕಾರವಾಗುವುದಿಲ್ಲ. ಶಾಸ್ತ್ರಗಳಲ್ಲಿ ವಿಧಿಸಿರುವ ಸಾಧನೆಗಳಿಂದ ಆತ್ಮಪ್ರಕಾಶಕ್ಕಿರುವ ವಿಘ್ನಗಳನ್ನು ಜಯಿಸಲು ಸಾಧ್ಯ. ಆದರೆ ಕರ್ಮಕ್ಕೆ ನೇರವಾಗಿ ಆತ್ಮಸಾಕ್ಷಾತ್ಕಾರ ಪಡೆಯುವ ಶಕ್ತಿಯಿಲ್ಲ. ಕೇವಲ ಜ್ಞಾನ ವನ್ನು ಮುಸುಕಿರುವ ತೆರೆಯನ್ನು ಸ್ವಲ್ಪಮಟ್ಟಿಗೆ ತೆಗೆದು ಹಾಕಲು ಮಾತ್ರ ಸಾಧ್ಯ. ನಂತರ ಆತ್ಮನು ತನ್ನ ಸ್ವಯಂಪ್ರಕಾಶದಿಂದ ಪ್ರತಿಷ್ಠಿತನಾಗು ತ್ತಾನೆ. ಅರ್ಥವಾಯಿತೆ? ಅದಕ್ಕೆ ನಿನ್ನ ಭಾಷ್ಯಕಾರರು (ಶಂಕರಾ ಚಾರ್ಯರು) "ಬ್ರಹ್ಮಜ್ಞಾನದಲ್ಲಿ ಕರ್ಮದ ಸೊಂಕೇ ಇರುವುದಿಲ್ಲ" ಎಂದು ಹೇಳುತ್ತಾರೆ.

ಶಿಷ್ಯ:—ಯಾವುದಾದರೊಂದು ರೂಪದಲ್ಲಿ ಕರ್ಮ ಮಾಡಿದ ಹೊರತು ಆತ್ಮಸಾಕ್ಷಾತ್ಕಾರಕ್ಕೆ ಇರುವ ವಿಘ್ನಗಳನ್ನು ದಾಟಲು ಅಸಾಧ್ಯ ಎಂದಮೇಲೆ ಪರೋಕ್ಷವಾಗಿ ಕರ್ಮ ಬ್ರಹ್ಮಜ್ಞಾನಕ್ಕೆ ಸಾಧನ.

ಸ್ವಾಮಿಜಿ:—ಆಕಸ್ಮಿಕವಾಗಿ ನೋಡಿದಾಗ ಪ್ರಥಮಬಾರಿ ಹಾಗೇ ಕಾಣಿಸುವುದು. ಪೂರ್ವ ಮೀಮಾಂಸದಲ್ಲಿ ಈ ದೃಷ್ಟಿಯನ್ನು ತೆಗೆದುಕೊಂಡು ಕರ್ಮವನ್ನು ಒಂದು ನಿರ್ದಿಷ್ಟ ಗುರಿಗಾಗಿ ಮಾಡಿದಾಗ ಅದರಿಂದ ಒಂದು ನಿಶ್ಚಿತ ಫಲ ಉಂಟಾಗುವುದು; ಆದರೆ ಅಖಂಡ ಆತ್ಮ ಸಾಕ್ಷಾತ್ಕಾರವನ್ನು ಕರ್ಮದಿಂದ ಗಳಿಸಲಾಗುವುದಿಲ್ಲ ಎನ್ನುವರು. ಆತ್ಮ ಸಾಕ್ಷಾತ್ಕಾರಾಕಾಂಕ್ಷಿ ಯಾದವನು ಆಧ್ಯಾತ್ಮಿಕ ಸಾಧನೆಗಳನ್ನು ಮಾಡಬೇಕು. ಆದರೆ ಅದರ ಫಲದಮೇಲೆ ಆಸಕ್ತಿ ಇರಕೂಡದು ಎಂಬ ನಿಯಮವಿದೆ. ಆದ್ದರಿಂದ ಈ ಸಾಧನೆಗಳು ಸಾಧಕನ ಮನಸ್ಸನ್ನು ಪರಿಶುದ್ಧಗೊಳಿಸಲು ಕೆಲವು ಸಾಧನ ಗಳು. ಏಕೆಂದರೆ ಈ ಸಾಧನಗಳ ಫಲವಾಗಿ ಒಡನೆಯೇ ಆತ್ಮ ಸಾಕ್ಷಾ ತ್ಕಾರವಾಗುವ ಹಾಗಿದ್ದರೆ ಶಾಸ್ತ್ರಗಳು ಸಾಧಕನಿಗೆ ಕರ್ಮ ಫಲದಮೇಲೆ ದೃಷ್ಟಿಯಿರಬಾರದೆಂದು ಸಾರುತ್ತಿರಲಿಲ್ಲ. ಪೂರ್ವ ಮೀಮಾಂಸದಲ್ಲಿರುವ

ಫಲೋದ್ದೇಶ ಕರ್ಮಗಳ ಸಿದ್ಧಾಂತಗಳಿಗೆ ವಿರೋಧವಾಗಿ ಗೀತೆಯಲ್ಲಿ ನಿಷ್ಕಾಮಕರ್ಮದ ಸಿದ್ಧಾಂತವನ್ನು ಹೇಳಿದೆ. ಅರ್ಥವಾಯಿತೆ?

ಶಿಷ್ಯ :—ಆದರೆ ಸ್ವಾಮಿಜಿ, ಒಬ್ಬನು ಕರ್ಮ ತ್ಯಾಗಮಾಡಿದ ಮೇಲೆ ಯಾವಾಗಲೂ ತೊಂದರೆಗೆ ಒಳಗಾಗುವ ಕರ್ಮಗಳನ್ನು ಪುನಃ ಮಾಡು ವಂತೆ ಏಕೆ ಬಲಾತ್ಕರಿಸಬೇಕು.

ಸ್ವಾಮಿಜಿ :—ಈ ಮಾನವಜನ್ಮದಲ್ಲಿ ಯಾವುದಾದರೊಂದು ಬಗೆಯ ಕರ್ಮವನ್ನು ಮಾಡುತ್ತಲೇ ಇರಬೇಕು. ಬಲಾತ್ಕಾರವಾಗಿಯಾದರೂ ಕರ್ಮ ಮಾಡಲೇ ಬೇಕಾದಾಗ ಕರ್ಮಯೋಗ ಆ ಕರ್ಮವನ್ನು ಆತ್ಮ ವಿಕಾಸದಿಂದ ಸ್ವಾತಂತ್ರ್ಯ ಲಭಿಸುವ ಹಾದಿಯಲ್ಲಿ ಮಾಡೆಂದು ಬೋಧಿ ಸುತ್ತದೆ. ನೀನು ಯಾರಿಗೂ ಕೆಲಸಮಾಡಲು ಮನಸ್ಸಾಗುವುದಿಲ್ಲ ವೆಂದು ಹೇಳಿದೆಯಲ್ಲವೆ? ನೀನಾವ ಕೆಲಸವನ್ನಾದರೂ ಮಾಡು, ಅದರ ಹಿಂದೆ ಉದ್ದೇಶವಿದ್ದೇ ಇದೆ. ಬಹುಕಾಲ ಕೆಲಸಮಾಡಿದ ಮೇಲೆ ಒಂದು ಕರ್ಮ ಮತ್ತೊಂದು ಕರ್ಮಕ್ಕೆ ಕಾರಣವಾಗುವುದು ಎಂದು ನೀನು ಅರಿಯುವೆ. ನಂತರ ನಿರಂತರವಾದ ಈ ಕರ್ಮದ ಸರಪಳಿಗೆ ಕೊನೆ ಯಾವುದು? ಎಂಬ ಪ್ರಶ್ನೆ ಬರುವುದು. ಆಗ ಗೀತೆಯಲ್ಲಿ ಭಗವಂತ ಹೇಳಿರುವ ಮಾತುಗಳ ಸಂಪೂರ್ಣ ಅರ್ಥ ವೇದ್ಯವಾಗುವುದು. ಕರ್ಮದ ಹಾದಿ ಆಗವ್ಯ. ಯಾವಾಗ ಸಾಧಕನಿಗೆ ಕಾಮ್ಯ ಕರ್ಮವನ್ನು ಫಲ ದುದ್ದೇಶದಿಂದ ಮಾಡಿದರೆ ಯಾವ ಸಂತೋಷವೂ ಇರುವುದಿಲ್ಲವೆಂದು ತಿಳಿಯುವುದೋ ಆಗ ಅವನು ಕರ್ಮತ್ಯಾಗಮಾಡುವನು. ಆದರೆ ಮನುಷ್ಯದೇಹ ಕರ್ಮ ಮಾಡೇ ತೀರಬೇಕೆಂಬ ಸ್ಥಿತಿಯಲ್ಲಿರುವುದರಿಂದ ಅವನು ಎಂತಹ ಕರ್ಮ ಮಾಡಬೇಕು? ಅವನು ಯಾವುದಾದರೊಂದು ಕೆಲಸವನ್ನು ನಿಸ್ವಾರ್ಥತೆಯಿಂದ ಸ್ವಲ್ಪವೂ ಅದರ ಫಲದ ಮೇಲೆ ದೃಷ್ಟಿ ಯಿಲ್ಲದೆ ಮಾಡುವನು. ಏಕೆಂದರೆ ಅವನಿಗೆ ಗೊತ್ತು, ಈ ಕರ್ಮಫಲದಲ್ಲಿ ಅಸಂಖ್ಯಾತ ಹುಟ್ಟುಸಾವುಗಳ ಭವಿಷ್ಯಬೀಜ ಅಡಗಿದೆ ಎಂದು. ಅದಕ್ಕೆ ಬ್ರಹ್ಮಜ್ಞಾನಿ ಎಲ್ಲಾ ಕರ್ಮಗಳನ್ನೂ ತ್ಯಜಿಸುವನು. ಹೊರಗೆ ನೋಡಲು ಯಾವುದಾದರೊಂದು ಕರ್ಮದಲ್ಲಿ ನಿರತನಾಗಿದ್ದರೂ ಅವನಿಗೆ ಯಾವು ದರಲ್ಲೂ ಮೋಹವಿಲ್ಲ. ಅಂತಹವರನ್ನು ಕರ್ಮಯೋಗಿಗಳೆಂದು ಶಾಸ್ತ್ರಗಳು ಕರೆಯುವುವು.

ಶಿಷ್ಯ :—ಹಾಗಾದರೆ ಬ್ರಹ್ಮಜ್ಞಾನಿ ಮಾಡುವ ನಿಷ್ಕಾಮಕರ್ಮ

ವೆಲ್ಲಾ ಒಬ್ಬ ಹುಚ್ಚನು ಮಾಡುವ ಕೆಲಸದಂತೆ ಇರುವುದೆ ?

ಸ್ವಾಮಿಜಿ :—ಅದೇಕೆ, ತಮ್ಮ ಪ್ರತಿಫಲಾಪೇಕ್ಷೆ ಬಿಡುವುದೆಂದರೆ ಕೇವಲ ತನ್ನ ಶರೀರ ಮನಸ್ಸಿಗೆ ಒಳ್ಳೆಯದಾಗಬೇಕೆಂದು ಕರ್ಮಮಾಡ ಬಾರದು ಎಂದು. ಬ್ರಹ್ಮಜ್ಞಾನಿಯು ಎಂದೂ ಸ್ವಸುಖವನ್ನೆಣಿಸುವುದಿಲ್ಲ. ಆದರೆ ಮತ್ತೊಬ್ಬರ ಸುಖಕ್ಕಾಗಿ ಕೆಲಸಮಾಡುವುದಕ್ಕೆ ಅಡ್ಡಿಯೇನೂ ಇಲ್ಲ. ಪ್ರತಿಫಲದ ಆಸಕ್ತಿ ಇಲ್ಲದೆ ಅವನೇನು ಕೆಲಸ ಮಾಡಿದರೂ ಅದರಿಂದ ಜಗತ್ತಿಗೇ ಒಳ್ಳೆಯದಾಗುವುದು. ಅದು ಕೇವಲ "ಬಹುಜನರ ಹಿತಕ್ಕೆ ಬಹು ಜನರ ಸುಖಕ್ಕೆ." ಶ್ರೀ ರಾಮಕೃಷ್ಣರು "ಅವರೆಂದಿಗೂ ಒಂದು ತಪ್ಪು ಹೆಜ್ಜೆಯನ್ನೂ ಇಡುವುದಿಲ್ಲ" ಎಂದು ಹೇಳುತ್ತಿದ್ದರು. ನೀನು ಉತ್ತರ ರಾಮಚರಿತವನ್ನೋದಿಲ್ಲವೆ?–"ಪುರಾತನ ಮಹರ್ಷಿಗಳ ಮಾತಿನಲ್ಲಿ ಯಾವಾಗಲೂ ಕೊಂಚ ಅರ್ಥವಿದ್ದೇ ಇರುತ್ತದೆ. ಅದೆಂದೂ ಸುಳ್ಳಲ್ಲ." ಎಲ್ಲಾ ಬಗೆಯ ರೂಪಾಂತರಗಳನ್ನೂ ನಿಗ್ರಹಿಸಿ ಆತ್ಮನಲ್ಲಿ ಮನಸ್ಸು ತನ್ಮಯವಾದಾಗ ಅದರಿಂದ "ಇಹ ಅಥವಾ ಪರಲೋಕದಲ್ಲಾಗಲಿ ಕರ್ಮಫಲಾಪೇಕ್ಷೆಯಲ್ಲಿ ನಿರಾಸಕ್ತಿ" ಯುಂಟಾಗುವುದು. ಎಂದರೆ ಈ ಲೋಕದಲ್ಲಾಗಲಿ, ಅಥವಾ ಸತ್ತಮೇಲೆ ಸ್ವರ್ಗದಲ್ಲಾಗಲಿ ಸುಖಾನು ಭೋಗದ ಅಭಿಲಾಷೆ ಇರುವುದಿಲ್ಲ. ಮನಸ್ಸಿನಲ್ಲಿ ಆಸೆಯ ಹೋರಾಟ ವಿರುವುದಿಲ್ಲ. ಆದರೆ ಮನಸ್ಸು ಯಾವಾಗ ಜ್ಞಾನಾತೀತವಾದ ಅವಸ್ಥೆ ಯಿಂದ "ನಾನು, ನನ್ನದು," ಎಂಬ ಈ ಪ್ರಪಂಚಕ್ಕೆ ಇಳಿದು ಬರುವುದೋ ಆಗ ಹಿಂದಿನ ಕರ್ಮ ಅಭ್ಯಾಸ, ಸಂಸ್ಕಾರಗಳ ಪರಿಮಾಣ ಕ್ಕನುಸಾರ ದೇಹದ ಕ್ರಿಯೆಗಳು ಸಾಗುವುವು. ಮನಸ್ಸು ಆಗ ಸಾಧಾರಣ ವಾಗಿ ಜಾಗ್ರತಾತೀತಾವಸ್ಥೆಯಲ್ಲಿ ಇರುವುದು ; ತಿನ್ನುವುದೇ ಮುಂತಾದ ಶರೀರಕ್ರಿಯೆಗಳು ಅನಿವಾರ್ಯವಾಗಿ ಮಾಡಲ್ಪಟ್ಟು ದೇಹಾಭಾವನೆ ಬಹು ಮಟ್ಟಿಗೆ ಕಡಿಮೆಯಾಗಿರುತ್ತದೆ. ಈ ಅತೀಂದ್ರಿಯಾವಸ್ಥೆ ಪಡೆದ ಬಳಿಕ ಮಾಡುವ ಕೆಲಸಗಳೆಲ್ಲಾ ಯೋಗ್ಯವಾಗಿರುತ್ತವೆ. ಜನರಿಗೆ ಮತ್ತು ಜಗ ತ್ತಿಗೆ ಕಲ್ಯಾಣಕರವಾಗಿರುತ್ತದೆ. ಏಕೆಂದರೆ ಆಗ ಕರ್ತನ ಮನಸ್ಸು ಸ್ವಾರ್ಥತೆಯಿಂದ ಸ್ವಂತಲಾಭ ನಷ್ಟದ ಎಣಿಕೆಯಿಂದ ಕಲುಷಿತವಾಗಿರುವು ದಿಲ್ಲ. ದೇವರು ತಾನು ಮಾತ್ರ ಯಾವಾಗಲೂ ಅತೀಂದ್ರಿಯಾವಸ್ಥೆ ಯಲ್ಲಿದ್ದು ಈ ಅದ್ಭುತವಾದ ಭೂಮಂಡಲವನ್ನು ಸೃಷ್ಟಿಸಿದ್ದಾನೆ. ಆದ್ದ ರಿಂದ ಈ ಪ್ರಪಂಚದಲ್ಲಿ ಯಾವುದೂ ಅಪೂರ್ಣವಾಗಿಲ್ಲ. ಆದ್ದರಿಂದ

ಆತ್ಮಪರಿಜ್ಞಾನವುಳ್ಳವನು ಕರ್ಮಪ್ರತಿಫಲಾಪೇಕ್ಷೆ ಇಲ್ಲದೆ ಮಾಡಿದ ಕರ್ಮಗಳೆಲ್ಲಾ ನ್ಯೂನಾತೀತವಾದುದು, ಜಗತ್ಕಲ್ಯಾಣಕರವಾದುದು ಎಂದು ಹೇಳಿದ್ದು

ಶಿಷ್ಯ:—ಸ್ವಾಮಿಜಿ, ಈಗ ತಾನೆ ತಾವು ಹೇಳಿದಿರಿ, ಜ್ಞಾನ, ಕರ್ಮ ಎರಡೂ ಪರಸ್ಪರ ವಿರೋಧಾತ್ಮಕಗಳೆಂದು. ಪರಮಾರ್ಥಜ್ಞಾನದಲ್ಲಿ ಕರ್ಮಕ್ಕೆ ಸ್ಥಳವೇ ಇಲ್ಲ. ಬೇರೆ ರೀತಿಯಲ್ಲಿ ಹೇಳುವುದಾದರೆ ಕರ್ಮದ ಮೂಲಕ ಬ್ರಹ್ಮಸಾಕ್ಷಾತ್ಕಾರವೆಂದಿಗೂ ಲಭಿಸುವುದಿಲ್ಲ. ನೀವೇಕೆ ಒಮ್ಮೊಮ್ಮೆ ಈ ರೀತಿ ರಾಜಸಸ್ವಭಾವವನ್ನುದ್ರೇಕಗೊಳಿಸುವ ಮಾತನ್ನಾಡುವಿರಿ? ಅಂದು ನೀವೇ ನನಗೆ ಹೇಳಿದಿರಿ "ಕೆಲಸ, ಕೆಲಸ, ಕೆಲಸ-ಅದರ ಹೊರತು ಮತ್ತಾವ ಹಾದಿಯೂ ಇಲ್ಲ" ಎಂದು.

ಸ್ವಾಮಿಜಿ:—ಪ್ರಪಂಚವನ್ನೆಲ್ಲಾ ಸಂಚರಿಸಿ ಬಂದಮೇಲೆ ಇತರ ದೇಶಗಳೊಡನೆ ಹೋಲಿಸಿ ನೋಡಿದರೆ ನಮ್ಮ ದೇಶೀಯರು ಸಂಪೂರ್ಣ ತಾಮಸದಲ್ಲಿ ಮುಳುಗಿರುವುದನ್ನು ನೋಡಿದೆ. ಹೊರಗಡೆ ನೋಡಿದರೆ ತೋರಿಕೆಗೆ ಸಾತ್ತ್ವಿಕ ಸ್ವಭಾವವಿರುವಂತೆ ತೋರುವುದು. ಆದರೆ ಒಳಗಡೆ ಸಂಪೂರ್ಣ ಕಲ್ಲು ಮರಗಳಂತೆ ಜಡರಾಗಿರುವರು. ಜಗತ್ತಿನಲ್ಲಿ ಇಂತಹ ಜನರಿಂದ ಯಾವ ಕೆಲಸ ತಾನೆ ಸಾಧ್ಯ? ಎಲ್ಲಿಯವರೆಗೆ ಇಂತಹ ಸೋಮಾರಿಗಳು ವಿಷಯಸುಖದಲ್ಲಿ ತಲ್ಲೀನರಾದ ಜಡವ್ಯಕ್ತಿಗಳು ಈ ಜಗತ್ತಿನಲ್ಲಿರಬಲ್ಲರು? ಮೊದಲು ಪಾಶ್ಚಾತ್ಯ ದೇಶದಲ್ಲಿ ಸಂಚರಿಸು. ನಂತರ ನನ್ನ ಮಾತಿಗೆ ಬದಲು ಹೇಳು. ಕೆಲಸ ಮಾಡಲು ಎಂತಹ ಕೆಚ್ಚು ಮತ್ತು ಉತ್ಸಾಹ! ಪಾಶ್ಚಾತ್ಯರಲ್ಲಿ ಎಂತಹ ಧೈರ್ಯ ಮತ್ತು ರಾಜಸ ಕಳೆಯಿದೆ! ನಿಮ್ಮ ದೇಶದಲ್ಲಿ ಜನರ ರಕ್ತ ಅವರ ಎದೆಯಲ್ಲೇ ಹೆಪ್ಪುಗಟ್ಟಿ ರಕ್ತನಾಳಗಳಲ್ಲಿ ಹರಿಯಲಾರವೋ ಎಂಬಂತೆ–ಪಾರ್ಶ್ವವಾಯು ಬಂದು ನಿಸ್ತೇಜವಾಗಿದೆಯೋ ಎಂಬಂತಿದೆ. ಆದ್ದರಿಂದ ನನ್ನ ಉದ್ದೇಶವೇನೆಂದರೆ ಮೊದಲು ಜನರು ರಾಜಸ ಸ್ವಭಾವವನ್ನು ವೃದ್ಧಿಗೊಳಿಸಿ ಉತ್ಸಾಹ ಪಟುಗಳಾಗಿ ಜೀವಿಸಲು ಅರ್ಹರಾಗುವಂತೆ ಮಾಡಬೇಕು. ದೇಹದಲ್ಲಿ ಶಕ್ತಿ ಇಲ್ಲದೆ, ಎದೆಯಲ್ಲಿ ಉತ್ಸಾಹವಿಲ್ಲದೆ ಮೆದುಳಿನಲ್ಲಿ ಸ್ವತಂತ್ರಾಲೋಚನೆಯಿಲ್ಲದೆ ಅವರೇನು ಮಾಡಬಲ್ಲರು?—ಕೇವಲ ಜಡತ್ವದ ಮುದ್ದೆಗಳು!! ಅವರನ್ನು ಜಾಗ್ರತಗೊಳಿಸುವುದರ ಮೂಲಕ ಅವರಲ್ಲಿ ಜೀವಕಳೆಯನ್ನು ತುಂಬಲಿಚ್ಛಿಸುವೆನು. ಇದಕ್ಕಾಗಿ ನನ್ನ ಜೀವನವನ್ನೇ ಮೀಸಲಾಗಿಟ್ಟಿರುವೆನು.

ವೇದ ಮಂತ್ರಗಳ ಅಮೋಘ ಶಕ್ತಿಯಿಂದ ಅವರನ್ನು ಹುರಿದುಂಬಿಸುವೆನು. "ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ . . . ." ಎಂಬ ಅಭಯ ವಾಣಿಯನ್ನುಸಿರುವುದಕ್ಕಾಗಿಯೇ ನಾನು ಜನ್ಮವೆತ್ತಿದ್ದೇನೆ–ನೀವೆಲ್ಲಾ ನನ್ನ ಕಾರ್ಯಕ್ಕೆ ಸಹಾಯಕರಾಗಿ ಗ್ರಾಮಗ್ರಾಮಗಳಿಗೂ ಹೋಗಿ ದೇಶದ ಮೂಲೆ ಮೂಲೆಗೂ ಹೋಗಿ ಈ ಅಭಯವಾಣಿಯನ್ನು ಬ್ರಾಹ್ಮಣರು, ಚಂಡಾಲರು ಎಲ್ಲರಿಗೂ ಬೋಧಿಸಿ. ಪ್ರತಿಯೊಬ್ಬರಿಗೂ ಅನಂತ ಶಕ್ತಿ ಅವರಲ್ಲಿ ಹುದುಗಿದೆ ಎಂದೂ ಅಮೃತಾನುಭವಕ್ಕೆ ಅವರೆಲ್ಲಾ ಭಾಗಿಗಳೆಂದೂ ಬೋಧಿಸಿ. ಹೀಗೆ ಅವರ ರಾಜಸ ಸ್ವಭಾವವನ್ನು ಕೆರಳಿಸಿ. ಅವರನ್ನು ಜೀವನದ ಹೋರಾಟಕ್ಕೆ ಅರ್ಹರಾಗುವಂತೆ ಮಾಡಿ. ನಂತರ ಅವರಿಗೆ ಮೋಕ್ಷದ ವಿಷಯ ಮಾತ ನಾಡಿ. ಮೊದಲು ದೇಶದ ಜನರು ಅವರ ಅಂತರ್ ಶಕ್ತಿಯಿಂದ ತಮ್ಮ ಕಾಲಮೇಲೆ ತಾವು ನಿಲ್ಲುವಂತೆ ಮಾಡಿ. ಮೊದಲು ಅವರಿಗೆ ಒಳ್ಳೆಯ ಆಹಾರ, ಉಡುಪು, ಬೇಕಾದಷ್ಟು ಸುಖ ದೊರಕುವುದನ್ನು ಕಲಿಯುವಂತೆ ಮಾಡಿ. ನಂತರ ಈ ಸುಖದ ಬಂಧನದಿಂದ ಪಾರಾಗುವುದನ್ನು ಬೋಧಿಸಿ. ದೇಶದಲ್ಲಿ ಆಮೂಲಾಗ್ರವಾಗಿ ಕೇವಲ ಸೋಮಾರಿತನ ಕಪಟ ತುಂಬಿದೆ. ಯಾವ ಬುದ್ಧಿಯುಳ್ಳ ಮನುಷ್ಯ ತಾನೆ ಇದನ್ನು ನೋಡಿ ಸುಮ್ಮನಿರಲು ಸಾಧ್ಯ? ಕಣ್ಣೀರು ತುಂಬಿ ಬರುವುದಿಲ್ಲವೆ? ಮದ್ರಾಸು ಬೊಂಬಾಯಿ ಪಂಜಾಬು ಬಂಗಾಳ– ಎಲ್ಲಿ ನೋಡಿದರೂ ಜೀವಕಳೆಯೇ ಇಲ್ಲ. ನೀವೆಲ್ಲಾ ತುಂಬಾ ವಿದ್ಯಾವಂತರೆಂದು ಹೆಮ್ಮೆಪಡುವಿರಿ. ಯಾವ ಅಸಂಬದ್ಧವನ್ನು ನೀವು ಕಲಿತಿರಿ? ಪರಭಾಷೆಯಿಂದ ಬಂದ ಯೋಚನೆಗಳನ್ನು ಗಿಳಿಪಾಠ ಮಾಡಿ ನಿಮ್ಮ ಮೆದುಳನ್ನು ಅದರಿಂದ ತುಂಬಿಕೊಂಡು ವಿಶ್ವವಿದ್ಯಾನಿಲಯದ ಪದವಿಯೊಂದನ್ನು ಗಳಿಸಿಬಿಟ್ಟು ನೀವು ಮಹಾವಿದ್ಯಾವಂತರೆಂದು ಗರ್ವ ಪಡುವಿರಲ್ಲವೆ? ನಿಮಗೆ ಧಿಃಕಾರ! ಇದು ವಿದ್ಯಾಭ್ಯಾಸವೆ? ನಿಮ್ಮ ವಿದ್ಯಾ ಭ್ಯಾಸದ ಗುರಿ ಏನು? ಒಬ್ಬ ಗುಮಾಸ್ತ ಅಥವಾ ಮೋಸಗಾರನಾದ ವಕೀಲ, ಹೆಚ್ಚೆಂದರೆ, ಉಪನ್ಯಾಯಾಧಿಪತಿ; ಅದೂ ಕೂಡ ಮತ್ತೊಂದು ಬಗೆಯ ಗುಮಾಸ್ತಗಿರಿ–ಇಷ್ಟೇ ಅಲ್ಲವೆ? ನಿನಗಾಗಲಿ, ಇಡೀ ದೇಶಕ್ಕೇ ಆಗಲಿ ಇದರಿಂದ ಏನು ಉಪಯೋಗ? ಭರತನ ದೇಶ, ಐಶ್ವರ್ಯಕ್ಕೆ ಹೆಸರು ವಾಸಿಯಾದ ದೇಶದಲ್ಲಿಂದು ಅನ್ನಕ್ಕಾಗಿ ಎಂತಹ ಹೃದಯ ವಿದ್ರಾವಕ ಧ್ವನಿ ಕೇಳಿ ಬರುತ್ತದೆ! ನಿನ್ನ ವಿದ್ಯೆ ಈ ಹಸಿವನ್ನಡಗಿಸಲು ಸಾಧ್ಯವೆ? ಎಂದಿಗೂ ಇಲ್ಲ. ಪಾಶ್ಚಾತ್ಯ ವಿಜ್ಞಾನದ ಸಹಾಯದಿಂದ ಭೂಮಿಯನ್ನು

ಅಗೆಯಲು ತೊಡಗಿ – ಆಹಾರ ಪದಾರ್ಥಗಳನ್ನು – ಉತ್ಪತ್ತಿ ಮಾಡಿ ನಿಮ್ಮ ತುಚ್ಛ ಗುಲಾಮಗಿರಿಯಿಂದಲ್ಲ – ಪಾಶ್ಚಾತ್ಯ ವಿಜ್ಞಾನದ ಸಲಹೆಪಡೆದು ನಿಮ್ಮ ಸ್ವಪ್ರಯತ್ನವನ್ನೂ ಸೇರಿಸಿ. ಆಹಾರ ಪದಾರ್ಥಗಳನ್ನೊದಗಿಸಲು ಹೊಸಹಾದಿಯನ್ನು ಕಂಡುಹಿಡಿಯಿರಿ. ಅದಕ್ಕೇ ನಾನು ಈ ದೇಶದ ಜನರಿಗೆ ಮೊದಲು ಉತ್ಸಾಹಪೂರಿತರಾಗಿ ತಮ್ಮ ಅನ್ನ ಬಟ್ಟೆಯನ್ನು ತಾವೇ ಒದಗಿಸಿಕೊಳ್ಳುವಂತೆ ಬೋಧಿಸುತ್ತೇನೆ. ಈ ಆಹಾರ ವಸ್ತ್ರಗಳ ಅಭಾವ ದಿಂದ ಇಡೀ ದೇಶವೇ ಹಾಹಾಕಾರದಿಂದ ತುಂಬಿದೆ. ದೇಶ ಅಧೋಗತಿ ಗಿಳಿದಿದೆ– ಇದನ್ನು ಪರಿಹರಿಸಲು ನೀವೇನು ಮಾಡುತ್ತಿರುವಿರಿ? ಗಂಗೆ ಯಲ್ಲಿ ನಿಮ್ಮ ಶಾಸ್ತ್ರಗಳನ್ನು ಬಿಸುಟು ಜನರಿಗೆ ಮೊದಲು ಅವರ ಅನ್ನವಸ್ತ್ರ ಸಂಪಾದಿಸುವ ಹಾದಿಯನ್ನು ಬೋಧಿಸಿ. ನಂತರ ಅವರಿಗೆ ನಿಮ್ಮ ಪುರಾಣಗಳನ್ನು ಓದಿ ತೀವ್ರ ಚಟುವಟಿಕೆ ಅವರಲ್ಲಿ ಉದ್ರೇಕಿಸುವಂತೆ ಮಾಡಿ. ಈ ಪ್ರಾಪಂಚಿಕ ಸುಖಾಭಿಲಾಷೆ ತೀರುವಂತೆ ಮಾಡದಿದ್ದಲ್ಲಿ ಯಾರೂ ಆಧ್ಯಾತ್ಮಿಕ ಭಾವನೆಗೆ ಕಿವಿಗೊಡವುದಿಲ್ಲ. ಅದಕ್ಕೇ ಮೊದಲು ನಿಮ್ಮ ಹೃದಯಾಂತರಾಳದಲ್ಲಿ ಅಂತರ್ಗತವಾಗಿರುವ ಆ ಶಕ್ತಿಯಲ್ಲಿ ಸಾಧ್ಯವಾಷ್ಟು ಶ್ರದ್ಧೆ ಇರಲಿ. ಮೊದಲು ಅವರು ಆಹಾರಕ್ಕೆ ಬೇಕಾದ ಏರ್ಪಾಡನ್ನು ಮಾಡುವಂತೆ ಬೋಧಿಸಿ. ನಂತರ ಧರ್ಮಬೋಧೆಮಾಡಿ. ಸೋಮಾರಿಯಂತೆ ಕುಳಿತುಕೊಳ್ಳಲು ಸ್ವಲ್ಪವೂ ಕಾಲವಿಲ್ಲ – ಮೃತ್ಯುವಿನ ಕರೆ ಯಾವಾಗ ಬರುವುದೋ ಯಾರಿಗೆ ಗೊತ್ತು?

ಹೀಗೆ ಹೇಳುತ್ತಿರುವಾಗ ಅವರ ಮುಖಾರವಿಂದ ಮರುಕ, ದುಃಖ, ಸಹಾನುಭೂತಿ, ಶಕ್ತಿಯಿಂದ ಮಿಳಿತವಾದೊಂದು ಕಾಂತಿಯಿಂದ ಪ್ರಕಾಶಿ ಸುತ್ತಿತ್ತು. ಆ ಗಂಭೀರ ರೂಪ ಶಿಷ್ಯನನ್ನು ಮೂಕನನ್ನಾಗಿ ಮಾಡಿತು. ಸ್ವಲ್ಪಕಾಲದ ನಂತರ ಸ್ವಾಮಿಗಳು ಪುನಃ ಹೇಳಿದರು! "ಸಕಾಲದಲ್ಲಿ ಆ ಉತ್ಸಾಹ, ಮತ್ತು ಸ್ವಾವಲಂಬನ ಈ ದೇಶದ ಜನರಿಗೆ ಬಂದೇ ತೀರು ವುದು – ನಾನೀಗ ಅದನ್ನು ಸ್ಪಷ್ಟವಾಗಿ ಕಾಣುತ್ತಿರುವೆ– ಅದರಿಂದ ಬಿಡು ಗಡೆಯಿಲ್ಲ. ವಿಚಾರ ಶೀಲನಾದ ವ್ಯಕ್ತಿ ತನ್ನ ಮುಂದಿನ ಮೂರು ಯುಗಗಳ ಭವಿಷ್ಯದ ದೃಶ್ಯವನ್ನು ಸ್ಪಷ್ಟವಾಗಿ ಕಾಣಬಹುದು. ಶ್ರೀ ರಾಮಕೃಷ್ಣರ ಅವತಾರವಾದಂದಿನಿಂದ ಪೂರ್ವ ದಿಗಂತ ಸೂರ್ಯೋದಯದ ಸೂರ್ಯನ ಹೊಂಬಣ್ಣದ ಕಾಂತಿಯಿಂದ ಹೊಳೆಯುತ್ತಿದೆ. ಕ್ರಮೇಣ ದೇಶವೆಲ್ಲಾ ಅಪರಾಹ್ಣದ ಸೂರ್ಯನ ಕಾಂತಿಯಿಂದ ಪ್ರಜ್ವಲಿಸುವುದು."

# ಅಧ್ಯಾಯ ೩೦

**ಸ್ಥಳ:—ಬೇಲೂರು ಮಠ. ವರ್ಷ:—ಕ್ರಿ. ಶ. ೧೮೯೯**

ಈಗ ಇರುವ ಬೇಲೂರು ಮಠದ ಕಟ್ಟಡ ಸುಮಾರಾಗಿ ಮುಕ್ಕಾಲು ಪಾಲು ಪೂರೈಸಿತ್ತು. ಸ್ವಾಮಿಗಳಿಗೆ ಆರೋಗ್ಯ ಚೆನ್ನಾಗಿಲ್ಲ. ವೈದ್ಯರು ಅವರನ್ನು ಬೆಳಿಗ್ಗೆ ಸಂಜೆ ಎರಡುಹೊತ್ತೂ ಗಂಗಾನದಿಯಲ್ಲಿ ದೋಣಿಯಲ್ಲಿ ಹೋಗುವ ಹಾಗೆ ಹೇಳಿದ್ದರು.

ಇಂದು ಆದಿತ್ಯವಾರ. ಶಿಷ್ಯ ಸ್ವಾಮಿಜಿಯವರ ಕೋಣೆಯಲ್ಲಿ ಕುಳಿತು ಮಾತನಾಡುತ್ತಿದ್ದಾನೆ. ಇಷ್ಟರಲ್ಲಿ ಸ್ವಾಮಿಗಳು ಮಠದ ಸನ್ಯಾಸಿಗಳು, ಬ್ರಹ್ಮಚಾರಿಗಳ ತರಬೇತಿಗಾಗಿ ಕೆಲವು ನಿಯಮಗಳನ್ನು ನಿಯೋಜಿಸಿದ್ದರು. ಪ್ರಾಪಂಚಿಕ ಜನರೊಡನೆ ವಿವೇಚನೆಯಿಲ್ಲದೆ ಅವರು ಮಿಳಿತರಾಗುವುದನ್ನು ತಪ್ಪಿಸಲು ಇದನ್ನು ತಯಾರಿಸಿದ್ದರು.

ಸ್ವಾಮಿಜಿ:—ಈ ದಿನಗಳಲ್ಲಿ ಪ್ರಾಪಂಚಿಕ ಜನರ ಉಡುಪಿನಲ್ಲಿ ಒಂದು ಬಗೆಯ ಪ್ರತ್ಯೇಕವಾದ ಆತ್ಮಸಂಯಮದ ಅಸಡ್ಡೆಯ ವಾಸನೆಯಿರುವುದನ್ನು ನೋಡುತ್ತಿರುವೆ. ಅದಕ್ಕೇ ನಾನು ಮಠದಲ್ಲಿ ಒಂದು ನಿಯಮವನ್ನು ತಂದಿದ್ದೇನೆ. ಗೃಹಸ್ಥರು ಸಾಧುಗಳ ಹಾಸಿಗೆಯಲ್ಲಿ ಕುಳಿತುಕೊಳ್ಳುವುದಾಗಲಿ, ಮಲಗುವುದಾಗಲಿ ನಿಷಿದ್ಧವೆಂದು. ಹಿಂದೆ ನಾನು ಶಾಸ್ತ್ರವನ್ನೋದುತ್ತಿದ್ದಾಗ ಈ ವಾಸನೆ ಬರುವುದೆಂದೂ, ಅದಕ್ಕೇ ಸನ್ಯಾಸಿಗಳಿಗೆ ಗೃಹಸ್ಥರ ವಾಸನೆಯನ್ನು ಸಹಿಸಲಾಗುವುದಿಲ್ಲೆಂದು ಓದಿದ್ದೆ. ಈಗ ಅದು ನಿಜವೆಂದು ಅನ್ನಿಸುತ್ತದೆ. ನಿಯೋಜಿಸಿರುವ ಈ ನಿಯಮಗಳನ್ನು ಕಠಿಣವಾಗಿ ಆಚರಿಸುವುದರಿಂದ ಬ್ರಹ್ಮಚಾರಿಗಳು ಸಕಾಲದಲ್ಲಿ ಯೋಗ್ಯ ಸನ್ಯಾಸಿಗಳಾಗುವರು. ಅವರು ಸನ್ಯಾಸದಲ್ಲಿ ಊರ್ಜಿತವಾದಮೇಲೆ ಅವರು ಗೃಹಸ್ಥರ ಜೊತೆಜೊತೆಗೂ ಬೆರೆತರೂ ಯಾವ ಹಾನಿಯೂ ಇಲ್ಲ. ಆದರೆ ಈಗ ಅವರನ್ನು ಈ ನಿಯಮಗಳ ಎಲ್ಲೆಯಲ್ಲಿಡದೆ ಇದ್ದಲ್ಲಿ ಅವರೆಲ್ಲಾ ತಪ್ಪು ಹಾದಿಗೆ ತಿರುಗುವರು. ಬ್ರಹ್ಮಚರ್ಯ ದೀಕ್ಷೆ ಪಡೆಯಲು ನಡತೆಯ ವಿಚಾರವಾಗಿ ಬಹಳ ಎಚ್ಚರಿಕೆಯಿಂದಿರಬೇಕು. ಸ್ತ್ರೀಯರೊಡನೆ ಯಾವ ಬಗೆಯ ಸಂಪರ್ಕವನ್ನೂ ಇಟ್ಟುಕೊಳ್ಳದೆ ದೂರವಿರಬೇಕು. ಅಲ್ಲದೆ ಮದುವೆಯಾದವರ ಸಂಗದಿಂದಲೂ ದೂರವಿರಬೇಕು.

ಗೃಹಸ್ಥನಾಗಿದ್ದ ಶಿಷ್ಯ ಸ್ವಾಮಿಗಳ ಈ ಮಾತನ್ನು ಕೇಳಿ ಸ್ತಂಭೀಭೂತನಾದ. ಮಠದ ಸಾಧುಗಳೊಡನೆ ಇನ್ನು ಮುಂದೆ ಇಷ್ಟೊಂದು ಸದರದಿಂದ ಇರಲಾಗುವುದಿಲ್ಲವೆಂದು ಖಿನ್ನನಾಗಿ ಹೇಳಿದ, "ಸ್ವಾಮಿಜಿ, ನನ್ನ ಸಂಸಾರದವರೊಂದಿಗಿಂತ ನನಗೆ ಮಠ ಮತ್ತು ಅದರ ನಿವಾಸಿಗಳೊಡನೆ ನಿಕಟ ಸಂಬಂಧವಿದೆ. ದೀರ್ಘಕಾಲದಿಂದ ಅವರಿಗೆ ನನ್ನ ಪರಿಚಯು ಎಂಬಂತಿದೆ. ಮಠದಲ್ಲಿ ನನಗೆ ಇರುವ ಅಪಾರ ಸಲಿಗೆ ಜಗತ್ತಿನಲ್ಲಿ ನನಗೆ ಮತ್ತೆಲ್ಲಿಯೂ ದೊರಕುವುದಿಲ್ಲ ವೆನ್ನಿಸುತ್ತಿದೆ."

ಸ್ವಾಮಿಜಿ:—ಯಾರು ಪರಿಶುದ್ಧಾತ್ಮರಾಗಿರುವರೊ ಅವರಿಗೆ ಇಲ್ಲಿಗೆ ಬಂದಾಗ ಹಾಗೇ ಅನ್ನಿಸುವುದು. ಯಾರಿಗೆ ಆ ರೀತಿ ಅನ್ನಿಸುವುದಿಲ್ಲವೊ ಅವರು ಈ ಮಠಕ್ಕೆ, ಈ ಮಠದ ಧ್ಯೇಯಕ್ಕೆ ಸೇರಿದವರಲ್ಲ. ಅದಕ್ಕೆ ಅನೇಕ ಮಂದಿ ಇಲ್ಲಿಗೆ ಭಾವೋದ್ರೇಕದಿಂದ ಬಂದು ಪಲಾಯನಮಾಡು ತ್ತಾರೆ. ಯಾರು ಸಂಯಮಿಗಳಲ್ಲವೊ ಹಗಲು ರಾತ್ರಿ ಹಣವನ್ನರಸು ತ್ತಿರುವರೊ ಅವರಿಗೆ ಮಠದ ಧ್ಯೇಯಗಳಾವುವೂ ಗಣ್ಯವಾಗುವುದಿಲ್ಲ— ಮಠದ ನಿವಾಸಿಗಳೂ ತಮ್ಮ ಆಪ್ತರೆಂದು ಅನ್ನಿಸುವುದಿಲ್ಲ. ಈ ಮಠದ ಸನ್ಯಾಸಿಗಳು ಪೂರ್ವದ ಸನ್ಯಾಸಿಗಳಂತೆ ಮೈಗೆಲ್ಲಾ ಬೂದಿ ಬಳಿದುಕೊಂಡು ಜಡೆಗಟ್ಟಿ, ಜಾಗಟೆ ಬಾರಿಸುತ್ತಾ ಹರಕು ಮುರುಕು ಔಷಧಿಗಳಿಂದ ಖಾಯಿಲೆ ಗುಣಮಾಡುತ್ತಿರುವಂತೆ ಇರುವುದಿಲ್ಲ. ಈ ವ್ಯತ್ಯಾಸವನ್ನು ನೋಡಿ ಜನರು ಅವರನ್ನು ಮೆಚ್ಚುವುದಿಲ್ಲ. ಗುರುಮಹಾರಾಜರು ನಡೆಯುತ್ತಿದ್ದ ರೀತಿ, ನಡೆವಳಿಕೆ ಮತ್ತು ಧ್ಯೇಯಗಳೆಲ್ಲ ಹೊಸ ಎರಕ ದಲ್ಲಿವೆ. ಆದ್ದರಿಂದ ನಾವೂ ಒಂದು ನೂತನ ವರ್ಗಕ್ಕೆ ಸೇರಿದವರು. ಕೆಲವು ವೇಳೆ ನಾವೂ ಸಭ್ಯರಂತೆ ಒಳ್ಳೆಯ ಉಡುಪನ್ನು ಧರಿಸಿ ಉಪನ್ಯಾಸ ಕೊಡುವೆವು. ಮತ್ತೆ ಕೆಲವು ವೇಳೆ ಎಲ್ಲವನ್ನೂ ಬಿಸುಟು ಹರ! ಹರ! ಓಂ! ಓಂ! ಎಂದು ಕೂಗುತ್ತಾ ಭಸ್ಮಲೇಪಿತರಾಗಿ ಪರ್ವತಗಳಲ್ಲಿ ಧ್ಯಾನ ತಪಶ್ಚರ್ಯದಲ್ಲಿ ನಿರತರಾಗಿರುವೆವು.

ಈಗ ಕೇವಲ ಪುರಾತನಕಾಲದ ಗ್ರಂಥಗಳನ್ನು ಪಠಿಸುವುದರಿಂದೇನೂ ಪ್ರಯೋಜನವಿಲ್ಲ. ಪಾಶ್ಚಾತ್ಯ ನಾಗರಿಕತೆಯ ಪ್ರವಾಹ ರಭಸದಿಂದ ದೇಶಾದ್ಯಂತ ಪ್ರವಹಿಸುತ್ತಿದೆ. ಗಿರಿಶಿಖರಗಳಲ್ಲಿ ಅದರ ಉಪಯೋಗ ವನ್ನು ತಿಳಿದುಕೊಳ್ಳದೆ ಕೇವಲ ಧ್ಯಾನದಲ್ಲಿ ಕುಳಿತಿದ್ದರೆ ಪ್ರಯೋಜನವಿಲ್ಲ.

ಗೀತೆಯಲ್ಲಿ ಶ್ರೀ ಕೃಷ್ಣನು ಹೇಳಿರುವ ಉಗ್ರ ಕರ್ಮಯೋಗ ಈಗ ಬೇಕಾಗಿದೆ. ಅಪಾರ ಧೈರ್ಯ, ಅದಮ್ಯ ಉತ್ಸಾಹದಿಂದ ಕೂಡಿದ ಕರ್ಮಯೋಗ ಬೇಕಾಗಿದೆ. ಆಗ ಮಾತ್ರ ದೇಶದ ಜನ ಜಾಗೃತಿಗೊಳ್ಳುವರು. ಇಲ್ಲದಿದ್ದಲ್ಲಿ ನೀನೆಷ್ಟು ಅಜ್ಞಾನದಲ್ಲಿರುವೆಯೋ ಅದೇ ಅಜ್ಞಾನಕೂಪದಲ್ಲಿ ಮುಳುಗಿರುವರು.

ಸುಮಾರು ಹಗಲೆಲ್ಲಾ ಕಳೆಯಿತು. ಸ್ವಾಮಿಜಿ ಗಂಗೆಯ ಮೇಲೆ ದೋಣಿ ಸಂಚಾರಕ್ಕೆ ಹೊರಡಲು ಉಡುಪನ್ನು ಧರಿಸಿ ಕೆಳಗೆ ಬಂದರು. ಈ ಶಿಷ್ಯನಲ್ಲದೆ ಮತ್ತಿಬ್ಬರು ಶಿಷ್ಯರನ್ನೂ ಜೊತೆಯಲ್ಲಿ ಕರೆದುಕೊಂಡು ದೋಣಿಯೊಳಕ್ಕೆ ಪ್ರವೇಶಿಸಿದರು. ದೋಣಿ ದಕ್ಷಿಣೇಶ್ವರ ದೇವಾಲಯ ವನ್ನು ಹಾದು ಪಣಿಹಾಟಿಯಲ್ಲಿ ಬಾಬು ಗೋವಿಂದ ಕುಮಾರ ಚೌದುರಿ ಯವರ ತೋಟದ ಮನೆಯ ಕೆಳಗೆ ಲಂಗರುಹಾಕಿತು. ಒಮ್ಮೆ ಆ ಮನೆಯನ್ನು ಮಠದ ಉಪಯೋಗಕ್ಕಾಗಿ ಬಾಡಿಗೆಗೆ ತೆಗೆದುಕೊಳ್ಳುವ ಪ್ರಸ್ತಾಪನೆ ಇತ್ತು. ಸ್ವಾಮಿಜಿ ದೋಣಿಯಿಂದಿಳಿದು ಮನೆ ಮತ್ತು ತೋಟದ ಸುತ್ತಲೂ ಒಮ್ಮೆ ಸುತ್ತಾಡಿ ಬಂದು ಅದನ್ನು ಸೂಕ್ಷ್ಮವಾಗಿ ನೋಡುತ್ತಾ ಹೀಗೆಂದರು: "ತೋಟವೇನೋ ಅಂದವಾಗಿದೆ. ಆದರೆ ಕಲ್ಕತ್ತೆಗೆ ಬಹುದೂರ. ಕಲ್ಕತ್ತೆಯಿಂದ ಇಲ್ಲಿಗೆ ಕಾಲ್ನಡಗೆಯಲ್ಲಿ ಬರಲು ಶ್ರೀ ರಾಮಕೃಷ್ಣರ ಭಕ್ತವರ್ಗಕ್ಕೆ ತುಂಬಾ ತೊಂದರೆಯಾಗುತ್ತಿತ್ತು. ಮಠ ಇಲ್ಲಿ ಸ್ಥಾಪಿತವಾಗದಿದ್ದದ್ದು ಒಂದು ಸುಯೋಗ." ನಂತರ ದೋಣಿ ಮುಸುಗಿದ ಅಂಧಕಾರದ ಮಧ್ಯೆ ಬೇಲೂರು ಮಠಕ್ಕೆ ಹಿಂತಿರುಗಿತು.

---

## ಅಧ್ಯಾಯ ೩೧

**ಸ್ಥಳ:—** ಬೇಲೂರು ಮಠ. ವರ್ಷ:—ಕ್ರಿ. ಶ. ೧೮೯೯.

ನಾಗ ಮಹಾಶಯರೊಡನೆ ಶಿಷ್ಯ ಇಂದು ಮಠಕ್ಕೆ ಬಂದಿದ್ದಾನೆ. ಸ್ವಾಮಿಜಿ ನಾಗಮಹಾಶಯರಿಗೆ ಕೈಮುಗಿದು "ಕ್ಷೇಮವೆಂದು ಭಾವಿಸಿದ್ದೇನೆ" ಎಂದರು.

ನಾಗಮಹಾಶಯ:—"ನಾನಿಂದು ನಿಮ್ಮ ದರ್ಶನಕ್ಕೆ ಬಂದಿರುವೆ.

ಜಯ ಶಂಕರ! ಜಯ ಶಂಕರ! ಇಂದು ಶಿವದರ್ಶನದಿಂದ ನಾನು ಪುನೀತನಾದೆ" ಎಂದು ಹೇಳುತ್ತಾ ನಾಗಮಹಾಶಯರು ಭಕ್ತಿಯಿಂದ ಕೈ ಜೋಡಿಸಿ ನಿಂತರು.

ಸ್ವಾಮಿಜಿ:— ನಿಮ್ಮ ಆರೋಗ್ಯ ಈಗ ಹೇಗಿದೆ?

ನಾಗಮಹಾಶಯ:—ಈ ಕ್ಷುದ್ರದೇಹದ ವಿಷಯವನ್ನೇಕೆ ಎತ್ತುವಿರಿ? ಈ ಮಾಂಸ ಮೂಳೆಯಿಂದ ಕೂಡಿದ ಪಂಜರ! ಸತ್ಯವಾಗಿ ಇಂದು ನಿಮ್ಮ ದರ್ಶನದಿಂದ ನಾನು ಧನ್ಯನಾದೆ.

ಎಂದು ಹೇಳುತ್ತಾ ನಾಗಮಹಾಶಯರು ಸ್ವಾಮಿಗಳಿಗೆ ದೀರ್ಘದಂಡ ಪ್ರಣಾಮ ಮಾಡಿದರು.

ಸ್ವಾಮಿಜಿ:— (ಅವರನ್ನು ಎಬ್ಬಿಸುತ್ತಾ) ನೀವೇಕೆ ನನಗೆ ಹೀಗೆ ಮಾಡುವಿರಿ?

ನಾಗಮಹಾಶಯ:—ನನ್ನ ಅಂತರ್ ದೃಷ್ಟಿಯಿಂದ ಇಂದು ಸಾಕ್ಷಾತ್ ಶಿವದರ್ಶನವಾದುದನ್ನು ನೋಡುತ್ತಿರುವೆ—ನಾನು ಧನ್ಯ! ಜಯರಾಮಕೃಷ್ಣ.

ಸ್ವಾಮಿಜಿ:— (ಶಿಷ್ಯನನ್ನುದ್ದೇಶಿಸಿ) ನೋಡುತ್ತಿರುವೆಯೇನು? ಇಲ್ಲಿ ನೋಡು! ನಿಜವಾದಭಕ್ತಿ ಮಾನವನ ಸ್ವಭಾವವನ್ನು ಎಷ್ಟರ ಮಟ್ಟಿಗೆ ಬದಲಾಯಿಸುತ್ತದೆಂಬುದನ್ನು. ನಾಗಮಹಾಶಯರು ದೈವೀ ಭಾವದಲ್ಲಿ ತನ್ಮಯರಾಗಿದ್ದಾರೆ. ಅವರ ದೇಹಾಭಾವನೆ ಸಂಪೂರ್ಣವಾಗಿ ಅಳಿಸಿ ಹೋಗಿದೆ. (ಸ್ವಾಮಿ ಪ್ರೇಮಾನಂದರಿಗೆ) ನಾಗಮಹಾಶಯರಿಗೆ ಕೊಂಚ ಪ್ರಸಾದವನ್ನು ತಾ.

ನಾಗಮಹಾಶಯ:— ಪ್ರಸಾದ! (ಕೈ ಜೋಡಿಸಿ) ನಿಮ್ಮನ್ನು ನೋಡಿ ಇಂದು ನನ್ನ ಪ್ರಾಪಂಚಿಕ ಕ್ಷುಧೆ ಅಡಗಿ ಹೋಗಿದೆ.

ಮಠದ ಬ್ರಹ್ಮಚಾರಿಗಳು, ಸನ್ಯಾಸಿಗಳು ಉಪನಿಷತ್ತನ್ನು ವ್ಯಾಸಂಗ ಮಾಡುತ್ತಿದ್ದರು. ಸ್ವಾಮಿಜಿ ಅವರಿಗೆ, "ಇಂದು ಶ್ರೀ ರಾಮಕೃಷ್ಣರ ಹಿರಿಯ ಭಕ್ತರ ಆಗಮನವಾಗಿದೆ. ಮಠಕ್ಕೆ ನಾಗಮಹಾಶಯರು ಭೇಟಿ ಇತ್ತ ನಿಮಿತ್ತ ಇಂದು ವಿಶ್ರಾಂತಿ ದಿನವಾಗಲಿ" ಎಂದರು. ಎಲ್ಲರೂ ಪುಸ್ತಕಗಳನ್ನು ಮುಚ್ಚಿ ನಾಗಮಹಾಶಯರ ಸುತ್ತಲೂ ಕುಳಿತುಕೊಂಡರು.

ಸ್ವಾಮಿಜಿ:— (ಎಲ್ಲರನ್ನೂ ಉದ್ದೇಶಿಸಿ) ನೀವು ನೋಡುತ್ತಿಲ್ಲವೆ? ನಾಗಮಹಾಶಯರನ್ನು ನೋಡಿ! ಅವರು ಒಬ್ಬ ಗೃಹಸ್ಥರು. ಆದರೂ

ಸಂಸಾರದ ಜ್ಞಾನ ಅವರಿಗೆ ಕೊಂಚವೂ ಇಲ್ಲ. ಯಾವಾಗಲೂ ದೈವೀ ಭಾವದಲ್ಲಿ ಮಗ್ನರಾಗಿರುವರು. (ನಾಗಮಹಾಶಯರಿಗೆ) ದಯವಿಟ್ಟು ನಮಗೂ ಈ ಬ್ರಹ್ಮಚಾರಿಗಳಿಗೂ ಶ್ರೀ ರಾಮಕೃಷ್ಣರ ವಿಷಯವಾಗಿ ಏನಾದರೂ ಕೊಂಚ ಹೇಳಿ.

ನಾಗಮಹಾಶಯ :—(ಪೂಜ್ಯಭಾವದಿಂದ) ನೀವೇನು ಹೇಳುತ್ತಿರುವುದು? ನಾನೇನು ಹೇಳಲಿ? ನಾನು ನಿಮ್ಮನ್ನು ನೋಡಲು, ಈ ವೀರರನ್ನು ಶ್ರೀ ರಾಮಕೃಷ್ಣರ ದೈವೀ ಲೀಲೆಯ ಸಹಾಯಕರಾದ ನಿಮ್ಮನ್ನು ನೋಡಲು ಬಂದೆ. ಈಗ ಅವರ ಸಂದೇಶ, ಬೋಧೆಗಳನ್ನು ಜನರೆಲ್ಲಾ ಮೆಚ್ಚುವರು. ಜಯರಾಮಕೃಷ್ಣ!

ಸ್ವಾಮಿಜಿ :—ಶ್ರೀ ರಾಮಕೃಷ್ಣರನ್ನು ಸರಿಯಾಗಿ ಅರ್ಥಮಾಡಿಕೊಂಡು ಮೆಚ್ಚಿದವರೆಂದರೆ ನೀವೊಬ್ಬರೇ. ನಾವೆಲ್ಲಾ ಕೇವಲ ನಿರರ್ಥಕವಾದ ಅಲೆದಾಟದಲ್ಲಿ ಕಾಲ ಕಳೆದವರು.

ನಾಗಮಹಾಶಯ :—ಏನು ಮಾತನಾಡುತ್ತಿರುವಿರಿ? ನೀವು ಶ್ರೀ ರಾಮಕೃಷ್ಣರ ಪ್ರತಿಬಿಂಬ. ನಾಣ್ಯದ ಎರಡು ಮುಖಗಳಂತೆ. ಯಾರಿಗೆ ಕಣ್ಣಿದೆಯೊ ಅವರು ನೋಡಲಿ.

ಸ್ವಾಮಿಜಿ :—ಈ ಮಠ ಮತ್ತು ಆಶ್ರಮಗಳ ಸ್ಥಾಪನೆ ಮುಂತಾದುವು ಸರಿಯಾದ ಹಾದಿಯಲ್ಲಿ ಇಟ್ಟಿರುವ ಹೆಜ್ಜೆಯೆ?

ನಾಗಮಹಾಶಯ :—ನಾನೊಬ್ಬ ಕ್ಷುದ್ರ ಮನುಜ. ನನಗೇನು ಅರ್ಥವಾಗುತ್ತದೆ. ನೀವೇನುಮಾಡಿದರೂ ಅದರಿಂದ ಜಗಕ್ಕೆ ಕಲ್ಯಾಣವಾಗುತ್ತದೆ. ಖಂಡಿತವಾಗಿ ಪ್ರಪಂಚಕ್ಕೆ ಒಳ್ಳೆಯದಾಗುತ್ತದೆ.

ಅನೇಕರು ಪೂಜ್ಯಭಾವದಿಂದ ನಾಗಮಹಾಶಯರ ಪಾದಧೂಳಿಯನ್ನು ಧರಿಸಲು ಅವರ ಹತ್ತಿರ ಬಂದರು. ಇದರಿಂದ ಅವರು ಮತ್ತಷ್ಟು ಕಳವಳಗುಂದಿದರು. ಸ್ವಾಮಿಜಿ ಅವರನ್ನುದ್ದೇಶಿಸಿ "ನಾಗಮಹಾಶಯರಿಗೆ ನೋವುಂಟುಮಾಡಬೇಡಿ. ಅವರು ವ್ಯಥಿತರಾಗುವಂತೆ ಮಾಡಬೇಡಿ." ಇದನ್ನು ಕೇಳಿದಮೇಲೆ ಎಲ್ಲರೂ ಮೌನವಾದರು.

ಸ್ವಾಮಿಜಿ :—ದಯವಿಟ್ಟು ಮಠಕ್ಕೆ ಆಗಾಗ್ಗೆ ಬಂದು ಹೋಗುತ್ತಿರಿ. ಇಲ್ಲಿನ ಹುಡುಗರಿಗೆಲ್ಲಾ ಮೇಲ್ಪಂಕ್ತಿಯಾಗಿರುವಿರಿ.

ನಾಗಮಹಾಶಯ :—ನಾನು ಒಮ್ಮೆ ಶ್ರೀ ರಾಮಕೃಷ್ಣರನ್ನು ಈ ವಿಷಯವಾಗಿ ಕೇಳಿದೆ. ಅವರು "ನೀನು ಈಗ ಇರುವಂತೆಯೆ ಗೃಹ

ಸ್ಥನಾಗಿರು'' ಎಂದರು. ಅಂತೆಯೆ ನಾನು ಆ ಜೀವನವನ್ನೇ ಅನುಸರಿಸುತ್ತಿರುವೆ. ನಾನು ಆಗಾಗ್ಗೆ ಇಲ್ಲಿಗೆ ಬಂದು ಧನ್ಯನಾಗುವೆ.

ಸ್ವಾಮಿಜಿ:—ನಾನು ನಿಮ್ಮ ಸ್ಥಳಕ್ಕೆ ಒಮ್ಮೆ ಬರಬೇಕೆಂದಿರುವೆ.

ನಾಗಮಹಾಶಯ:—(ಆನಂದದಿಂದ ಉನ್ಮತ್ತರಾಗಿ) ಅಂತಹ ಸುದಿನ ನಿಜವಾಗಿ ಉದಿಸುವುದೆ? ನನ್ನ ಊರು ಕಾಶಿಯಂತೆ ನಿಮ್ಮ ಪಾದ ಸ್ಪರ್ಶದಿಂದ ಪುನೀತವಾಗುವುದು. ನಾನು ಅಷ್ಟೊಂದು ಅದೃಷ್ಟಶಾಲಿಯೆ?

ಸ್ವಾಮಿಜಿ:—ನನಗೇನೊ ಆಸೆಯಿದೆ. ಇನ್ನು ನಾನಲ್ಲಿಗೆ ಬರುವುದು ''ಮಾತೆ'' ಯ ಇಚ್ಛೆ.

ನಾಗಮಹಾಶಯರು:— ಯಾರಿಗೆ ನಿಮ್ಮನ್ನು ತಿಳಿಯಲು ಸಾಧ್ಯ? ಅಂತರ್ದೃಷ್ಟಿ ತೆರೆದ ಹೊರತು ಯಾರಿಗೂ ನಿಮ್ಮನ್ನು ಅರ್ಥಮಾಡಿಕೊಳ್ಳಲು ಅಸಾಧ್ಯ! ಕೇವಲ ಶ್ರೀ ರಾಮಕೃಷ್ಣರು ಮಾತ್ರ ನಿಮ್ಮನ್ನು ಅರಿತಿದ್ದರು. ಉಳಿದವರೆಲ್ಲ ಅವರ ಮಾತುಗಳಲ್ಲಿ ಶ್ರದ್ಧೆ ಇಟ್ಟಿದ್ದರು. ಆದರೆ ಯಾರೂ ನಿಮ್ಮನ್ನು ಸರಿಯಾಗಿ ಅರ್ಥಮಾಡಿಕೊಂಡಿಲ್ಲ.

ಸ್ವಾಮಿಜಿ:— ಈಗ ನನಗಿರುವ ಒಂದು ಆಸೆಯೆಂದರೆ ಇಡೀ ದೇಶವನ್ನೆಲ್ಲ – ನಿದ್ರಿಸುತ್ತಿರುವ ಈ ರಾಕ್ಷಸಾಕಾರನನ್ನು – ತನ್ನ ಶಕ್ತಿಯಲ್ಲಿರುವ ನಂಬಿಕೆಯನ್ನೆಲ್ಲ ಕಳೆದುಕೊಂಡು, ಪ್ರತಿ ಕ್ರಿಯೆಯೇ ಇಲ್ಲದೆ ಬಿದ್ದಿರುವ ಇದನ್ನು ಎಬ್ಬಿಸಬೇಕು. ನಾನು ಅದನ್ನು ಶಾಶ್ವತ ಧರ್ಮದ ಭಾವನೆಗಾಗಿ ಎಬ್ಬಿಸಬಲ್ಲೆನಾದರೆ ನನ್ನ ಜನ್ಮ ಮತ್ತು ಶ್ರೀ ರಾಮಕೃಷ್ಣರ ಅವತಾರವೂ ಸಾರ್ಥಕವೆಂದು ಭಾವಿಸುವೆ. ಇದೊಂದೇ ನನ್ನ ಹೃದಯದ ತೀವ್ರ ಆಕಾಂಕ್ಷೆ. ಮುಕ್ತಿ ಮುಂತಾದುವುಗಳಿಂದ ಯಾವ ಪ್ರಯೋಜನವೂ ನನಗೆ ಕಾಣುವುದಿಲ್ಲ. ದಯವಿಟ್ಟು ನಾನು ಇದರಲ್ಲಿ ಜಯಶಾಲಿಯಾಗುವಂತೆ ಹರಸಿ.

ನಾಗಮಹಾಶಯರು:— ಶ್ರೀ ರಾಮಕೃಷ್ಣರು ಆಶೀರ್ವದಿಸುವರು! ನಿಮ್ಮ ಇಚ್ಛೆಯನ್ನು ತಿರುಗಿಸಬಲ್ಲವರಾರು? ನೀವಿಚ್ಛೆಪಟ್ಟದ್ದೆಲ್ಲಾ ಕಾರ್ಯರೂಪಕ್ಕೆ ಬಂದೇ ಬರುವುದು.

ಸ್ವಾಮಿಜಿ:—ಆತನ ಇಚ್ಛೆ ಇಲ್ಲದಿದ್ದಲ್ಲಿ ಯಾವುದೂ ಸಂಭವಿಸುವುದಿಲ್ಲ.

ನಾಗಮಹಾಶಯ:—ಆತನ ಇಚ್ಛೆ ಮತ್ತು ನಿಮ್ಮ ಇಚ್ಛೆ ಎರಡೂ ಒಂದೇ ಆಗಿದೆ. ನಿಮ್ಮ ಇಚ್ಛೆ ಯಾವುದೋ ಅದೇ ಆತನ ಇಚ್ಛೆ–ಜಯ ಶ್ರೀ ರಾಮಕೃಷ್ಣ!

ಸ್ವಾಮಿಜಿ :— ಕೆಲಸಮಾಡಲು ದೃಢಕಾಯವಾದ ದೇಹ ಆವಶ್ಯಕ. ಈ ದೇಶಕ್ಕೆ ಬಂದಾಗಿನಿಂದಲೂ ನನಗೆ ಆರೋಗ್ಯ ಸರಿಯಿಲ್ಲ. ಪಶ್ಚಿಮ ದೇಶದಲ್ಲಿ ನನ್ನ ಆರೋಗ್ಯ ಬಹಳ ಚೆನ್ನಾಗಿತ್ತು.

ನಾಗಮಹಾಶಯ :— ಈ ಶರೀರ ಧಾರಣೆ ಮಾಡಿದವರೆಲ್ಲರೂ ಅದರ ಬಾಡಿಗೆಯ ಸುಂಕವನ್ನು ತೆತ್ತೇ ತೀರಬೇಕು. ರೋಗ ಮತ್ತು ದುಃಖವೇ ಅದರ ಸುಂಕ. ಆದರೆ ನಿಮ್ಮ ದೇಹ ಚಿನ್ನದ ಮೊಹರಿರುವ ಪೆಟ್ಟಿಗೆ. ಅದರ ವಿಷಯದಲ್ಲಿ ಬಹಳ ಜೋಪಾನವಾಗಿರಬೇಕು. ಆದರೆ ಹಾಗೆ ನೋಡಿ ಕೊಳ್ಳುವರು ಯಾರು? ಯಾರಿಗೆ ಅರ್ಥಮಾಡಿಕೊಳ್ಳಲು ಸಾಧ್ಯ? ಶ್ರೀ ರಾಮಕೃಷ್ಣರು ಮಾತ್ರ ಅರ್ಥಮಾಡಿಕೊಳ್ಳುತ್ತಿದ್ದರು. ಜೈ ಶ್ರೀ ರಾಮಕೃಷ್ಣ !

ಸ್ವಾಮಿಜಿ :— ಮಠದಲ್ಲಿರುವವರೆಲ್ಲ ನನ್ನ ವಿಷಯದಲ್ಲಿ ಬಹಳ ಎಚ್ಚರಿಕೆ ತೆಗೆದುಕೊಳ್ಳುತ್ತಾರೆ.

ನಾಗಮಹಾಶಯ :— ಅವರು ಅದನ್ನು ಮಾಡಿದರೆ ಅವರು ತಿಳಿಯಲಿ ತಿಳಿಯದಿರಲಿ ಅದು ಅವರ ಒಳ್ಳೆಯದಕ್ಕೇ. ನಿಮ್ಮ ದೇಹಕ್ಕೆ ತಕ್ಕ ಗಮನಕೊಡದಿದ್ದಲ್ಲಿ ದೇಹ ಬಹು ಬೇಗ ಬಿದ್ದುಹೋಗುವುದು.

ಸ್ವಾಮಿಜಿ :—ನಾಗಮಹಾಶಯರೆ! ನಾನೀಗ ಮಾಡುತ್ತಿರುವುದು ಸರಿಯೊ ತಪ್ಪೊ ಎಂದು ಸಂಪೂರ್ಣ ನನಗೆ ಗೊತ್ತಾಗುತ್ತಿಲ್ಲ. ಕೆಲವು ನಿರ್ದಿಷ್ಟ ಸಮಯಗಳಲ್ಲಿ ನನಗೆ ಯಾವುದೋ ಒಂದು ಮಾರ್ಗದಲ್ಲಿ ಹೋಗುವ ತೀವ್ರ ಇಚ್ಛೆಯುಂಟಾಗುತ್ತದೆ. ಅದರಂತೆಯೇ ನಾನು ಮಾಡುತ್ತೇನೆ. ಅದು ಒಳ್ಳೆಯದಕ್ಕೋ, ಕೆಟ್ಟದ್ದಕ್ಕೊ ನನಗೆ ಅರ್ಥ ವಾಗುವುದಿಲ್ಲ.

ನಾಗಮಹಾಶಯ :—ಶ್ರೀ ರಾಮಕೃಷ್ಣರು "ನಿಧಿಗೆ ಈಗ ಬೀಗ ಮುದ್ರೆ ಹಾಕಲ್ಪಟ್ಟಿದೆ" ಎಂದು ಹೇಳಿದ್ದರು. ಅದಕ್ಕೇ ಅವರು ನೀವು ಪೂರ್ತಿ ತಿಳಿದುಕೊಳ್ಳಲು ಬಿಡುವುದಿಲ್ಲ. ಆವ ಘಳಿಗೆ ನೀವು ಅದನ್ನು ತಿಳಿಯುವಿರೋ ಆಗ ನಿಮ್ಮ ಮಾನವ ಜನ್ಮದ ಲೀಲೆ ಕೊನೆಗೊಳ್ಳುವುದು.

ಸ್ವಾಮಿಜಿ ಏನನ್ನೊ ಎವೆಯಿಕ್ಕದೆ ಯೋಚಿಸುತ್ತಿದ್ದರು. ಸ್ವಾಮಿ ಪ್ರೇಮಾನಂದರು ಸ್ವಲ್ಪ ಪ್ರಸಾದವನ್ನು ಪ್ರೇಮೋನ್ಮಾದದಲ್ಲಿ ಮುಳುಗಿದ್ದ ನಾಗಮಹಾಶಯರಿಗೆ ನೀಡಿದರು. ಸ್ವಲ್ಪ ಕಾಲಾನಂತರ ನಾಗಮಹಾಶಯರು ಸ್ವಾಮಿಗಳು ಕೊಳದ ಹತ್ತಿರ ನೆಲವನ್ನು ಗುದ್ದಲಿಯಿಂದ ನಿಧಾನ

ವಾಗಿ ಅಗೆಯುತ್ತಿದ್ದುದನ್ನು ನೋಡಿ ಅವರ ಕೈಹಿಡಿದು "ನಾವಿರುವಾಗ ನೀವೇಕೆ ಇದನ್ನೆಲ್ಲಾ ಮಾಡಬೇಕು" ಎಂದು ತಡೆದರು. ಸ್ವಾಮಿಜಿ ಗುದ್ದಲಿಯನ್ನು ಅಲ್ಲಿ ಬಿಟ್ಟು ತೋಟದಲ್ಲೇ ಸ್ವಲ್ಪ ಹೊತ್ತು ಸುತ್ತಾಡುತ್ತಾ ಶಿಷ್ಯನಿಗೆ ಇದನ್ನು ಹೇಳಿದರು : "ಶ್ರೀ ರಾಮಕೃಷ್ಣರು ಕಣ್ಮರೆಯಾದಮೇಲೆ ನಾಗಮಹಾಶಯರು ಕಲ್ಕತ್ತೆಯ ತಮ್ಮ ಬಡ ಕುಟೀರದಲ್ಲಿ ಉಪವಾಸ ಮಲಗಿರುವರೆಂದು ಒಂದು ದಿನ ಕೇಳಿದೆವು. ನಾನು ಸ್ವಾಮಿ ತುರಿಯಾ ನಂದ ಇತರರೂ ಎಲ್ಲರೂ ಒಟ್ಟಿಗೆ ಅವರ ಕುಟೀರಕ್ಕೆ ಹೋದೆವು. ನಮ್ಮನ್ನು ನೋಡಿದೊಡನೆಯೇ ಅವರು ಹಾಸಿಗೆಯಿಂದ ಎದ್ದರು. ನಾವಿಂದು ನಮ್ಮ ಭಿಕ್ಷೆಯನ್ನು (ಆಹಾರ) ಇಲ್ಲೇ ತೆಗೆದುಕೊಳ್ಳುತ್ತೇವೆ ಎಂದೆವು. ತಕ್ಷಣ ನಾಗಮಹಾಶಯರು ಅಕ್ಕಿ, ತಪ್ಪಲೆ, ಸೌದೆ ಮುಂತಾದುವನ್ನೆಲ್ಲಾ ಅಂಗಡಿ ಯಿಂದ ಕೊಂಡುತಂದು ಅಡಿಗೆ ಮಾಡಲಾರಂಭಿಸುವರು. ನಾವು ಯೋಚಿ ಸಿದ್ದು ನಾವು ಊಟಮಾಡೋಣ ನಾಗಮಹಾಶಯರಿಗೂ ಮಾಡಿಸ್ಕೋಣ ಎಂದು. ಅಡಿಗೆ ಮಾಡಿ ಅವರು ಅನ್ನವನ್ನು ನಮಗೆ ಬಡಿಸಿದರು. ನಾವು ಸ್ವಲ್ಪ ಭಾಗವನ್ನು ಬೇರೆ ತೆಗೆದಿರಿಸಿ ಊಟಮಾಡಲು ಕುಳಿತೆವು. ನಂತರ ಅವರನ್ನೂ ಊಟಮಾಡುವಂತೆ ಕೇಳಿದೆವು. ಅವರು ತಕ್ಷಣ ಆ ಅನ್ನದ ಮಡಕೆಯನ್ನು ಒಡೆದು ತಲೆಯನ್ನು ಚಚ್ಚಿಕೊಳ್ಳುತ್ತಾ 'ದೈವಸಾಕ್ಷಾ ತ್ಕಾರವಾಗದ ಶರೀರಕ್ಕೆ ಆಹಾರವನ್ನು ಕೊಡಲೆ?' ಇದನ್ನು ನೋಡಿ ನಾವು ಸ್ತಂಭೀಭೂತರಾದೆವು. ಸ್ವಲ್ಪ ಕಾಲದನಂತರ ತುಂಬಾ ಬಲವಂತ ಮಾಡಿ ಅವರಿಗೆ ಸ್ವಲ್ಪ ಊಟಮಾಡಿಸಿ ಹಿಂತಿರುಗಿದೆವು."

ಸ್ವಾಮಿಜಿ :—ನಾಗಮಹಾಶಯರು ಈ ರಾತ್ರಿ ಮಠದಲ್ಲೇ ಉಳಿ ಯುವರೆ?

ಶಿಷ್ಯ :—ಇಲ್ಲ ಅವರಿಗೆ ಸ್ವಲ್ಪ ಕೆಲಸವಿದೆ. ಅವರು ಇಂದೇ ಹಿಂತಿರುಗಬೇಕು.

ಸ್ವಾಮಿಜಿ :—ಹಾಗಾದರೆ ದೋಣಿಯನ್ನು ನೋಡು. ಆಗಲೇ ಕತ್ತ ಲಾಗುತ್ತಲಿದೆ.

ದೋಣಿಯು ಬಂದೊಡನೆ ಶಿಷ್ಯನೂ ನಾಗಮಹಾಶಯರೂ ಸ್ವಾಮಿ ಗಳಿಗೆ ನಮಸ್ಕಾರಮಾಡಿ ಕಲ್ಕತ್ತೆಗೆ ಹೊರಟರು.

# ಅಧ್ಯಾಯ ೩೨

**ಸ್ಥಳ:— ಬೇಲೂರು ಮಠ. ವರ್ಷ:—ಕ್ರಿ.ಶ. ೧೮೯೯.**

ಸ್ವಾಮಿಜಿ ಆರೋಗ್ಯ ಈಗ ಚೆನ್ನಾಗಿದೆ. ಶಿಷ್ಯ ಮಠಕ್ಕೆ ಒಂದು ಶನಿವಾರ ಬೆಳಿಗ್ಗೆ ಬಂದಿದ್ದಾನೆ. ಸ್ವಾಮಿಜಿಗಳನ್ನು ಸಂದರ್ಶಿಸಿ ಶಿಷ್ಯ ಕೆಳಗಿಳಿದು ಬಂದು ಸ್ವಾಮಿ ನಿರ್ಮಲಾನಂದರೊಡನೆ ವೇದಾಂತ ಶಾಸ್ತ್ರ ವಿಚಾರ ಚರ್ಚೆ ನಡೆಸುತ್ತಿದ್ದಾನೆ. ಆ ಸಮಯದಲ್ಲಿ ಸ್ವಾಮಿಜಿ ಕೆಳಗಿಳಿದು ಬಂದು ಶಿಷ್ಯನಿಗೆ "ನೀನು ನಿರ್ಮಲಾನಂದರೊಡನೆ ಏನು ಚರ್ಚಿಸುತ್ತಿದ್ದೆ."

ಶಿಷ್ಯ:— ಸ್ವಾಮಿಜಿ, ಅವರು ಹೇಳುತ್ತಿದ್ದರು "ವೇದಾಂತದಲ್ಲಿರುವ ಬ್ರಹ್ಮನು ನಿನಗೆ ಮತ್ತು ನಿಮ್ಮ ಸ್ವಾಮಿಜಿಗೆ ಮಾತ್ರ ಗೊತ್ತು. ಅದಕ್ಕೆ ಬದಲಾಗಿ ನಾವು ಶ್ರೀಕೃಷ್ಣನು ಅವತಾರ ಪುರುಷನೆಂದು ತಿಳಿದಿದ್ದೇವೆ."

ಸ್ವಾಮಿಜಿ:— ನೀನೇನು ಹೇಳಿದೆ?

ಶಿಷ್ಯ:— ನಾನು ಆತ್ಮನೊಬ್ಬನೇ ಸತ್ಯ ಎಂದೆ. ಶ್ರೀಕೃಷ್ಣನು ಆತ್ಮ ಸಾಕ್ಷಾತ್ಕಾರ ಹೊಂದಿದ ಒಬ್ಬ ಮನುಷ್ಯ ಅಷ್ಟೆ. ಸ್ವಾಮಿ ನಿರ್ಮಲಾನಂದರಿಗೆ ಅಂತರ್ಯದಲ್ಲಿ ನಂಬಿಕೆ ಇದೆ—ಆದರೆ ಹೊರಗಡೆ ಮಾತ್ರ ಅವರು ದ್ವೈತಭಾವದ ಚರ್ಚೆಯಲ್ಲಿ ಭಾಗವಹಿಸುವರು. ಮೊದಲು ಅವರು ಈಶ್ವರನ ಸಾಕಾರ ಭಾವನೆಯನ್ನು ಚರ್ಚಿಸುತ್ತಿದ್ದಂತಿತ್ತು. ನಂತರ ನಿಧಾನವಾಗಿ ತರ್ಕದ ಹಾದಿಯಿಂದ ವೇದಾಂತದ ತಳಹದಿಯನ್ನು ಬಲಪಡಿಸಲು ಮಾಡಿದಂತಿತ್ತು. ಆದರೆ ಯಾವಾಗ ಅವರು ನನ್ನನ್ನು ವೈಷ್ಣವನೆಂದು ಕರೆದರೋ ಆಗ ನನಗೆ ಅವರ ನಿಜವಾದ ಉದ್ದೇಶವೇ ಮರೆತು ಹೋಗಿ ಅವರೊಡನೆ ಬಿಸಿಬಿಸಿ ಚರ್ಚೆ ಪ್ರಾರಂಭವಾಯಿತು.

ಸ್ವಾಮಿಜಿ:— ಅವರು ನಿನ್ನನ್ನು ಪ್ರೀತಿಸುತ್ತಾರೆ. ಅದಕ್ಕೆ ನಿನ್ನನ್ನು ಪೀಡಿಸುವುದರ ಮೂಲಕ ಸಂತೋಷಿಸುತ್ತಾರೆ. ಆದರೆ ನೀನೇಕೆ ಅವರ ಮಾತುಗಳಿಂದ ಅಷ್ಟೊಂದು ಕ್ಷೋಭೆಗೊಳ್ಳಬೇಕು? ನೀನೂ ಉತ್ತರ ಕೊಡು "ನೀನೊಬ್ಬ ನಾಸ್ತಿಕ, ಶೂನ್ಯವಾದದಲ್ಲಿ ನಂಬುವನು" ಎಂದು.

ಶಿಷ್ಯ:— ಸ್ವಾಮಿಜಿ, ಉಪನಿಷತ್ತಿನಲ್ಲಿ ಈಶ್ವರನು ಸರ್ವಶಕ್ತನಾದ ವ್ಯಕ್ತಿ ಎಂದು ಎಲ್ಲಾದರೂ ಹೇಳಿದೆಯೆ? ಆದರೆ ಜನರು ಸಾಧಾರಣವಾಗಿ ಅಂತಹ ಈಶ್ವರನಲ್ಲಿ ನಂಬುವರು.

ಸ್ವಾಮಿಜಿ :—ವಿಶ್ವೇಶ್ವರನೆಂಬ ಪರಮ ಸಿದ್ಧಾಂತ ಕೇವಲ ಒಂದು ವ್ಯಕ್ತಿಯಾಗಲಾರದು. ಜೀವನು ಒಬ್ಬ ವ್ಯಕ್ತಿ, ಈ ಜೀವಿಗಳ ಒಟ್ಟು ಮೊತ್ತ ಈಶ್ವರ. ಜೀವನದಲ್ಲಿ ಅವಿದ್ಯೆ ಪ್ರಧಾನವಾಗಿರುವುದು. ಈಶ್ವರನು ವಿದ್ಯೆ ಅವಿದ್ಯೆಗಳಿಂದ ಕೂಡಿದ ಮಾಯೆಯನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದಾನೆ. ಸ್ವತಂತ್ರವಾಗಿ ತನ್ನಿಂದಲೇ ಚರಾಚರ ವಸ್ತುಗಳುಳ್ಳ ಈ ಪ್ರಪಂಚವನ್ನು ಸೃಷ್ಟಿಸಿದ್ದಾನೆ. ಆದರೆ ಬ್ರಹ್ಮನು ವ್ಯಕ್ತಿ ಸಮಷ್ಟಿಯನ್ನು ಈಶ್ವರನನ್ನು ಮೀರಿದ್ದಾನೆ. ಬ್ರಹ್ಮನಲ್ಲಿ ವಿಭಾಗವಿಲ್ಲ. ಸುಲಭವಾಗಿ ಗ್ರಹಿಸಲು ಸಾಧ್ಯವಾಗುವಂತೆ ಈ ವಿಭಾಗಗಳನ್ನು ಕಲ್ಪಿಸಿಕೊಂಡಿದ್ದೇವೆ. ವಿಶ್ವದ ಸೃಷ್ಟಿ, ಸ್ಥಿತಿ, ಲಯಕರ್ತನೆಂದು ಹೇಳುವ ಆ ಬ್ರಹ್ಮನ ಈ ಅಂಶವನ್ನು ಈಶ್ವರನೆಂದು ಶಾಸ್ತ್ರ ಕರೆಯುವುದು. ವಿಭಿನ್ನವಾದ, ದ್ವೈತಾತೀತವಾದ ಇನ್ನೊಂದು ಅಂಶವನ್ನು ಬ್ರಹ್ಮನೆಂದು ಹೇಳುವರು ಆದರೆ ಇದರಿಂದ ಬ್ರಹ್ಮನೇ ಈ ಜೀವಾತ್ಮಗಳು ಭೂಮಂಡಲಕ್ಕಿಂತ ಬೇರೆ ಪ್ರತ್ಯೇಕವಾದ ವಸ್ತುವೆಂದೆಣಿಸಬೇಡ. ವಿಶಿಷ್ಟಾದ್ವೈತಿಗಳು ಬ್ರಹ್ಮ ಮಾರ್ಪಟ್ಟಿರುವನೆಂದು ಅಭಿಪ್ರಾಯ ಪಡುವರು. ಅದಕ್ಕೆ ವಿರೋಧಿ ಅದ್ವೈತಿಗಳು ಬ್ರಹ್ಮನಲ್ಲಿ ಜೀವ, ವಿಶ್ವಗಳೆರಡೂ ಆರೋಪವಾಗಿವೆ ಎಂದು ಅಭಿಪ್ರಾಯ ಪಡುವರು. ಆದರೆ ವಾಸ್ತವಿಕವಾಗಿ ಬ್ರಹ್ಮನಲ್ಲಿ ಯಾವ ಬದಲಾವಣೆಯೂ ಇಲ್ಲ. ಅದ್ವೈತಿಗಳ ಪ್ರಕಾರ ಈ ಭೂಮಂಡಲ ಕೇವಲ ನಾಮರೂಪಗಳನ್ನೊಳಗೊಂಡಿದೆ. ಎಲ್ಲಿಯವರೆಗೆ ನಾಮರೂಪಗಳಿವೆಯೋ ಅಲ್ಲಿಯವರೆಗೆ ಅದೂ ಇರುವುದು. ಯಾವಾಗ ಧ್ಯಾನ ಸಾಧನೆಗಳಿಂದ ನಾಮರೂಪಗಳು ವಿಲೀನವಾಗುವುವೋ ಆಗ ಜ್ಞಾನಗಮ್ಯನಾದ ಬ್ರಹ್ಮನು ಮಾತ್ರ ಉಳಿಯುವನು. ಆಗ ಈ ಜೀವ ವಿಶ್ವಗಳ ಪ್ರತ್ಯೇಕ ಸತ್ಯದ ಅರಿವೇ ಇರುವುದಿಲ್ಲ. ಆಗ ನಾನೇ ನಿತ್ಯ ಸಚ್ಚಿದಾನಂದ ಪರಬ್ರಹ್ಮನೆಂದು ಸತ್ಯಾನುಭವವುಂಟಾಗುವುದು. ಜೀವಿಯ ವಾಸ್ತವಿಕ ಸ್ವಭಾವವೇ ಬ್ರಹ್ಮ. ಧ್ಯಾನ ಮುಂತಾದವುಗಳ ಮೂಲಕ ನಾಮರೂಪಗಳ ತೆರೆ ಕಳಚಿದ ಕೂಡಲೇ ಈ ಭಾವನೆಯ ಸಾಕ್ಷಾತ್ಕಾರವಾಗುತ್ತದೆ. ಇದೇ ಅದ್ವೈತದ ಸಾರ. ವೇದ ವೇದಾಂತ ಮತ್ತಿತರ ಶಾಸ್ತ್ರಗಳೆಲ್ಲಾ ಈ ವಿಚಾರಗಳನ್ನೇ ಹಲವು ವಿಧದಲ್ಲಿ ವಿವರಿಸುವುವು.

ಶಿಷ್ಯ :— ಈಶ್ವರನೇ ಸರ್ವಶಕ್ತಿನಿಯಾಮಕನೆಂದು ಹೇಗೆ ಹೇಳುವುದು ?

ಸ್ವಾಮಿಜಿ:—ಮಾನಸಿಕ ಎಲ್ಲೆಯಿಂದ ಕೂಡಿದ ಮಾನವ ಎಷ್ಟಾದರೂ ಮಾನವನೇ. ಮನಸ್ಸಿನ ಮೂಲಕವೇ ಅವನು ಎಲ್ಲವನ್ನೂ ಅರಿಯಬೇಕು, ಗ್ರಹಿಸಬೇಕು. ಆದ್ದರಿಂದ ಅವನು ಯೋಚಿಸುವುದೆಲ್ಲಾ ಮನಸ್ಸಿನ ಅಂಕೆಗೊಳಪಟ್ಟಿದೆ. ಆದ್ದರಿಂದ ಮನುಷ್ಯನ ಸಹಜ ಸ್ವಭಾವವೇ ಈಶ್ವರನ ವ್ಯಕ್ತಿತ್ವವನ್ನು ತನ್ನ ವ್ಯಕ್ತಿತ್ವದ ಸಾಮ್ಯದಿಂದ ಚರ್ಚಿಸುವುದಾಗಿದೆ. ಮಾನವನು ತನ್ನ ಇಷ್ಟ ದೈವವನ್ನು ಮಾನವರೂಪದಲ್ಲಿಯೇ ಯೋಚಿಸಲು ಸಾಧ್ಯ. ವ್ಯಾಧಿ ಮೃತ್ಯುವಿನಿಂದಾವೃತವಾದ ಈ ಜಗತ್ತಿನಲ್ಲಿ ಶೋಕ ಪ್ರಹಾರಗಳು ಬಿದ್ದಾಗ, ನಿರಾಶೆ ನಿಸ್ಸಹಾಯಕತೆಯಿಂದ ಕುಗ್ಗಿ ಯಾವುದನ್ನು ಆಶ್ರಯಿಸುವುದರಿಂದ ನೆಮ್ಮದಿ ಸಿಕ್ಕುವುದೋ ಅಂತಹದನ್ನು ಅರಸಿಕೊಂಡು ಹೊರಡುವನು. ಆದರೆ ಅಂತಹ ಆಶ್ರಯವೆಲ್ಲಿ ಸಿಗುವುದು? ಅನ್ಯ ಆಶ್ರಯವಿಲ್ಲದೆ ಇರುವ ಸರ್ವವ್ಯಾಪಿ ಭಗವಂತನೊಬ್ಬನೇ ನಿಜವಾದ ಆಶ್ರಯದಾತ. ಮೊದಮೊದಲು ಮಾನವನಿಗೆ ಇದು ಗೊತ್ತಾಗುವುದಿಲ್ಲ. ಯಾವಾಗ ಧ್ಯಾನಸಾಧನೆಗಳ ಪರಿಣಾಮವಾಗಿ ವಿಚಾರವೈರಾಗ್ಯಗಳು ಉದಿಸುವುವೋ ಆಗ ಅವರಿಗೆ ಇದರ ಅರಿವುಂಟಾಗುವುದು. ಆಧ್ಯಾತ್ಮಿಕ ಮಾರ್ಗದಲ್ಲಿ ಅವನು ಯಾವ ಪಥದಲ್ಲೇ ಮುಂದುವರಿಯಲಿ ಅವನರಿವಿಲ್ಲದೆ ಆತನಲ್ಲಿರುವ ಬ್ರಹ್ಮನು ಜಾಗೃತಿಗೊಳ್ಳುವನು. ಇದು ಒಬ್ಬೊಬ್ಬರ ವಿಷಯದಲ್ಲಿ ಒಂದೊಂದು ಬಗೆಯಾಗಿರಬಹುದು. ಯಾರಿಗೆ ಸಾಕಾರಬ್ರಹ್ಮನಲ್ಲಿ ಶ್ರದ್ಧೆ ಇದೆಯೊ, ಆ ಭಾವನೆಯನ್ನೇ ಗುರಿಯಾಗಿಟ್ಟುಕೊಂಡು ಅವರು ಸಾಧನೆಯಲ್ಲಿ ನಿರತರಾಗಬೇಕು. ಎಲ್ಲಿ ನಿಜವಾದ ಶ್ರದ್ಧೆ ಇದೆಯೊ ಅಂತಹ ಹೃದಯದಲ್ಲಿ ಬ್ರಹ್ಮನು ಜಾಗ್ರತನಾಗುವನು. ಬ್ರಹ್ಮಜ್ಞಾನವೇ ಎಲ್ಲಾ ಜೀವಿಗಳ ಏಕಮಾತ್ರ ಗುರಿ. ಆದರೆ ಭಾವಕ್ಕೆ ತಕ್ಕ ಪಥಗಳಿವೆ. ಜೀವಿಯ ನೈಜ ಸ್ವಭಾವವೇ ಬ್ರಹ್ಮನಾಗಿದ್ದರೂ ಮಾನಸಿಕ ಎಲ್ಲೆಯೊಳಗೆ ಅವನು ಸ್ಥಾಪಿತನಾಗಿರುವುದರಿಂದ ಅನೇಕ ಬಗೆಯ ಸಂಶಯ ಕ್ಲೇಶಗಳಿಂದ, ಆನಂದ ನೋವುಗಳಿಂದ ವ್ಯಥಿತನಾಗುವನು. ಆದರೆ ಬ್ರಹ್ಮನಿಂದ ಹಿಡಿದು ಹುಲ್ಲಿನೆಸಳಿನವರೆಗೆ ಎಲ್ಲರೂ ಪರಮಾತ್ಮನ ಸತ್ಯಸಾಕ್ಷಾತ್ಕಾರದಕಡೆ ಮುಂದುವರಿಯುತ್ತಿವೆ. ಬ್ರಹ್ಮನಲ್ಲಿ ಐಕ್ಯಗೊಳ್ಳುವವರೆಗೂ ಜನನ ಮರಣಗಳ ಚಕ್ರದಿಂದ ಪಾರಾಗಲಾರ. ಮಾನವ ಜನ್ಮಧಾರಣೆಮಾಡಿ ಮುಕ್ತಿ ಹೊಂದುವ ಆಸೆ ಜೊತೆಗೆ ಬ್ರಹ್ಮಸಾಕ್ಷಾತ್ಕಾರ ಪಡೆದ ಮನುಷ್ಯನ ಕೃಪೆಯೂ ದೊರೆತರೆ ಮನುಷ್ಯನ ಆತ್ಮಜ್ಞಾನ ಪಡೆಯುವ ಆಕಾಂಕ್ಷೆ ತೀವ್ರವಾಗುವುದು. ಇಲ್ಲ

ದಿದ್ದಲ್ಲಿ ಭೋಗ ಐಶ್ವರ್ಯಗಳಲ್ಲಿ ಮುಳುಗಿರುವ ಮಾನವನ ಮನಸ್ಸು ಎಂದಿಗೂ ಆ ಕಡೆ ವಾಲುವುದಿಲ್ಲ. ಯಾವಾತನ ಮನಸ್ಸು ಇನ್ನೂ ಸಂಸಾರ ಜೀವನದ ಆಸೆ, ಐಶ್ವರ್ಯ, ಕೀರ್ತಿಲಾಲಸೆಗೆ ಆತುರ ಪಡು ತ್ತದೆಯೋ ಅಂತವನ ಮನಸ್ಸಿನಲ್ಲಿ ಬ್ರಹ್ಮಜ್ಞಾನ ಪಡೆಯುವ ಬಯಕೆ ಯಾದರೂ ಉದಿಸುವುದೆ? ಯಾರು ಎಲ್ಲವನ್ನೂ ತ್ಯಾಗಮಾಡಲು ಸಿದ್ಧ ನಾಗಿರುವನೋ, ಒಳ್ಳೆಯದು ಕೆಟ್ಟದ್ದು ಸುಖ ದುಃಖಗಳೇ ಮುಂತಾದ ದ್ವೈತ ಪ್ರವಾಹದ ಮಧ್ಯದಲ್ಲಿಯೂ ಶಾಂತವಾಗಿ ಸ್ಥಿರವಾಗಿ ಸಮಭಾವ ದಲ್ಲಿ ಗುರಿಯೆಡೆಗೇ ದಿಟ್ಟಿಯಿಟ್ಟಿರುವನೋ, ಅಂತಹವನು ಮಾತ್ರ ಆತ್ಮ ಜ್ಞಾನವನ್ನು ಹೊಂದಲು ಪ್ರಯತ್ನಿಸುವನು. ಅಂತಹವನು ತನ್ನ ಸ್ವಂತ ಶಕ್ತಿಯಿಂದ ಪ್ರಪಂಚದ ತೆರೆಯನ್ನು ಕಿತ್ತೊಗೆದು ಮಾಯಾ ಶೃಂಖಲೆ ಗಳನ್ನು ಕಡಿದುಹಾಕಿ ಅಸದೃಶ ಸಿಂಹದಂತೆ ಹೊರ ಹೊಮ್ಮುವನು.

ಶಿಷ್ಯ:—ಹಾಗಾದರೆ ಸನ್ಯಾಸವಿಲ್ಲದೆ ಬ್ರಹ್ಮಜ್ಞಾನವನ್ನು ಪಡೆಯ ಲಾಗುವುದೆ ಇಲ್ಲವೆ?

ಸ್ವಾಮಿಜಿ:—ಖಂಡಿತವಾಗಿ ಸಾವಿರಬಾರಿಗೂ ಸತ್ಯ. ಮಾನಸಿಕ ಮತ್ತು ಬಾಹ್ಯ ಸನ್ಯಾಸ ಹೊಂದಲೇ ಬೇಕು. ಸಾಂಪ್ರದಾಯಕ ಹಾಗೂ ಆಂತರಿಕ ತ್ಯಾಗ ಅತ್ಯಾವಶ್ಯಕ. ಶಂಕರಾಚಾರ್ಯರು "ತಪಸೋ ವಾಪ್ಯ ಲಿಂಗಾತ್" ಮೇಲೆ ಭಾಷ್ಯ ಬರೆಯುತ್ತಿದ್ದಾಗ "ಬಾಹ್ಯ ಸನ್ಯಾಸ ಚಿಹ್ನೆಯಿಲ್ಲದ ತಪಸ್ಸೂ ನಿರರ್ಥಕ" ಎಂಬಲ್ಲಿ ಹೇಳಿದ್ದಾರೆ. "ಸನ್ಯಾ ಸದ ಬಾಹ್ಯಚಿಹ್ನೆ (ಕಾವಿಬಟ್ಟೆ ದಂಡ ಕಮಂಡಲು ಮುಂತಾದುವು) ಇಲ್ಲದೆ ಸಾಧನೆ ಮಾಡಿದರೆ ಬಹು ಕಷ್ಟ ಸಾಧ್ಯವಾದ ಬ್ರಹ್ಮಸಾಕ್ಷಾತ್ಕಾರ ವಾಗುವುದಿಲ್ಲ ಪ್ರಪಂಚದಲ್ಲಿ ವಿರಕ್ತಿಯಿಲ್ಲದೆ, ತ್ಯಾಗಬುದ್ಧಿಯಿಲ್ಲದೆ ಭೋಗೇಚ್ಛೆಯನ್ನು ತ್ಯಜಿಸದೆ ಆಧ್ಯಾತ್ಮಿಕ ಜೀವನದಲ್ಲಿ ಏನನ್ನೂ ಸಾಧಿಸ ಲಾಗುವುದಿಲ್ಲ. "ಅದು ಚಿಕ್ಕ ಮಗುವಿನ ಕೈಯ್ಯಲ್ಲಿರುವ ಮಿಠಾಯಿಯನ್ನು ತಂತ್ರದಿಂದ ಅಪಹರಿಸುವಷ್ಟು ಸುಲಭವಲ್ಲ."

ಶಿಷ್ಯ:—ಆಧ್ಯಾತ್ಮಿಕ ಸಾಧನೆಯಲ್ಲಿ ನಿರತರಾಗಿದ್ದಾಗ ತ್ಯಾಗ ತಾನಾ ಗಿಯೇ ಬರಬಹುದು.

ಸ್ವಾಮಿಜಿ:—ಯಾರಿಗೆ ಈ ರೀತಿ ಕ್ರಮೇಣ ಬರಲೆಂದು ಇಚ್ಛೆ ಇದೆಯೋ ಅವರು ಹಾಗೇ ಹೊಂದಲಿ. ಆದರೆ ನೀನೇಕೆ ಅದಕ್ಕೆ ಕಾದು ಕುಳಿತಿರಬೇಕು? ಈ ಕ್ಷಣವೇ ಕಾಲುವೆಯನ್ನು ತೋಡಿ ನಿನ್ನ ಜೀವನಕ್ಕೆ

ಆಧ್ಯಾತ್ಮಿಕ ಪ್ರವಾಹ ಹರಿಯುವಂತೆ ಮಾಡು. ಶ್ರೀ ರಾಮಕೃಷ್ಣರು ಆಧ್ಯಾತ್ಮಿಕ ಸಾಧನೆಯಲ್ಲಿ ಈ ನಿರುತ್ಸಾಹವನ್ನು ಖಂಡಿಸುತ್ತಿದ್ದರು. ಉದಾಹರಣೆಗೆ ಧರ್ಮ ನಿಧಾನವಾಗಿ ಬರುತ್ತದೆ ಅದಕ್ಕೆ ಅವಸರವೇನೂ ಪಡಬೇಕಾಗಿಲ್ಲ ಎಂಬುದು. ತೃಷಾಪೀಡಿತನಾಗಿದ್ದಾಗ ಸುಮ್ಮನೇ ಸೋಮಾರಿಯಂತೆ ಕುಳಿತುಕೊಳ್ಳಲು ಸಾಧ್ಯವೆ? ನೀರು ಸಿಗುವ ಸ್ಥಳಕ್ಕೆ ಓಡಿಹೋಗುವುದಿಲ್ಲವೆ? ನಿನಗೆ ಇನ್ನೂ ಆಧ್ಯಾತ್ಮಿಕ ತೃಷೆಯಿಲ್ಲದ ಕಾರಣ ನೀನು ಸೋಮಾರಿಯಂತೆ ಕುಳಿತಿರುವೆ. ಜ್ಞಾನತೃಷೆ ನಿನ್ನಲ್ಲಿನ್ನೂ ಬಲವಾಗಿಲ್ಲ. ಅದಕ್ಕೇ ನಿನ್ನ ಸಾಂಸಾರಿಕ ಜೀವನದ ಕ್ಷುದ್ರ ಬಯಕೆಗಳಲ್ಲೇ ನೀನು ತೃಪ್ತನಾಗಿರುವಿ.

ಶಿಷ್ಯ :— ನಿಜವಾಗಿ ನನಗೆ ಸರ್ವವನ್ನೂ ತ್ಯಾಗಮಾಡುವ ಬುದ್ಧಿ ಏಕೆ ಹುಟ್ಟುತ್ತಿಲ್ಲವೋ ಅರಿಯೆ. ದಯವಿಟ್ಟು ನನಗೊಂದು ದಾರಿ ತೋರಿಸಿಕೊಡಿ.

ಸ್ವಾಮಿಜಿ :—ನಿನ್ನ ಕೈಯಲ್ಲೇ ಗುರಿ ಮತ್ತು ಸಾಧನೆ ಎರಡೂ ಇದೆ. ನಾನು ಕೇವಲ ಅದನ್ನು ಉದ್ರೇಕಿಸಬಲ್ಲೆ. ನೀನಿಷ್ಟೊಂದು ಶಾಸ್ತ್ರ ಪಾರಂಗತನಾಗಿರುವೆ– ಬ್ರಹ್ಮಜ್ಞಾನಿಗಳೊಡನೆ ಸಂಪರ್ಕ ಹೊಂದಿರುವೆ.– ಇಷ್ಟೊಂದೂ ನಿನ್ನಲ್ಲಿ ತ್ಯಾಗಬುದ್ಧಿಯನ್ನು ಹುಟ್ಟಿಸದೆ ಹೋದಲ್ಲಿ ನಿನ್ನ ಬಾಳು ವ್ಯರ್ಥ. ಆದರೆ ಅದು ಸಂಪೂರ್ಣ ನಿರರ್ಥಕವಲ್ಲ– ಇದರ ಪರಿಣಾಮ ಯೋಗ್ಯಕಾಲದಲ್ಲಿ ಯಾವುದಾದರೊಂದು ಬಗೆಯಿಂದ ವಿಕಾಸಗೊಳ್ಳುವುದು.

ಶಿಷ್ಯ ಬಹು ಖಿನ್ನನಾಗಿ ಪುನಃ ಸ್ವಾಮಿಗಳನ್ನು ಕುರಿತು, "ಸ್ವಾಮಿಜಿ, ನಾನು ತಮ್ಮ ಅಡಿದಾವರೆಗೆ ಬಂದಿರುವೆ. ಮುಕ್ತಿಯ ಹಾದಿಯನ್ನು ನನಗೆ ತೆರೆಯಿರಿ– ನಾನೀದೇಹದಲ್ಲೇ ಸತ್ಯಸಾಕ್ಷಾತ್ಕಾರ ಹೊಂದುವಂತೆ ಆಶೀರ್ವದಿಸಿ" ಎಂದು ಕೇಳಿಕೊಂಡನು.

ಸ್ವಾಮಿಜಿ :— ನಿನಗಾವ ಭಯವಿದೆ? ಯಾವಾಗಲೂ ವಿಚಾರ ಮಾಡು– ನಿನ್ನ ದೇಹ, ಮನೆ, ಜೀವಿಗಳು ಪ್ರಪಂಚ ಎಲ್ಲ ಸಂಪೂರ್ಣವಾಗಿ ಸ್ವಪ್ನದಂತೆ ಮಿಥ್ಯೆ. ಯಾವಾಗಲೂ ಈ ಶರೀರ ಒಂದು ಜಡ ಯಂತ್ರವೆಂದು ಭಾವಿಸು. ನಿನ್ನ ಅಂತರ್ಯದಲ್ಲಿರುವ ನಿತ್ಯಪೂರ್ಣ ಪುರುಷನೇ ನಿನ್ನ ವಾಸ್ತವಿಕ ಸ್ವಭಾವ. ಮನಸ್ಸೇ ಅವನ ಮೊದಲ ಸೂಕ್ಷ್ಮಹೊದಿಕೆ ನಂತರ ಸ್ಥೂಲವಾದ ಈ ಶರೀರ ಬಾಹ್ಯ ಹೊದಿಕೆ. ಅಖಂಡ ಅನಂತ ಸ್ವಯಂ ಪ್ರಕಾಶಮಾನ ಪುರುಷನು ಈ ಮಾಯೆಯ ಬಲೆಯಲ್ಲಿ ಹುದು

ಗಿದ್ದಾನೆ. ಅದಕ್ಕೇ ನಿನ್ನ ನಿಜಸ್ವಭಾವವನ್ನು ನೀನು ಅರಿಯದಿರುವೆ. ಯಾವಾಗಲೂ ವಿಷಯ ಸುಖದೆಡೆಗೆ ಓಡುತ್ತಿರುವ ಮನಸ್ಸು ಅಂತರ್ಮುಖ ವಾಗಬೇಕು. ಮನಸ್ಸನ್ನು ಕೊಲ್ಲಬೇಕು. ಶರೀರ ಕೇವಲ ಸ್ಥೂಲ. ಅದು ಸತ್ತು ಪಂಚಭೂತಗಳಲ್ಲಿ ಲಯವಾಗುವುದು. ಆದರೆ ಮನಸ್ಸಿನಲ್ಲಿ ಮುದ್ರಿತವಾದ ಆ ಮಾನಸಿಕ ಅನುಭವಗಳ ಕಂತೆ ಅಷ್ಟು ಬೇಗ ನಾಶ ವಾಗುವುದಿಲ್ಲ. ಅದು ಬೀಜರೂಪದಲ್ಲಿ ಕೆಲವು ಕಾಲ ಸ್ತಬ್ಧವಾಗಿರುವುದು. ನಂತರ ಚಿಗುರಿ ಕವಲೊಡೆದು ಮರವಾಗುವುದು. ಬೇರೊಂದು ಭೌತಿಕ ಶರೀರಧಾರಣೆಮಾಡಿ ಆತ್ಮಪರಿಜ್ಞಾನ ಬರುವವರೆಗೂ ಪುನಃಪುನಃ ಜನನ ಮರಣಗಳ ಚಕ್ರಕ್ಕೆ ಬೀಳುವುದು. ಆದ್ದರಿಂದ ಧ್ಯಾನ ಚಿತ್ತೈಕಾಗ್ರತೆ ಗಳಿಂದ ನಿತ್ಯಾನಿತ್ಯವಸ್ತು ಪರಿಜ್ಞಾನದಿಂದ ಈ ಮನಸ್ಸನ್ನು ಅಖಂಡ ಸಚ್ಚಿ ದಾನಂದ ಸಾಗರದಲ್ಲಿ ಮುಳುಗಿಸು. ಮನಸ್ಸು ನಾಶವಾದಾಗ ಅದರ ಅಧೀನತೆಯೂ ಮಾಯವಾಗಿ ನೀನು ಬ್ರಹ್ಮನಲ್ಲಿ ಐಕ್ಯವಾಗುವೆ.

ಶಿಷ್ಯ:—ಈ ಚಂಚಲ ಮನಸ್ಸನ್ನು ಬ್ರಹ್ಮನೆಡೆಗೆ ತಿರುಗಿಸಲು ಬಹಳ ಕಷ್ಟ.

ಸ್ವಾಮಿಜಿ:—ವೀರನಿಗೆ ಕಷ್ಟವಾದುದಾವುದಿದೆ? ಕೇವಲ ದುರ್ಬಲ ಮನುಷ್ಯ ಮಾತ್ರ ಹೀಗೆ ಮಾತಾಡುವನು. "ಧೀರನಿಗೆ ಮಾತ್ರ ಮುಕ್ತಿ ಗಳಿಸುವುದು ಸುಲಭ, ಹೇಡಿಗಲ್ಲ" "ವೀರಾಣಾಮೇವ ಕರತಲಗತಾ ಮುಕ್ತಿಃ, ನ ಪುನಃ ಕಾಪುರುಷಾಣಾಮ್" "ತ್ಯಾಗ ಮತ್ತು ಅಭ್ಯಾಸ ದಿಂದ ಮನಸ್ಸನ್ನು ಹಿಡಿತದಲ್ಲಿಟ್ಟುಕೊಳ್ಳಬಹುದು. ಓ ಅರ್ಜುನಾ" ಎಂದು ಗೀತ ಸಾರುವುದು. ಚಿತ್ತವು ಸ್ವಚ್ಛವಾದೊಂದು ಸರೋವರದಂತೆ. ಅದರಲ್ಲಿ ಇಂದ್ರಿಯ ಭಾವನೆಗಳಿಂದೇಳುವ ಅಲೆಗಳ ಹೊಡೆತವೇ ಮನಸ್ಸು. ಆದ್ದರಿಂದ ಮನಸ್ಸು ಈ ಯೋಚನಾತರಂಗಗಳ ಶ್ರೇಣಿ. ಈ ಮಾನಸಿಕ ತರಂಗಗಳಿಂದ ಆಸೆಗಳುದಿಸುವುವು. ನಂತರ ಆ ಆಸೆಯೇ ಸಂಕಲ್ಪವಾಗಿ ಮಾರ್ಪಟ್ಟು ಸ್ಥೂಲ ಯಂತ್ರವಾದ ಈ ದೇಹದ ಮೂಲಕ ಕೆಲಸ ಮಾಡು ವುದು. ಅದಕ್ಕೇ ಮನಸ್ಸು ಸರ್ವಕಾಲದಲ್ಲಿಯೂ ಈ ಕೆಲಸದ ಫಲ ದಿಂದುಂಟಾದ ಅಸಂಖ್ಯಾತ ತರಂಗಗಳಿಂದ ಅಲ್ಲೋಲ ಕಲ್ಲೋಲವಾಗಿರು ವುದು. ಮನಸ್ಸು ಈ ವೃತ್ತಿಗಳೆಲ್ಲದರಿಂದ ಬಿಡುಗಡೆ ಹೊಂದಿ ಮೊದಲಿನಂತೆ ಸ್ವಚ್ಛ ಸರೋವರವಾಗಿ ಮಾರ್ಪಡಬೇಕು. ಚಿತ್ತ ಫಲಕದ ಮೇಲೆ ಯಾವೊಂದು ವೃತ್ತಿಯ ತರಂಗವೂ ಇರಬಾರದು. ಆಗ ಬ್ರಹ್ಮನು ತಾನೇ

ಅಲ್ಲಿ ವಿಕಾಸವಾಗುವನು. ಶಾಸ್ತ್ರಗಳು ಈ ಅವಸ್ಥೆಯ ಒಂದು ಕ್ಷಣಿಕ ನೋಟವನ್ನು ಮಾತ್ರ "ಆಗ ಹೃದಯದ ಎಲ್ಲಾ ಬಂಧನಗಳೂ ಕಡಿದುಹಾಕಲ್ಪಡುವುವು" ಎಂಬ ಕಡೆ ವ್ಯಕ್ತಗೊಳಿಸುವುದು. ಅರ್ಥವಾಯಿತೆ?

ಶಿಷ್ಯ:—ಹೌದು. ಆದರೆ ಧ್ಯಾನಕ್ಕೆ ಒಂದು ನಿರ್ದಿಷ್ಟವಸ್ತು ಬೇಕಲ್ಲವೆ?

ಸ್ವಾಮಿಜಿ:—ನೀನೇ ನಿನ್ನ ಧ್ಯಾನದ ವಸ್ತುವಾಗುವೆ. ನೀನೇ ಆ ಸರ್ವವ್ಯಾಪಿಯಾದ ಆತ್ಮನೆಂದು ಭಾವಿಸಿ ಧ್ಯಾನಿಸು. "ನಾನು ದೇಹವೂ ಅಲ್ಲ, ಮನಸ್ಸೂ ಅಲ್ಲ, ಬುದ್ಧಿಯೂ ಅಲ್ಲ. ಸ್ಥೂಲ ಮತ್ತು ಸೂಕ್ಷ್ಮ ಶರೀರವೂ ಅಲ್ಲ." ಈ ರೀತಿ ಎಲ್ಲವನ್ನೂ ವಿಸರ್ಜಿಸುತ್ತಾ ನಿನ್ನ ಮನಸ್ಸನ್ನು ನಿನ್ನ ಸಹಜಸ್ವಭಾವವಾದ ಪರಮ ಜ್ಞಾನದಲ್ಲಿ ಮುಳುಗಿಸಬೇಕು. ಇದರಲ್ಲಿ ಬಾರಿಬಾರಿಗೂ ಮುಳುಗುತ್ತಾ ನಿನ್ನ ಮನಸ್ಸನ್ನು ನಿಗ್ರಹಿಸು. ಆಗ ಮಾತ್ರ ನೀನು ಜ್ಞಾನದ ತಿರುಳನ್ನು ಸಾಕ್ಷಾತ್ಕರಿಸಿಕೊಳ್ಳುವೆ–ನಿನ್ನ ಸಹಜ ಪ್ರಕೃತಿಯನ್ನರಿಯುವೆ. ಜ್ಞಾನಿ, ಜ್ಞಾತ, ಧ್ಯಾತಾ ಧ್ಯಾನಿ ಎಲ್ಲ ಏಕವಾಗಿ ಅಧ್ಯಾಸವೆಲ್ಲ ಮಾಯವಾಗುವುವು. ಶಾಸ್ತ್ರಗಳಲ್ಲಿ ಇದನ್ನು ತ್ರಿಪುಟಿ ಭೇದಾತೀತವೆನ್ನುವರು. ಈ ಅವಸ್ಥೆಯಲ್ಲಿ ಜ್ಞಾನಕ್ಕೆ ಎಲ್ಲೆಯಿಲ್ಲ. ಆತ್ಮನೊಬ್ಬನೇ ಸರ್ವಜ್ಞ, ಆತನನ್ನಾವಹಾದಿಯಿಂದ ಅರಿಯಬಲ್ಲೆ;–ಆತ್ಮನೇ ಜ್ಞಾನ, ಆತ್ಮನೇ ಬುದ್ಧಿ, ಆತ್ಮನೇ ಸಚ್ಚಿದಾನಂದ. ಮಾಯೆಯ ನಿಗೂಢವಾದ ಶಕ್ತಿಯಿಂದ ಯಾವುದು ಸತ್ಯ ಯಾವುದು ಮಿಥ್ಯೆ ಎಂದು ಅರಿಯಲಾಗದಿರುವ ಈ ಸಾಂಬಂಧಿಕ ದೇಹಭಾವನೆ ಜೀವನಿಗೆ ಉಂಟಾಗಿದೆ. ಅವನು ಬ್ರಹ್ಮನೇ ಹೊರತು ಮತ್ತಾವುದೂ ಅಲ್ಲ. ಇದಕ್ಕೆ ಸಾಧಾರಣವಾಗಿ ಜಾಗ್ರತಾವಸ್ಥೆ ಎಂದು ಹೆಸರು. ದ್ವೈತಸಾಂಬಂಧಿಕ ದೇಹಭಾವನೆ ಪವಿತ್ರ ಬ್ರಹ್ಮನಲ್ಲಿ ಐಕ್ಯವಾಗುವುದನ್ನೆ ಶಾಸ್ತ್ರಗಳು ಅತೀಂದ್ರಿಯಾವಸ್ಥೆ ಎನ್ನುವುದು. ಅದನ್ನು ಹೀಗೆ ವಿವರಿಸುವರು. "ಸ್ಥಿಮಿತಸಲಿಲರಾಶಿ ಪ್ರಖ್ಯಮಾಖ್ಯಾ ವಿಹೀನಂ" ಅದು ಹೆಸರಿಲ್ಲದ ಒಂದು ಶಾಂತವಾದ ಸ್ತಬ್ಧ ಸಾಗರದಂತೆ.

ಸ್ವಾಮಿಗಳು ಬ್ರಹ್ಮ ಸಾಕ್ಷಾತ್ಕಾರ ಪಡೆದ ಗಂಭೀರ ವಾಣಿಯಿಂದ ಹೇಳಿದರು.

ಸ್ವಾಮಿಜಿ:—ಎಲ್ಲಾ ತತ್ತ್ವ ಜ್ಞಾನಗಳೂ, ಧರ್ಮ ಗ್ರಂಥಗಳೂ

ದೃಗ್‌ದೃಷ್ಯ ಸಂಬಂಧದಿಂದ ಬಂದಿವೆ. ಆದರೆ ಯಾವ ಮಾನುಷಿಕ ಯೋಚನೆ ಅಥವಾ ಭಾಷೆಯಾಗಲಿ ಕಾರ್ಯಕಾರಣ ಸಂಬಂಧ ಪ್ರಪಂಚ ವನ್ನು ಮೀರಿರುವ ಸತ್ಯವನ್ನು ಪೂರ್ಣವಾಗಿ ವಿವರಿಸಲು ಅಸಾಧ್ಯ. ವಿಜ್ಞಾನ ತತ್ತ್ವಶಾಸ್ತ್ರ ಎಲ್ಲಾ ಅಪೂರ್ಣ ಸತ್ಯಗಳು. ಅತೀಂದ್ರಿಯ ಸತ್ಯವನ್ನು ವಿವರಿಸಲು ಇವಾವುವೂ ಯೋಗ್ಯವಲ್ಲ. ಅಂತೆಯೇ ಅತೀಂದ್ರಿಯಾವಸ್ಥೆಯ ಪಕ್ಷದಿಂದ ಹೇಳುವುದಾದರೆ ಎಲ್ಲಾ ವಸ್ತುಗಳೂ ಮಿಥ್ಯೆ ಎನ್ನಿಸುವುದು - ಧಾರ್ಮಿಕ ಪಂಥಗಳು, ಕೆಲಸಗಳು, ನಾನು ಮತ್ತು ನೀನು ಈ ವಿಶ್ವ-ಪ್ರತಿಯೊಂದೂ ಮಾಯೆ. ಆಗ ಕೇವಲ ನಾನು ಮಾತ್ರ ಸತ್ಯವೆಂಬುದರ ಅರಿವಾಗುವುದು. ನಾನೆ ಸರ್ವವ್ಯಾಪಕನಾದ ಆತ್ಮ. ನನ್ನ ಇರುವಿಕೆಗೆ ನಾನೇ ಪ್ರಮಾಣ. ನನ್ನ ಇರುವಿಕೆಯ ಸತ್ಯವನ್ನು ಸ್ಥಾಪಿಸಲು ಬೇರೊಂದು ಪ್ರತ್ಯೇಕ ಪ್ರಮಾಣವೇಕೆ ? ಧರ್ಮ ಶಾಸ್ತ್ರ ಗಳು ಹೇಳುವಂತೆ ಯಾವಾಗಲೂ ನಾನು ನಿತ್ಯ ಸತ್ಯವೆಂಬುದು ನನಗೆ ಗೊತ್ತಿದೆ. ನಾನು ಆ ಸ್ಥಿತಿಯನ್ನು ಕಣ್ಣಾರ ಕಂಡಿರುವೆ, ಅನುಭವಿಸಿರುವೆ. ನೀನೂ ಕೂಡ ಅದನ್ನು ನೋಡಬಹುದು, ಅನುಭವಿಸಬಹುದು. ಎಲ್ಲರಿಗೂ ಈ ಬ್ರಹ್ಮಸತ್ಯವನ್ನು ಬೋಧಿಸಬಹುದು. ಆಗ ಮಾತ್ರ ನಿನಗೆ ಶಾಂತಿ ದೊರಕುವುದು.

ಈ ಮಾತನ್ನು ಹೇಳುತ್ತಿರುವಾಗ ಸ್ವಾಮಿಗಳು ಗಾಢವಾದ ಯೋಚನೆಯಲ್ಲಿ ತನ್ಮಯರಾಗಿದ್ದರು. ಸ್ವಲ್ಪಕಾಲದ ಮೇಲೆ ಅವರು ಮುಂದುವರಿಸಿದರು: "ನಿನ್ನ ಸ್ವಂತ ಜೀವನದಲ್ಲೇ ಯಾವುದು ಎಲ್ಲಾ ತತ್ತ್ವಗಳನ್ನೂ ಒಳಗೊಂಡಿದೆಯೋ, ಎಲ್ಲಾ ಸತ್ಯಗಳ ತತ್ತ್ವಾಧಾರವೋ ಅಂತಹ ಬ್ರಹ್ಮಜ್ಞಾನವನ್ನು ಸಾಕ್ಷಾತ್ಕರಿಸಿಕೊ. ಅದನ್ನು ಜಗತ್ತಿಗೆ ಬೋಧಿಸು. ಇದು ನಿನಗೂ ಮತ್ತು ಇತರರೆಲ್ಲರಿಗೂ ಒಳ್ಳೆಯದು. ಇಂದು ನಿನಗೆ ಎಲ್ಲಾ ಸತ್ಯಗಳ ತಿರುಳನ್ನೂ ಹೇಳಿರುವೆ. ಇದಕ್ಕಿಂತ ಮಹತ್ವವಾದುದಾವುದೂ ಇಲ್ಲ.

ಶಿಷ್ಯ:—ಸ್ವಾಮಿಜಿ, ಈಗ ನೀವು ಜ್ಞಾನದ ವಿಚಾರ ಮಾತನಾಡು ತ್ತಿರುವಿರಿ. ಆದರೆ ಕೆಲವು ವೇಳೆ ಭಕ್ತಿಗೆ, ಕೆಲವು ವೇಳೆ ಕರ್ಮಕ್ಕೆ, ಮತ್ತೆ ಕೆಲವು ವೇಳೆ ಯೋಗಕ್ಕೂ ಹೆಚ್ಚು ಪ್ರಾಧಾನ್ಯತೆ ಕೊಟ್ಟು ಮಾತನಾಡು ವಿರಿ. ಇದರಿಂದ ನಮ್ಮ ಮನಸ್ಸು ಹೆಚ್ಚು ಗಲಿಬಿಲಿಯಾಗುವುದು.

ಸ್ವಾಮಿಜಿ:—ಸತ್ಯ ಹೀಗಿದೆ. ಬ್ರಹ್ಮಜ್ಞಾನವೇ ಚರಮಗುರಿ,

ಮಾನವನ ಧ್ಯಾನಾವಸ್ಥೆ. ಎಲ್ಲಾ ಕಾಲಗಳಲ್ಲಿಯೂ ಮಾನವನು ಬ್ರಹ್ಮ ನಲ್ಲಿಯೇ ಮುಳುಗಿರಲಾರ. ಅದರಿಂದ ಹೊರಗೆ ಬಂದಾಗ ಮಾಡಲು ಏನಾದರೂ ಇರಬೇಕು. ಅಂತಹ ಸಮಯದಲ್ಲಿ ಅವನು ಮಾಡುವ ಕೆಲಸ ಲೋಕಕಲ್ಯಾಣಕಾರಿಯಾಗಿರಬೇಕು. ಆದಕ್ಕೇ ನಾನು ನಿಮ್ಮನ್ನು ಜೀವಿಗಳನ್ನೆಲ್ಲಾ ಒಂದಾಗಿ ಭಾವಿಸಿ ಸೇವಿಸುವಂತೆ ಪ್ರೇರೇಪಿಸುತ್ತೇನೆ. ಆದರೆ ಮಗು! ಕರ್ಮದ ತೊಡಕು ಹೇಗಿದೆಯೆಂದರೆ ಎಂತಹ ದೊಡ್ಡ ಮಹಾತ್ಮರೂ ಕೂಡ ಅದರಲ್ಲಿ ಸಿಲುಕಿ ಅನುರಕ್ತರಾಗುವರು. ಆದ್ದರಿಂದ ಕರ್ಮವನ್ನು ಪ್ರತಿಫಲಾಪೇಕ್ಷೆಯಿಲ್ಲದೆ ಮಾಡಬೇಕು. ಇದೇ ಗೀತೆಯ ಉಪದೇಶ. ಆದರೆ ಬ್ರಹ್ಮಜ್ಞಾನದಲ್ಲಿ ಕರ್ಮಸಂಬಂಧದ ಸಂಪರ್ಕ ಲವಲೇಶವು ಇರುವುದಿಲ್ಲವೆಂಬುದನ್ನು ತಿಳಿ. ಸತ್ಕಾರ್ಯಗಳು ಹೆಚ್ಚೆಂದರೆ ಮನಸ್ಸನ್ನು ಪರಿಶುದ್ಧಗೊಳಿಸುವುವು. ಅದಕ್ಕೇ ಭಾಷ್ಯಕಾರ ಶಂಕರಾಚಾರ್ಯರು ಜ್ಞಾನ ಕರ್ಮಗಳ ಸಂಯೋಜನೆಯನ್ನು ಅಷ್ಟೊಂದು ತೀವ್ರವಾಗಿ ಖಂಡಿಸಿದ್ದಾರೆ. ಕೆಲವರು ನಿಷ್ಕಾಮ ಕರ್ಮದ ಮೂಲಕ ಬ್ರಹ್ಮಜ್ಞಾನ ಹೊಂದುವರು. ಇದೂ ಒಂದು ಮಾರ್ಗ ಮಾತ್ರ. ಆದರೆ ಅದರ ಗುರಿ ಬ್ರಹ್ಮಸಾಕ್ಷಾತ್ಕಾರ. ಆದ್ದರಿಂದ ಇದನ್ನು ಖಂಡಿತವಾಗಿ ತಿಳಿ– ಯುಕ್ತಾಯುಕ್ತ ವಿವೇಚನಾ ಜ್ಞಾನದ ಗುರಿಯೂ ಇತರ ಎಲ್ಲಾ ಬಗೆಯ ಸಾಧನೆಗಳ ಗುರಿಯೂ ಒಂದೇ ಬ್ರಹ್ಮಸಾಕ್ಷಾತ್ಕಾರ.

ಶಿಷ್ಯ:—ಸ್ವಾಮಿಜಿ, ನನಗೆ ದಯವಿಟ್ಟು ಭಕ್ತಿಯೋಗ, ರಾಜಯೋಗಗಳ ಉಪಯುಕ್ತತೆಯನ್ನು ತಿಳಿಸುವಿರಾ?

ಸ್ವಾಮಿಜಿ:—ಈ ಹಾದಿಯಲ್ಲಿ ಹೋರಾಡಿಯೂ ಕೆಲವರು ಬ್ರಹ್ಮಜ್ಞಾನ ಪಡೆಯುವರು. ಭಕ್ತಿಮಾರ್ಗದಲ್ಲಿ ಬಹಳ ನಿಧಾನವಾದ ಪ್ರಗತಿ. ಆದರೆ ಸಾಧನೆಗೆ ಸುಲಭ ಮಾರ್ಗ. ಯೋಗಮಾರ್ಗದಲ್ಲಿ ಬಹಳ ಎಡರುಗಳಿವೆ. ಮನಸ್ಸು ಸಹಜವಾಗಿ ಮಾನಸಿಕ ಶಕ್ತಿಗೆ ಮರುಳಾಗಿ ಅದರಿಂದ ನಿನ್ನ ಸ್ವಸ್ವಭಾವಕ್ಕೆ ದೂರನಾಗುವೆ. ಜ್ಞಾನಮಾರ್ಗ ಬೇಗ ಫಲಪ್ರದವಾಗುವುದು. ಇದು ಇತರ ಪಂಥಗಳ ತತ್ತ್ವಾಧಾರ. ಆದ್ದರಿಂದ ಇದು ಸರ್ವಕಾಲಗಳಲ್ಲಿಯೂ ಸರ್ವದೇಶಗಳಲ್ಲಿಯೂ ಸಮಾನವಾಗಿ ಪ್ರಶಂಸಿಸಲ್ಪಡುವುದು. ಆದರೆ ವಿಚಾರದ ಹಾದಿಯಲ್ಲಿ ಕೂಡ ಮನಸ್ಸು ಒಣ ತರ್ಕದ ಕೊನೆಯಿಲ್ಲದ ಬಲೆಯಲ್ಲಿ ಸಿಲುಕಬಹುದು. ಅದರ ಜೊತೆಯಲ್ಲೇ ಧ್ಯಾನವನ್ನು ಅಭ್ಯಾಸ ಮಾಡಬೇಕು. ಯುಕ್ತಾಯುಕ್ತ ವಿಮರ್ಶೆ, ಧ್ಯಾನ

ಇವುಗಳಿಂದ ಬ್ರಹ್ಮನನ್ನು ಸೇರಬೇಕು. ಈ ಬಗೆಯ ಸಾಧನೆಯಿಂದ ಖಂಡಿತವಾಗಿ ಆತನನ್ನು ಹೊಂದಬಹುದು. ನನ್ನ ಅಭಿಪ್ರಾಯದಲ್ಲಿ ಇದೇ ಶೀಘ್ರ ಜಯ ದೊರಕಲು ಸುಲಭದ ಹಾದಿ.

ಶಿಷ್ಯ:— ದಯವಿಟ್ಟು ಭಗವಂತನ ಅವತಾರದ ವಿಷಯವಾಗಿ ಏನನ್ನಾದರೂ ಹೇಳಿ.

ಸ್ವಾಮಿಜಿ:—ಒಂದೇ ದಿನದಲ್ಲಿ ಸರ್ವಪಾರಂಗತನಾಗಬೇಕೆಂದು ತೋರುವುದು!

ಶಿಷ್ಯ:— ಒಂದೇ ದಿನದಲ್ಲಿ ಮನಸ್ಸಿನ ಸಂಶಯ ಕಷ್ಟ ಪರಿಹಾರ ವಾಗುವಹಾಗಿದ್ದರೆ, ನಿಮಗೆ ಮತ್ತೆ ಮತ್ತೆ ತೊಂದರೆ ಕೊಡಬೇಕಾದ ಆವಶ್ಯಕತೆಯೇ ಇರುವುದಿಲ್ಲ.

ಸ್ವಾಮಿಜಿ:— ಯಾರ ಕೃಪೆಯಿಂದ ಧರ್ಮಗ್ರಂಥಗಳಲ್ಲಿ ಅಷ್ಟೊಂದು ಹೊಗಳುವ ಆತ್ಮ ಪರಿಜ್ಞಾನವನ್ನು ಒಂದೇ ಒಂದು ನಿಮಿಷದಲ್ಲಿ ಸಾಧಿಸಬಹುದಾಗಿತ್ತೊ ಅಂತಹ ಸಚಲ ತೀರ್ಥಗಳೇ ಅವತಾರ ಪುರುಷರು. ಹುಟ್ಟಿದಾಗಲೇ ಅವರು ಬ್ರಹ್ಮಜ್ಞಾನಿಗಳು. ಬ್ರಹ್ಮನಿಗೂ ಬ್ರಹ್ಮಜ್ಞಾನಿಗೂ ಯಾವೊಂದು ವ್ಯತ್ಯಾಸವೂ ಇಲ್ಲ. "ಯಾರು ಬ್ರಹ್ಮ ನನ್ನು ಅರಿತಿದ್ದಾನೋ ಅವನು ಬ್ರಹ್ಮನೇ ಆಗಿದ್ದಾನೆ" ಮನಸ್ಸಿನಿಂದ ಆತ್ಮನನ್ನು ಗ್ರಹಿಸಲಾಗುವುದಿಲ್ಲ. ಏಕೆಂದರೆ ಆತ್ಮವೆ ಜ್ಞಾನವಸ್ತು. ಇದನ್ನು ನಾನು ಮೊದಲೇ ಹೇಳಿದ್ದೇನೆ. ಆದ್ದರಿಂದ ಮಾನವನ ಕಾರ್ಯ ಕಾರಣ ಸಂಬಂಧಜ್ಞಾನ ಆತ್ಮಪ್ರತಿಷ್ಠಿತರಾದ ಅವತಾರದವರೆಗೆ ಮಾತ್ರ ಹೋಗಲು ಸಾಧ್ಯ. ಮಾನವನ ಮನಸ್ಸು ಗ್ರಹಿಸಬಲ್ಲ ಶ್ರೇಷ್ಠ ಭಗ ವದ್ಭಾವನೆಯೆ ಅವತಾರ. ಅದರಿಂದಾಚೆ ಕಾರ್ಯಕಾರಣ ಸಂಬಂಧ ಜ್ಞಾನ ವಿಲ್ಲ. ಅಂತಹ ಬ್ರಹ್ಮಜ್ಞಾನಿಗಳು ಈ ಪ್ರಪಂಚದಲ್ಲಿ ಅತಿ ವಿರಳ. ಅಂಥಹ ವರನ್ನು ಅರ್ಥಮಾಡಿಕೊಳ್ಳುವವರು ಕೇವಲ ಕೆಲವು ಮಂದಿ ಮಾತ್ರ. ಅವರೇ ಧರ್ಮ ಗ್ರಂಥಗಳಲ್ಲಿರುವ ಸತ್ಯಕ್ಕೆ ಪ್ರಮಾಣ. ವಿಶ್ವಸಾಗರದಲ್ಲಿ ಇರುವ ಕೆಲವು ಜ್ಯೋತಿರ್ಮಯಸ್ತಂಭಗಳು. ಇಂತಹ ಅವತಾರ ಪುರುಷರ ಸಂಗ, ಅವರ ಕೃಪೆಯಿಂದ ನಿಮಿಷ ಮಾತ್ರದಲ್ಲಿ ಮನಸ್ಸಿನ ಅಂಧಕಾರ ತೊಲಗಿ ಹೃದಯದಲ್ಲಿ ಸಾಕ್ಷಾತ್ಕಾರದ ಮಿಂಚು ಹೊಳೆಯುವುದು. ಏಕೆ ಮತ್ತು ಯಾವ ವಿಧಾನದಿಂದ ಅದು ಬರುತ್ತದೆಂಬುದನ್ನು ನಿಶ್ಚಿತವಾಗಿ ಹೇಳಲಾಗುವುದಿಲ್ಲ. ಆದರೆ ಅದು ಬಂದೇ ಬರುತ್ತದೆ. ಅದು

ಹಾಗೆ ಸಂಭವಿಸಿದ್ದನ್ನು ನಾನು ನೋಡಿರುವೆ. ಶ್ರೀಕೃಷ್ಣ ಆತ್ಮನಲ್ಲಿ ನೆಲೆಸಿ ಗೀತೆಯನ್ನು ಹೇಳಿದನು. ಗೀತೆಯ ವಚನಗಳಲ್ಲಿ ಎಲ್ಲೆಲ್ಲಿ "ನಾನು" ಎಂಬುದು ಬರುತ್ತದೆಯೋ ಅಲ್ಲೆಲ್ಲ ಯಥಾವಿಧಿಯಾಗಿ ಆತ್ಮನನ್ನು ಉದ್ದೇಶಿಸಿ ಹೇಳುತ್ತದೆ. "ಕೇವಲ ನನ್ನನ್ನು ಶರಣುಹೊಂದಿ" ಎಂದರೆ "ಆತ್ಮನಲ್ಲಿ ಲೀನವಾಗಿ" ಎಂದರ್ಥ. ಈ ಆತ್ಮ ಪರಿಜ್ಞಾನವೇ ಗೀತೆಯ ಚರಮಗುರಿ. ಯೋಗದ ವಿಚಾರಗಳೆಲ್ಲಾ ಈ ಆತ್ಮಸಾಕ್ಷಾತ್ಕಾರಕ್ಕೆ ಪ್ರಾಸಂಗಿಕ, ಅಷ್ಟೆ. ಯಾರಿಗೆ ಈ ಆತ್ಮಜ್ಞಾನವಿಲ್ಲವೋ ಅವರೆಲ್ಲಾ ಆತ್ಮಘಾತಕರು. "ಮಾಯೆಯನ್ನಪ್ಪಿಕೊಂಡು ತಮ್ಮನ್ನೇ ನಾಶಪಡಿಸಿಕೊಳ್ಳುತ್ತಿದ್ದಾರೆ." – ವಿಷಯ ಸುಖದ ಕುಣಿಕೆಯಲ್ಲಿ ಅವರು ತಮ್ಮ ಪ್ರಾಣಹಾನಿಮಾಡಿಕೊಳ್ಳುವರು. ನೀವೂ ಮನುಷ್ಯರು. ಎರಡು ದಿನ ಬಾಳುವ ಈ ಕ್ಷುದ್ರ ಇಂದ್ರಿಯ ಸುಖದಾಸೆಯನ್ನು ನಿರ್ಲಕ್ಷಿಸಲಾರಿರಾ? ಕೇವಲ ಅಜ್ಞಾನದಲ್ಲಿ ಹುಟ್ಟಿ ಸಾಯುವವರ ಗುಂಪನ್ನೇ ನೀವೂ ಹೆಚ್ಚಿಸುವಿರಾ? ಯಾವುದು ಶ್ರೇಯಸ್ಕರವೊ ಅದನ್ನು ಸ್ವೀಕರಿಸಿ. ಯಾವುದು ಪ್ರೇಯಸ್ಸೋ ಅದನ್ನು ವಿಸರ್ಜಿಸಿ. ಈ ಆತ್ಮವಿಚಾರವನ್ನು ಎಲ್ಲರಿಗೂ, ಅತ್ಯಂತ ಕೀಳು ಜಾತಿಯವರಿಗೂ ಬೋಧಿಸಿ. ಈ ಮಾತನ್ನೇ ಮುಂದುವರಿಸುತ್ತಿದ್ದರೆ ನಿಮ್ಮ ಜ್ಞಾನ, ಬುದ್ಧಿ, ಶಕ್ತಿ ತಿಳಿಯಾಗುವುದು. ಯಾವಾಗಲೂ ಈ ಮಹಾ ಮಂತ್ರವನ್ನು ಪಠಿಸುತ್ತಿರಿ — "ನೀನು ಅದೇ ಆಗಿರುವೆ" "ನಾನು ಅದೇ ಆಗಿದ್ದೇನೆ." "ಇವೆಲ್ಲವೂ ಬ್ರಹ್ಮ" — ಕೇಸರಿಸಮನಾದ ಕೆಚ್ಚು ನಿಮ್ಮಲ್ಲಿರಲಿ. ಅಂಜಿಕೆಗೆ ಕಾರಣವೇನಿದೆ? ಅಂಜಿಕೆಯೇ ಸಾವು — ಅಂಜಿಕೆಯೇ ಮಹಾ ಪಾಪ! ಮಾನವ ಪ್ರತಿನಿಧಿಯಂತೆ ಇರುವ ಅರ್ಜುನ ಭಯದಿಂದ ಆವೃತನಾದ. ಅದಕ್ಕೇ ಆತ್ಮಪ್ರತಿಷ್ಠಾಪಿತನಾದ ಭಗವಾನ್ ಶ್ರೀ ಕೃಷ್ಣನು ಗೀತೆಯ ಬೋಧೆಗಳನ್ನು ಉಪದೇಶಿಸಿದನು. ಆದರೂ ಅವನ ಅಂಜಿಕೆ ದೂರ ಹೋಗಲಿಲ್ಲ. ನಂತರ ಅರ್ಜುನನು ಭಗವಂತನ ವಿಶ್ವರೂಪ ದರ್ಶನಮಾಡಿದಾಗ, ಆತ್ಮಪ್ರತಿಷ್ಠಾಪಿತನಾದಾಗ ಕರ್ಮ ಬಂಧನಗಳೆಲ್ಲಾ ಜ್ಞಾನಾಗ್ನಿಯಿಂದ ಭಸ್ಮೀಭೂತವಾಗಲು ಅವನು ಯುದ್ಧ ಮಾಡಿದನು.

ಶಿಷ್ಯ :—ಸಾಕ್ಷಾತ್ಕಾರವಾದ ಮೇಲೂ ಮನುಷ್ಯನು ಕೆಲಸ ಮಾಡಲು ಸಾಧ್ಯವೆ?

ಸ್ವಾಮಿಜಿ:— ಸಾಕ್ಷಾತ್ಕಾರವಾದ ಮೇಲೆ ನಾವು ಸಾಧಾರಣವಾಗಿ

ಕರೆಯುವ ಕರ್ಮ ಇರುವುದಿಲ್ಲ. ಅದರ ಸ್ವಭಾವ ವ್ಯತ್ಯಾಸವಾಗುತ್ತದೆ. ಜ್ಞಾನಿಮಾಡುವ ಕರ್ಮಗಳೆಲ್ಲಾ ಜಗದ ಕಲ್ಯಾಣಕ್ಕೆ; ಬ್ರಹ್ಮಸಾಕ್ಷಾತ್ಕಾರವಾದ ಮನುಷ್ಯನ ಮಾತು ಕೆಲಸಗಳೆಲ್ಲ ಸರ್ವರ ಹಿತಕ್ಕಾಗಿ. ನಾವು ಶ್ರೀ ರಾಮಕೃಷ್ಣರಲ್ಲಿ ಇದನ್ನು ನೋಡುತ್ತಿದ್ದೆವು – ಅವರು ಶರೀರದಲ್ಲಿದ್ದರು – ಅದಕ್ಕೆ ಸೇರಿರಲಿಲ್ಲ. ಅಂತಹ ಮಹಾತ್ಮರ ಕೆಲಸದ ಉದ್ದೇಶವಾಗಿ ಇಷ್ಟನ್ನು ಮಾತ್ರ ಹೇಳಬಹುದು: "ಅವರು ಮಾನವರಂತೆ ಮಾಡುವ ಕೆಲಸಗಳೆಲ್ಲ ಕೇವಲ ಲೀಲಾಮಾತ್ರ."

---

## ಅಧ್ಯಾಯ ೩೩

**ಸ್ಥಳ:—** ಬೇಲೂರು ಮಠ (ಬಾಡಿಗೆ ಕಟ್ಟಡ). ವರ್ಷ.—ಕ್ರಿ. ಶ. ೧೯೦೧.

ಇಂದು ಶಿಷ್ಯ ಜ್ಯೂಬಿಲಿ ಕಲಾಶಾಲೆಯ ಸ್ಥಾಪಕ ಮತ್ತು ಅಧ್ಯಾಪಕರಾದ ರನದದಾಸಗುಪ್ತರೊಡನೆ ಮಠಕ್ಕೆ ಬಂದಿದ್ದ. ರನದ ಬಾಬುಗಳು ಪ್ರವೀಣ ಕಲಾವಿದರು, ಘನ ವಿದ್ವಾಂಸರು, ಸ್ವಾಮಿಗಳನ್ನು ಮೆಚ್ಚಿದವರು. ಕುಶಲ ಪ್ರಶ್ನೆಯಾದ ನಂತರ ಸ್ವಾಮಿಗಳು ರನದ ಬಾಬುಗಳೊಡನೆ ಕಲೆಯ ಮೇಲೆ ಅನೇಕ ಸಂಗತಿಗಳನ್ನು ಮಾತನಾಡಲಾರಂಭಿಸಿದರು.

ಸ್ವಾಮಿಜಿ:—ಪ್ರಪಂಚದಲ್ಲಿರುವ ಎಲ್ಲಾ ನಾಗರಿಕ ದೇಶಗಳ ಕಲಾ ಸೌಂದರ್ಯಗಳನ್ನು ನೋಡುವ ಸುಯೋಗ ನನಗೆ ದೊರಕಿತು. ಆದರೆ ನಮ್ಮ ದೇಶದಲ್ಲಿ ಬೌದ್ಧರ ಕಾಲದಲ್ಲಿ ಕಲೆಯ ವಿಕಾಸವಾದಷ್ಟು ಮತ್ತೆಲ್ಲಿಯೂ ಕಾಣಬರಲಿಲ್ಲ. ಮೊಗಲಾಯರ ಕಾಲದಲ್ಲಿಯೂ ಕಲೆಯ ಬೆಳವಣಿಗೆ ತಕ್ಕಷ್ಟು ಇತ್ತು. ತಾಜ್, ಜುಮ್ಮಾ ಮಸೀದಿ ಮುಂತಾದುವು ಆ ಸಂಸ್ಕೃತಿಯ ಚಿರಸ್ಮರಣೀಯ ಸ್ಮಾರಕಗಳು.

ಮಾನವನು ಯಾವದನ್ನೇ ನಿರ್ಮಿಸಲಿ ಆ ಕಲೆಯ ಮೂಲ ಯಾವುದೋ ಒಂದು ಭಾವವನ್ನು ಸ್ಪಷ್ಟಪಡಿಸುವುದಾಗಿದೆ. ಎಲ್ಲಿ ಆ ಉದ್ದೇಶದ ಅಭಾವವಿದೆಯೋ ಅಲ್ಲಿ ಎಷ್ಟೇ ಬಣ್ಣ ಮುಂತಾದುವುಗಳ ಪ್ರದರ್ಶನವಿರಲಿ ಅದನ್ನು ಸತ್ಯವಾದ ಕಲೆ ಎನ್ನಲಾಗುವುದಿಲ್ಲ. ನಮ್ಮ ನಿತ್ಯ ಜೀವನದಲ್ಲಿ ಉಪಯೋಗಿಸುವ ನೀರಿನ ಚೊಂಬು, ತಟ್ಟೆ, ಬಟ್ಟಲು

ಗಳೂ ಕೂಡ ಒಂದು ಭಾವದ ಪ್ರತಿ ಬಿಂಬವಾಗಿರಬೇಕು. ಪ್ಯಾರಿಸ್ಸಿನ ವಸ್ತು ಸಂಗ್ರಹಶಾಲೆಯಲ್ಲಿ ಅಮೃತಶಿಲೆಯಲ್ಲಿ ಕೆತ್ತಿದ ಒಂದು ಸುಂದರ ವಿಗ್ರಹವನ್ನು ನೋಡಿದೆ. ಆ ವಿಗ್ರಹದ ವಿವರಣೆಗೆ ಕೆಳಗಡೆ ಈ ಮಾತು ಗಳು ಕೆತ್ತಲ್ಪಟ್ಟಿದ್ದುವು "ಕಲೆ ಪ್ರಕೃತಿಯನ್ನು ಅನಾವರಣ ಮಾಡು ವುದು." ಅಂದರೆ ಕಲೆ ಹೇಗೆ ಪ್ರಕೃತಿಯ ಆಂತರಿಕ ಸೌದರ್ಯವನ್ನು ಮೇಲೆ ಮುಸುಕಿರುವ ತೆರೆಯನ್ನು ತನ್ನ ಕೈಗಳಿಂದ ದೂರ ಸರಿಸಿ ಕಾಣು ವುದು ಎಂದು. ಆ ಕೆಲಸ ಯಾವ ಭಾವನೆಯನ್ನು ವ್ಯಕ್ತಪಡಿಸುತ್ತಿ ತ್ತೆಂದರೆ ಪ್ರಕೃತಿಯ ಸೌಂದರ್ಯದ ಮೇಲೆ ಮುಸುಕಿರುವ ತೆರೆಯನ್ನಿನ್ನೂ ಪೂರ್ತಿ ಎಳೆದಿಲ್ಲ. ಆದರೆ ಕಲಾವಿದ ತಾನು ಎಷ್ಟು ಕೊಂಚ ವಿಕಾಸ ವಾಗಿದೆಯೋ ಅಷ್ಟರಿಂದಲೇ ಮುಗ್ಧನಾಗಿದ್ದಾನೆ. ಈ ಮನೋಹರ ಭಾವನೆ ಯನ್ನು ವ್ಯಕ್ತಪಡಿಸಲು ಹೊರಟಿದ್ದ ಆ ಶಿಲ್ಪಿಯನ್ನು ಯಾರೂ ಹೊಗಳ ದಿರಲಾರರು. ನೀನೂ ಹಾಗೆಯೇ ಏನಾದರೂ ಮಂತ್ರತಂತ್ರ ಕಲ್ಪನೆ ಯಿಂದ ಮಾಡಬೇಕು.

ರನದಬಾಬು :—ನನಗೂ ಹಾಗೆಯೇ ಸ್ವತಂತ್ರವಾಗಿ ವಿರಾಮವಾಗಿ ರುವಾಗ ರಚಿಸಬೇಕೆಂದು ಆಸೆಯಿದೆ. ಆದರೆ ಅದಕ್ಕೆ ಈ ದೇಶದಲ್ಲಿ ಸ್ವಲ್ಪವೂ ಪ್ರೋತ್ಸಾಹವೇ ಇಲ್ಲ. ಇದು ಬಡದೇಶ–ಪ್ರಶಂಸೆಯೇ ವಿರಳ.

ಸ್ವಾಮಿಜಿ :—ನೀನು ಹೃದಯವನ್ನೆಲ್ಲಾ ಧಾರೆ ಎರೆದು ಒಂದು ಸ್ವತಂತ್ರ ಕೃತಿಯನ್ನು ರಚಿಸಬಲ್ಲೆಯಾದರೆ, ಕಲೆಯ ಒಂದು ಭಾಗಕ್ಕೆ ಪೂರ್ತಿ ಕಳೆ ಕೊಡಬಲ್ಲೆಯಾದರೆ, ಒಂದಲ್ಲ ಒಂದು ದಿನ ಅದು ಜನರ ಮೆಚ್ಚಿಗೆ ಪಡೆಯುವುದು. ಈ ಜಗತ್ತಿನಲ್ಲಿ ಸತ್ಯವಾದ ಯಾವುದೇ ಆಗಲಿ ಪ್ರಕಾಶಕ್ಕೆ ಬಂದೇ ತೀರುವುದು. ಎಷ್ಟೋ ಮಂದಿ ಕಲಾವಿದರ ಕೃತಿಗಳು ಅವರು ಸತ್ತ ಸಾವಿರಾರು ವರ್ಷಗಳಾದ ಮೇಲೆ ಬೆಳಕಿಗೆ ಬಂದುವೆಂದು ಕೇಳಿದ್ದೇವೆ.

ರನದಬಾಬು :—ಅದು ನಿಜ. ಆದರೆ ನಾವು ನಿಷ್ಪ್ರಯೋಜಕರಾಗಿ ದ್ದೇವೆ. ನಿಷ್ಪ್ರಯೋಜನವಾಗಿ ಅಷ್ಟೊಂದು ಶಕ್ತಿ ವ್ಯಯ ಮಾಡಲು ಧೈರ್ಯ ವಿಲ್ಲದವರಾಗಿದ್ದೇವೆ. ಐದು ವರುಷ ಪ್ರಯತ್ನದಿಂದ ನಾನು ಸ್ವಲ್ಪ ಜಯ ಶೀಲನಾಗಿರುವೆನು. ನನ್ನ ಪರಿಶ್ರಮ ಸಾರ್ಥಕವಾಗುವಂತೆ ಹರಸಿ.

ಸ್ವಾಮಿಜಿ :—ನೀನು ಉತ್ಸಾಹಪೂರಿತವಾಗಿ ಕೆಲಸಮಾಡಿದರೆ ಖಂಡಿತ ಜಯ ಹೊಂದುವೆ. ಯಾರು ತ್ರಿಕರಣಪೂರ್ವಕ ಕೆಲಸಮಾಡು

ವರೊ ಅವರು ಜಯವೊಂದನ್ನೇ ಅಲ್ಲ, ಅದರಲ್ಲಿರುವ ಏಕಾಗ್ರತೆಯಿಂದ ಪರಮಾತ್ಮನನ್ನು ಕೂಡ ಸಾಕ್ಷಾತ್ಕರಿಸಿಕೊಳ್ಳಬಲ್ಲರು. ಯಾರು ಹುತ್ಪೂರ್ವಕವಾಗಿ ತಮ್ಮ ಕೆಲಸಮಾಡುವರೊ ಅವರಿಗೆ ದೇವರು ಸಹಾಯ ಮಾಡುವನು.

ಶಿಷ್ಯ:—ಹಿಂದೂದೇಶದ ಮತ್ತು ಪಾಶ್ಚಾತ್ಯ ದೇಶಗಳ ಕಲೆಗಳಲ್ಲಿ ನೀವು ಯಾವ ವ್ಯತ್ಯಾಸ ನೋಡಿದಿರಿ?

ಸ್ವಾಮಿಜಿ:—ಎಲ್ಲಾ ಕಡೆಯೂ ಅದು ಸುಮಾರಾಗಿ ಒಂದೇ ತರಹ ಇದೆ. ಸ್ವಕಲ್ಪಿತ ಕೃತಿಗಳು ಬಹು ವಿರಳ. ಆ ದೇಶಗಳಲ್ಲಿ ಬಗೆ ಬಗೆಯ ವಸ್ತುಗಳ ಛಾಯಾ ಚಿತ್ರಗಳ ಪ್ರತಿ ಕೃತಿಯನ್ನು ಮುಂದಿಟ್ಟುಕೊಂಡು ಚಿತ್ರಗಳನ್ನು ಬರೆಯುವರು. ಯಾವಾಗ ಯಂತ್ರದ ಸಹಾಯವನ್ನು ತೆಗೆದುಕೊಳ್ಳುವರೋ ಆಗ ಕಲ್ಪನಾಶಕ್ತಿಯೇ ಮಾಯವಾಗುತ್ತದೆ. ನಮ್ಮ ಭಾವ ವ್ಯಕ್ತವಾಗಲು ಅವಕಾಶವೇ ಇರುವುದಿಲ್ಲ. ಪ್ರಾಚೀನಕಾಲದ ಕಲಾ ವಿದರು ಸ್ವತಂತ್ರ ಭಾವನೆಗಳನ್ನು ಚಿತ್ರದ ಮೂಲಕ ವ್ಯಕ್ತಪಡಿಸುತ್ತಿದ್ದರು. ಈಗ ವರ್ಣಚಿತ್ರ ಛಾಯಾ ಚಿತ್ರಗಳಂತೆಯೆ ಇದ್ದು, ಸ್ವಂತ ಕಲ್ಪನಾಶಕ್ತಿ ಅದಕ್ಕೆ ಪ್ರಯತ್ನ ಎಲ್ಲಾ ಕಡಿಮೆಯಾಗುತ್ತದೆ. ಆದರೆ ಪ್ರತಿಯೊಂದು ಜನಾಂಗವೂ ಕೇವಲ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಅದರ ನಡೆ, ನುಡಿ, ಜೀವನದ ರೀತಿ ಈ ತೈಲ ಚಿತ್ರ ಮತ್ತು ಶಿಲ್ಪಕಲೆಗಳಲ್ಲಿ ತನ್ನದೇ ಆದೊಂದು ವಿಶೇಷ ವೈಶಿಷ್ಟ್ಯದೊಂದಿಗೆ ವ್ಯಕ್ತಪಡುತ್ತದೆ. ಉದಾಹರಣೆಗೆ ಪಾಶ್ಚಾತ್ಯದೇಶದಲ್ಲಿ ಸಂಗೀತ ಮತ್ತು ನಾಟ್ಯಕಲೆಯ ಭಾವಗಳು ಬಹು ತೀಕ್ಷ್ಣವಾಗಿರುತ್ತವೆ. ನಾಟ್ಯದಲ್ಲಿ ಅವರ ಅಂಗಾಂಗಗಳು ಮುರಿಯುವಂತೆ ಇರುತ್ತವೆ. ವಾದ್ಯ ಸಂಗೀತದಲ್ಲಿ ಅದರ ಧ್ವನಿ ಭರ್ಜಿಯಂತೆ ನಮ್ಮ ಕಿವಿಯನ್ನಿರಿಯುತ್ತವೆ. ಹಾಗೇ ಹಾಡುಗಾರಿಕೆಯೂ ಕೂಡ. ಅದಕ್ಕೆ ವಿರುದ್ಧವಾಗಿ ನಮ್ಮ ದೇಶದಲ್ಲಿ ನಾಟ್ಯಕಲೆ ಅಲೆ ಅಲೆಯಾಗಿ ತೇಲುತ್ತಾ ಹೊರಳಿ ಬಂದಂತೆ ಇರುವುದು. ಹಾಗೆಯೆ ಸಂಗೀತದ ವಿಧ ವಿಧದ ಉಚ್ಚ ಸ್ವರಗಳಲ್ಲಿ ಕೂಡ, ಅಂತೆಯೇ ವಾದ್ಯ ಸಂಗೀತದಲ್ಲಿಯೂ ಇರುತ್ತದೆ. ಆದ್ದರಿಂದ ಕಲೆಯ ವಿಚಾರದಲ್ಲಿಯೂ ವಿವಿಧ ಜನರಲ್ಲಿ ವಿವಿಧ ಭಾವಗಳು ಸ್ಫುಟಗೊಳ್ಳು ವುವು. ಯಾರು ತೀವ್ರ ದೇಹಾತ್ಮವಾದಿಗಳೋ ಅವರು ಪ್ರಕೃತಿಯನ್ನು ಗುರಿಯಾಗಿಟ್ಟುಕೊಂಡು ಅದಕ್ಕೆ ಸಂಬಂಧಪಟ್ಟಂತೆ ಕಲೆಯ ಭಾವವನ್ನು

ವ್ಯಕ್ತಪಡಿಸುವರು. ಯಾರು ಪ್ರಕೃತಿಯನ್ನು ಮೀರಿದ ಅತೀಂದ್ರಿಯ ಸತ್ಯವನ್ನು ತಮ್ಮ ಗುರಿಯಾಗಿಟ್ಟುಕೊಂಡಿರುವರೋ ಅವರು ಪ್ರಕೃತಿ ಶಕ್ತಿಯ ಮೂಲಕ ಕಲೆಯಲ್ಲಿ ತಮ್ಮ ಭಾವ ವ್ಯಕ್ತಪಡಿಸುವರು. ಮೊದಲಿನ ವರ್ಗದ ಜನರಿಗೆ ಪ್ರಕೃತಿಯೇ ಕಲೆಯ ಮೂಲಾಧಾರ. ಎರಡನೆಯ ವರ್ಗದವರಿಗೆ ಭಾವನೆಯೆ ಕಲೆಯ ಬೆಳವಣಿಗೆಗೆ ಮುಖ್ಯ ಉದ್ದೇಶ. ಆದ್ದರಿಂದ ಕಲೆಯಲ್ಲಿ ಎರಡೂ ತಮ್ಮದೇ ಆದ ಹಾದಿಯಲ್ಲಿ ಮುಂದುವರಿದಿವೆ. ಪಾಶ್ಚಾತ್ಯರ ಕೆಲವು ತೈಲಚಿತ್ರಗಳನ್ನು ನೋಡಿದರೆ, ಅವು ಸಂಪೂರ್ಣ ಪ್ರಕೃತಿಯ ವಸ್ತುಗಳೆಂದು ಭ್ರಾಂತಿ ಪಡುವಂತಾಗುವುದು. ಈ ದೇಶದಲ್ಲಿಯೂ ನಮ್ಮ ಪೂರ್ವಿಕರು ಶಿಲ್ಪಕಲೆಯಲ್ಲಿ ಉಚ್ಚ ಶಿಖರವನ್ನೇರಿದ್ದರು. ಆಗಿನ ಕಾಲದ ಯಾವುದಾದರೊಂದು ವಿಗ್ರಹವನ್ನು ನೋಡಿದರೆ ಅದು ನಮ್ಮನ್ನು ಈ ಭೌತಿಕ ಪ್ರಪಂಚವನ್ನು ಮರೆಯುವಂತೆ ಮಾಡಿ ಒಂದು ಹೊಸ ಆದರ್ಶ ಪ್ರಪಂಚಕ್ಕೊಯ್ಯುವುದು. ಈಗ ಪಶ್ಚಿಮ ದೇಶಗಳಲ್ಲಿ ಹಿಂದಿನ ಕಾಲದ ತೈಲ ಚಿತ್ರಗಳನ್ನು ಚಿತ್ರಿಸಲಾಗುವುದಿಲ್ಲ. ಅದರಂತೆ ಈ ದೇಶದಲ್ಲಿಯೂ ತಮ್ಮದೇ ಆದ ಸ್ವತಂತ್ರ ಭಾವಗಳನ್ನು ವ್ಯಕ್ತಪಡಿಸುವುದೂ ಕಂಡುಬರುವುದಿಲ್ಲ. ಉದಾಹರಣೆಗೆ ನಿಮ್ಮ ಕಲಾಶಾಲೆಯ ತೈಲ ಚಿತ್ರಗಳು ಭಾವಶೂನ್ಯ. ಅದಕ್ಕೆ ಬದಲು ನೀವು ಹಿಂದೂಗಳು ಧ್ಯಾನಿಸುವ ನಿತ್ಯ ಜೀವನದ ವಸ್ತುಗಳನ್ನು ಅವಕ್ಕೆ ಪೂರ್ವಿಕರ ಆದರ್ಶವನ್ನೆರೆದು ಚಿತ್ರಿಸಲು ಪ್ರಯತ್ನಪಡಿ.

ರನದಬಾಬು :—ನಿಮ್ಮ ಮಾತುಗಳಿಂದ ನನಗೆ ಬಹಳ ಉತ್ತೇಜನ ದೊರಕಿದಂತಾಗಿದೆ. ನಿಮ್ಮ ಸಲಹೆಯಂತೆ ನಡೆಯಲು ಪ್ರಯತ್ನಪಡುತ್ತೇನೆ.

ಸ್ವಾಮಿಜಿ :—ಉದಾಹರಣೆಗೆ ಕಾಳಿಕಾಮಾತೆಯ ಮೂರ್ತಿಯನ್ನೇ ತೆಗೆದುಕೊಳ್ಳಿ. ಅದರಲ್ಲಿ ಆನಂದ ಹಾಗೂ ಭಯಂಕರ ಭಾವಗಳ ಮಿಲನವಿದೆ. ಆದರೆ ಯಾವ ತೈಲ ಚಿತ್ರದಲ್ಲೂ ಈ ಭಾವಗಳ ಸ್ಪಷ್ಟ ಪ್ರದರ್ಶನವಿಲ್ಲ. ಅದೊಂದೆ ಅಲ್ಲ, ಯಾವ ಒಂದು ಭಾವವನ್ನೂ ಸರಿಯಾಗಿ ನಿರೂಪಿಸುವುದಿಲ್ಲ. ನಾನು ನನ್ನ "ಕಾಳಿಮಾತೆ" ಆಂಗ್ಲ ಪದ್ಯದಲ್ಲಿ ಕಾಳಿಮಾತೆಯ ಕೆಲವು ಉಗ್ರಭಾವವನ್ನು ಕೊಡಲು ಯತ್ನಿಸಿರುವೆ. ನೀವು ಆ ಭಾವನೆಗಳನ್ನು ಒಂದು ಚಿತ್ರದಲ್ಲಿ ವ್ಯಕ್ತಪಡಿಸಬಲ್ಲಿರಾ?

ರನದಬಾಬು :—ದಯವಿಟ್ಟು ನನಗೆ ಅದನ್ನು ತಿಳಿಸಿ.

ಸ್ವಾಮಿಗಳು ಪುಸ್ತಕ ಸಂಗ್ರಹಾಲಯದಿಂದ ಆ ಪದ್ಯವನ್ನು ತಂದು ರನದಬಾಬುಗಳ ಮನಸ್ಸಿಗೆ ನಾಟುವಂತೆ ಓದತೊಡಗಿದರು. ರನದ ಬಾಬು ಮೌನವಾಗಿ ಅದನ್ನು ಕೇಳಿದರು. ಸ್ವಲ್ಪ ಕಾಲದನಂತರ ಆ ರೂಪವನ್ನು ತಮ್ಮ ಮಾನಸ ಚಕ್ಷುಗಳಿಂದ ಪ್ರತ್ಯಕ್ಷಿಸಿಕೊಂಡರೋ ಎಂಬಂತೆ ಅವರು ಸ್ವಾಮಿಗಳ ಕಡೆ ಭಯಚಕಿತ ಕಣ್ಣುಗಳಿಂದ ನೋಡಿದರು.

ಸ್ವಾಮಿಜಿ:—ನೀವೀ ಭಾವವನ್ನು ಚಿತ್ರದಲ್ಲಿ ವ್ಯಕ್ತಪಡಿಸಲು ಸಾಧ್ಯವೆ?

ರನದಬಾಬು:—ಆಗಲಿ, ನಾನು ಪ್ರಯತ್ನಿಸುತ್ತೇನೆ. ಆ ಭಾವ ಕೇವಲ ಕಲ್ಪಿಸಿಕೊಂಡ ಮಾತ್ರದಿಂದಲೇ ತಲೆ ಕೆಟ್ಟುಹೋಗುವುದು ಅನ್ನಿಸುತ್ತದೆ.

ಸ್ವಾಮಿಜಿ:—ಚಿತ್ರ ಪೂರೈಸಿದ ಮೇಲೆ ದಯವಿಟ್ಟು ನನಗೆ ತೋರಿಸಿ. ಅದನ್ನು ಪೂರ್ತಿಗೊಳಿಸಲು ಬೇಕಾಗುವ 'ಕೆಲವು ಸಲಹೆಗಳನ್ನು ನಾನು ಹೇಳುವೆ.

ನಂತರ ಸ್ವಾಮಿಜಿ, ತಾವು ಗುರುತುಹಾಕಿಟ್ಟಿದ್ದ ಶ್ರೀ ರಾಮಕೃಷ್ಣ ಸಂಸ್ಥೆಯ ಚಿಹ್ನೆಯ ನಕಾಶೆಯನ್ನು ತರಿಸಿ ರನದಬಾಬುವಿಗೆ ತೋರಿಸಿ ಅವರ ಅಭಿಪ್ರಾಯವನ್ನು ಕೇಳಿದರು. ಅದರಲ್ಲಿ ತಾವರೆ ಅರಳಿರುವ ಸರೋವರವೂ ಒಂದು ಹಂಸವೂ ಅದರ ಸುತ್ತ ಬಳಸಿ ಹೊರಗೆ ಒಂದು ಸರ್ಪವೂ ಚಿತ್ರಿತವಾಗಿತ್ತು. ರನದಬಾಬುವಿಗೆ ಮೊದಲು ಅದರ ಭಾವನೆ ಅರ್ಥವಾಗಲಿಲ್ಲ. ಸ್ವಾಮಿಗಳನ್ನು ವಿವರಿಸಲು ಕೇಳಿದರು. ಸ್ವಾಮಿಗಳು ಹೇಳಿದರು: "ಸರೋವರದ ತರಂಗ ಮಾಲೆಗಳು ಕರ್ಮವನ್ನೂ, ತಾವರೆ ಭಕ್ತಿಯನ್ನೂ, ಮೂಡುತ್ತಿರುವ ಸೂರ್ಯ ಜ್ಞಾನವನ್ನೂ, ಸೂಚಿಸುತ್ತವೆ. ಸುತ್ತಲೂ ಬಳಸಿರುವ ಸರ್ಪ ಜಾಗ್ರತವಾದ ಕುಂಡಲಿನಿ ಶಕ್ತಿಯನ್ನೂ ಹಂಸ ಪರಮಾತ್ಮನನ್ನೂ ಸೂಚಿಸುವುವು. ಯಾವಾಗ ಯೋಗ ಜ್ಞಾನ ಭಕ್ತಿ ಕರ್ಮದೊಡನೆ ಐಕ್ಯವಾಗುವುದೋ ಆಗ ಪರಮಾತ್ಮನ ಸಾಕ್ಷಾತ್ಕಾರವಾಗುವುದೆಂಬ ಭಾವನೆಯನ್ನು ಈ ಚಿತ್ರ ಸೂಚಿಸುವುದು."

ರನದಬಾಬುಗಳು ಚಿತ್ರದ ವ್ಯಾಖ್ಯಾನವನ್ನು ಕೇಳಿ ಕೃತಜ್ಞತೆಯಿಂದ ಕೊಂಚ ಹೊತ್ತು ಮೌನವಾಗಿದ್ದರು. ನಂತರ ಅವರು "ನಿಮ್ಮಿಂದ ಕಲೆಯ ವಿಚಾರ ಕಲಿಯಬೇಕೆಂದು ಆಸೆಯಾಗುವುದು" ಎಂದರು.

ನಂತರ ಸ್ವಾಮಿಜಿ ರನದಬಾಬುಗಳಿಗೆ ತಾವು ಹಾಕಿಟ್ಟಿದ್ದ ಮುಂದಿನ

ಶ್ರೀ ರಾಮಕೃಷ್ಣ ದೇವಾಲಯ ಮತ್ತು ಮಠದ ಹಂಚಿಕೆಯ ನಕಾಶೆಯನ್ನು ತೋರಿಸಿದರು. ನಂತರ ಅವರು ಹೀಗೆ ಹೇಳತೊಡಗಿದರು. "ಈ ಭಾವಿ ದೇವಾಲಯ ಮತ್ತು ಮಠದ ಕಟ್ಟಡಗಳಲ್ಲಿ ನಾನು ಪೂರ್ವ ಮತ್ತು ಪಾಶ್ಚಾತ್ಯ ಕಲೆಗಳಲ್ಲಿ ಅತ್ಯುತ್ತಮವಾದುದನ್ನೆ ತೆಗೆದುಕೊಂಡು ಬರಬೇಕೆಂದಿದ್ದೇನೆ. ನಾನು ನನ್ನ ಇಡೀ ಜಗತ್ತನ್ನು ಸುತ್ತಿದುದರ ಪರಿಣಾಮವಾಗಿ ನನಗೆ ಗೊತ್ತಾಗಿರುವ ಶಿಲ್ಪಕಲೆಯ ಎಲ್ಲಾ ಭಾವನೆಗಳನ್ನೂ ಅದರ ರಚನೆಯಲ್ಲಿ ರೂಪಿಸಬೇಕೆಂದಿದ್ದೇನೆ. ಅಸಂಖ್ಯಾತ ಕಂಭಗಳ ಸಮುದಾಯದ ಆಧಾರದ ಮೇಲೆ ನಿಂತಿರುವ ಒಂದು ದೊಡ್ಡ ಪ್ರಾರ್ಥನಾ ಮಂದಿರ ಕಟ್ಟಲ್ಪಡುವುದು. ಅದರ ಗೋಡೆಗಳ ಮೇಲೆ ನೂರಾರು ಅರಳಿರುವ ತಾವರೆಗಳು ಕೊರೆಯಲ್ಪಡುವುವು. ಆ ಮಂದಿರ ಸಾವಿರ ಮಂದಿ ಕುಳಿತು ಧ್ಯಾನಮಾಡಲು ಸಾಕಾಗುವಂತಿರಬೇಕು. ಈ ರಾಮಕೃಷ್ಣ ದೇವಾಲಯ ಮತ್ತು ಪ್ರಾರ್ಥನಾ ಮಂದಿರ ಯಾವ ರೀತಿ ಕಟ್ಟಲ್ಪಡಬೇಕೆಂದರೆ ದೂರದಿಂದ ಅದನ್ನು ನೋಡಿದರೆ ಅದು "ಓಂ" ಎಂಬ ಚಿಹ್ನೆಯ ಪ್ರತಿಬಿಂಬವಾಗಿರುವಂತೆ ಕಾಣಬೇಕು. ದೇವಾಲಯದೊಳಗಡೆ ಹಂಸದ ಮೇಲೆ ಕುಳಿತಿರುವ ಶ್ರೀರಾಮಕೃಷ್ಣರ ಪ್ರತಿಮೆ ಇರಬೇಕು. ಬಾಗಿಲಿನ ಇಕ್ಕಡೆಯಲ್ಲೂ ಒಂದು ಸಿಂಹ ಮತ್ತು ಕುರಿಮರಿ ಪ್ರೇಮದಿಂದ ಒಂದನ್ನೊಂದು ನೆಕ್ಕುತ್ತಿರುವಂತೆ ಚಿತ್ರಿಸಬೇಕು— ಮಹಾ ಶಕ್ತಿ ಮತ್ತು ಸಾಧು ಸ್ವಭಾವ ಪ್ರೇಮದಲ್ಲಿ ಮಿಳಿತವಾಗಿರುವ ಭಾವ ಮೂಡಿರಬೇಕು. ನನ್ನ ಮನಸ್ಸಿನಲ್ಲಿ ಈ ಉದ್ದೇಶಗಳಿವೆ. ನಾನು ಸಾಕಷ್ಟು ದಿನ ಜೀವಿಸಿದ್ದರೆ ಇವುಗಳನ್ನು ಕಾರ್ಯರೂಪಕ್ಕೆ ತಂದೇ ತೀರುವೆ. ಇಲ್ಲದಿದ್ದಲ್ಲಿ ಭಾವಿ ಸಂತತಿಯವರು ಕ್ರಮೇಣ ಇವುಗಳನ್ನು ಕಾರ್ಯರೂಪಕ್ಕೆ ತರಲು ಪ್ರಯತ್ನಿಸುವರು. ನನ್ನ ಅಭಿಪ್ರಾಯವೇನೆಂದರೆ, ನಮ್ಮ ದೇಶದ ಕಲೆ ಮತ್ತು ಸಂಸ್ಕೃತಿಯ ಎಲ್ಲಾ ಶಾಖೆಗಳನ್ನೂ ಪುನರುಜ್ಜೀವನಗೊಳಿಸಲೆಂದು ಶ್ರೀರಾಮಕೃಷ್ಣರು ಅವತರಿಸಿದ್ದು. ಆದ್ದರಿಂದ ಧರ್ಮ, ಕರ್ಮ, ಶಿಕ್ಷಣ, ಜ್ಞಾನ, ಭಕ್ತಿ ಇವೆಲ್ಲಾ ಈ ಕೇಂದ್ರದಿಂದ ಜಗತ್ತಿನಲ್ಲೆಲ್ಲಾ ಹರಡುವಂತಹ ರೀತಿಯಲ್ಲಿ ಈ ಮಠ ಕಟ್ಟಲ್ಪಡಬೇಕು. ನೀವೆಲ್ಲಾ ಈ ಕೆಲಸಕ್ಕೆ ನನ್ನ ಸಹಾಯಕರಾಗಿ."

ರಸದಬಾಬುಗಳು, ಅಲ್ಲಿ ಸೇರಿದ್ದ ಸನ್ಯಾಸಿಗಳು, ಮತ್ತು ಬ್ರಹ್ಮಚಾರಿಗಳು ಎಲ್ಲರೂ ಸ್ವಾಮಿಗಳ ಮಾತುಗಳನ್ನು ಮೌನಮುಗ್ಧರಾಗಿ ಕೇಳುತ್ತಿದ್ದರು. ಸ್ವಲ್ಪ ಕಾಲಾನಂತರ ಸ್ವಾಮಿಜಿ ಮುಂದುವರಿಸಿದರು "ನೀವು

ಈ ಹಾದಿಯಲ್ಲಿ ಪ್ರವೀಣರಾದುದರಿಂದ ನಿಮ್ಮೊಡನೆ ಈ ವಿಷಯವನ್ನು ಅಷ್ಟು ದೀರ್ಘವಾಗಿ ಚರ್ಚಿಸುತ್ತಿದ್ದೇನೆ. ದಯವಿಟ್ಟು ಈಗ ನನಗೆ ಹೇಳಿ. ನೀವು ಇಷ್ಟು ದೀರ್ಘವಾಗಿ ಕಲೆಯನ್ನು ಅಭ್ಯಾಸಿಸಿರುವಿರಲ್ಲ, ಕಲೆಯ ಅತ್ಯುಚ್ಚ ಧ್ಯೇಯಗಳಾವುವೆಂಬುದರ ಬಗ್ಗೆ ಏನು ಕಲಿತಿರುವಿರಿ?"

ರನದಬಾಬು :— ನಿಮಗೆ ನಾನು ಆವ ಹೊಸ ವಿಷಯ ಹೇಳಲಿ? ಅದಕ್ಕೆ ಬದಲಾಗಿ ಈ ವಿಷಯದಲ್ಲಿ ನೀವೇ ನನ್ನ ಕಣ್ಣನ್ನು ತೆರೆದಿರುವಿರಿ. ಕಲೆಯ ವಿಚಾರವಾಗಿ ಇಷ್ಟೊಂದು ಶಿಕ್ಷಣ ರೂಪವಾದ ಮಾತುಗಳನ್ನು ನನ್ನ ಜೀವಮಾನದಲ್ಲೇ ಎಂದೂ ಕೇಳಿರಲಿಲ್ಲ. ಸ್ವಾಮಿಜಿ, ದಯವಿಟ್ಟು, ನಿಮ್ಮಿಂದ ಪಡೆದ ಭಾವನೆಗಳನ್ನು ಕಾರ್ಯರೂಪಕ್ಕೆ ತರುವಂತೆ ನನ್ನನ್ನು ಹರಸಿ.

ನಂತರ ಸ್ವಾಮಿಗಳು ತಮ್ಮ ಪೀಠದಿಂದೆದ್ದು ಅಂಗಳದಲ್ಲಿ ಸುತ್ತುತ್ತಾ ಶಿಷ್ಯನಿಗೆ ಹೇಳಿದರು "ಆ ಯುವಕ ಬಹಳ ಉತ್ಸಾಹಿ."

ಶಿಷ್ಯ:— ಅವನು ನಿಮ್ಮ ಮಾತುಗಳನ್ನು ಕೇಳಿ ಸ್ತಂಭೀ ಭೂತನಾದ.

ಸ್ವಾಮಿಜಿ ಶಿಷ್ಯನಿಗೆ ಉತ್ತರಕೊಡದೆ ಶ್ರೀರಾಮಕೃಷ್ಣರು ಹಾಡುತ್ತಿದ್ದ ಕೆಲವು ಹಾಡುಗಳನ್ನು ಮೆಲುದನಿಯಲ್ಲಿ ಹಾಡತೊಡಗಿದರು. "ಅಂಕೆಯಲ್ಲಿರುವ ಮನಸ್ಸು ಸ್ಪರ್ಶಮಣಿಯಂತೆ, ನೀನಾವುದನ್ನು ಇಚ್ಛಿಸುವೆಯೋ ಅದನ್ನೆಲ್ಲಾ ಕೊಡುವುದು."

ಕೊಂಚದೂರ ನಡೆದಮೇಲೆ ಸ್ವಾಮಿಜಿ ಮುಖತೊಳೆದು ಶಿಷ್ಯನೊಡನೆ ತಮ್ಮ ಕೊಠಡಿಯನ್ನು ಪ್ರವೇಶಿಸಿದರು. "ಎನ್‍ಸೈಕ್ಲೋಪೀಡಿಯಾ ಬ್ರಿಟಾನಿಕಾ" ಎಂಬ ಪುಸ್ತಕದಲ್ಲಿದ್ದ ಕಲೆಯ ಮೇಲಿನ ಒಂದು ಲೇಖನವನ್ನು ಓದಿದರು. ಅದನ್ನು ಮುಗಿಸಿದ ನೇಲೆ ಶಿಷ್ಯನನ್ನು ಪೂರ್ವ ಬಂಗಾಳದ ಪದಗಳ ಉಚ್ಚಾರಗಳನ್ನು ಗೇಲಿ ಮಾಡ ತೊಡಗಿದರು.

# ಅಧ್ಯಾಯ ೩೪

**ಸ್ಥಳ:— ಬೇಲೂರು ಮಠ ವರ್ಷ: ಕ್ರಿ. ಶ. ೧೯೦೧.**

ಸ್ವಾಮಿಜಿ ಪೂರ್ವ ಬಂಗಾಳ ಮತ್ತು ಅಸ್ಸಾಂನಿಂದ ಹಿಂತಿರುಗಿ ಕೆಲವು ದಿನಗಳಾಗಿತ್ತು. ಅವರಿಗೆ ಖಾಯಿಲೆಯಾಗಿ ಕಾಲುಗಳು ಊದಿದ್ದುವು. ಮಠಕ್ಕೆ ಬಂದ ಶಿಷ್ಯ ಸ್ವಾಮಿಗಳ ಪಾದಕ್ಕೆ ಸಾಷ್ಟಾಂಗ ಪ್ರಣಾಮ ಮಾಡಿದನು. ಖಾಯಿಲೆಯಲ್ಲಿದ್ದರೂ ಸ್ವಾಮಿಜಿ ತಮ್ಮ ಸಹಜವಾದ ನಗುಮುಖ ಕರುಣಾಪೂರಿತ ದೃಷ್ಟಿಯಿಂದಲೇ ಕೂಡಿದ್ದರು.

ಶಿಷ್ಯ:— ಸ್ವಾಮಿಜಿ, ಈಗ ಹೇಗಿದ್ದೀರಿ?

ಸ್ವಾಮಿಜಿ:— ನನ್ನ ಆರೋಗ್ಯದ ವಿಷಯ ಏನೆಂದು ಹೇಳಲಿ ಮಗು ? ದಿನದಿನಕ್ಕೆ ಈ ಶರೀರ ಕೆಲಸಮಾಡಲನರ್ಹವಾಗುತ್ತಿದೆ. ವಂಗಭೂಮಿಯಲ್ಲಿ ಹುಟ್ಟಿದ ದೇಹ, ಯಾವುದಾದರೊಂದು ರೋಗ ಯಾವಾಗಲೂ ಅದನ್ನು ಕಾಡುತ್ತಲೇ ಇರುತ್ತದೆ. ಶರೀರ ಪ್ರಕೃತಿ ಕೊಂಚವೂ ದೃಢವಾಗಿಲ್ಲ. ನೀನಾವುದಾದರೂ ಕಷ್ಟವಾದ ಕೆಲಸ ಮಾಡಬೇಕಾದರೆ ಅದರ ಪ್ರಯಾಸವನ್ನು ಸಹಿಸಲಾಗುವುದಿಲ್ಲ. ಆದರೆ ಈ ದೇಹವಿರುವವರೆಗೂ ನಾನು ಕೆಲಸ ಮಾಡೇ ತೀರುವೆ. ಕರ್ಮ ಪ್ರಪಂಚದಲ್ಲಿ ದುಡಿಯುತ್ತಲೇ ಸಾಯುವೆ.

ಶಿಷ್ಯ:— ನೀವು ಕೊಂಚಕಾಲ ಕೆಲಸಮಾಡುವುದನ್ನು ಬಿಟ್ಟು ವಿಶ್ರಾಂತಿ ತೆಗೆದುಕೊಂಡರೆ ಆರೋಗ್ಯಹೊಂದುವಿರಿ. ನಿಮ್ಮ ಬದುಕಿನಿಂದ ಜಗತ್ಕಲ್ಯಾಣವಾಗುವುದು.

ಸ್ವಾಮಿಜಿ:— ನಾನು ಸುಮ್ಮನೆ ಮೌನವಾಗಿ ಕುಳಿತಿರಲು ಸಾಧ್ಯವೆ ಮಗು? ಶ್ರೀ ರಾಮಕೃಷ್ಣರು ನಿರ್ಯಾಣವಾಗಲು ಎರಡು ಮೂರು ದಿನ ಮೊದಲು ಅವರು ಯಾರನ್ನು "ಕಾಳಿ" ಎನ್ನುತ್ತಿದ್ದರೊ ಆ ದೇವಿ ಈ ದೇಹ ಪ್ರವೇಶಮಾಡಿದಳು. ಆಕೆಯೇ ನನ್ನನ್ನು ಸುಮ್ಮನಿರಿಸದೆ, ನನ್ನ ಸ್ವಂತ ಆರೋಗ್ಯದ ಕಡೆ ಕೂಡ ಗಮನ ಕೊಡದಂತೆ ಅಲ್ಲಿ ಇಲ್ಲಿ ಎಲ್ಲೆಡೆಗೂ ನನ್ನನ್ನು ಕರೆದೊಯ್ದು ಕೆಲಸಮಾಡಿಸುತ್ತಿರುವಳು.

ಶಿಷ್ಯ:— ನೀವು ಇದನ್ನು ರೂಪಕ ದೃಷ್ಟಿಯಿಂದ ಹೇಳುತ್ತಿದ್ದೀರೇನು?

ಸ್ವಾಮಿಜಿ:— ಹಾಗಲ್ಲ. ಮಹಾಸಮಾಧಿಗೆ ಮೂರುದಿನ ಮೊದಲು

ಅವರು ನನ್ನನ್ನು ತಮ್ಮ ಪಕ್ಕಕ್ಕೆ ಕರೆದು ತಮ್ಮೆದುರು ಕುಳ್ಳಿರಲು ಹೇಳಿ ಎವೆಯಿಕ್ಕದೆ ನನ್ನನ್ನೇ ನೋಡುತ್ತಾ ಸಮಾಧಿಸ್ಥರಾದರು. ಆಗ ನಿಜವಾಗಿಯೂ ನನ್ನ ದೇಹದಲ್ಲಿ ವಿದ್ಯುತ್‌ಪ್ರವಾಹ ಸಂಚರಿಸಿದಂತಾಯ್ತು. ಕೊಂಚಹೊತ್ತಿನಲ್ಲಿಯೇ ನನಗೂ ಬಾಹ್ಯ ಪ್ರಜ್ಞೆತಪ್ಪಿದಂತಾಗಿ ಸ್ಥಿರವಾಗಿ ಕುಳಿತುಕೊಂಡೆ. ಹಾಗೇ ಎಷ್ಟು ಹೊತ್ತು ಕುಳಿತಿದ್ದೆನೋ ನನಗೆ ಗೊತ್ತಿಲ್ಲ. ನನಗೆ ಪ್ರಜ್ಞೆಬಂದಾಗ ಶ್ರೀ ರಾಮಕೃಷ್ಣರು ಕಂಬನಿಗರೆಯುತ್ತಿದ್ದುದನ್ನು ಕಂಡೆ. ಕಾರಣವೇನೆಂದು ಪ್ರಶ್ನಿಸಿದಾಗ ಅವರು ವಾತ್ಸಲ್ಯದಿಂದ ಹೇಳಿದರು "ಇಂದು ನಿನಗೆ ನನ್ನ ಸರ್ವಸ್ವವನ್ನೂ ದಾನಮಾಡಿದ್ದೇನೆ. ನಾನಿಂದು ಒಬ್ಬ ದರಿದ್ರ ಫಕೀರ. ನೀನು ಹಿಂತಿರುಗುವ ಮುಂಚೆ ಈ ಶಕ್ತಿಯಿಂದ ಲೋಕಕ್ಕೆ ಮಹತ್ತಾದ ಉಪಕಾರವನ್ನು ಮಾಡಬೇಕು." ಆ ಶಕ್ತಿಯೇ ಈಗ ನನ್ನನ್ನು ಈ ಕೆಲಸವನ್ನೆಲ್ಲಾ ಮಾಡಲು ಪ್ರೇರೇಪಿಸುತ್ತಿದೆ ಎಂದು ಅನುಭವವಾಗುತ್ತಿದೆ. ಈ ದೇಹ ಕೇವಲ ಸೋಮಾರಿತನಕ್ಕಾಗಿ ಹುಟ್ಟಿಬರಲಿಲ್ಲ.

ಈ ಮಾತನ್ನು ಕೇಳಿ ವಿಸ್ಮಯಪಟ್ಟ ಶಿಷ್ಯ ಯೋಚಿಸಿದ :—ಸಾಧಾರಣ ಜನರು ಈ ವಿಷಯವನ್ನು ಹೇಗೆ ತೆಗೆದುಕೊಳ್ಳುವರೆಂಬುದು ಯಾರಿಗೆ ಗೊತ್ತು? "ಆ ಕೂಡಲೇ ಅವನು ವಿಚಾರವನ್ನು ಬದಲಾಯಿಸಿ ಕೇಳಿದ, "ಸ್ವಾಮಿಜಿ, ನೀವು ಪೂರ್ವಬಂಗಾಲವನ್ನು ಹೇಗೆ ಇಷ್ಟಪಟ್ಟಿರಿ?"

ಸ್ವಾಮಿಜಿ :—ಒಟ್ಟಿನಲ್ಲಿ ಇಷ್ಟಪಟ್ಟೆ. ನಾನು ಹೋದಾಗ ಹೊಲದಲ್ಲಿ ಬೆಳೆಗಳು ಹಚ್ಚನೆ ಹಸುರಾಗಿದ್ದುವು, ಹವ ಕೂಡ ಚೆನ್ನಾಗಿತ್ತು. ಬೆಟ್ಟದ ಮೇಲಿನ ಪ್ರಕೃತಿ ಸೌಂದರ್ಯ ಮನೋಹರವಾಗಿದೆ. ಬ್ರಹ್ಮಪುತ್ರಾನದಿಯ ಕಣಿವೆ ಸೌಂದರ್ಯದಲ್ಲಿ ಅಸದೃಶವಾದುದು. ಪೂರ್ವ ಬಂಗಾಳದ ಜನರು ಇಲ್ಲಿಯ ಜನರಿಗಿಂತ ಹೆಚ್ಚು ದೃಢಕಾಯರು, ಉತ್ಸಾಹಿಗಳು. ಬಹುಶಃ ಅವರು ಮೀನು ಮಾಂಸ ತಿನ್ನುವುದರಿಂದ ಹಾಗಿದ್ದಿರಬಹುದು. ಅವರು ಹಿಡಿದ ಕೆಲಸವನ್ನು ಮಾಡೇ ತೀರುವರು. ಅವರು ಆಹಾರದಲ್ಲಿ ಹೆಚ್ಚು ಎಣ್ಣೆ ಮತ್ತು ಕೊಬ್ಬನ್ನು ಸೇವಿಸುವರು. ಅದು ಅಷ್ಟು ಒಳ್ಳೆಯದಲ್ಲ. ಏಕೆಂದರೆ ಎಣ್ಣೆ ಕೊಬ್ಬನ್ನು ಹೆಚ್ಚಾಗಿ ಸೇವಿಸುವುದರಿಂದ ದೇಹ ಸ್ಥೂಲವಾಗುವುದು.

ಶಿಷ್ಯ :—ಅವರಲ್ಲಿ ಧಾರ್ಮಿಕ ಪ್ರವೃತ್ತಿ ಹೇಗಿದೆ?

ಸ್ವಾಮಿಜಿ :—ಧಾರ್ಮಿಕ ಭಾವನೆಗಳ ವಿಚಾರವಾಗಿ ಹೇಳಬೇಕೆಂದರೆ

ಅಲ್ಲಿನ ಜನರು ತೀವ್ರವಾದ ಪೂರ್ವಾಚಾರಪ್ರಿಯರು. ಧರ್ಮದಲ್ಲಿ ಹೆಚ್ಚು ಉದಾರಭಾವದಿಂದಿರಲು ಹೋಗಿ ಅನೇಕರು ಮತಭ್ರಾಂತರಾಗಿರುವರು. ಒಮ್ಮೆ ಡಕ್ಕಾದಲ್ಲಿ ಮೋಹಿನಿಬಾಬುಗಳ ಮನೆಯಲ್ಲಿದ್ದಾಗ ಒಬ್ಬ ತರುಣನು ಒಂದು ಭಾವಚಿತ್ರವನ್ನು ತಂದು "ಸ್ವಾಮಿ, ದಯವಿಟ್ಟು ಹೇಳಿ–ಈ ಚಿತ್ರದಲ್ಲಿರುವವನಾರು? ಅವನು ಅವತಾರಪುರುಷನೆ?" ಎಂದ. ನಾನು ನಯವಾಗಿ ನನಗೆ ಅವರ ವಿಷಯ ಏನೂ ಗೊತ್ತಿಲ್ಲವೆಂದು ಹೇಳಿದೆ. ಮೂರು ನಾಲ್ಕು ಬಾರಿ ಹೇಳಿದರೂ ಆ ಮನುಷ್ಯ ಪದೇ ಪದೇ ನನ್ನನ್ನು ಪ್ರಶ್ನಿಸುವುದನ್ನು ಬಿಡಲಿಲ್ಲ. ಕಡೆಗೊಮ್ಮೆ ವಿಧಿಯಿಲ್ಲದೆ ನಾನು ಹೇಳಿದೆ "ಮಗು, ಇನ್ನುಮುಂದೆ ಕೊಂಚ ಪುಷ್ಟಿಕರವಾದ ಆಹಾರವನ್ನು ತೆಗೆದುಕೊ. ನಿನ್ನ ಮೆದುಳು ನಂತರ ಬಲಿಷ್ಠವಾಗುವುದು. ಪುಷ್ಟಿಕರವಾದ ಆಹಾರದ ಅಭಾವದಿಂದ ನಿನ್ನ ಮೆದುಳು ಬತ್ತಿಹೋಗಿದೆ." ಈ ಮಾತುಗಳಿಂದ ಆ ತರುಣ ಅಸಂತುಷ್ಟನಾಗಿರಬೇಕು. ಆದರೆ ನಾನೇನು ಮಾಡಲಿ? ಆದರೆ ನಾನೀ ರೀತಿ ಯುವಕರಿಗೆ ಹೇಳದಿದ್ದರೆ ಅವರು ಸ್ವಲ್ಪದರಲ್ಲೇ ಹುಚ್ಚರಾಗಿಬಿಡುವರು.

ಶಿಷ್ಯ:—ನಮ್ಮ ಪೂರ್ವ ಬಂಗಾಳಾದಲ್ಲಿ ಈಚೀಚೆಗೆ ಅನೇಕ ಅವತಾರಗಳು ತಲೆಯೆತ್ತಿಕೊಂಡಿವೆ.

ಸ್ವಾಮಿಜಿ:—ಜನರು ತಮ್ಮ ಗುರುವನ್ನು ಅವತಾರಪುರುಷರೆಂದು ಕರೆಯಬಹುದು. ಅವರ ವಿಷಯದಲ್ಲಿ ಅವರಿಷ್ಟಬಂದ ಭಾವನೆ ಹೊಂದಿರಬಹುದು. ಆದರೆ ಎಲ್ಲೆಂದರಲ್ಲಿ, ಹೊತ್ತುಗೊತ್ತಿಲ್ಲದೆ ಭಗವಂತನ ಅವತಾರ ಆಗುವುದಿಲ್ಲ. ಡಕ್ಕಾದಲ್ಲೇ ಮೂರುನಾಲ್ಕು ಅವತಾರಗಳಿವೆ ಎಂದು ಕೇಳಿದೆ.

ಶಿಷ್ಯ:—ಅಲ್ಲಿನ ಸ್ತ್ರೀಯರ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು?

ಸ್ವಾಮಿಜಿ:—ಸ್ತ್ರೀಯರು ಸಾಮಾನ್ಯವಾಗಿ ಎಲ್ಲಾ ಕಡೆಯೂ ಒಂದೇ ಬಗೆಯಾಗಿರುವರು. ಡಕ್ಕಾದಲ್ಲಿ ವೈಷ್ಣವ ಮತ ಪ್ರಾಧಾನ್ಯ ಕಂಡು ಬಂತು. ಹ–ರ ಹೆಂಡತಿ ಬಹಳ ಜಾಣೆಯಂತೆ ಕಾಣಿಸಿತು. ಬಹು ಎಚ್ಚರಿಕೆಯಿಂದ ಆಕೆ ನನ್ನ ಆಹಾರವನ್ನು ಸಿದ್ಧಪಡಿಸಿ ಕಳುಹಿಸುತ್ತಿದ್ದಳು.

ಶಿಷ್ಯ:—ನೀವು ನಾಗಮಹಾಶಯರ ಸ್ಥಳಕ್ಕೆ ಹೋಗಿದ್ದರೆಂದು ಕೇಳಿದೆ.

ಸ್ವಾಮಿಜಿ:—ಹೌದು, ಅಷ್ಟುದೂರ ಹೋದಮೇಲೆ ಅಂತಹ ಮಹಾ ಪುರುಷರ ಜನ್ಮ ಸ್ಥಳವನ್ನು ನೋಡದೆ ಬರುವುದುಂಟೆ? ಅವರ ಹೆಂಡತಿ ತಾನೇ ಮಾಡಿದ್ದ ಅನೇಕ ರುಚಿಕರವಾದ ಪದಾರ್ಥಗಳಿಂದ ಊಟ ಮಾಡಿಸಿದರು. ಆ ಕುಟೀರ ಶಾಂತಿ ಮಯವಾದ ಏಕಾಂತ ಸ್ಥಳವಾಗಿ ಸುಂದರವಾಗಿದೆ. ಅಲ್ಲಿ ನಾನು ಹಳ್ಳಿಯ ಕೆರೆಯೊಂದರಲ್ಲಿ ಈಜಾಡಿದೆ. ನಂತರ ನಾನು ಎಂತಹ ಸುಖನಿದ್ರೆಯಲ್ಲಿ ಮುಳುಗಿದೆನೆಂದರೆ ನಾನು ಎದ್ದಾಗ ಮಧ್ಯಾಹ್ನ ಎರಡು ಗಂಟೆಯಾಗಿತ್ತು. ನನ್ನ ಜೀವಮಾನದಲ್ಲಿ ಗಾಢನಿದ್ರೆಯಲ್ಲಿ ಕಳೆದ ದಿನಗಳು ಅತಿ ವಿರಳ. ಅವುಗಳಲ್ಲಿ ನಾಗಮಹಾ ಶಯರ ಮನೆಯಲ್ಲಿ ಮಲಗಿದ್ದ ದಿನವೂ ಆ ದಿನಗಳಲ್ಲೊಂದು. ನಿದ್ರೆ ಯಿಂದೆಚ್ಚೆತ್ತ ಮೇಲೆ ನನಗೆ ಪುಷ್ಕಳ ಭೋಜನವಾಯಿತು. ನಾಗಮಹಾ ಶಯರ ಪತ್ನಿ ನನಗೊಂದು ಬಟ್ಟೆಯನ್ನು ಕೊಟ್ಟರು. ಅದನ್ನು ತಲೆಗೆ ರುಮಾಲಿನಂತೆ ಸುತ್ತಿಕೊಂಡು ನಾನು ಢಾಕಾಕ್ಕೆ ಹೊರಟೆ. ಅಲ್ಲಿ ನಾಗಮಹಾಶಯರ ಭಾವಚಿತ್ರವನ್ನು ಪೂಜಿಸುವರು. ಅವರ ಅವಶೇಷ ವನ್ನಿಟ್ಟಿರುವ ಸ್ಥಳವನ್ನು ಚೆನ್ನಾಗಿಟ್ಟಿರಬೇಕು. ಈಗ ಕೂಡ ಅದು ಸರಿ ಯಾಗಿಲ್ಲ.

ಶಿಷ್ಯ:—ಆ ಭಾಗದ ಜನರು ನಾಗಮಹಾಶಯರನ್ನು ಅಷ್ಟೊಂದು ಗೌರವಿಸುವುದಿಲ್ಲ.

ಸ್ವಾಮಿಜಿ.—ಸಾಧಾರಣ ಮನುಷ್ಯರು ಹೇಗೆ ತಾನೆ ಅಂತಹ ಮಹಾ ಪುರುಷನನ್ನು ಗೌರವಿಸುವರು? ಅವರ ಸಹವಾಸ ಹೊಂದಿದವರು ನಿಜ ವಾಗಿ ಧನ್ಯರು.

ಶಿಷ್ಯ:—ನೀವು ಕಾಮಾಖ್ಯದಲ್ಲೇನು ನೋಡಿದಿರಿ?

ಸ್ವಾಮಿಜಿ:—ಷಿಲ್ಲಾಂಗ್ ಬೆಟ್ಟಗಳು ಬಹು ಸುಂದರವಾಗಿವೆ. ನಾನು ಅಲ್ಲಿ ಅಸ್ಸಾಮಿನ ಮುಖ್ಯ ಕಮಿಷನರ್ ಆದ ಸರ್ ಹೆನ್ರಿಕಾಟನ್ ಅವರನ್ನು ಭೇಟಿಮಾಡಿದೆ. ಅವರು ನನ್ನನ್ನು ಕೇಳಿದರು: "ಸ್ವಾಮಿಜಿ, ಯೂರೋಪ್, ಅಮೆರಿಕಾ ದೇಶಗಳ ಪ್ರವಾಸದ ನಂತರ ಈ ದೂರದ ಬೆಟ್ಟಗಳಲ್ಲೇನನ್ನು ನೋಡ ಬಂದಿರಿ?" ಸರ್ ಹೆನ್ರಿಕಾಟನ್‌ರಂತಹ ಒಳ್ಳೆಯ ಮತ್ತು ದಯಾರ್ದ್ರಹೃದಯಿಗಳು ಬಹಳ ಅಪರೂಪ. ನನ್ನ ಖಾಯಿಲೆಯ ವಿಚಾರ ಕೇಳಿ ಅವರು ಸೀನಿಯರ್ ಸರ್ಜನ್ನರನ್ನು ಕಳುಹಿಸಿ ದರು. ಬೆಳಿಗ್ಗೆ ಸಂಜೆ ಎರಡು ಹೊತ್ತೂ ನನ್ನ ಆರೋಗ್ಯವನ್ನು ವಿಚಾರಿಸು

ತ್ತಿದ್ದರು. ನಾನು ಅಲ್ಲಿ ಹೆಚ್ಚು ಭಾಷಣ ಮಾಡಲಾಗಲಿಲ್ಲ. ನನ್ನ ಆರೋಗ್ಯ ಕೆಟ್ಟಿತು. ದಾರಿಯಲ್ಲಿ ನಿತಾಯ್ ನನ್ನನ್ನು ಚೆನ್ನಾಗಿ ನೋಡಿ ಕೊಂಡನು.

ಶಿಷ್ಯ:—ಆ ಭಾಗದಲ್ಲಿ ಧಾರ್ಮಿಕ ಭಾವನೆ ಹೇಗಿದೆ?

ಸ್ವಾಮಿಜಿ:—ಅದು ತಾಂತ್ರಿಕ ಪ್ರದೇಶ. "ಹಂಕರದೇವ" ನೆಂಬೊಬ್ಬನನ್ನು ಅವತಾರವೆಂದು ಪೂಜಿಸುವರೆಂದು ಕೇಳಿದೆ. ಆತನ ಪಂಥ ಬಹಳ ಹರಡಿದೆ ಎಂದು ಕೇಳಿದೆ. ನನಗೆ ಹಂಕರದೇವನೆಂಬುದು ಶಂಕರಾಚಾರ್ಯರ ಮತ್ತೊಂದು ರೂಪವೊ ಏನೊ ಎಂದು ವಿಚಾರಿಸ ಲಾಗಲಿಲ್ಲ. ಅವರು ಸನ್ಯಾಸಿಗಳಿರಬಹುದು—ಎಂದರೆ ತಾಂತ್ರಿಕ ಸನ್ಯಾಸಿ ಗಳು ಅಥವಾ ಶಂಕರ ಪಂಥದವರಾಗಿರಬಹುದು.

ಶಿಷ್ಯ:—ಪೂರ್ವ ಬಂಗಾಳಿಗಳು ನಾಗಮಹಾಶಯರನ್ನು ಹೇಗೆ ಅರ್ಥಮಾಡಿಕೊಂಡಿಲ್ಲವೊ ಹಾಗೆಯೇ ನಿಮ್ಮನ್ನೂ ಅರಿತಿಲ್ಲ.

ಸ್ವಾಮಿಜಿ:—ಅವರು ನನ್ನನ್ನು ಗೌರವಿಸಲಿ, ಬಿಡಲಿ, ಆ ಭಾಗದ ಜನರು ಇಲ್ಲಿನವರಿಗಿಂತ ಹೆಚ್ಚು ಉತ್ಸಾಹಿಗಳು, ಕಾರ್ಯಪರರು. ಕಾಲ ಕ್ರಮೇಣ ಅವರು ಹೆಚ್ಚು ಮುಂದುವರಿಯುವರು. ಈ ವರ್ತಮಾನ ಕಾಲದಲ್ಲಿ ನಾವು ಕರೆಯುವ "ನಾಗರಿಕತೆ" ದೇಶದ ಆ ಭಾಗವನ್ನು ಇನ್ನೂ ಪೂರ್ತಿ ಒಳ ಹೊಕ್ಕಿಲ್ಲ. ಕ್ರಮೇಣ ಅದೂ ಆಗುತ್ತದೆ. ಎಲ್ಲಾ ಕಾಲದಲ್ಲಿಯೂ ರಾಜಧಾನಿಯಿಂದ ಹಳ್ಳಿಗಳಿಗೆ ಸಮಾಜಮರ್ಯಾದೆಗಳು, ಶೈಲಿಗಳು, ಹರಡುವುವು. ಪೂರ್ವ ಬಂಗಾಳದಲ್ಲಿಯೂ ಇದೇ ರೀತಿ ಯಾಗುತ್ತಿದೆ. ನಾಗಮಹಾಶಯರಂಥಹ ಮಹಾತ್ಮರಿಗೆ ಜನನವಿತ್ತ ದೇಶ ಧನ್ಯ. ಅದರ ಭವಿಷ್ಯವೂ ಆಶಾದಾಯಕವಾಗಿದೆ. ಆ ಮಹಾತ್ಮನ ಸ್ವಯಂ ಶೋಭೆಯಿಂದ ಪೂರ್ವ ಬಂಗಾಲ ರಂಜಿಸುತ್ತಿದೆ.

ಶಿಷ್ಯ:—ಆದರೆ ಸ್ವಾಮಿಜಿ, ಜನಸಾಮಾನ್ಯರಿಗೆ ಅವರು ಅಂತಹ ದೊಡ್ಡ ವ್ಯಕ್ತಿಯೆಂದು ತಿಳಿದೇ ಇರಲಿಲ್ಲ. ಅವರು ತಾವೇ ಜನರಿಂದ ಬಹು ಮಟ್ಟಿಗೆ ಅಜ್ಞಾತರಾಗಿದ್ದರು.

ಸ್ವಾಮಿಜಿ:—ಅಲ್ಲಿ ಅವರೆಲ್ಲಾ ನನ್ನ ಆಹಾರದ ವಿಚಾರವಾಗಿ ಎಷ್ಟೊಂದು ಗೊಂದಲವೆಬ್ಬಿಸುತ್ತಿದ್ದರು. "ನೀವೇಕೆ ಆ ಆಹಾರ ಸೇವಿಸು ವಿರಿ—ಅವರ ಕೈಯಲ್ಲಿ ಏಕೆ ಊಟಮಾಡುವಿರಿ" ಮುಂತಾಗಿ. ಅದಕ್ಕೆ ನಾನು ಉತ್ತರಕೊಡಬೇಕಾಗಿತ್ತು, "ನಾನೊಬ್ಬ ಸನ್ಯಾಸಿ, ಭಿಕ್ಷು. ಆಹಾರದ

ವಿಷಯವಾಗಿ ನಾನೇಕೆ ಅಷ್ಟೊಂದು ಕಟ್ಟುನಿಟ್ಟನ್ನು ಅನುಸರಿಸಬೇಕಾದ ಆವಶ್ಯಕತೆಯೇನು?" ಎಂದೆ. ನಿಮ್ಮ ಧರ್ಮಶಾಸ್ತ್ರಗಳೇ ಹೇಳುವುದಿಲ್ಲವೆ "ಮನೆ ಮನೆಗೂ ಹೋಗಿ ಭಿಕ್ಷೆ ಬೇಡಬೇಕು. ಚಂಡಾಲನ ಮನೆಗೂ ಹೋಗಿ ಭಿಕ್ಷೆ ಎತ್ತಬೇಕು." ಆದರೆ ಪ್ರಾರಂಭದಲ್ಲಿ ಧರ್ಮವನ್ನು ಗಾಢವಾಗಿ ಅರಿಯಬೇಕಾದರೆ ಧರ್ಮಗ್ರಂಥಗಳಲ್ಲಿರುವ ಸತ್ಯವನ್ನು ನಮ್ಮ ಜೀವನದಲ್ಲಿ ತರಲು ಬಾಹ್ಯನಡೆವಳಿಕೆಗೂ ನಾವು ಹೆಚ್ಚು ಗಮನ ಕೊಡಬೇಕು. ನೀನು ಶ್ರೀ ರಾಮಕೃಷ್ಣರು ಹೇಳುತ್ತಿದ್ದ, ಪಂಚಾಗವನ್ನು ಹಿಂಡಿ ನೀರು ಬರಿಸುವುದರ ವಿಚಾರ ಕೇಳಿಲ್ಲವೆ? ಬಾಹ್ಯರೂಪ, ನಡೆವಳಿಕೆಗಳು ಮನುಷ್ಯನ ಅಂತರ್ಯದಲ್ಲಿರುವ ಮಹಾಶಕ್ತಿ ವಿಕಾಸಗೊಳ್ಳಲು ಮಾತ್ರ. ಎಲ್ಲಾ ಧರ್ಮಗ್ರಂಥಗಳ ಉದ್ದೇಶವೂ ಮನುಷ್ಯನ ಆಂತರಿಕ ಶಕ್ತಿಯನ್ನು ಜಾಗ್ರತಗೊಳಿಸುವುದು ಮತ್ತು ತನ್ನ ಸಸ್ವಭಾವವನ್ನು ಸಾಕ್ಷಾತ್ಕರಿಸಿಕೊಳ್ಳುವುದಾಗಿದೆ. ಈ ವಿಧಿ ನಿಷೇಧಗಳೆಲ್ಲಾ ಅದರ ಸಾಧನಾಮಾರ್ಗಗಳು. ನೀನು ನಿನ್ನ ಗುರಿಯನ್ನೇ ಮರೆತು ಈ ಉಪಕರಣಗಳಿಗಾಗಿ ಕಾದಾಡಿದರೆ ಅದರಿಂದೇನು ಪ್ರಯೋಜನ? ಶ್ರೀ ರಾಮಕೃಷ್ಣರು ಈ ಸತ್ಯಪರಿಚಯ ಮಾಡಿಕೊಡಲು ಅವತರಿಸಿದರು.

ಸತ್ಯಸಾಕ್ಷಾತ್ಕಾರವೇ ಎಲ್ಲಕ್ಕಿಂತ ಮುಖ್ಯವಾದುದು. ನೀನು ಗಂಗಾನದಿಯಲ್ಲೇ ಸಾವಿರ ವರ್ಷ ಸ್ನಾನಮಾಡಿದರೂ, ದೀರ್ಘಕಾಲ ಸಸ್ಯಾಹಾರ ಸೇವಿಸಿದರೂ ಅದು ನಿನ್ನ ಆತ್ಮವಿಕಾಸಕ್ಕೆ ಒಯ್ಯುವುದೆ? ಯಾವುದರಿಂದಲೂ ಏನೂ ಪ್ರಯೋಜನವಿಲ್ಲ. ಆದರೆ ಯಾರಾದರೂ ಈ ಬಾಹ್ಯಾಚರಣೆಗಳನ್ನಾಚರಿಸದೆ ಆತ್ಮ ಸಾಕ್ಷಾತ್ಕಾರ ಮಾಡಿಕೊಂಡಿದ್ದರೆ ಆ ಬಾಹ್ಯಾಚರಣೆಗಳನ್ನನುಸರಿಸದಿರುವ ಹಾದಿಯೇ ಶ್ರೇಷ್ಠಮಾರ್ಗ. ಆದರೆ ಬ್ರಹ್ಮ ಸಾಕ್ಷಾತ್ಕಾರವಾದಮೇಲೂ ಇತರರಿಗೆ ಮೇಲ್ಪಂಕ್ತಿಯಾಗಲೋಸುಗ ಕೊಂಚ ಬಾಹ್ಯವಿಧಿಗಳನ್ನನುಸರಿಸಬೇಕು. ಮುಖ್ಯವಾದುದೇನೆಂದರೆ ನೀನು ಮನಸ್ಸನ್ನು ಯಾವುದರ ಮೇಲಾದರೂ ಏಕಾಗ್ರ ಮಾಡಬೇಕು. ಅದು ಒಂದು ವಸ್ತುವಿನಲ್ಲಿ ಏಕಾಗ್ರತೆ ಪಡೆದರೆ ಅದರಿಂದ ಚಿತ್ತೈಕಾಗ್ರತೆ ಬರುವುದು. ಅದರ ಇತರ ಬದಲಾವಣೆಗಳೆಲ್ಲ ಮಾಯವಾಗಿ ಮನಸ್ಸು ಏಕಪ್ರಕಾರವಾಗಿ ಒಂದೇ ಕಡೆಗೆ ಹರಿಯುವುದು. ಅನೇಕರು ಸಂಪೂರ್ಣವಾಗಿ ಕೇವಲ ಬಾಹ್ಯರೂಪ, ಸಂಪ್ರದಾಯಗಳಲ್ಲೇ ಮಗ್ನರಾಗುವರು. ಅದರಿಂದ ತಮ್ಮ ಮನಸ್ಸನ್ನು ಆತ್ಮನ ಕಡೆ ತಿರು

ಗಿಸಲಸಮರ್ಥರಾಗುವರು. ನೀನು ಹಗಲು ರಾತ್ರಿ ಬರೀ ಉಪವಾಸ, ನಿಷೇಧಗಳ ಸಂಕುಚಿತ ವೃದ್ಧಾಚಾರಗಳಲ್ಲೇ ಮುಳುಗಿದ್ದರೆ ಆತ್ಮ ಪ್ರಕಾಶಕ್ಕೆ ಅವಕಾಶವೆಲ್ಲಿದೆ? ಯಾರು ಆತ್ಮಸಾಕ್ಷಾತ್ಕಾರದಲ್ಲಿ ಹೆಚ್ಚು ಹೆಚ್ಚು ಮುಂದುವರಿದಿರುವರೋ ಅವರು ಈ ಬಾಹ್ಯರೂಪ, ಆಚರಣೆಗಳನ್ನು ಅಷ್ಟು ಕಡಿಮೆ ಅವಲಂಬಿಸುವರು. ಶಂಕರಾಚಾರ್ಯರೂ ಹೇಳಿದ್ದಾರೆ. "ಯಾರ ಮನಸ್ಸು ಯಾವಾಗಲೂ ಗುಣಾತೀತವಾಗಿದೆಯೋ ಅಂಥವನಿಗೆ ಈ ವಿಧಿ ನಿಷೇಧಗಳೆಲ್ಲಿವೆ?" ಆದ್ದರಿಂದ ಆತ್ಮಸಾಕ್ಷಾತ್ಕಾರ ಪ್ರಧಾನವಾದುದು. ಅದೇ ನಿನ್ನ ಗುರಿ ಎಂದು ತಿಳಿ. ಪ್ರತಿಯೊಂದು ಭಿನ್ನ ಪಂಥವೂ ಸತ್ಯದ ಒಂದು ಪಥ. ನೀನು ಎಷ್ಟುಮಟ್ಟಿಗೆ ತ್ಯಾಗಿಯಾಗಿರುವೆಯೊ ಅದೇ ನೀನು ಮುಂದುವರಿದಿರುವುದಕ್ಕೆ ನಿದರ್ಶನ. ಎಲ್ಲಿ ನೀನು ಕಾಮಿನಿ ಕಾಂಚನಗಳಲ್ಲಿ ಆಸಕ್ತಿ ಸಾಕಷ್ಟು ಕಡಿಮೆ ಯಾಗಿರುವುದನ್ನು ನೋಡುವೆಯೊ, ಅಲ್ಲಿ ಅವನು ಯಾವ ಪಂಗಡಕ್ಕೇ ಸೇರಿರಲಿ ಅವನ ಆತ್ಮಶಕ್ತಿ ಜಾಗ್ರತವಾಗಿದೆ ಎಂದು ತಿಳಿ. ಅಂಥವನ ಆತ್ಮಸಾಕ್ಷಾತ್ಕಾರದ ಹೆಬ್ಬಾಗಿಲು ತೆರೆದಿದೆ. ಅದಕ್ಕೆ ಬದಲಾಗಿ ಸಾವಿರಾರು ಶಿಷ್ಟಾಚಾರ ಸಂಪ್ರದಾಯವನ್ನು ಅನುಸರಿಸಿಕೊಂಡು ಧರ್ಮಗ್ರಂಥಗಳನ್ನೇ ಬಾಯಲ್ಲಿ ಪಠಿಸುತ್ತಿದ್ದರೂ ತ್ಯಾಗ ನಿನ್ನಲ್ಲಿ ಸುಳಿಯದಿದ್ದಲ್ಲಿ ನಿನ್ನ ಜೀವನ ನಿಷ್ಫಲವೆಂದು ತಿಳಿ. ಆತ್ಮಸಾಕ್ಷಾತ್ಕಾರಕ್ಕೆ ಮನಃಪೂರ್ವಕವಾಗಿ ಪ್ರಯತ್ನಿಸು. ನೀನು ಸಾಕಷ್ಟು ಧರ್ಮಗ್ರಂಥಗಳ ವ್ಯಾಸಂಗಮಾಡಿರುವೆ. ಈಗ ಹೇಳು ಅವುಗಳಿಂದೆಷ್ಟು ಪ್ರಯೋಜನವಿದೆಯೆಂದು? ಅನೇಕರು ಹಣದ ವಿಷಯವನ್ನೇ ಯೋಚಿಸುತ್ತಾ ಕೋಟ್ಯಾಧೀಶ್ವರರಾದರೆ ನೀನು ಧರ್ಮಗ್ರಂಥಗಳನ್ನೇ ಯೋಚಿಸುತ್ತಾ ಪಂಡಿತನಾಗಿರುವೆ. ಆದರೆ ಎರಡೂ ಬಂಧನಗಳೇ. ವಿದ್ಯೆ ಅವಿದ್ಯೆ ಜ್ಞಾನ ಅಜ್ಞಾನವನ್ನು ಮೀರಿ ಮುಂದೆ ಹೋಗಿ ಅನಂತ ಜ್ಞಾನ ಪಡೆ.

ಶಿಷ್ಯ:—ನಿಮ್ಮ ಕೃಪೆಯಿಂದ ನಾನೆಲ್ಲವನ್ನೂ ಅರ್ಥಮಾಡಿಕೊಳ್ಳುವೆ. ಆದರೆ ನನ್ನ ಪೂರ್ವಾರ್ಜಿತ ಕರ್ಮ ಈ ಬೋಧೆಗಳನ್ನು ರಕ್ತಗತಮಾಡಿಕೊಳ್ಳಲು ಬಿಡುವುದಿಲ್ಲ.

ಸ್ವಾಮಿಜಿ:— ನಿನ್ನ ಕರ್ಮ ಮುಂತಾದುವನ್ನು ಆಚೆಗೆ ಬಿಸಾಡು. ನಿನ್ನ ಪೂರ್ವಾರ್ಜಿತ ಕರ್ಮದಿಂದ ನೀನು ಈ ಶರೀರವನ್ನು ಹೊಂದಿರುವುದು ನಿಜವಾದರೆ ಹೀನ ಕೆಲಸಗಳ ಪರಿಣಾಮವನ್ನು ಸತ್ಕಾರ್ಯಗಳ ಪುಣ್ಯ

ದಿಂದ ತೊಡೆದು ಹಾಕು. ನಿನ್ನ ಈ ದೇಹದಲ್ಲೇ ಜೀವನ್ಮುಕ್ತನಾಗಬಾರದೇಕೆ? ಆತ್ಮಪರಿಜ್ಞಾನ ನಿನ್ನ ಕೈಯಲ್ಲೇ ಇದೆ ಎಂದು ತಿಳಿ. ಯತಾರ್ಥ ಜ್ಞಾನದಲ್ಲಿ ಕೆಲಸದ ಸಂಪರ್ಕವೇ ಇರುವುದಿಲ್ಲ. ಜೀವನ್ಮುಕ್ತರಾದಮೇಲೂ ಕೆಲಸಮಾಡುವವರು ಇತರರ ಕಲ್ಯಾಣಕ್ಕಾಗಿ ಮಾಡುವರು. ಅವರಲ್ಲಿ ಕರ್ಮ ಪ್ರತಿಫಲಾಪೇಕ್ಷೆ ಇರುವುದಿಲ್ಲ. ಆಸೆಯ ಬೀಜಾಂಕುರ, ಅವರಲ್ಲಿ ಕೊಂಚವೂ ಇರುವುದಿಲ್ಲ. ಖಂಡಿತವಾದ ಮಾತಿನಲ್ಲಿ ಹೇಳಬೇಕಾದರೆ ಗೃಹಸ್ಥ ಜೀವನದಲ್ಲಿದ್ದು ವಿಶ್ವದ ಕಲ್ಯಾಣಕ್ಕೋಸ್ಕರವಾಗಿ ಕೆಲಸಮಾಡುವುದು ಖಂಡಿತ ಅಸಾಧ್ಯ. ಇಡೀ ಹಿಂದೂ ಧಾರ್ಮಿಕ ಗ್ರಂಥಗಳಲ್ಲೆಲ್ಲಾ ಈ ರೀತಿ ಇರುವುದು ಜನಕರಾಜನ ನಿದರ್ಶನ ಒಂದೇ ಒಂದು. ಈಗಿನ ಕಾಲದಲ್ಲಿ ನೀವೆಲ್ಲಾ ವರ್ಷ ವರ್ಷಕ್ಕೂ ಮಕ್ಕಳನ್ನು ಹೆರುತ್ತಾ ಜನಕ ರಾಜನಂತೆ ಸೋಗು ಹಾಕಲು ಪ್ರಯತ್ನಿಸುವಿರಿ. ಅವನಿಗಾದರೋ ದೇಹದ ಪ್ರಜ್ಞೆ ಕೂಡ ಇರಲಿಲ್ಲ.

ಶಿಷ್ಯ :— ದಯವಿಟ್ಟು ನಾ ನೀ ಜನ್ಮದಲ್ಲೇ ಆತ್ಮಸಾಕ್ಷಾತ್ಕಾರ ಹೊಂದುವಂತೆ ಹರಸಿ.

ಸ್ವಾಮಿಜಿ :— ಭಯವೇನು? ನಿನ್ನಲ್ಲಿ ನಿಜವಾಗಿ ಪ್ರಾಮಾಣಿಕ ತನವಿದ್ದಲ್ಲಿ ಖಂಡಿತವಾಗಿಯೂ ನೀನು ಈ ಜನ್ಮದಲ್ಲೇ ಹೊಂದುವೆ: ಆದರೆ ಮನುಷ್ಯ ಪ್ರಯತ್ನ ಆವಶ್ಯಕ. ಅದೇನೆಂದು ನಿನಗೆ ಗೊತ್ತೆ? "ನಾನು ಖಂಡಿತ ಆತ್ಮಪರಿಜ್ಞಾನ ಹೊಂದುವೆ. ಯಾವ ಅಡ್ಡಿ ಆತಂಕಗಳೇ ಬರಲಿ, ನಾನು ಅವುಗಳನ್ನೆಲ್ಲಾ ಜಯಿಸುವೆ" — ಇಂತಹ ಅಚಲ ನಿರ್ಧಾರವೇ ಪುರುಷಕಾರ. "ನನ್ನ ತಂದೆ, ತಾಯಿ, ಅಣ್ಣ, ತಮ್ಮ, ಗೆಳೆಯ, ಹೆಂಡತಿ ಮಕ್ಕಳು, ಯಾರಿಗೆ ಏನಾದರೂ ಆಗಲಿ. ಅವರು ಬದುಕಲಿ. ಸಾಯಲಿ ನನಗೆ ಆತ್ಮ ಸಾಕ್ಷಾತ್ಕಾರವಾಗುವವರೆಗೂ ನಾನು ಎಂದಿಗೂ ಹಿಂತಿರುಗುವುದಿಲ್ಲ." ಹೀಗೆ ಎಲ್ಲಾ ನಿಮಿತ್ತಗಳನ್ನೂ ಒತ್ತಟ್ಟಿಗಿಟ್ಟು ಗುರಿ ಸೇರಬೇಕೆಂಬ ಏಕಪ್ರಕಾರವಾದ ಅಚಲನಿರ್ಧಾರದಿಂದ ಹೊರಡುವುದೇ ಪುರುಷ ಪ್ರಯತ್ನ. ಇಲ್ಲದಿದ್ದಲ್ಲಿ ಕೇವಲ ಮೃಗಪಕ್ಷಿಗಳೂ ತಮ್ಮ ಹೊಟ್ಟೆಪಾಡಿಗೆ ಪರಿಶ್ರಮಪಡುವುವು. ಮನುಷ್ಯನಿಗೆ ಈ ಶರೀರವಿರುವುದು ಆತ್ಮಸಾಕ್ಷಾತ್ಕಾರ ಪಡೆಯಲು. ನೀನು ಪ್ರಪಂಚದ ಸಾಮಾನ್ಯ ಜನರಂತೆ ಜೀವಿಸುತ್ತಾ, ಜನಸಾಮಾನ್ಯರ ಪ್ರವಾಹದಲ್ಲೇ ತೇಲುತ್ತಿದ್ದರೆ ನಿನಗೆ ಪುರುಷ ಪ್ರಯತ್ನವೆಲ್ಲಿದೆ? ಜನಸಾಮಾನ್ಯರು ಮೃತ್ಯುವಿನ ದವಡೆಗೆ

ನುಗ್ಗುತ್ತಿದ್ದಾರೆ. ಆದರೆ ನೀನು ಅದನ್ನು ಜಯಿಸಬೇಕು. ವೀರನಂತೆ ಮುನ್ನುಗ್ಗು. ಯಾವುದರಿಂದಲೂ ಹಿಂತೆಗೆಯಬೇಡ. ಈ ಸುಖದುಃಖ ದಿಂದ ಕೂಡಿದ ಶರೀರ ಎಷ್ಟು ದಿನ ಬಾಳುವುದು? ನಿನಗೆ ಈ ಮಾನವ ಶರೀರ ಲಭಿಸಿರುವಾಗ ನಿನ್ನ ಆತ್ಮವನ್ನು ಹೊಡೆದೆಬ್ಬಿಸು. ''ನಾನು ನಿರ್ಭಯಾವಸ್ಥೆಯನ್ನು ಹೊಂದಿರುವೆ ನಾನು ಆತ್ಮ, ನನ್ನ ಕೀಳು ಅಹಂಕಾರ ಶಾಶ್ವತವಾಗಿ ನಾಶಹೊಂದಿದೆ. ಈ ಭಾವನೆಯಲ್ಲಿ ಪರಿಪೂರ್ಣ ನಾನು'' ಎಂದು ಹೇಳು. ನಂತರ ಎಲ್ಲಿಯವರೆವಿಗೆ ಈ ದೇಹವಿರುವುದೋ ಅಲ್ಲಿಯವರೆಗೂ ಇತರರಿಗೆ ಈ ನಿರ್ಭಯತೆಯ ಸಂದೇಶವನ್ನು ಸಾರು. ''ನೀನು ಅದೇ ಆಗಿರುವೆ— ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿ ಬೋಧತ. . . .'' ಎದ್ದೇಳು ಎಚ್ಚರಗೊಳ್ಳು, ಗುರಿಮುಟ್ಟುವವರೆಗೂ ನಿಲ್ಲ ಬೇಡ. ನೀನಿದನ್ನು ಪಡೆಯಬಲ್ಲೆಯಾದರೆ ನೀನು ನಿಜವಾಗಿಯೂ ಸಮರ್ಥಪೂರ್ವ ಬಂಗಾಳಿಯೆಂದು ತಿಳಿಯುತ್ತೇನೆ.

---

## ಅಧ್ಯಾಯ ೩೫

**ಸ್ಥಳ:— ಬೇಲೂರು ಮಠ; ವರ್ಷ: ಕ್ರಿ. ಶ. ೧೯೦೧.**

ಷಿಲ್ಲಾಂಗ್ ಬೆಟ್ಟಗಳಿಂದ ಹಿಂತಿರುಗಿ ಬಂದಾಗಿನಿಂದ ಸ್ವಾಮಿಗಳ ದೇಹಸ್ಥಿತಿ ಅಷ್ಟು ಸಮರ್ಪಕವಾಗಿಲ್ಲ. ಅವರ ಪಾದಗಳು ಊದಿಕೊಂಡಿವೆ. ಅವರ ಗುರುಭಾಯಿಗಳಿಗೆ ಇದರಿಂದ ಬಹಳ ಕಳವಳಕ್ಕಾಸ್ಪದವಾಗಿದೆ. ಸ್ವಾಮಿ ನಿರಂಜನಾನಂದರ ಸಲಹೆಯಂತೆ ಸ್ವಾಮಿಗಳು ಕವಿರಾಜರಿಂದ ಔಷಧಿಸೇವಿಸಲು ಒಪ್ಪಿದ್ದಾರೆ. ಮುಂದಿನ ಮಂಗಳವಾರದಿಂದ ಆ ವೈದ್ಯರು ಸಂಪೂರ್ಣ ನೀರು, ಉಪ್ಪನ್ನು ತ್ಯಜಿಸಿ ತೆಗೆದುಕೊಳ್ಳುವ ತಮ್ಮ ಚಿಕಿತ್ಸೆ ಯನ್ನು ಪ್ರಾರಂಭ ಮಾಡುವವರಿದ್ದಾರೆ. ಇಂದು ಶನಿವಾರ. ಶಿಷ್ಯ ಅವರನ್ನು ಕೇಳಿದ ''ಸ್ವಾಮಿಜಿ, ಈ ದಿನಗಳಲ್ಲಿ ಬಿಸಿಲು ತಾಪ ಬಹಳ ತೀಕ್ಷ್ಣ ವಾಗಿದೆ. ನೀವು ನೀರನ್ನು ಪದೇ ಪದೇ ಕುಡಿಯುತ್ತಿದ್ದೀರಿ. ಈ ಚಿಕಿತ್ಸೆ ಗಾಗಿ ನೀರು ಕುಡಿಯುವುದನ್ನು ಸಂಪೂರ್ಣ ನಿಲ್ಲಿಸುವುದೆಂದರೆ ನಿಮಗೆ ಸಹಿಸಲಶಕ್ಯವಾಗಬಹುದು.''

ಸ್ವಾಮಿಜಿ:— ಏನು ಹೇಳುತ್ತಿರುವೆ? ನಾನು ಆ ಚಿಕಿತ್ಸೆಯ ದಿನ ಬೆಳಿಗ್ಗೆ ನೀರನ್ನು ಮುಟ್ಟುವುದಿಲ್ಲೆಂದು ದೃಢ ಪ್ರತಿಜ್ಞೆ ಮಾಡುವೆ. ಅಂದಿನಿಂದಾಚೆ ಒಂದು ತೊಟ್ಟು ನೀರನ್ನೂ ನನ್ನ ಗಂಟಲಿನೊಳಕ್ಕೆ ಹೋಗಲು ಬಿಡುವುದಿಲ್ಲ. ಮೂರು ವಾರಗಳವರೆಗೂ ತೊಟ್ಟು ನೀರೂ ಗಂಟಲೊಳಕ್ಕೆ ಇಳಿಯಲಾರದು. ಈ ದೇಹ ಕೇವಲ ಮನಸ್ಸಿನ ಬಾಹ್ಯ ಹೊದಿಕೆ. ಮನಸ್ಸು ಆಜ್ಞಾಪಿಸಿದ್ದನ್ನೆಲ್ಲಾ ಅದು ನಡೆಸೇ ತೀರಬೇಕು. ಆದ್ದರಿಂದ ಯಾವ ಹೆದರಿಕೆಯೂ ಇಲ್ಲ. ನಿರಂಜನನ ವಿನಂತಿಯಂತೆ ಈ ಚಿಕಿತ್ಸೆಗೆ ಒಪ್ಪಿಕೊಂಡಿರುವೆ. ನನ್ನ ಗುರುಭಾಯಿಗಳ ಪ್ರಾರ್ಥನೆಗೆ ನಾನು ಹೇಗೆ ತಾನೆ ಉದಾಸೀನವಾಗಿರಲಿ?

ಈಗ ಹತ್ತುಗಂಟೆಯ ಸಮಯ. ಸ್ವಾಮಿಗಳು ಹಸನ್ಮುಖದಿಂದ ಭಾವಿ ಸ್ತ್ರೀಯರಮಠದ ವಿಚಾರವಾಗಿ ಮಾತೆತ್ತಿದರು: ಶ್ರೀ ಮಹಾಮಾತೆಯನ್ನೇ ಸ್ಫೂರ್ತಿಯ ಕೇಂದ್ರವಾಗಿಟ್ಟುಕೊಂಡು ಗಂಗಾನದಿಯ ಪೂರ್ವ ತೀರದಲ್ಲಿ ಒಂದು ಮಠವನ್ನು ಸ್ಥಾಪಿಸಬೇಕು. ಈ ಮಠದಲ್ಲಿ ಬ್ರಹ್ಮಚಾರಿಗಳು ಸಾಧುಗಳು ತರಪೇತು ಹೊಂದುವಂತೆಯೇ ಆ ಮಠದಲ್ಲಿಯೂ ಬ್ರಹ್ಮಚಾರಿಣಿಯರು, ಸಾಧ್ವಿಯರು ತರಪೇತಾಗುವರು.

ಶಿಷ್ಯ:— ಸ್ವಾಮಿಜಿ, ಚರಿತ್ರೆ ನಮಗೆ ಪೂರ್ವ ಕಾಲದಲ್ಲಿ ಹೆಂಗಸರಿಗಾಗಿ ಯಾವ ಮಠವೂ ಇದ್ದಂತೆ ಹೇಳುವುದಿಲ್ಲ. ಬುದ್ಧನ ಕಾಲದಲ್ಲಿ ಮಾತ್ರ ಸ್ತ್ರೀಯರಿಗಾಗಿ ಮಠವಿದ್ದುದನ್ನು ಕೇಳಿರುವೆವು. ಆದರೆ ಕ್ರಮೇಣ ಅದರಿಂದ ಅನೇಕ ಭ್ರಷ್ಟಾಚರಣೆಗಳು ಹುಟ್ಟಿ ಸಮಗ್ರದೇಶವೆಲ್ಲಾ ದುಷ್ಕೃತ್ಯದಲ್ಲಿ ಮುಳುಗಿತು.

ಸ್ವಾಮಿಜಿ:— ಅದೇಕೆ ಈ ದೇಶದಲ್ಲಿ ಸ್ತ್ರೀಪುರುಷರಲ್ಲಿ ಇಷ್ಟೊಂದು ಭೇದವಿದೆಯೋ ದೇವರೇ ಬಲ್ಲ—ವೇದಗಳು ಆತ್ಮ ಸರ್ವಪ್ರಾಣಿಗಳಲ್ಲೂ ಏಕಪ್ರಕಾರವಾಗಿದೆ ಎಂದು ಸಾರುವುವು. ನೀವು ಯಾವಾಗಲೂ ಸ್ತ್ರೀಯರನ್ನು ದೂರುವಿರಿ. ಆದರೆ ಹೇಳಿ, ನೀವು ಅವರ ಏಳಿಗೆಗಾಗಿ ಏನನ್ನು ಮಾಡಿರುವಿರಿ? ಸ್ಮೃತಿ ಮುಂತಾದುವುಗಳನ್ನು ಬರೆಯುವುದು, ಕಠಿಣವಾದ ನಿಯಮಗಳಿಂದ ಅವರನ್ನು ಬಂಧನಕ್ಕೀಡು ಮಾಡುವುದು. ಗಂಡಸರು ಹೆಂಗಸರನ್ನು ಕೇವಲ ಒಂದು ಹೆರುವ ಯಂತ್ರವನ್ನಾಗಿ ಮಾರ್ಪಡಿಸಿದ್ದಾರೆ. ಜಗನ್ಮಾತೆಯ ಜೀವಂತ ಸ್ವರೂಪಿಣಿಯರಾದ ಹೆಂಗಸರನ್ನು ಎತ್ತಲು ಪ್ರಯತ್ನಿಸದಿದ್ದಲ್ಲಿ ನೀವು ಮುಂದುವರಿಯಲು ಬೇರಾವ ಹಾದಿಯೂ ಇಲ್ಲ.

ಶಿಷ್ಯ:—ಹೆಂಗಸರು ಗಂಡಸರಿಗೆ ಬಂಧನ ಮತ್ತು ಪ್ರಲೋಭನ ಕಾರಿಗಳು. ತಮ್ಮ ಮೋಹದಿಂದ ಗಂಡಸರ ಜ್ಞಾನ ವೈರಾಗ್ಯವನ್ನು ಮುಚ್ಚುವರು. ಈ ಕಾರಣದಿಂದಲೇ ಧಾರ್ಮಿಕ ಗ್ರಂಥಗಳು ಭಕ್ತಿಜ್ಞಾನವನ್ನು ಅವರು ಹೊಂದಲು ಬಹಳ ಕಷ್ಟವೆಂದು ಹೇಳುವರು.

ಸ್ವಾಮಿಜಿ:—ನೀನಾವ ಧರ್ಮ ಗ್ರಂಥದಲ್ಲಿ ಸ್ತ್ರೀಯರು ಜ್ಞಾನ ಭಕ್ತಿಗೆ ಅನರ್ಹರೆಂದು ಓದಿರುವೆ. ದೇಶ ಅವನತಿಯಲ್ಲಿದ್ದಾಗ ಈ ಪುರೋಹಿತ ವರ್ಗದವರು ಇತರ ಜಾತಿಯವರು ವೇದಗಳನ್ನೋದಲು ಅನರ್ಹರೆಂದು ತೀರ್ಮಾನಿಸಿದಾಗಲೇ ಹೆಂಗಸರ ಹಕ್ಕುಬಾಧ್ಯತೆಯನ್ನು ಕಿತ್ತುಕೊಂಡರು. ಇಲ್ಲದಿದ್ದಲ್ಲಿ ವೇದ ಉಪನಿಷತ್ತುಗಳ ಕಾಲದಲ್ಲಿ ಮೈತ್ರೇಯೀ, ಗಾರ್ಗಿ ಮತ್ತು ಇತರ ಸ್ಮೃತಪುಣ್ಯರಾದ ವ್ಯಕ್ತಿಗಳು ಬ್ರಹ್ಮಜ್ಞಾನದ ವಿಚಾರ ಚರ್ಚಿಸುತ್ತಿದ್ದುದರಿಂದ ಋಷಿಗಳ ಸ್ಥಳವನ್ನು ಕೂಡ ಆಕ್ರಮಿಸಿದ್ದಾರೆ. ವೇದ ಪಾರಂಗತರಾದ ಸಾವಿರ ಜನರಿದ್ದ ಸಭೆಯೊಂದರಲ್ಲಿ ಗಾರ್ಗಿ, ಬ್ರಹ್ಮನ ವಿಷಯದಲ್ಲಿ ಚರ್ಚೆ ನಡೆಯುತ್ತಿದ್ದಾಗ ಯಾಜ್ಞವಲ್ಕ್ಯರನ್ನು ಧೈರ್ಯದಿಂದ ಪ್ರತಿಭಟಿಸಿದಳು. ಯಾವಾಗ ಅಂತಹ ಆದರ್ಶಮಹಿಳೆಯರು ಆಧ್ಯಾತ್ಮಿಕ ಜ್ಞಾನಕ್ಕೆ ಯೋಗ್ಯರಾಗಿರುವರೊ ಆಗ ಅದೇ ಹಕ್ಕು ಬಾಧ್ಯತೆಗಳನ್ನು ಆಧುನಿಕಯುಗದ ಮಹಿಳೆಯರಿಗೆ ಏಕೆ ಕೊಡಬಾರದು? ಒಮ್ಮೆ ಯಾವುದು ನಡೆಯಿತೋ ಅದು ಈಗಲೂ ಆಗಬಹುದು. ಚರಿತ್ರೆ ಪುನರಾವೃತ್ತಿಯಾಗುತ್ತಲೇ ಇರುತ್ತದೆ. ಎಲ್ಲಾ ಜನಾಂಗಗಳೂ ಸ್ತ್ರೀಯರಿಗೆ ಯತಾರ್ಥ ಗೌರವ ಕೊಡುವುದರ ಮೂಲಕ ಹೆಸರುವಾಸಿಯಾದುವು. ಯಾವ ದೇಶ ಅಥವಾ ಜನಾಂಗ ಸ್ತ್ರೀಯರಿಗೆ ಗೌರವ ಕೊಟ್ಟಿಲ್ಲವೊ ಅದು ಖಂಡಿತವಾಗಿಯೂ ಕೀರ್ತಿಪಡೆದಿಲ್ಲ. ಮುಂದೆ ಪಡೆಯುವುದೂ ಇಲ್ಲ. ನಿಮ್ಮ ಜನಾಂಗ ಇಷ್ಟೊಂದು ಅಧೋಗತಿಗಿಳಿದಿರುವುದರ ಮುಖ್ಯ ಕಾರಣವೆ ಜೀವಂತ ಸ್ವರೂಪಿಣಿಯರಾದ ಸ್ತ್ರೀಯರಿಗೆ ಗೌರವ ಕೊಡದಿರುವುದು. ಎಲ್ಲಿ ಸ್ತ್ರೀಯರನ್ನು ಪೂಜ್ಯದೃಷ್ಟಿಯಿಂದ ನೋಡುವರೋ ಅಲ್ಲಿ ದೇವತೆಗಳು ಸಂತುಷ್ಟರಾಗಿರುತ್ತಾರೆ. ಎಲ್ಲಿ ಅಗೌರವದಿಂದ ಕಾಣುವರೋ ಅಲ್ಲಿ ಅವರ ಕ್ರಿಯೆಗಳೆಲ್ಲ ವ್ಯರ್ಥ". ಎಲ್ಲಿ ಹೆಂಗಸರಿಗೆ ತಕ್ಕ ಗೌರವವಿಲ್ಲವೊ ಎಲ್ಲಿ ಅವರು ದುಃಖಿಗಳೋ ಆ ದೇಶ ಅಥವಾ ಜನಾಂಗ ಖಂಡಿತವಾಗಿಯೂ ಏಳಿಗೆಗೆ ಬರುವುದಿಲ್ಲ. ಈ ಕಾರಣದಿಂದಲೇ ಮೊದಲು ಅವರನ್ನು ಎತ್ತಬೇಕು. ಆದರ್ಶಮಠ ಅವರಿಗಾಗಿ

ಸ್ಥಾಪನೆಯಾಗಬೇಕು.

ಶಿಷ್ಯ:— ಸ್ವಾಮಿಜಿ, ನೀವು ಮೊದಲು ಪಾಶ್ಚಾತ್ಯ ದೇಶಗಳಿಂದ ಇಲ್ಲಿಗೆ ಬಂದಾಗ ಸ್ಟಾರ್ ಥಿಯೇಟರಿನಲ್ಲಿ ಕೊಟ್ಟ ಉಪನ್ಯಾಸದಲ್ಲಿ ತಾಂತ್ರಿಕ ಸಾಧನೆಯನ್ನು ಕಟುವಾಗಿ ಟೀಕಿಸಿದ್ದಿರಿ. ಈಗ ತಂತ್ರದಲ್ಲಿ ಹೇಳಿರುವ ಸ್ತ್ರೀಪೂಜೆಯನ್ನು ಸಮರ್ಥಿಸುತ್ತಿರುವಿರಿ. ಒಂದಕ್ಕೊಂದು ವಿರೋಧವಾಗಿ ಹೇಳುವಿರಲ್ಲ?

ಸ್ವಾಮಿಜಿ:— ಈಗಿನ ತಂತ್ರದಲ್ಲಿನ ವಾಮಾಚಾರ ಪದ್ಧತಿಯ ಹೀನಾಚರಣೆಯನ್ನು ನಾನು ಖಂಡಿಸಿದೆ. ನಾನು ತಂತ್ರದಲ್ಲಿನ ನಿಜವಾದ ವಾಮಾಚಾರವನ್ನು ಮಾತೃಪೂಜೆಯನ್ನು ಹಳಿಯಲಿಲ್ಲ. ತಂತ್ರದ ನಿಜ ವಾದ ಉದ್ದೇಶವೇನೆಂದರೆ ಸ್ತ್ರೀಯರನ್ನು ಜಗನ್ಮಾತೆಯ ಅಂಶವೆಂದು ಪೂಜಿಸುವುದು. ಬೌದ್ಧ ಧರ್ಮದ ಅವನತಿಯ ಕಾಲದಲ್ಲಿ ವಾಮಾಚಾರವೂ ಹೆಚ್ಚು ಭ್ರಷ್ಟವಾಯಿತು. ಆ ಭ್ರಷ್ಟತೆಯೇ ಇಂದಿಗೂ ಬೆಳೆದು ಬಂದಿದೆ. ಈಗಲೂ ಹಿಂದೂ ದೇಶದ ತಾಂತ್ರಿಕ ಸಾಧನೆಯು ಅದೇ ಭಾವನೆಗಳಿಂದ ಆಚ್ಛಾದಿತವಾಗಿದೆ. ನಾನು ಆ ಭಯಂಕರ ನೀತಿ ಭ್ರಂಶತೆಯ ಆಚರಣೆ ಗಳನ್ನು ಮಾತ್ರ ಬಹಿರಂಗವಾಗಿ ಖಂಡಿಸಿದೆ. ಈಗಲೂ ಖಂಡಿಸುವೆ. ಆದಿಶಕ್ತಿ ಜಗನ್ಮಾತೆಯ ಅಂಶರೂಪರಾದ ಸ್ತ್ರೀಯರ ಪೂಜೆಯನ್ನು ನಾನೆಂದೂ ದೂಷಿ ಸಿಲ್ಲ. ಅವರ ಬಾಹ್ಯರೂಪ ಗಂಡಸರನ್ನು ಹುಚ್ಚರನ್ನಾಗಿ ಮಾಡಿರಬಹುದು. ಆದರೆ ಅವರ ಆಂತರಿಕ ವಿಕಾಸ, ಜ್ಞಾನ ಭಕ್ತಿ ವಿವೇಚನಾಜ್ಞಾನ, ವೈರಾಗ್ಯ ಮುಂತಾದುವು ಮಾನವನನ್ನು ಸರ್ವಜ್ಞನನ್ನಾಗಿ, ಅನಂತ ಬ್ರಹ್ಮ ನನ್ನು ಅರಿಯುವಂತೆ ಮಾಡುತ್ತವೆ. "ಶಕ್ತಿ ಸಂತುಷ್ಟಳಾದಾಗ ಪ್ರಸನ್ನ ಳಾಗಿ ಮಾನವನ ಬಂಧನ ವಿಮೋಚನೆಗೆ ಕಾರಣಳಾಗುವಳು." ಪೂಜೆ ವ್ರತಗಳಿಂದ ಮಾತೆ ಪ್ರಸನ್ನಳಾಗದಿದ್ದಲ್ಲಿ ಬ್ರಹ್ಮವಿಷ್ಣುಗಳೂ ಕೂಡ ಆಕೆಯ ಹಿಡಿತದಿಂದ ತಪ್ಪಿಸಿಕೊಂಡು ಬಂಧನ ವಿಮುಕ್ತರಾಗಲು ಅಶಕ್ತರು. ಆದ್ದರಿಂದಲೇ ಈ ಗೃಹಲಕ್ಷ್ಮಿಯರನ್ನು ಪೂಜಿಸಲು ಅವರಲ್ಲಿ ಬ್ರಹ್ಮನು ವಿಕಾಸಗೊಳ್ಳಲು ನಾನು ಸ್ತ್ರೀಯರ ಮಠ ಸ್ಥಾಪಿಸುವೆನು.

ಶಿಷ್ಯ:—ಅದೊಂದು ಒಳ್ಳೆಯ ಭಾವನೆಯೆ ಸರಿ. ಆದರೆ ಅದಕ್ಕೆ ಸೇರಲು ನೀವು ಹೆಂಗಸರನ್ನೆಲ್ಲಿಂದ ತರುವಿರಿ? ಈ ಸಮಾಜದ ತೀವ್ರ ಕಟ್ಟುನಿಟ್ಟಿನಲ್ಲಿ ನಿಮ್ಮ ಮಠವನ್ನು ಸೇರಲು ತಮ್ಮ ಮನೆಯಿಂದ ಯಾರನ್ನು ತಾನೇ ಕಳುಹಿಸಲಿಚ್ಛಿಸುವರು.

ಸ್ವಾಮಿಜಿ:—ಅದೇಕೆ? ಈಗಲೂ ಶ್ರೀ ರಾಮಕೃಷ್ಣರ ಸ್ತ್ರೀ ಶಿಷ್ಯೆಯರಿದ್ದಾರೆ. ಅವರ ಸಹಾಯದಿಂದ ನಾನೇ ಮಠವನ್ನು ಸ್ಥಾಪಿಸುವೆ. ಶ್ರೀ ಶಾರದಾದೇವಿ ಅವರ ಕೇಂದ್ರ. ಶ್ರೀ ರಾಮಕೃಷ್ಣರ ಭಕ್ತರ ಹೆಂಡಿರು ಮಕ್ಕಳು, ಅದರ ಪ್ರಥಮ ನಿವಾಸಿಗಳಾಗುವರು. ಏಕೆಂದರೆ ಅವರು ಬೇಗ ಇಂತಹ ಮಠದ ಉಪಯೋಗವನ್ನು ಗ್ರಹಿಸುವರು. ನಂತರ ಅವರ ಮೇಲ್ಪಂಕ್ತಿಯನ್ನನುಸರಿಸಿ ಅನೇಕ ಗೃಹಸ್ಥರು ಇಂತಹ ಒಳ್ಳೆಯ ಕೆಲಸಕ್ಕೆ ಸಹಾಯ ಮಾಡಲು ಮುಂದೆ ಬರುವರು.

ಶಿಷ್ಯ:—ಶ್ರೀ ರಾಮಕೃಷ್ಣರ ಭಕ್ತರು ಖಂಡಿತವಾಗಿ ಇದಕ್ಕೆ ಸೇರುವರು. ಆದರೆ ಸಾಮಾನ್ಯ ಜನರು ಇದಕ್ಕೆ ಅಷ್ಟು ಸಹಾಯ ನೀಡುವರೆಂದು ನನಗೆ ಅನ್ನಿಸುವುದಿಲ್ಲ.

ಸ್ವಾಮಿಜಿ:—ಈ ಜಗತ್ತಿನಲ್ಲಿ ತ್ಯಾಗವಿಲ್ಲದೆ ಯಾವ ಕೆಲಸವೂ ಅಸಾಧ್ಯ. ಅಷ್ಟೊಂದು ಚಿಕ್ಕ ಆಲದ ಬೀಜವನ್ನು ನೋಡಿದವರು ಅದು ಕ್ರಮೇಣ ಅಷ್ಟು ದೊಡ್ಡ ವೃಕ್ಷವಾಗಿ ಬೆಳೆಯುವುದೆಂದು ಯಾರು ತಾನೆ ಊಹಿಸುವರು? ಸದ್ಯಕ್ಕೆ ನಾನು ಮಠವನ್ನು ಹೀಗೆ ಆರಂಭಿಸುವೆ. ಮುಂದೆ ಒಂದೆರಡು ಪೀಳಿಗೆಯ ನಂತರ ನೀನೇ ನೋಡುವೆ, ದೇಶದ ಜನರು ಅಂತಹ ಮಠದ ಬೆಲೆಯನ್ನರಿತು ಇದನ್ನು ಮೆಚ್ಚುವರು. ನನ್ನ ಸ್ತ್ರೀ ಶಿಷ್ಯೆಯರು ಈ ಕೆಲಸಕ್ಕಾಗಿ ತಮ್ಮ ತನುಮನವನ್ನು ಅರ್ಪಿಸುವರು. ನಿಮ್ಮ ಭಯ ಹೇಡಿತನವನ್ನು ಬಿಸಾಡಿ. ನೀವೂ ಈ ಪವಿತ್ರ ಕೆಲಸಕ್ಕೆ ಸಹಾಯಕರಾಗಿ ಈ ಉಚ್ಚತಮ ಆದರ್ಶವನ್ನು ಎಲ್ಲರ ಮುಂದೆಯೂ ಎತ್ತಿ ಹಿಡಿಯಿರಿ. ನೋಡುತ್ತೀರು, ಅದು ಇಡೀ ದೇಶದಮೇಲೆ ತನ್ನ ಕಾಂತಿಯನ್ನು ಬೀರುವುದು.

ಶಿಷ್ಯ:—ಸ್ವಾಮಿಜಿ, ದಯವಿಟ್ಟು, ನೀವು ಈ ಸ್ತ್ರೀ ಮಠಕ್ಕಾಗಿ ಯಾವ ಯೋಜನೆಗಳನ್ನು ತಯಾರಿಸಿರುವಿರಿ ಎಂಬುದನ್ನು ಹೇಳಿ.

ಸ್ವಾಮಿಜಿ:—ಗಂಗಾನದಿಯ ಎದುರು ಪಾರ್ಶ್ವದಲ್ಲಿ ಒಂದು ದೊಡ್ಡ ಪ್ರದೇಶವನ್ನು ಇದಕ್ಕಾಗಿ ಪಡೆಯಲಾಗುವುದು. ಅಲ್ಲಿ ಮದುವೆಯಾಗದ ಹುಡುಗಿಯರು, ಅಥವಾ ಬ್ರಹ್ಮಚಾರಿಣಿಯರಾದ ವಿಧವೆಯರು ವಾಸಿಸುವರು. ನಿಷ್ಠರಾದ ಗೃಹಿಣಿಯರೂ ಆಗಾಗ್ಗೆ ಅಲ್ಲಿಗೆ ಬಂದಿರಲು ಅವಕಾಶವಿರುವುದು. ಗಂಡಸರಿಗೆ ಆ ಮಠದ ಮೇಲೆ ಯಾವ ಸಂಪರ್ಕವೂ ಇರುವುದಿಲ್ಲ. ಮಠದ ಹಿರಿಯ ಸ್ವಾಮಿಗಳು ದೂರದಿಂದಲೇ ಜವಾಬ್ದಾರಿ

ಯನ್ನು ನೋಡಿಕೊಳ್ಳುವರು. ಈ ಸ್ತ್ರೀ ಮಠಕ್ಕೆ ಸೇರಿದಂತೆ ಒಂದು ವಿದ್ಯಾರ್ಥಿನಿಯರ ಶಾಲೆ ಇರುತ್ತದೆ–ಅದರಲ್ಲಿ ಧಾರ್ಮಿಕ ಗ್ರಂಥಗಳು, ಸಾಹಿತ್ಯ, ಸಂಸ್ಕೃತ, ವ್ಯಾಕರಣ, ಕೊಂಚ ಇಂಗ್ಲಿಷ್ ಭಾಷೆ–ಕೂಡ ಕಲಿಸಲ್ಪಡುವುದು. ಹೊಲಿಗೆ, ಪಾಕಶಾಸ್ತ್ರ, ಗೃಹ ಕೆಲಸಗಳ ನಿಯಮ, ಮಕ್ಕಳ ಶಿಕ್ಷಣ ಮುಂತಾದ ಇತರ ವಿಷಯಗಳನ್ನು ಕಲಿಸುವರು. ಜಪ, ಧ್ಯಾನ, ಪೂಜೆ ಮುಂತಾದುವೂ ಈ ಬೋಧನೆಯ ಅವಶ್ಯಕವಾದ ಅಂಗವಾಗಿರುವುದು. ಯಾರು ಮನೆಮಠಗಳನ್ನೆಲ್ಲಾ ಬಿಟ್ಟು ಬಂದು ಇಲ್ಲೇ ಚಿರಸ್ಥಾಯಿಯಾಗಿ ನಿಲ್ಲುವರೋ ಅವರಿಗೆ ಮಠವೇ ಅನ್ನವಸ್ತ್ರಗಳನ್ನೊದಗಿಸುವುದು. ಯಾರಿಗೆ ಹೀಗಿರಲಾಗುವುದಿಲ್ಲವೋ ಅವರು ಈ ಮಠದಲ್ಲೇ ದಿನ ವಿದ್ಯಾರ್ಥಿನಿಯರಂತೆ ಕಲಿಯಲು ಅವಕಾಶವಿರುತ್ತದೆ. ಮಠದ ಅಧ್ಯಕ್ಷಿಣಿಯ ಅನುಮತಿಯಿಂದ ಅಂತಹವರು ಆಗಾಗ್ಗೆ ಮಠದಲ್ಲೇ ಇರಲು ಅವಕಾಶ ಕಲ್ಪಿಸಲಾಗುವುದು. ಆ ಕಾಲದಲ್ಲಿ ಮಠದವರೇ ಅವರ ಖರ್ಚನ್ನು ನೋಡಿಕೊಳ್ಳುವರು. ಹಿರಿಯ ಬ್ರಹ್ಮಚಾರಿಣಿಯರು ಈ ವಿದ್ಯಾರ್ಥಿನಿಯರಿಗೆ ಬ್ರಹ್ಮಚರ್ಯ ದೀಕ್ಷೆಕೊಡುವ ಭಾರ ವಹಿಸುವರು. ಈ ಮಠದಲ್ಲಿ ೪-೫ ವರ್ಷ ಶಿಕ್ಷಣ ಪಡೆದ ತರುವಾಯ ಹುಡುಗಿಯರ ಪೋಷಕರು ಅವರ ಮದುವೆ ಮಾಡಬಹುದು. ಯೋಗ ಮತ್ತು ಆಧ್ಯಾತ್ಮಿಕ ಜೀವನಕ್ಕೆ ಇಚ್ಛಿಸುವುದಾದರೆ ಅವರ ಪೋಷಕರ ಅನುಮತಿಯಿಂದ ಅವರು ಮಠದಲ್ಲೇ ಇದ್ದು ಆಜನ್ಮ ಬ್ರಹ್ಮಚರ್ಯ ದೀಕ್ಷೆ ಪಡೆಯುವರು. ಕಾಲಕ್ರಮೇಣ ಈ ಅವಿವಾಹಿತ ಸನ್ಯಾಸಿನಿಯರೇ ಮುಂದೆ ಮಠದ ಬೋಧಕರು ಮತ್ತು ಅಧ್ಯಾಪಕರಾಗುವರು. ಪಟ್ಟಣ ಹಳ್ಳಿಗಳಲ್ಲಿ ಅವರು ಕೇಂದ್ರಗಳನ್ನು ತೆರೆದು ಸ್ತ್ರೀ ವಿದ್ಯಾಭ್ಯಾಸ ಹರಡಲು ಪ್ರಯತ್ನಿಸುವರು. ಎಲ್ಲಿಯವರೆಗೆ ವಿದ್ಯಾರ್ಥಿನಿಯರು ಈ ಮಠದ ಸಹವಾಸದಲ್ಲಿರುವರೋ ಅಲ್ಲಿಯವರೆಗೂ ಅವರು ಮಠದ ಮೂಲತತ್ತ್ವವಾದ ಬ್ರಹ್ಮಚರ್ಯವನ್ನು ಆಚರಿಸಬೇಕು.

ಮಠದ ವಿದ್ಯಾರ್ಥಿನಿಯರಿಗೆ ಆಧ್ಯಾತ್ಮಿಕತೆ, ತ್ಯಾಗ ಮತ್ತು ನಿಗ್ರಹ ಇವೇ ಧ್ಯೇಯವಾಗಿರಬೇಕು. ಸೇವಾಧರ್ಮ ಅವರ ಜೀವನದ ವ್ರತವಾಗಿರಬೇಕು. ಇಂತಹ ಆದರ್ಶ ಧ್ಯೇಯವಿರುವಾಗ ಯಾರು ತಾನೆ ಅದಕ್ಕೆ ಗೌರವಕೊಟ್ಟು ಶ್ರದ್ಧೆ ಇಡುವುದಿಲ್ಲ! ಈ ದೇಶದ ಸ್ತ್ರೀಯರ ಜೀವನ ಈ ರೀತಿ ರೂಪುಗೊಳ್ಳುವುದಾದರೆ ಸೀತೆ, ಸಾವಿತ್ರಿ, ಗಾರ್ಗಿಯರಂತಹ

ಆದರ್ಶ ಶೀಲಗಳನ್ನು ಮತ್ತೊಮ್ಮೆ ನಮ್ಮ ದೇಶದಲ್ಲಿ ಕಾಣಬಹುದು. ಸಮಾಜದ ನಿಯಮಗಳು ಎಂತಹ ಸ್ಥಿತಿಗೆ ನಮ್ಮ ದೇಶದ ಹೆಂಗಸರನ್ನು ಇಳಿಸಿವೆ, ಎಷ್ಟರ ಮಟ್ಟಿಗೆ ಅವರನ್ನು ಜೀವಶ್ಯವಗಳನ್ನಾಗಿ, ಜಡರನ್ನಾಗಿ ಮಾಡಿದೆ ಎಂಬುದನ್ನು ನೀನು ಪಾಶ್ಚಾತ್ಯ ದೇಶಗಳಿಗೆ ಹೋದರೆ ಗೊತ್ತಾಗುವುದು. ಅವರ ಇಂತಹ ಶೋಚನೀಯಾವಸ್ಥೆಗೆ ನೀವೇ ಕಾರಣ. ಅವರನ್ನು ಪುನಃ ಮೇಲೆತ್ತುವುದೂ ನಿಮ್ಮನ್ನೇ ಅವಲಂಬಿಸಿದೆ. ಆದ್ದರಿಂದಲೇ ನಾನು ಹೇಳುವುದು – ಕಾರ್ಯತತ್ಪರರಾಗಿ, ವೇದ ಮುಂತಾದುವುಗಳನ್ನು ಗಿಣಿಪಾಠಮಾಡುವುದರಿಂದ ಏನಾಗುವುದು ?

ಶಿಷ್ಯ:— ಸ್ವಾಮಿಜಿ, ಈ ಮಠದಲ್ಲಿ ತರಬೇತಾದ ಹುಡುಗಿಯರು ಮದುವೆಯಾದರೆ ಅವರು ಆದರ್ಶಶೀಲವತಿಯರೆಂದು ಹೇಗೆ ಗೊತ್ತಾಗುವುದು ? ಈ ಮಠದಲ್ಲಿ ವಿದ್ಯಾವತಿಯರಾದವರೆಲ್ಲ ಮದುವೆಯಾಗಕೂಡದೆಂಬ ನಿಯಮವನ್ನೇ ತಂದರೆ ಒಳ್ಳೆಯದಲ್ಲವೆ ?

ಸ್ವಾಮಿಜಿ :—ಅದನ್ನು ತಕ್ಷಣವೇ ಕಾರ್ಯರೂಪಕ್ಕೆ ತರಲು ಸಾಧ್ಯವೆ ? ಅವರಿಗೆ ಮೊದಲು ವಿದ್ಯಾಭ್ಯಾಸಕೊಟ್ಟು ಅವರ ಇಷ್ಟಕ್ಕೆ ಬಿಡಬೇಕು. ನಂತರ ಅವರು ತಮಗೆ ಸೂಕ್ತಕಂಡಂತೆ ಮಾಡಲಿ. ಮದುವೆಯಾಗಿ ಗೃಹಸ್ಥರಾದಮೇಲೂ ಹೀಗೆ ಶಿಕ್ಷಣ ಹೊಂದಿದ ಹುಡುಗಿಯರು ತಮ್ಮ ಗಂಡಂದಿರನ್ನು ಈ ಉಚ್ಚತಮ ಆದರ್ಶದಿಂದ ಸ್ಫೂರ್ತಿಗೊಳಿಸಿ ವೀರಮಾತೆಯರಾಗುವರು. ಆದರೆ ಈ ನಿಯಮ ಮಾತ್ರ ಇದ್ದೇತೀರಬೇಕು. ವಿದ್ಯಾರ್ಥಿನಿಯರ ಪೋಷಕರು ಮಾತ್ರ ಅವರಿಗೆ ೧೫ ವರ್ಷಗಳಿಗೆ ಮುಂಚೆ ಮದುವೆ ಮಾಡುವ ಯೋಚನೆಯನ್ನೇ ಇಟ್ಟುಕೊಳ್ಳದಿರಬೇಕು.

ಶಿಷ್ಯ:—ಆದರೆ ಅಂತಹ ವಿದ್ಯಾರ್ಥಿನಿಯರನ್ನು ಸಮಾಜ ಗೌರವದಿಂದ ನೋಡುವುದಿಲ್ಲ. ಯಾರೂ ಅವರನ್ನು ಮದುವೆಯಾಗಲಿಚ್ಛಿಸುವುದಿಲ್ಲ.

ಸ್ವಾಮಿಜಿ :—ಅವರನ್ನೇಕೆ ಮದುವೆಯಾಗಲಿಚ್ಛಿಸರು ? ನೀನಿನ್ನೂ ಸಮಾಜದ ಪ್ರವೃತ್ತಿಯನ್ನೇ ಗ್ರಹಿಸಿಲ್ಲ. ವಿದ್ಯಾವಂತೆಯಾದ ಕುಶಲಿಯಾದ ಹುಡುಗಿಯರಿಗೆ ವರ ಸಿಗಲು ಖಂಡಿತ ಕಷ್ಟವಾಗುವುದಿಲ್ಲ. ಬಾಲ್ಯವಿವಾಹ ಪದ್ಧತಿ ಮುಂತಾದುವನ್ನು ಸಾರುತ್ತಿದ್ದ ಶಾಸ್ತ್ರಗಳನ್ನು ಸಮಾಜ ಈಗ ಖಂಡಿತ ಪಾಲಿಸುವುದಿಲ್ಲ. ಈಗಲೇ ನಿನಗಿದು ಕಾಣಿಸುತ್ತಿಲ್ಲವೆ ?

ಶಿಷ್ಯ:—ಆದರೆ ಖಂಡಿತವಾಗಿಯೂ ಪ್ರಾರಂಭದಲ್ಲಿ ಇವರಿಗೆ ತೀವ್ರ ವಿರೋಧ ಬರುವುದರಲ್ಲಿ ಸಂದೇಹವೇ ಇಲ್ಲ.

ಸ್ವಾಮಿಜಿ:—ಬರಲಿ? ಅದಕ್ಕೆ ಹೆದರಬೇಕಾದ ಆವಶ್ಯಕತೆಯೇನಿದೆ? ನೈತಿಕಧೈರ್ಯದಿಂದ ಪ್ರೇರೇಪಿತರಾಗಿ ಮಾಡುವ ಒಳ್ಳೆಯ ಕೆಲಸಕ್ಕೆ ಎಷ್ಟೇ ಅಡ್ಡಿ ಆತಂಕಗಳು ಬಂದರೂ ಅದು ಅವರ ನೈತಿಕ ಶಕ್ತಿಯನ್ನು ಮತ್ತಷ್ಟು ಜಾಗ್ರತಗೊಳಿಸುವುದು. ಯಾವುದು ಯಾವ ಅಡ್ಡಿ ಆತಂಕಗಳಿಗೂ ವಿರೋಧಕ್ಕೂ ಸಿಗುವುದಿಲ್ಲವೋ ಅದು ಮಾನವನಿಗೆ ನೈತಿಕ ಮೃತ್ಯು. ಹೋರಾಟವೇ ಜೀವನದ ಚಿಹ್ನೆ.

ಶಿಷ್ಯ:—ಹೌದು ಸ್ವಾಮಿಜಿ.

ಸ್ವಾಮಿಜಿ:—ಪರಬ್ರಹ್ಮನ ಪರಾಕಾಷ್ಠತೆಯಲ್ಲಿ ಲಿಂಗಭೇದವಿಲ್ಲ. ಕೇವಲ ಈ ಕಾರ್ಯಕಾರಣ ಸಂಬಂಧ ಪ್ರಪಂಚದಲ್ಲಿ ನಾವದನ್ನು ನೋಡುವೆವು. ಮನಸ್ಸು ಅಂತರ್ಮುಖವಾದಷ್ಟೂ ಈ ಭೇದ ಭಾವನೆ ನಾಶವಾಗುವುದು. ಕಟ್ಟಕಡೆಗೆ ಯಾವಾಗ ಮನಸ್ಸು ಲಿಂಗಾತೀತವಾದ, ಅಭಿನ್ನವಾದ ಬ್ರಹ್ಮನಲ್ಲಿ ತನ್ಮಯಹೊಂದುವುದೋ ಆಗ ಈತ ಗಂಡಸು ಆಕೆ ಹೆಂಗಸು ಎಂಬ ಭಾವನೆಗಳಿಗೆ ಸ್ಥಳವೇ ಇರುವುದಿಲ್ಲ. ಶ್ರೀ ರಾಮಕೃಷ್ಣರ ಜೀವನದಲ್ಲಿ ಇದನ್ನು ಕಣ್ಣಾರೆ ಕಂಡಿರುವೆವು. ಮನುಷ್ಯನಾದವನು ಬ್ರಹ್ಮಜ್ಞಾನ ಪಡೆಯಬಲ್ಲವನಾದರೆ ಸ್ತ್ರೀಯೂ ಏಕೆ ಆ ಜ್ಞಾನ ಪಡೆಯಲಾಗದು? ಆದ್ದರಿಂದಲೇ ಸ್ತ್ರೀಯರಲ್ಲಿ ಒಬ್ಬರು ಬ್ರಹ್ಮಜ್ಞಾನಿಯಾದರೂ ಆಕೆಯ ವ್ಯಕ್ತಿತ್ವದ ಪ್ರಭಾವದಿಂದ ಸಾವಿರಾರುಮಂದಿ ಸ್ತ್ರೀಯರು ಸ್ಫೂರ್ತಿ ಹೊಂದಿ ಸತ್ಯಕ್ಕೆ ಎಚ್ಚೆತ್ತು ಇಡೀ ದೇಶಕ್ಕೆ ಕಲ್ಯಾಣವಾಗಿ ಸಮಾಜವೂ ಭದ್ರವಾಗುವುದು. ಅರ್ಥವಾಯಿತೆ?

ಶಿಷ್ಯ:—ಸ್ವಾಮಿಜಿ, ನಿಮ್ಮ ಮಾತುಗಳಿಂದ ಇಂದು ನನ್ನ ಕಣ್ತೆರೆದಂತಾಗಿದೆ.

ಸ್ವಾಮಿಜಿ:—ಪೂರ್ತಿ ತೆರೆದಿಲ್ಲ. ಸಮಸ್ತವನ್ನೂ ಅರಿಯುವ ಆತ್ಮಜ್ಞಾನವನ್ನು ಎಂದು ಪಡೆಯುವೆಯೊ ಆಗ ನಿನಗೆ ಈ ಲಿಂಗಭಾವನೆ ಸಂಪೂರ್ಣವಾಗಿ ಅಳಿಸಿ ಹೋಗುವುದು. ಆಗ ಮಾತ್ರ ನೀನು ಎಲ್ಲಾ ಸ್ತ್ರೀಯರನ್ನೂ ಬ್ರಹ್ಮನ ಅವತಾರವೆಂದು ಭಾವಿಸಲು ಶಕ್ತನಾಗುವೆ. ಶ್ರೀ ರಾಮಕೃಷ್ಣರು ಹೇಗೆ ಪ್ರತಿಯೊಬ್ಬ ನಾರಿಯಲ್ಲೂ ಜಗನ್ಮಾತೆಯ ಅಂಶವನ್ನು ಅವರು ಯಾವ ಜಾತಿಗೆ ಸೇರಿರಲಿ ಎಂತಹ ಸ್ವಭಾವದವರಾಗಿರಲಿ ಎಲ್ಲರಲ್ಲೂ ಕಾಣುತ್ತಿದ್ದರೆಂಬುದನ್ನು ನಾವು ನೋಡಿದ್ದೇವೆ. ಇದನ್ನು ನೋಡಿರುವುದರಿಂದಲೇ ಇಷ್ಟೊಂದು ತೀವ್ರವಾಗಿ ನಿಮಗೆಲ್ಲಾ ಗ್ರಾಮ

ಗ್ರಾಮಗಳಲ್ಲೂ ವಿದ್ಯಾರ್ಥಿನಿಯರಿಗೆ ಶಾಲೆಗಳನ್ನು ತೆರೆದು ಅವರನ್ನು ಉದ್ಧರಿಸಬೇಕೆಂದು ಹೇಳುವುದು. ಹೆಂಗಸರು ಮುಂದಕ್ಕೆ ಬಂದರೆ ಅವರ ಪುತ್ರರೂ ಅವರ ಸುಗುಣಗಳ ಪ್ರಭಾವದಿಂದ ದೇಶಕ್ಕೆ ಕೀರ್ತಿ ತರುವರು. ಆಗ ಸಂಸ್ಕೃತಿ ಜ್ಞಾನ ಶಕ್ತಿ ಭಕ್ತಿಗಳು ದೇಶಾದ್ಯಂತ ಅಭಿವೃದ್ಧಿಗೆ ಬರುವುದು.

ಶಿಷ್ಯ :—ವರ್ತಮಾನಕಾಲದ ಹೆಂಗಸರ ವಿದ್ಯಾಭ್ಯಾಸದಿಂದ ವಿರುದ್ಧ ಫಲಿತಾಂಶಗಳನ್ನು ನೋಡುತ್ತಿದ್ದೇವೆ. ಈ ಅಲ್ಪಸ್ವಲ್ಪ ವಿದ್ಯೆಯಿಂದಲೇ ಅವರು ಪಾಶ್ಚಾತ್ಯ ನಡೆವಳಿಕೆಯನ್ನು ಅನುಕರಿಸಲು ಹೊರಡುವರು. ಆದರೆ ಎಷ್ಟರಮಟ್ಟಿಗೆ ತ್ಯಾಗಬುದ್ಧಿ, ಆತ್ಮನಿಗ್ರಹ, ಬ್ರಹ್ಮಚರ್ಯ, ತಪಸ್ಸು ಮುಂತಾದ ಗುಣಗಳು ಇವರಿಗೆ ಬರುವುದೊ ನೋಡಬೇಕು.

ಸ್ವಾಮಿಜಿ :—ಪ್ರಾರಂಭದಲ್ಲಿ ಅಂತಹ ದೋಷಗಳು ಅನಿವಾರ್ಯ. ದೇಶದಲ್ಲಿ ಯಾವಾಗ ಒಂದು ಹೊಸಭಾವನೆ ಪ್ರಚಾರಮಾಡಲು ಹೊರಡುವಿರೋ ಕೆಲವರು ಅದನ್ನು ಗ್ರಹಿಸಲಾರದೆ ವಿರೋಧಮಾರ್ಗ ಅನುಸರಿಸುವರು. ಆದರೆ ಇಡೀ ಸಮಾಜಕ್ಕೆ ಅದರಿಂದ ಬಾಧಕವೇನು? ದೇಶದಲ್ಲಿ ಈಗ ಪ್ರಚಾರದಲ್ಲಿರುವ ಕೊಂಚ ಸ್ತ್ರೀ ವಿದ್ಯಾಭ್ಯಾಸದ ಮೂಲ ಕರ್ತರು ನಿಸ್ಸಂಶಯವಾಗಿ ಉದಾರಹೃದಯರು. ಆದರೆ ನಿಜಕ್ಕೂ ಯಾವ ಶಿಕ್ಷಣ ಅಥವಾ ಸಂಸ್ಕೃತಿಯೇ ಆಗಲಿ ಅದಕ್ಕೆ ಆಧ್ಯಾತ್ಮಿಕ ತಳಹದಿ ಇಲ್ಲದೆ ಸ್ಥಾಪಿತವಾದಲ್ಲಿ ಏನಾದರೊಂದು ಕುಂದು ಅಲ್ಲಿ ಪ್ರವೇಶಿಸಿಯೇ ತೀರು ವುದು. ಈಗಿನ ಸ್ತ್ರೀ ವಿದ್ಯಾಭ್ಯಾಸದಲ್ಲಿ ಧರ್ಮವೇ ಅದರ ಕೇಂದ್ರವಾಗಿ ಹರಡಬೇಕು. ಇತರ ಎಲ್ಲಾ ಶಿಕ್ಷಣಗಳೂ ಅದಕ್ಕೆ ಅನುಸಂಗಿಕವಾಗಿರ ಬೇಕು. ಧಾರ್ಮಿಕಶಿಕ್ಷಣ, ಶೀಲನಿರ್ಮಾಣ, ಬ್ರಹ್ಮಚರ್ಯವ್ರತಾಚರಣೆ ಇವುಗಳಿಗೂ ಗೌರವ ಕೊಡಬೇಕು. ಇದುವರೆಗಿನ ಇಂಡಿಯಾದಲ್ಲಿ ಸ್ತ್ರೀ ವಿದ್ಯಾಭ್ಯಾಸದಲ್ಲಿ ಧರ್ಮ ಅನುಸಂಗಿಕವಾಗಿರುವುದರಿಂದ ಇತರ ಕುಂದು ಕೊರತೆಗಳಿಗೆ ಕಾರಣವಾಗಿದೆ. ಆದರೆ ಇದರಲ್ಲಿ ಹೆಂಗಸರ ತಪ್ಪೇನೂ ಇಲ್ಲ. ಬ್ರಹ್ಮಚಾರಿಣಿಯರಿಲ್ಲದೆ ಈ ಸ್ತ್ರೀ ವಿದ್ಯಾಭ್ಯಾಸ ಆರಂಭಿಸಿದುದ ರಿಂದ ಈ ಸುಧಾರಕರು ಈ ರೀತಿ ಎಡವಿದ್ದಾರೆ. ಯಾವ ಒಳ್ಳೆಯ ಕಾರ್ಯ ಸ್ಥಾಪಕರೇ ಆಗಲಿ ತಾವಿಚ್ಛಿಸಿದ ಕೆಲಸಕ್ಕೆ ಪ್ರಾರಂಭಿಸುವ ಮೊದಲು ಕಠಿಣ ತಪಶ್ಚರ್ಯೆಯಿಂದ ಆತ್ಮಜ್ಞಾನವನ್ನು ಹೊಂದಿರಬೇಕು. ಇಲ್ಲದಿದ್ದಲ್ಲಿ ಅವರ ಕೆಲಸಗಳಲ್ಲಿ ಕುಂದು ಇದ್ದೇ ತೀರುವುದು.

ಶಿಷ್ಯ :—ಹೌದು ಸ್ವಾಮಿಜಿ, ಅನೇಕ ವಿದ್ಯಾವತಿಯರಾದ ಮಹಿಳೆಯರು ಕೇವಲ ಕಾದಂಬರಿ ಮುಂತಾದ ಪುಸ್ತಕಗಳನ್ನೋದುತ್ತಾ ಕಾಲಹರಣ ಮಾಡುತ್ತಿದ್ದಾರಂತೆ. ಆದರೆ ಪೂರ್ವ ಬಂಗಾಳದಲ್ಲಿ ವಿದ್ಯಾಭ್ಯಾಸದಿಂದ ಅವರೇನು ತಮ್ಮ ಧಾರ್ಮಿಕವ್ರತ ಅನುಸರಿಸುವುದನ್ನು ಬಿಟ್ಟಿಲ್ಲ. ಈ ಭಾಗದಲ್ಲಿ ಹೇಗಿದೆ?

ಸ್ವಾಮಿಜಿ :—ಎಲ್ಲಾ ದೇಶದ ಜನಾಂಗಗಳೂ ಒಳ್ಳೆಯದು ಮತ್ತು ಕೆಟ್ಟುದು ಎರಡನ್ನೂ ಹೊಂದಿರುವುವು. ನಮ್ಮ ಜೀವಮಾನದಲ್ಲಿ ನಾವು ಒಳ್ಳೆಯ ಕೆಲಸವನ್ನು ಮಾಡಬೇಕು; ಇತರರಿಗೆ ಮಾದರಿಯಾಗಿರಬೇಕು. ಇದೇ ನಮ್ಮ ಕರ್ತವ್ಯ. ಬರೀ ದೋಷಾರೋಪಣೆಯಿಂದ ಯಾವ ಕಾರ್ಯವೂ ಸಾಗುವುದಿಲ್ಲ. ಜನರನ್ನು ಅದು ಕೇವಲ ಹಿಮ್ಮೆಟ್ಟುವಂತೆ ಮಾಡುವುದು. ಯಾರು ಏನು ಬೇಕಾದರೂ ಹೇಳಿಕೊಳ್ಳಲಿ, ಅದಕ್ಕೆ ಪ್ರತಿ ಹೇಳಬೇಡ. ಈ ಮಾಯಾ ಪ್ರಪಂಚದಲ್ಲಿ ನೀನಾವ ಕೆಲಸವನ್ನೇ ಪ್ರಾರಂಭಿಸು ಅದರಲ್ಲಿ ಯಾವುದಾದರೊಂದು ದೋಷ ಇದ್ದೇ ಇರುವುದು. ಬೆಂಕಿಯಲ್ಲಿ ಹೊಗೆ ಇರುವಂತೆ ಎಲ್ಲಾ ಕೆಲಸಗಳಲ್ಲೂ ದೋಷಗಳಿರುವುವು. ಯಾವ ಬೆಂಕಿಯಲ್ಲೇ ಆಗಲಿ ಹೊಗೆ ಬರುವ ಸಂಭವವಿದೆ. ಆದರೆ ಅದಕ್ಕಾಗಿ ನೀನು ಕೈಕಟ್ಟಿ ಕುಳಿತುಕೊಳ್ಳುವೆಯೇನು? ನಿನ್ನ ಕೈಲಾದಷ್ಟೂ ನೀನು ಸತ್ಕಾರ್ಯ ನಿರತನಾಗು.

ಶಿಷ್ಯ :—ಈ ಸತ್ಕಾರ್ಯವೆಂತಹುದು?

ಸ್ವಾಮಿಜಿ :—ಯಾವುದು ಬ್ರಹ್ಮನ ವಿಕಾಸಕ್ಕೆ ನೆರವಾಗುವುದೋ ಅವೆಲ್ಲಾ ಸತ್ಕಾರ್ಯ. ಯಾವ ಕೆಲಸವನ್ನೇ ಆಗಲಿ ಪ್ರತ್ಯಕ್ಷವಾಗಿ ಅಲ್ಲದಿದ್ದರೆ ಪರೋಕ್ಷವಾಗಿಯಾದರೂ ಆತ್ಮನ ವಿಕಾಸಕ್ಕೆ ಸಹಾಯವಾಗುವಂತೆ ಮಾಡಬಹುದು. ಋಷಿಗಳು ಸಾರಿರುವ ಮಾರ್ಗವನ್ನನುಸರಿಸಿದರೆ ಆತ್ಮಪರಿಜ್ಞಾನ ಶೀಘ್ರವಾಗಿ ವಿಕಾಸಗೊಳ್ಳುವುದು. ಇಲ್ಲದಿದ್ದಲ್ಲಿ ಧಾರ್ಮಿಕ ಗ್ರಂಥಕರ್ತರು ಯಾವುದನ್ನು ತಪ್ಪೆಂದು ನಿರೂಪಿಸಿರುವರೋ ಅವುಗಳನ್ನು ಮಾಡುವುದರಿಂದ ಆತ್ಮದ ಬಂಧನಕ್ಕೆ ಕಾರಣವಾಗುತ್ತದೆ. ಅನೇಕವೇಳೆ ಈ ಮಾಯಾಬಂಧನ ಅನೇಕ ಜನ್ಮಗಳು ಕಳೆದರೂ ಮಾಯವಾಗುವುದಿಲ್ಲ. ಆದರೆ ಸರ್ವಕಾಲ ದೇಶಗಳಲ್ಲಿಯೂ ಜೀವನಿಗೆ ಮುಕ್ತಿ ಕೊನೆಗೆ ಸಿಕ್ಕೇ ಸಿಗುವುದು. ಏಕೆಂದರೆ ಜೀವನಧ ಸತ್ಯಸ್ವಭಾವವೇ ಆತ್ಮ. ಯಾರಾದರೂ ತಮ್ಮ ಸ್ವಭಾವವನ್ನು ಬಿಡಲು ಸಾಧ್ಯವೆ? ನಿನ್ನ ನೆರಳಿನೊಡನೆ ನೀನು

ಸಾವಿರವರ್ಷ ಯುದ್ಧ ಮಾಡಿದರೆ ತಾನೆ ಅದನ್ನು ಓಡಿಸಬಲ್ಲೆಯಾ?–ಅದು ಯಾವಾಗಲೂ ನಿನ್ನೊಡನಿದ್ದೇ ತೀರುವುದು.

ಶಿಷ್ಯ:—ಆದರೆ ಸ್ವಾಮಿಜಿ, ಶಂಕರಾಚಾರ್ಯರ ಪ್ರಕಾರ ಕರ್ಮ ಜ್ಞಾನಕ್ಕೆ ವಿರೋಧ. ಜ್ಞಾನ ಮತ್ತು ಕರ್ಮದ ಮಿಲನವನ್ನು ಅವರು ಅನೇಕ ರೀತಿ ಖಂಡಿಸಿದ್ದಾರೆ. ಜ್ಞಾನ ವಿಕಾಸಕ್ಕೆ ಕರ್ಮ ಹೇಗೆ ಸಹಕಾರಿಯಾಗುವುದು?

ಸ್ವಾಮಿಜಿ:—ಶಂಕರರು ಹಾಗೆ ಹೇಳಿದಮೇಲೆ ಪುನಃ ಕರ್ಮ ಜ್ಞಾನದ ಆವಿರ್ಭಾವನೆಗೆ ಪರೋಕ್ಷವಾಗಿ ಸಹಾಯಕಾರಿಯಾಗುವುದು, ಮನಸ್ಸನ್ನು ಪರಿಶುದ್ಧಗೊಳಿಸಲು ಸಹಾಯ ಮಾಡುವುದು ಎಂದು ವಿವರಿಸಿದ್ದಾರೆ. ಆದರೆ ಅವರು ಹೇಳಿರುವ ಅತೀಂದ್ರಿಯ ಜ್ಞಾನದಲ್ಲಿ ಕರ್ಮದ ಸಂಪರ್ಕ ಲೇಶಮಾತ್ರವೂ ಇರುವುದಿಲ್ಲ ಎಂಬುದಕ್ಕೆ ನಾನು ಪ್ರತಿ ಹೇಳುವುದಿಲ್ಲ. ಎಲ್ಲಿಯವರೆಗೆ ಮನುಷ್ಯನಲ್ಲಿ ತಾನು ಮಾಡುತ್ತಿರುವ ಕರ್ಮದ ಪ್ರತಿನಿಧಿ ತಾನು ಎಂಬ ಮತ್ತು ಆ ಕರ್ಮಫಲದಲ್ಲಿ ಪ್ರಜ್ಞೆ ಇದೆಯೋ ಅಲ್ಲಿಯವರೆಗೂ ಅವನು ಸುಮ್ಮನೆ ಸೋಮಾರಿಯಾಗಿ ಕೆಲಸ ಮಾಡದೆ ಇರಲು ಸಾಧ್ಯವಿಲ್ಲ. ಮಾನವ ಸ್ವಭಾವದಲ್ಲಿ ಕರ್ಮ ರಕ್ತಗತವಾಗಿದೆ. ಆದ್ದರಿಂದ ಆತ್ಮವಿಕಾಸಕ್ಕೆ ಸಹಕಾರಿಯಾದ ಸತ್ಕಾರ್ಯಗಳನ್ನು ನೀವೇಕೆ ಮಾಡಕೂಡದು? ಪೂಜಾದೃಷ್ಟಿಯಿಂದ ನೋಡಿದರೆ ಎಲ್ಲಾ ಕರ್ಮವೂ ಅಜ್ಞಾನದ ಫಲವೆಂಬುದು ನಿಶ್ಚಯ. ಆದರೆ ಕಾರ್ಯಕಾರಣ ಸಂಬಂಧವಿರುವವರೆಗೆ ಅದರಿಂದ ಬಹಳ ಉಪಯೋಗವಿದೆ. ನೀನು ಆತ್ಮಸಾಕ್ಷಾತ್ಕಾರ ಮಾಡಿಕೊಂಡಾಗ ಕೆಲಸ ಮಾಡುವುದು ಮಾಡದೆ ಇರುವುದು ಎರಡೂ ನಿನ್ನ ಅಂಕೆಯಲ್ಲಿರುವುದು. ನೀನಾವಸ್ಥೆಯಲ್ಲಿ ಏನು ಮಾಡಿದರೂ ಅದು ಸತ್ಕಾರ್ಯವೇ ಆಗಿರುತ್ತದೆ. ಜೀವ ಜಗತ್ತಿಗೆ ಕಲ್ಯಾಣಕಾರಿಯಾಗುತ್ತದೆ. ಬ್ರಹ್ಮನ ಆವಿರ್ಭಾವನೆಯಾದಮೇಲೆ ನೀನು ಉಸಿರಾಡುವುದೂ ಕೂಡ ಜೀವರಿಗೆ ಒಳ್ಳೆಯದಾಗುವುದಕ್ಕೆ. ನಂತರ ನೀನು ಮಾನಸಿಕ ಯೋಜನೆಗಳ ಮೂಲಕ ಕೆಲಸ ಮಾಡಬೇಕಾದ ಪ್ರಮೇಯವೇ ಇರುವುದಿಲ್ಲ–ನಿನಗೆ ಅರ್ಥವಾಗುತ್ತದೆಯೆ?

ಶಿಷ್ಯ:—ಆಗುತ್ತಿದೆ. ಇದು ವೇದಾಂತ ದೃಷ್ಟಿಯಿಂದ ಕರ್ಮ, ಜ್ಞಾನಗಳ ಸಮನ್ವಯದ ಭವ್ಯ ಉಪಸಂಹಾರ.

ಈ ವೇಳೆಗೆ ಊಟದ ಗಂಟೆ ಹೊಡೆಯಿತು. ಶಿಷ್ಯನು ಅದಕ್ಕೆ

ಹೋಗುವ ಮುನ್ನ ಕೈಜೋಡಿಸಿ ಪ್ರಾರ್ಥಿಸಿದ: "ಸ್ವಾಮಿಜಿ, ನಾನು ಈ ಜನ್ಮದಲ್ಲೇ ಬ್ರಹ್ಮಜ್ಞಾನ ಪಡೆಯುವಂತಾಗಲೆಂದು ನನ್ನನ್ನು ಆಶೀರ್ವದಿಸಿ." ಸ್ವಾಮಿಗಳು ತಮ್ಮ ಹಸ್ತವನ್ನು ಶಿಷ್ಯನ ಮಸ್ತಕದ ಮೇಲಿರಿಸಿ "ಏನೂ ಭಯಪಡದಿರು ಮಗು. ನೀನು ಇತರ ಪ್ರಾಪಂಚಿಕ ಮನುಷ್ಯರಂತಲ್ಲ-ಗೃಹಸ್ಥರಂತೆಯೂ ಅಲ್ಲ, ಪೂರ್ತಿ ಸನ್ಯಾಸಿಯಂತೆಯೂ ಅಲ್ಲ-ಹೊಸ ವರ್ಗದವನು" ಎಂದು ಹೇಳಿದರು.

---

## ಅಧ್ಯಾಯ ೩೬

**ಸ್ಥಳ:**—ಬೇಲೂರು ಮಠ; **ವರ್ಷ:** ಕ್ರಿ. ಶ. ೧೯೦೧.

ಸ್ವಾಮಿಜಿಯವರ ಆರೋಗ್ಯ ಚೆನ್ನಾಗಿಲ್ಲ. ಸ್ವಾಮಿ ನಿರಂಜನಾನಂದರ ಒತ್ತಾಯದ ಪ್ರಾರ್ಥನೆಯಿಂದ ಆರೇಳುದಿನಗಳಿಂದಲೂ ಕವಿರಾಜರ ಔಷಧಿಯನ್ನು ಸ್ವಾಮಿಗಳು ಸೇವಿಸುತ್ತಿದ್ದಾರೆ. ಈ ಚಿಕಿತ್ಸೆಯ ಪ್ರಕಾರ ನೀರು ಕುಡಿಯುವುದು ಪೂರ್ಣ ನಿಷಿದ್ಧ. ಹಾಲು ಕುಡಿದೇ ಅವರ ಬಾಯಾರಿಕೆ ಇಂಗಬೇಕು.

ಶಿಷ್ಯ ಮಠಕ್ಕೆ ಇಂದು ಬಹುಬೇಗ ಬೆಳಿಗ್ಗೆ ಹೊತ್ತಿಗೆಮುಂಚೆ ಬಂದಿದ್ದ. ಅವನನ್ನು ನೋಡಿ ಪ್ರೇಮದಿಂದ ಸ್ವಾಮಿಗಳು "ಓ! ನೀನು ಬಂದಿರುವೆಯಾ? ಒಳ್ಳೆಯದಾಯಿತು. ನಾನು ನಿನ್ನನ್ನೇ ಕುರಿತು ಆಲೋಚಿಸುತ್ತಿದ್ದೆ."

ಶಿಷ್ಯ:—ಸುಮಾರು ಆರೇಳುದಿನಗಳಿಂದಲೂ ನೀವು ಹಾಲಿನಲ್ಲೇ ಇರುವಿರೆಂದು ಕೇಳಿದೆ.

ಸ್ವಾಮಿಜಿ:—ಹೌದು, ನಿರಂಜನನ ತೀವ್ರ ಒತ್ತಾಯದಿಂದ ನಾನೀ ಚಿಕಿತ್ಸೆಗೆ ಒಪ್ಪಬೇಕಾಯಿತು. ನಾನು ಅವರ ಪ್ರಾರ್ಥನೆಗೆ ಕಿವಿಗೊಡದಿರಲಾರೆ.

ಶಿಷ್ಯ:—ನೀವು ನೀರನ್ನು ಬಹಳಸಾರಿ ಕುಡಿಯುತ್ತಿದ್ದಿರಲ್ಲ. ನೀವು ಹೇಗೆ ಈಗ ಅದನ್ನು ಸಂಪೂರ್ಣವಾಗಿ ಬಿಡಲು ಸಾಧ್ಯವಾಯಿತು?

ಸ್ವಾಮಿಜಿ:—ನನಗೆ ಯಾವಾಗ ಈ ಚಿಕಿತ್ಸೆಯಿಂದ ನೀರು

ಕುಡಿಯುವುದನ್ನು ಸಂಪೂರ್ಣ ಬಿಡಬೇಕೆಂದು ಗೊತ್ತಾಯಿತೋ ಆಗಲೇ ದೃಢಮನಸ್ಸಿನಿಂದ ಕುಡಿಯಬಾರದೆಂದು ನಿರ್ಧರಿಸಿದೆ. ಈಗ ನೀರನ್ನು ಕುಡಿಯಬೇಕೆಂಬ ಯೋಚನೆ ಒಮ್ಮೆಯೂ ಮನಸ್ಸಿಗೆ ಬರುವುದಿಲ್ಲ.

ಶಿಷ್ಯ:—ಈ ಚಿಕಿತ್ಸೆಯಿಂದ ನಿಮಗೆ ಗುಣವಾಗುತ್ತಿರಬೇಕಲ್ಲವೆ?

ಸ್ವಾಮಿಜಿ:—ನಾನರಿಯೆ. ಕೇವಲ ನನ್ನ ಗುರುಭಾಯಿಗಳ ಅಪ್ಪಣೆಯನ್ನು ನಾನು ಪಾಲಿಸುತ್ತಿದ್ದೇನೆ.

ಶಿಷ್ಯ:—ಈ ವೈದ್ಯರು ಉಪಯೋಗಿಸುವ ಹಸಿರು ಔಷಧಿಗಳು ನಮ್ಮ ದೇಹ ಪ್ರಕೃತಿಗೆ ಚೆನ್ನಾಗಿ ಒಗ್ಗುವುದೆಂದು ನಾನು ಕೇಳಿದ್ದೇನೆ.

ಸ್ವಾಮಿಜಿ:—ಇದರಲ್ಲಿ ನನ್ನ ಭಾವನೆ ಏನೆಂದರೆ, ಕೇವಲ ಪ್ರವೀಣನಾದ ವೈದ್ಯನ ಕೈಯಲ್ಲಿ ಸತ್ತಾದರೂ ಸಾಯಬಹುದು. ಎಲ್ಲೋ ಕೆಲವು ಪುರಾತನ ಪುಸ್ತಕಗಳನ್ನೋದಿ, ಆ ವಿಷಯದಲ್ಲಿ ಸಂಪೂರ್ಣ ತರಬೇತಾಗದೆ ಎಲ್ಲೋ ಕೆಲವು ರೋಗಗಳನ್ನು ವಾಸಿಮಾಡಿರುವ ಒಬ್ಬ ಪ್ರಾಪಂಚಿಕ ವ್ಯಕ್ತಿಯ ಕೈಯಲ್ಲಿ ರೋಗ ವಾಸಿಯಾಗುವುದನ್ನು ನಿರೀಕ್ಷಿಸುವುದಕ್ಕಿಂತ ಒಬ್ಬ ನಿಷ್ಣಾತ ವೈದ್ಯನ ಕೈಯಲ್ಲಿ ಸಾಯುವುದೇ ಮೇಲು.

ಸ್ವಾಮಿಜಿ ಕೆಲವು ಭಕ್ಷ್ಯಗಳನ್ನು ತಯಾರಿಸಿದ್ದರು. ಅದರಲ್ಲಿ ಒಂದು ಶಾಮಿಗೆಯಿಂದ ಮಾಡಿದ್ದಾಗಿತ್ತು. ಅದನ್ನು ತಿಂದ ಶಿಷ್ಯ ಅದೇನೆಂದು ಕೇಳಿದಾಗ "ಅವು ನಾನು ಲಂಡನ್ನಿನಿಂದ ತಂದ ಕೆಲವು ಒಣಗಿಸಿದ ಮಣ್ಣು ಹುಳುಗಳು" ಎಂದರು. ಎಲ್ಲರೂ ನಗತೊಡಗಿದರು. ಶಿಷ್ಯ ಕಕ್ಕಾ ಬಿಕ್ಕಿಯಾದ. ಸ್ವಾಮಿಜಿ ಅಷ್ಟು ಮಿತಾಹಾರಿಯಾಗಿ ಕಡಿಮೆ ನಿದ್ದೆ ಮಾಡುತ್ತಿದ್ದರೂ ಕೂಡ ಬಹಳ ಚಟುವಟಿಕೆಯಿಂದಿದ್ದಾರೆ. ಕೆಲವು ದಿನಗಳ ಹಿಂದೆ ಒಂದು ಹೊಸ ಎನ್‌ಸೈಕ್ಲೋಪೀಡಿಯಾ ಸಂಪುಟಗಳನ್ನು ಮಠಕ್ಕೆ ತರಿಸಿತ್ತು. ಹೊಳೆಯುತ್ತಿದ್ದ ಆ ಪುಸ್ತಕಗಳನ್ನು ನೋಡಿ ಶಿಷ್ಯ "ಇಡೀ ಜೀವನವೆಲ್ಲಾ ಓದಿದರೂ ಈ ಸಂಪುಟಗಳು ಮುಗಿಯುವ ಮಟ್ಟಿಗೆ ಕಾಣೆ" ಎಂದು ಸ್ವಾಮಿಜಿಗೆ ಹೇಳಿದ. ಅವನಿಗೆ ಸ್ವಾಮಿಜಿ ಅಷ್ಟು ಹೊತ್ತಿಗಾಗಲೇ ಹತ್ತು ಸಂಪುಟಗಳನ್ನು ಮುಗಿಸಿ ಹನ್ನೊಂದನೆಯದನ್ನಾಗಲೇ ಓದಲು ಪ್ರಾರಂಭಿಸಿದ್ದಾರೆಂದು ಗೊತ್ತಿರಲಿಲ್ಲ.

ಸ್ವಾಮಿಜಿ:—ನೀನು ಏನು ಹೇಳುವೆ? ಈ ಹತ್ತು ಸಂಪುಟಗಳಲ್ಲಿ ಯಾವುದನ್ನು ಬೇಕಾದರೂ ಕೇಳು. ನಾನೆಲ್ಲಕ್ಕೂ, ಉತ್ತರ ಹೇಳುವೆ.

ಶಿಷ್ಯ :—(ಆಶ್ಚರ್ಯದಿಂದ) ನೀವು ಈ ಪುಸ್ತಕಗಳನ್ನೆಲ್ಲಾ ಓದಿರುವಿರಾ ?

ಸ್ವಾಮಿಜಿ:—ಮತ್ತೆ. ಇಲ್ಲದಿದ್ದಲ್ಲಿ ನಿನಗೇಕೆ ಪ್ರಶ್ನೆಕೇಳೆಂದು ಹೇಳುತ್ತಿದ್ದೆ ?

ಪ್ರಶ್ನೆ ಕೇಳಿದಾಗ ಸ್ವಾಮಿಜಿ ಕೇಳಿದ್ದಕ್ಕೆಲ್ಲಾ ಉತ್ತರ ಹೇಳಿದ್ದಲ್ಲದೆ ಆ ಸಂಪುಟಗಳಲ್ಲಿ ಆರಿಸಿದ ಕೆಲವು ಕ್ಲಿಷ್ಟಶೈಲಿಯಲ್ಲಿದ್ದ ಅನೇಕ ವಿಷಯಗಳನ್ನೂ ಕೆಲವು ಕಡೆ ಬಾಯಿಪಾಠದಂತೆ ಹೇಳಿದರು. ಅವಾಕ್ಕಾದ ಶಿಷ್ಯ ಪುಸ್ತಕಗಳನ್ನು ಒತ್ತಟ್ಟಿಗಿಟ್ಟು ಹೇಳಿದ, "ಇದು ಖಂಡಿತ ಮಾನುಷ ಶಕ್ತಿ ಅಲ್ಲ."

ಸ್ವಾಮಿಜಿ :—ಗೊತ್ತಾಯಿತೆ ? ತೀವ್ರ ಬ್ರಹ್ಮಚರ್ಯಾಭ್ಯಾಸದಿಂದ ವಿದ್ಯೆಯನ್ನೆಲ್ಲಾ ಬಹು ಸ್ವಲ್ಪಕಾಲದಲ್ಲೇ ಕಲಿತು ಪೂರ್ಣಜ್ಞಾನಪಡೆಯಬಹುದು. ಒಮ್ಮೆ ತಿಳಿದ ಅಥವಾ ಯಾರಿಂದಲಾದರೂ ಒಮ್ಮೆ ಕೇಳಿದುದನ್ನು ಮರೆಯದೆ ಇರುವಂಥಾ ಜ್ಞಾಪಕಶಕ್ತಿ ಅದರಿಂದ ಬರುವುದು. ನಮ್ಮದೇಶದಲ್ಲಿ ಬ್ರಹ್ಮಚರ್ಯದ ಅಭಾವವಿರುವುದರಿಂದಲೇ ಈ ದೇಶ ಇಷ್ಟೊಂದು ಅಧೋಗತಿಗಿಳಿದಿದೆ.

ಶಿಷ್ಯ :—ನೀವೇನು ಬೇಕಾದರೂ ಹೇಳಿ. ಇಂತಹ ಅಮಾನುಷಿಕ ಶಕ್ತಿ ಕೇವಲ ಬ್ರಹ್ಮಚರ್ಯಾಭ್ಯಾಸಮಾಡಿದ ಮಾತ್ರದಿಂದ ಬರುವ ಫಲವಲ್ಲ. ಬೇರೇನೋ ಇದ್ದೇ ಇರಬೇಕು.

ಸ್ವಾಮಿಜಿ ಇದಕ್ಕೆ ಉತ್ತರವನ್ನೇನೂ ಕೊಡಲಿಲ್ಲ.

ನಂತರ ಸ್ವಾಮಿಜಿ ಎಲ್ಲಾ ಬಗೆಯ ತತ್ತ್ವಗಳಲ್ಲೂ ಇರುವ, ಬಗೆ ಬಗೆಯ ಕಷ್ಟಗಳನ್ನೆಲ್ಲಾ ಕುರಿತು ದೀರ್ಘವಾಗಿ ಉಜ್ವಲವಾಗಿ, ಅದರ ಪರಿಣಾಮಗಳನ್ನು ಕುರಿತು ಚರ್ಚಿಸಿದರು. ಸಂಭಾಷಣೆಯಾಗುತ್ತಿರುವಾಗ ಸ್ವಾಮಿ ಬ್ರಹ್ಮಾನಂದರು ಆ ಕೊಠಡಿಗೆ ಪ್ರವೇಶಿಸಿ ಶಿಷ್ಯನಿಗೆ ಹೇಳಿದರು : ನೀನೊಳ್ಳೆ "ಹುಡುಗನಯ್ಯ ! ಸ್ವಾಮಿಜಿಗೆ ಮೈಸರಿಯಿಲ್ಲ. ಏನಾದರೂ ತಮಾಷೆಯಾಗಿ ಮಾತನಾಡಿ ಅವರನ್ನು ನಗಿಸುವುದನ್ನು ಬಿಟ್ಟು ಅತ್ಯಂತ ಕಠಿಣವಾದ ಈ ವಿಷಯಗಳನ್ನು ಕುರಿತು ಎಡಬಿಡದೆ ಅಷ್ಟು ಹೊತ್ತಿನಿಂದಲೂ ಮಾತನಾಡುವಂತೆ ಮಾಡಿರುವೆ." ಶಿಷ್ಯನಿಗೆ ನಾಚಿಕೆಯಾಯಿತು. ಆದರೆ ಸ್ವಾಮಿಜಿ ಸ್ವಾಮಿ ಬ್ರಹ್ಮಾನಂದರಿಗೆ, "ನಿನ್ನ ಕವಿರಾಜರ ಚಿಕಿತ್ಸೆಯನ್ನು ಬದಿಗಿಡು. ಇವರೆಲ್ಲಾ ನನ್ನ ಮಕ್ಕಳು, ಅವ

ರಿಗೆ ಬೋಧಿಸುವುದರಿಂದ ಈ ದೇಹ ಬಿದ್ದು ಹೋಗುವಹಾಗಿದ್ದರೆ ಹೋಗಲಿ. ಅದಕ್ಕೆ ನಾನು ಸ್ವಲ್ಪವೂ ಬೆಲೆಕೊಡುವುದಿಲ್ಲ'' ಎಂದರು.

ನಂತರ ಏನೇನೊ ಲೋಕಾಭಿರಾಮವಾಗಿ ಮಾತನಾಡುತ್ತಿದ್ದೆವು. ನಂತರ ಬಂಗಾಳಿ ಸಾಹಿತಿ ಭರತ ಚಂದ್ರರ ವಿಚಾರ ಬಂದಿತು. ಮೊದಲಿನಿಂದಲೂ ಸ್ವಾಮಿಜಿ ಭರತ ಚಂದ್ರರನ್ನು ಅನೇಕ ಬಗೆಯಲ್ಲಿ ಟೀಕಿಸಿದ್ದರು. ಆತನ ಕಾಲದಲ್ಲಿ ಜನ ಜೀವನ, ನಡೆವಳಿಕೆಗಳು, ವಿವಾಹ ಪದ್ಧತಿಗಳು ಮತ್ತು ಸಮಾಜದ ಇತರ ಸಂಪ್ರದಾಯವನ್ನು ಕುರಿತು ವಿಡಂಬನೆ ಮಾಡಿದರು. ಭರತಚಂದ್ರ ಬಾಲ್ಯವಿವಾಹ ಪಕ್ಷವಾದಿ. ಆತನ ಪದ್ಯಗಳು ಬಹಳ ಕೀಳುಮಟ್ಟದ್ದು ಮತ್ತು ಅಶ್ಲೀಲತೆಯಿಂದ ತುಂಬಿದ್ದವು. ಬಂಗಾಳವೊಂದನ್ನು ಬಿಟ್ಟರೆ ಮತ್ತಾವ ಸುಸಂಸ್ಕೃತ ಸಮಾಜವೂ ಅದನ್ನು ಇಷ್ಟಪಡುವುದಿಲ್ಲ ಎಂದು ಅಭಿಪ್ರಾಯಪಟ್ಟರು. ಅವರು ಹೇಳಿದ್ದೇನೆಂದರೆ ''ಅಂತಹ ಪುಸ್ತಕಗಳು ಹುಡುಗರ ಕೈಗೆ ಸಿಗದಂತೆ ಎಚ್ಚರಿಕೆಯಿಂದಿರಬೇಕು.'' ನಂತರ ಮೈಕೇಲ್ ಮಧುಸೂದನ ದತ್ತರವಿಚಾರವಾಗಿ ಅವರು ಹೇಳಿದರು : ''ನಿಮ್ಮ ಸಂಸ್ಥಾನದಲ್ಲಿ ಅವನೊಬ್ಬ ಅದ್ಭುತ ಪ್ರತಿಭಾಶಾಲಿ. ಬಂಗಾಳಿ ಸಾಹಿತ್ಯದಲ್ಲಿ ಅವನ ಮೇಘನಾದವಧ ದಂತಹ ಮಹಾಕಾವ್ಯ ಮತ್ತೊಂದಿಲ್ಲ. ಈಗಿನ ಆಂಗ್ಲ ಸಾಹಿತ್ಯದಲ್ಲಿ ಕೂಡ ಎಲ್ಲಿಯೂ ಅಂತಹ ಪದ್ಯ ಕಾಣಬರುವುದು ಅಪರೂಪ.

ಶಿಷ್ಯ:—ಆದರೆ ಸ್ವಾಮಿಜಿ ಮೈಕೇಲ್‌ನಿಗೆ ಬಹಳ ಆಡಂಬರದ ಶೈಲಿ ಇಷ್ಟ.

ಸ್ವಾಮಿಜಿ :—ನಿಮ್ಮ ದೇಶದಲ್ಲಿ ಹೊಸದಾಗಿ ಯಾರು ಏನನ್ನು ಮಾಡಿದರೂ ಅದನ್ನು ಛೀಮಾರಿ ಮಾಡುವಿರಿ. ಅವನು ಏನು ಹೇಳುತ್ತಾನೆಂಬುದನ್ನು ಮೊದಲು ಪರೀಕ್ಷಿಸಿ. ಅದನ್ನು ಬಿಟ್ಟು ನಿಮ್ಮ ದೇಶೀಯರು ಯಾವುದು ಪುರಾತನವಾಗಿಲ್ಲವೊ ಅದನ್ನೆಲ್ಲಾ ತುಚ್ಛೀಕರಿಸುವರು. ಉದಾಹರಣೆಗೆ ಬಂಗಾಳಿ ಸಾಹಿತ್ಯದ ಶಿರೋರತ್ನವಾದ ಈ ಮೇಘನಾದವಧ ಕಾವ್ಯವನ್ನು ಹಳಿಯುವುದಕ್ಕೋಸ್ಕರವೇ ಚುಚುಂದರಿ ವಧ ಎಂಬ ವಿಡಂಬನ ಕಾವ್ಯ ಬರೆಯಲ್ಪಟ್ಟಿತು. ಅವರು ಎಷ್ಟೇ ವ್ಯಂಗ್ಯವಾಗಿ ಬರೆಯಲಿ ಅದರಿಂದೇನೂ ಫಲವಿಲ್ಲ. ಆ ಮೇಘನಾದವಧ ಕಾವ್ಯ ಹಿಮಾಲಯದಂತೆ ಆಚಂದ್ರಾರ್ಕವಾದ ಕೀರ್ತಿಯನ್ನು ಹೊಂದಿದೆ. ಈ ಟೀಕೆಮಾಡುವ ವಿಮರ್ಶಕರ ಅಭಿಪ್ರಾಯಗಳೆಲ್ಲ ಮೂಲೆಗೆ ಬಿದ್ದಿವೆ. ಮೈಕೇಲನು ಸ್ವಂತ ಶೈಲಿಯಲ್ಲಿ

ಎಂತಹ ವೀರ್ಯವತ್ತಾದ ಪದಪ್ರಯೋಗ ಮಾಡಿ ಈ ಮಹಾ ಕಾವ್ಯ ಬರೆದಿದ್ದಾನೆಂಬುದು ಜನಸಾಮಾನ್ಯರಿಗೆ ಹೇಗೆ ತಾನೆ ಗೊತ್ತಾಗುವುದು? ಈಗ ತಾನೆ ಗಿರೀಶಬಾಬು ನಿಮ್ಮ ಪಂಡಿತರು ಅಷ್ಟೊಂದು ಅವಹೇಳನ ಮಾಡಿ ಟೀಕಿಸುತ್ತಿರುವ ಆ ನವಶೈಲಿಯಲ್ಲಿ ಅದ್ಭುತವಾದ ಗ್ರಂಥಗಳನ್ನು ಬರೆಯುತ್ತಿದ್ದಾನೆ. ಆದರೆ ಗಿರೀಶಬಾಬು ಅದಕ್ಕೆ ಕಿವಿಗೊಡುವನೇನು? ಜನರು ಕೆಲವು ಕಾಲದ ನಂತರ ಅದನ್ನು ಮೆಚ್ಚುವರು.

ಮೈಕೇಲನ ವಿಚಾರ ಹೀಗೆ ಕೆಲವು ಕಾಲ ಮಾತನಾಡುತ್ತಾ ಸ್ವಾಮಿಜಿ ಹೇಳಿದರು, "ಕೆಳಗಣ ಲೈಬ್ರರಿಯಲ್ಲಿ ಮೇಘನಾದವಧ ಕಾವ್ಯವನ್ನು ತೆಗೆದುಕೊಂಡು ಬಾ." ಶಿಷ್ಯನು ತಂದಾಗ ಅವರು ಹೇಳಿದರು "ಈಗ ಓದು, ನೀನು ಹೇಗೆ ಓದುವೆ ನೋಡೋಣ."

ಶಿಷ್ಯ ಒಂದು ಭಾಗವನ್ನು ಓದಿದ. ಅದು ಸ್ವಾಮಿಜಿಗೆ ಒಗ್ಗದೆ ಅವರೇ ಪುಸ್ತಕವನ್ನು ತೆಗೆದುಕೊಂಡು ಅದನ್ನು ಓದುವುದು ಹೇಗೆಂದು ತೋರಿಸಿಕೊಟ್ಟು ಪುನಃ ಓದುವಂತೆ ಹೇಳಿದರು. ನಂತರ ಅವರು "ಈ ಕಾವ್ಯದ ಯಾವ ಭಾಗ ಅತ್ಯುತ್ತಮವಾದುದೆಂದು ನೀನು ಬಲ್ಲೆಯಾ?" ಎಂದರು. ಶಿಷ್ಯ ನಿರುತ್ತರನಾದಾಗ ಸ್ವಾಮಿಗಳು "ಯಾವ ಭಾಗದಲ್ಲಿ ಇಂದ್ರಜಿತ್ತು ಯುದ್ಧದಲ್ಲಿ ಮಡಿದಿದ್ದಾನೆ, ಶೋಕಭರಿತಳಾಗಿದ್ದರೂ ಮಂಡೋದರಿ ರಾವಣನನ್ನು ಯುದ್ಧವಿಮುಖನಾಗುವಂತೆ ಪ್ರಯತ್ನಿಸುತ್ತಿದ್ದಾಳೆ— ರಾವಣ ತನ್ನ ಮನಸ್ಸಿನಿಂದ ಬಲವಂತವಾಗಿ ಪುತ್ರ ಶೋಕವನ್ನು ತಳ್ಳಿ, ಮಹಾ ವೀರನಂತೆ ಯುದ್ಧಕ್ಕೆ ಹೋಗಲು ನಿರ್ಧರಿಸಿದ್ದಾನೆ. ತೀವ್ರ ಕೋಪ, ದ್ವೇಷಗಳಲ್ಲಿ ಪತ್ನೀ ಪುತ್ರರನ್ನೂ ಮರೆತು ಯುದ್ಧಕ್ಕೆ ನುಗ್ಗಲು ಸಿದ್ಧನಾಗಿದ್ದಾನೆ— ಅದೇ ಈ ಪುಸ್ತಕದಲ್ಲಿ ಅತ್ಯುತ್ತಮವಾದ ಭಾಗ. ಏನುಬೇಕಾದರೂ ಬರಲಿ ನನ್ನ ಕರ್ತವ್ಯವನ್ನು ಮರೆಯುವುದಿಲ್ಲ — ಈ ಪ್ರಪಂಚ ಇದ್ದರೆಷ್ಟು, ಹೋದರೆಷ್ಟು— ಇದು ಒಬ್ಬ ಮಹಾ ವೀರನಾದವನ ಬಾಯಲ್ಲಿ ಬರುವಂತಹ ಮಾತುಗಳು. ಇಂತಹ ಭಾವನೆಗಳಿಂದ ಸ್ಫೂರ್ತಿಗೊಂಡು ಮೈಕೇಲನು ಆ ಭಾಗವನ್ನು ಬರೆದಿದ್ದಾನೆ."

ಹೀಗೆ ಹೇಳುತ್ತಾ ಸ್ವಾಮಿಜಿ ಪುಸ್ತಕದಲ್ಲಿ ಆ ಭಾಗವನ್ನು ತೆಗೆದುಕೊಂಡು ರಸವತ್ತಾಗಿ ಓದಲು ಮೊದಲು ಮಾಡಿದರು.

# ಅಧ್ಯಾಯ ೩೭

**ಸ್ಥಳ:—ಬೇಲೂರು ಮಠ; ವರ್ಷ: ಕ್ರಿ. ಶ. ೧೯೦೧.**

ಕವಿರಾಜರ ಚಿಕಿತ್ಸೆಯಲ್ಲಿ ಸ್ವಾಮಿಜಿಗೆ ಕೊಂಚ ಗುಣವಾಗಿದೆ. ಶಿಷ್ಯ ಈಗ ಮಠದಲ್ಲಿಯೇ ಇದ್ದಾನೆ. ಸ್ವಾಮಿಜಿಗೆ ಸೇವೆ ಮಾಡುತ್ತಿದ್ದಾಗ ಶಿಷ್ಯ "ಆತ್ಮ ಸರ್ವವ್ಯಾಪಿ, ಎಲ್ಲಾ ಜೀವಿಗಳ ಜೀವ, ತೀರ ಹತ್ತಿರದಲ್ಲಿದ್ದಾನೆ. ಆದರೂ ಅದನ್ನೇಕೆ ನೋಡಲಾಗುವುದಿಲ್ಲ" ಎಂದು ಕೇಳಿದ.

ಸ್ವಾಮಿಜಿ:—ನಿನಗೆ ಕಣ್ಣಿದೆ ಎಂಬುದನ್ನು ನೀನೇ ನೋಡುವಿಯೇನು? ಇತರರು ಕಣ್ಣುಗಳ ವಿಚಾರ ಮಾತನಾಡಿದಾಗ ನಿನಗೂ ಕಣ್ಣಿದೆ ಎಂಬ ನೆನಪಾಗುವುದು. ಅಲ್ಲದೆ ಧೂಳು ಮಣ್ಣೇನಾದರೂ ನಿನ್ನ ಕಣ್ಣಿನೊಳಗೆ ಬಿದ್ದು ವೇದನೆಯನ್ನುಂಟುಮಾಡಿದಾಗ ನಿನಗೂ ಕಣ್ಣಿದೆ ಎಂದು ಚೆನ್ನಾಗಿ ಗೊತ್ತಾಗುವುದು. ಹಾಗೆಯೇ ವಿಶ್ವಾತ್ಮನ ಸಾಕ್ಷಾತ್ಕಾರವೂ ಸುಲಭವಾಗಿ ಸಿಕ್ಕುವಂತಹುದಲ್ಲ. ಧರ್ಮಶಾಸ್ತ್ರಗಳನ್ನೋದುವುದರಿಂದ ಮತ್ತೊಬ್ಬರಿಂದ ಉಪದೇಶ ಕೇಳುವುದರಿಂದ ಇದರ ಸ್ವಭಾವ ಕೊಂಚ ಮಟ್ಟಿಗೆ ನಿನಗೆ ತಿಳಿಯುವುದು. ಆದರೆ ಯಾವಾಗ ಈ ಪ್ರಪಂಚದ ಕಹಿ ವೇದನೆ, ಕಷ್ಟಗಳ ಪೆಟ್ಟಿನಿಂದ ನಿನ್ನ ಹೃದಯ ಜರ್ಝರಿತನಾಗುವುದೋ, ನಮ್ಮ ಹತ್ತಿರದ ಪ್ರಿಯತಮ ಬಂಧುಗಳು ಮರಣವನ್ನೈದುವರೋ ಆಗ ಮಾನವ ತಾನು ದಿಕ್ಕಿಲ್ಲದ ಅನಾಥನೆಂದು ತಿಳಿಯುತ್ತಾನೆ. ದಾಟಲಾಗದ ಅಭೇದ್ಯವಾದ ಶೂನ್ಯತೆ ಅವನ ಮನಸ್ಸನ್ನೆಲ್ಲಾ ಆವರಿಸಿದಾಗ ಜೀವನು ಆತ್ಮಸಾಕ್ಷಾತ್ಕಾರಕ್ಕೆ ಹಾತೊರೆಯುತ್ತಾನೆ. ಅದಕ್ಕೇ ದುಃಖ ಆತ್ಮಜ್ಞಾನಕ್ಕೆ ಸಹಕಾರಿ. ಆದರೆ ಈ ಅನುಭವದ ಕಹಿನೆನಪನ್ನು ನಾವು ಯಾವಾಗಲೂ ನೆನಪಿನಲ್ಲಿಟ್ಟಿರಬೇಕು. ಯಾರು ಕೇವಲ ನಾಯಿ ಬೆಕ್ಕುಗಳಂತೆ ಜೀವನದ ಅಳಲನ್ನು ಅನುಭವಿಸುತ್ತಾ ಸಾಯುವನೋ ಅವನು ಮನುಷ್ಯನೇನು? ಯಾವ ಮನುಷ್ಯ ಸುಖದುಃಖದ ತೀಕ್ಷ್ಣ ಪ್ರಹಾರಗಳಿಂದ ಜರ್ಝರಿತನಾದಾಗಲೂ ಯುಕ್ತಾಯುಕ್ತ ವಿಚಾರಮಾಡುವನೋ ಅವನು ಮಾತ್ರ ಮನುಷ್ಯ. ಅಂಥವನು ಇವೆಲ್ಲಾ ಕ್ಷಣಭಂಗುರಗಳೆಂದು ತಿಳಿದು ಆತ್ಮನಲ್ಲಿ ಗಾಢವಾದ ಭಕ್ತಿಯುಳ್ಳವನಾಗುವನು. ಇದೇ ಮನುಷ್ಯರಿಗೂ ಪ್ರಾಣಿಗಳಿಗೂ ಇರುವ ವ್ಯತ್ಯಾಸ. ಯಾವುದು ಅತ್ಯಂತ ಹತ್ತಿರವಿದೆಯೋ

ಅದು ಬೇಗ ದೃಷ್ಟಿಗೆ ಗೋಚರವಾಗುವುದಿಲ್ಲ. ಆತ್ಮನು ನಮಗೆ ಅತ್ಯಂತ ಹತ್ತಿರದವನು, ಅದಕ್ಕೇ ಉದಾಸೀನ. ಅಸ್ಥಿರವಾದ ಮನಸ್ಸಿಗೆ ಅದರ ಅರಿವೇ ಆಗುವುದಿಲ್ಲ. ಯಾವ ಮನುಷ್ಯ ಚಟುವಟಿಕೆಯುಳ್ಳವನಾಗಿ, ಶಾಂತನಾಗಿ, ಆತ್ಮನಿಗ್ರಹ ಮತ್ತು ವಿಮರ್ಶಾ ಜ್ಞಾನವುಳ್ಳವನಾಗಿರುವನೋ ಅವನು ಈ ಬಾಹ್ಯ ಜಗತ್ತನ್ನು ನಿರ್ಲಕ್ಷಿಸಿ ಅಂತರ್‌ಜ್ಞಾನದಲ್ಲೇ ಹೆಚ್ಚುಹೆಚ್ಚು ಮುಳುಗುತ್ತಾನೆ. ಆತ್ಮನ ಮಹಾತ್ಮ್ಯೆಯನ್ನರಿತು ತಾನೂ ಮಹಾತ್ಮ ನಾಗುವನು. ಆಗ ಮಾತ್ರ ಅವನಿಗೆ ಆತ್ಮಪರಿಜ್ಞಾನ ಲಭಿಸಿ ಶಾಸ್ತ್ರದಲ್ಲಿ ಹೇಳುವ "ನಾನೇ ಆತ್ಮ" "ನೀನೇ ಅದು ಆಗಿರುವೆ, ಓ! ಶ್ವೇತಕೇತು" ಮುಂತಾದುವುಗಳಲ್ಲಿರುವ ಸತ್ಯವನ್ನು ಅರಿಯುತ್ತಾನೆ. ಅರ್ಥವಾಯಿತೆ?

ಶಿಷ್ಯ :— ಆಯಿತು ಸ್ವಾಮಿಜಿ, ಹೀಗೆ ದುಃಖ ಸಂಕಟಗಳ ಹಾದಿ ಯಿಂದ ಆತ್ಮಜ್ಞಾನಪಡೆದುಕೊಳ್ಳುವ ಮಾರ್ಗವೇಕೆ? ಇದಕ್ಕೆ ಬದಲಾಗಿ ಸೃಷ್ಟಿಯೇ ಇಲ್ಲದಿದ್ದಲ್ಲಿ ಎಲ್ಲವೂ ಸರಿಹೋಗುತ್ತಿತ್ತು. ನಾವೆಲ್ಲಾ ಬ್ರಹ್ಮ ನೊಡನೆ ಐಕ್ಯವಾಗಿದ್ದೆವು. ಹೀಗಿದ್ದ ಮೇಲೆ ಬ್ರಹ್ಮನಿಗೇಕೆ ಈ ಸೃಷ್ಟಿಸುವ ಆಸೆ? ಬ್ರಹ್ಮನೇ ಆದ ಜೀವನು ಹುಟ್ಟುಸಾವುಗಳ ಪರಸ್ಪರ ದ್ವಂದ್ವ ಗಳಲ್ಲಿ ಹೋರಾಡುವುದು ಏಕೆ?

ಸ್ವಾಮಿಜಿ :— ಯಾವಾಗ ಮನುಷ್ಯನಿಗೆ ಮತ್ತೇರಿದೆಯೋ ಅವನಿಗೆ ಅನೇಕ ಬಗೆಯ ಭ್ರಮೆಯುಂಟಾಗುವುದು. ಆದರೆ ಯಾವಾಗ ಮತ್ತಿಳಿ ಯುವುದೊ ಆಗ ಅವನಿಗೆ ಅವೆಲ್ಲಾ ಕಾವೇರಿದ ಮೆದುಳಿನ ಕಲ್ಪನೆಗಳೆಂದು ಗೊತ್ತಾಗುವುದು. ನೀನೀಗ ಆದಿಯೇ ಇಲ್ಲದ ಸೃಷ್ಟಿಯಲ್ಲಿ ಏನೇನು ನೋಡುವೆಯೋ ಯಾವುದಕ್ಕೆ ಕೊನೆ ಇದೆ ಎನ್ನಿಸುವುದೊ ಅವೆಲ್ಲಾ ನಿನ್ನ ಮತ್ತೇರಿದ ಸ್ಥಿತಿಯ ಪರಿಣಾಮ. ಯಾವಾಗ ಈ ಸ್ಥಿತಿಯನ್ನು ಮೀರಿ ಹೋಗುವೆಯೋ ಆಗ ಈ ಪ್ರಶ್ನೆಗಳಿಗೆ ಎಡೆಯೇ ಇರುವುದಿಲ್ಲ.

ಶಿಷ್ಯ:—ಹಾಗಾದರೆ ಈ ಭೂಮಂಡಲದ ಸೃಷ್ಟಿಸ್ಥಿತಿಗಳಲ್ಲಿ ಯಾವ ಸತ್ಯವೂ ಇಲ್ಲವೆ?

ಸ್ವಾಮಿಜಿ :—ಏಕಿರಬಾರದು? ಎಲ್ಲಿಯವರೆಗೆ ನಿನ್ನಲ್ಲಿ ದೇಹ ಭಾವನೆ ಇದ್ದು ಅಹಂಭಾವವಿರುವುದೋ ಅಲ್ಲಿಯವರೆಗೂ ಇವೆಲ್ಲಾ ಇರುವುದು. ಆದರೆ ದೇಹಭಾವನೆ ಹೋಗಿ ನೀನು ಆತ್ಮನಲ್ಲಿ ಭಕ್ತಿ ಯುಳ್ಳವನಾಗಿ, ಆತ್ಮನಲ್ಲೇ ಜೀವಿಸುವೆಯೋ ಆಗ ನಿನಗೆ ಇವುಗಳೊಂದೂ ಇರುವುದಿಲ್ಲ. ಸೃಷ್ಟಿ, ಹುಟ್ಟು, ಸಾವು ಇದೆಯೊ ಇಲ್ಲವೊ ಮುಂತಾದ ಪ್ರಶ್ನೆ

ಗಳಿಗೆ ಎಡೆಯೇ ಇರುವುದಿಲ್ಲ. ಆಗ ನೀನು ಹೀಗೆ ಹೇಳಬೇಕಾಗುವುದು.

ಕ್ವ ಗತಂ ಕೇನ ವಾ ನೀತಂ ಕುತ್ರಲೀನಮಿದಂ ಜಗತ್ ।
ಅಧುನೈವ ಮಯಾ ದೃಷ್ಟಂ ನಾಸ್ತಿ ಕಿಂ ಮಹದದ್ಭುತಂ ॥

"ಪ್ರಪಂಚ ಎಲ್ಲಿ ಹೋಯಿತು? ಯಾರಿಂದ ಹೋಯಿತು? ಅದೆಲ್ಲಿ ಅವಿತುಕೊಂಡಿತು? ಈಗತಾನೆ ಅದನ್ನು ನೋಡಿದೆ, ಮರುಕ್ಷಣವೇ ಇಲ್ಲವಾಗಿದೆ. ಎಂತಹ ಅದ್ಭುತ!"

ಶಿಷ್ಯ:—ಪ್ರಪಂಚದ ಇರುವುದೇ ಅರಿಯದೆ "ಭೂಮಂಡಲವೆಲ್ಲಾ ಎಲ್ಲಿ ಲಯವಾಯಿತು?" ಎಂದು ಹೇಗೆ ಕೇಳುವುದು!

ಸ್ವಾಮಿಜಿ:—ಏಕೆಂದರೆ ನಮ್ಮ ಭಾವನೆಯನ್ನು ಭಾಷೆಯ ಮೂಲಕ ವಿವರಿಸಬೇಕು. ಆದಕ್ಕೇ ಹಾಗೆ ವಿವರಿಸುವುದು. ಆ ಶ್ಲೋಕದ ಕವಿ ಭಾವ, ಭಾಷೆಗೆ ಮೀರಿದ ಸ್ಥಿತಿಯನ್ನು ಭಾವ ಮತ್ತು ಭಾಷೆಯ ಮೂಲಕ ವಿವರಿಸತೊಡಗಿದ್ದಾನೆ. ಅದಕ್ಕೇ ಅವನು ಜಗತ್ತು ಮಾಯೆ, ಆಕಾಶದಂತೆ ಸಾಪೇಕ್ಷ ಎಂದು ವಿವರಿಸುತ್ತಾನೆ. ಜಗತ್ತು ನಿರಪೇಕ್ಷವಾಗಿ ಸತ್ಯವಲ್ಲ. ಮನಸ್ಸು, ಭಾಷೆಗೆ ಮೀರಿದ ಬ್ರಹ್ಮನು ಮಾತ್ರ ಸತ್ಯ. ನೀನೇನು ಕೇಳಬೇಕೆಂದಿದ್ದೀಯೊ ಕೇಳು. ಇಂದು ನಿನ್ನ ವಾಗ್ವಾದಗಳಿಗೆಲ್ಲಾ ಕೊನೆಮಾಡುತ್ತೇನೆ.

ಪೂಜಾಮಂದಿರದಿಂದ ಸಂಜೆ ಆರತಿಗಾಗಿ ಗಂಟೆಯ ನಿನಾದ ಕೇಳಿ ಬಂತು. ಎಲ್ಲರೂ ಅದಕ್ಕೆ ಹೋದರು. ಶಿಷ್ಯ ಸ್ವಾಮಿಜಿಯವರ ಕೊಠಡಿಯಲ್ಲೇ ಉಳಿದ. ನೋಡಿ ಸ್ವಾಮಿಜಿ "ಪೂಜಾ ಮಂದಿರಕ್ಕೆ ನೀನು ಹೋಗುವುದಿಲ್ಲವೆ!" ಎಂದು ಕೇಳಿದರು.

ಶಿಷ್ಯ:—ನನಗೆ ಇಲ್ಲಿಯೇ ಇರಲು ಇಚ್ಛೆ.

ಸ್ವಾಮಿಜಿ:—ಹಾಗೇ ಮಾಡು.

ಸ್ವಲ್ಪ ಕಾಲಾನಂತರ ಶಿಷ್ಯ ಕೊಠಡಿಯ ಹೊರಗೆ ನೋಡಿ "ಇಂದು ಅಮಾವಾಸ್ಯೆ ರಾತ್ರಿ. ಎಲ್ಲಾ ಭಾಗಗಳೂ ಅಂಧಕಾರದಿಂದಾವೃತವಾಗಿವೆ. ಇಂದು ಕಾಲಿಮಾತೆಯನ್ನು ಪೂಜಿಸುವ ರಾತ್ರಿ" ಎಂದ.

ಸ್ವಾಮಿಜಿ ಮೌನವಾಗಿ ಕೊಂಚಹೊತ್ತು ಪೂರ್ವ ದಿಗಂತದ ಕಡೆ ದಿಟ್ಟಿಸಿ ನೋಡಿದರು. ನಂತರ ಹೇಳಿದರು: "ಈ ಕತ್ತಲೆಯಲ್ಲಿ ಎಂತಹ ಗುಪ್ತವಾದ ಪ್ರಶಾಂತ ಸೌಂದರ್ಯವಿದೆ"—ಹೀಗೆ ಹೇಳುತ್ತಾ ಸ್ವಾಮಿಗಳು ದಟ್ಟವಾದ ಆ ಅಂಧಕಾರವನ್ನೇ ದಿಟ್ಟಿಸುತ್ತಾ ಅದರಲ್ಲೇ ಪರವಶರಾದರು.

ಕೆಲವು ನಿಮಿಷಗಳಾದ ನಂತರ ಅವರು ನಿಧಾನವಾಗಿ ಒಂದು ಬಂಗಾಳಿ ಗೀತೆಯನ್ನು ಹಾಡಲು ಪ್ರಾರಂಭಿಸಿದರು, "ಓ! ಮಾತೆ, ತೀವ್ರ ಅಂಧ ಕಾರದಲ್ಲಿ ನಿನ್ನ ಸೌಂದರ್ಯ ಪ್ರಕಾಶಿಸುವುದು" .... ಹಾಡು ಮುಗಿದ ಮೇಲೆ ಸ್ವಾಮಿಜಿ ಕೊಠಡಿಯನ್ನು ಪ್ರವೇಶಿಸಿ ಬಾಯಲ್ಲಿ "ಮಾ, ಮಾ, ಕಾಳಿ, ಕಾಳಿ" ಎಂದು ಆಗಾಗ ಹೇಳುತ್ತಾ ಕುಳಿತುಕೊಂಡರು.

ಸ್ವಾಮಿಜಿಯ ಈ ಬಗೆಯ ಗಾಢಯೋಚನಾಮಗ್ನವಾದ ಸ್ಥಿತಿಯನ್ನು ನೋಡಿ ಕೊಂಚ ಕಳವಳಗೊಂಡು ಶಿಷ್ಯ ಕೇಳಿದ "ಸ್ವಾಮಿಜಿ, ದಯವಿಟ್ಟು ನನ್ನೊಡನೆ ಮಾತಾಡಿ"

ಸ್ವಾಮಿಜಿ :—(ನಗುಮುಖದಿಂದ ಹೇಳಿದರು) ಬಾಹ್ಯದಲ್ಲಿ ಇಷ್ಟು ಸುಂದರವಾಗಿ ಮಧುರವಾಗಿರುವ ಆತ್ಮನ ಅಗಾಧತೆ ಸೌಂದ್ಯರದ ಆಳ ವನ್ನು ಅರಿಯಬಲ್ಲೆಯಾ?" ಎಂದರು. ಶಿಷ್ಯ ಆ ಸಂಭಾಷಣೆಯನ್ನು ಬೇರೆ ಕಡೆ ತಿರುಗಿಸಲು ಇಚ್ಛಿಸಿದಾಗ ಅದನ್ನು ನೋಡಿ ಸ್ವಾಮಿಜಿ ಕಾಳಿಯ ಮೇಲೆ ಮತ್ತೊಂದು ಹಾಡನ್ನು ಎತ್ತಿದರು. "ಹೇ, ಮಾತೆ, ಅಮೃತ ಪ್ರವಾಹ ನೀನು, ಎಷ್ಟು ಭಾವದಲ್ಲಿ ಆಕಾರದಲ್ಲಿ ನೀನು ವ್ಯಕ್ತವಾಗು ತ್ತಿರುವೆ." ಹಾಡು ಮುಗಿದ ಮೇಲೆ ಸ್ವಾಮಿಜಿ "ಕಾಳಿ ಬ್ರಹ್ಮನ ವ್ಯಕ್ತಸ್ವರೂಪ. ಶ್ರೀರಾಮಕೃಷ್ಣರು ಹೇಳುತ್ತಿದ್ದ ಚಲಿಸುವ ಚಲಿಸದೆ ಇರುವ ಹಾವಿನ ಉಪಮಾನ ಗೊತ್ತಿಲ್ಲವೆ? (ಒಂದು ವ್ಯಕ್ತ, ಮತ್ತೊಂದು ಅವ್ಯಕ್ತಸ್ವರೂಪ)"

ಶಿಷ್ಯ :—ಹೌದು ಸ್ವಾಮಿಜಿ.

ಸ್ವಾಮಿಜಿ :—ಈ ಬಾರಿ ನನಗೆ ಗುಣವಾದ ಮೇಲೆ ನಾನು ಮಾತೆ ಯನ್ನು ನನ್ನ ಹೃದಯದ ರಕ್ತದಿಂದ ಪೂಜಿಸುವೆ. ಆಗ ಮಾತ್ರ ಆಕೆಗೆ ಸಂತೋಷವಾಗುವುದು. ನಿನ್ನ ರಘುನಂದನ ಕೂಡ ಅದನ್ನು ಹೇಳುತ್ತಾನೆ. ಮಾತೆಯ ಮಗು ವೀರನಾಗಬೇಕು. ವ್ಯಥೆ, ದುಃಖ, ಸಾವುಗಳಿಗೀಡಾ ದರೂ, ನಿರ್ಗತಿಕನಾದಾಗಲೂ ಮಾತೆಯ ಪುತ್ರ ನಿರ್ಭಯನಾಗಿರಬೇಕು.

# ಅಧ್ಯಾಯ ೩೮

ಸ್ಥಳ:— ಬೇಲೂರು ಮಠ. ವರ್ಷ:—ಕ್ರಿ. ಶ. ೧೯೦೧

ಸ್ವಾಮಿಜಿ ಈಗ ಮಠದಲ್ಲೇ ಇದ್ದಾರೆ. ಅವರ ಆರೋಗ್ಯ ಅಷ್ಟೇನೂ ಗುಣಮುಖವಾಗಿಲ್ಲ. ಆದರೂ ಅವರು ಬೆಳಿಗ್ಗೆ ಮತ್ತು ಸಂಜೆ ಎರಡು ಹೊತ್ತೂ ಗಾಳಿ ಸಂಚಾರ ಹೊರಡುತ್ತಾರೆ. ಶಿಷ್ಯ ಸ್ವಾಮಿಜಿಗೆ ಪ್ರಣಾಮಮಾಡಿ ಅವರ ಆರೋಗ್ಯದ ವಿಷಯವಾಗಿ ಪ್ರಶ್ನೆಮಾಡಿದ.

ಸ್ವಾಮಿಜಿ:—ಸರಿ, ಈ ದೇಹ ಅತ್ಯಂತ ಶೋಚನೀಯಾವಸ್ಥೆಯಲ್ಲಿದೆ. ಆದರೆ ನೀವಾರೂ ನನ್ನ ಕೆಲಸಕ್ಕೆ ಸಹಾಯಮಾಡಲು ಒಂದು ಹೆಜ್ಜೆಯನ್ನೂ ಮುಂದಿಟ್ಟಿಲ್ಲ.—ನಾನೊಬ್ಬ ಏನುತಾನೆ ಮಾಡಬಲ್ಲೆ? ಈಬಾರಿ ಈ ಶರೀರ ಬಂಗಾಳ ದೇಶದಲ್ಲಿ ಜನಿಸಿದುದರಿಂದ ಅದು ಹೇಗೆ ತಾನೆ ಹೆಚ್ಚು ಶ್ರಮವನ್ನು ಸಹಿಸಬಲ್ಲುದು? ಇಲ್ಲಿಗೆ ಬರುವವರೆಲ್ಲಾ ಪವಿತ್ರಾತ್ಮರು. ನನ್ನ ಕೆಲಸಕ್ಕೆ ನೀವು ಸಹಾಯಕರಾಗದಿದ್ದಲ್ಲಿ ನಾನೊಬ್ಬನೇ ಏನು ಮಾಡಬಲ್ಲೆ?

ಶಿಷ್ಯ:—ಸ್ವಾಮಿಜಿ, ಈ ಆತ್ಮತ್ಯಾಗ ನಿರತರಾದ ಬ್ರಹ್ಮಚಾರಿಗಳು, ಸನ್ಯಾಸಿಗಳೆಲ್ಲಾ ನಿಮ್ಮ ಹಿಂದೆ ಇದ್ದಾರೆ. ಅವರಲ್ಲಿ ಪ್ರತಿಯೊಬ್ಬರೂ ತಮ್ಮ ಜೀವನವನ್ನು ನಿಮ್ಮ ಕೆಲಸಕ್ಕೆ ಅರ್ಪಿಸಲು ಸಿದ್ಧರಾಗಿದ್ದಾರೆ—ಆದರೂ ನೀವೇಕೆ ಹೀಗೆ ಹೇಳುವಿರಿ?

ಸ್ವಾಮಿಜಿ:—ನನಗೆ ಬಂಗಾಳಿ ಯುವಕರ ಒಂದು ತಂಡಬೇಕು. ಅವರೇ ದೇಶಕ್ಕೆ ಭರವಸೆ ನೀಡುವರು. ಒಳ್ಳೆಯ ಶೀಲವಂತರಾದ ಯುವಕರಲ್ಲಿ ಬುದ್ಧಿವಂತರಾಗಿ ತಮ್ಮ ಸರ್ವಸ್ವವನ್ನೂ ತ್ಯಾಗಮಾಡುವಂತಹ ವಿಧೇಯರಾಗಿರುವ, ನನ್ನ ಭಾವನೆಗಳನ್ನು ಕಾರ್ಯರೂಪಕ್ಕೆ ತರಲು ತಮ್ಮ ಪ್ರಾಣವನ್ನೇ ಅರ್ಪಿಸಬಲ್ಲವರಮೇಲೆ ನನ್ನ ಭವಿಷ್ಯದ ಹಾರೈಕೆಯೆಲ್ಲಾ ನಿಂತಿದೆ. ಅದರಿಂದ ದೇಶಕ್ಕೂ ಅವರಿಗೂ ಕಲ್ಯಾಣವಾಗುವುದು. ಇಲ್ಲ ದಿದ್ದಲ್ಲಿ ಸಾಮಾನ್ಯಯುವಕರು ಬರುತ್ತಿದ್ದಾರೆ—ಬರುತ್ತಿರುತ್ತಾರೆ—ಅವರ ಮುಖಗಳಲ್ಲಿ ಗೋಳು ಸುರಿಯುತ್ತಿದೆ. ಅವರ ಹೃದಯ ವೀರ್ಯಹೀನ ವಾಗಿದೆ—ಅವರ ದೇಹ ದುರ್ಬಲವಾಗಿದೆ. ಕೆಲಸಕ್ಕೆ ಅನರ್ಹವಾಗಿದೆ. ಅವರ ಮನಸ್ಸು ಧೈರ್ಯಹೀನವಾಗಿದೆ—ಅವರಿಂದ ಏನು ಕೆಲಸತಾನೆ ಸಾಧ್ಯ? ನಚಿಕೇತನಿಗಿದ್ದಂಥಹ ಶ್ರದ್ಧೆಯುಳ್ಳ ೧೦–೧೨ ಜನ ಹುಡುಗರು ನನಗೆ

ಸಿಕ್ಕಿದರೆ ದೇಶದ ಯೋಚನೆ ವೃತ್ತಿಯನ್ನೆಲ್ಲಾ ಹೊಸಮಾರ್ಗದಲ್ಲಿ ಹರಿಯು ವಂತೆ ಮಾಡಬಲ್ಲೆ.

ಶಿಷ್ಯ:—ಅಷ್ಟೊಂದು ಮಂದಿ ಯುವಕರು ನಿಮ್ಮೆಡೆಗೆ ಬರುತ್ತಾರೆ. ಅವರಲ್ಲಿ ಯಾರೊಬ್ಬರಿಗೂ ನೀವು ಹೇಳಿದ ಗುಣಗಳಿಲ್ಲವೆ?

ಸ್ವಾಮಿಜಿ:—ಅವರಲ್ಲಿ ಯಾರು ನನಗೆ ಒಳ್ಳೆಯುವರೆಂದು ತೋರು ವರೋ ಅವರಲ್ಲಿ ಕೆಲವರು ಮದುವೆಯ ಬಂಧನಕ್ಕೆ ಸಿಲುಕಿದ್ದಾರೆ, ಕೆಲ ವರು ಪ್ರಾಪಂಚಿಕ ಹೆಸರು ಕೀರ್ತಿ ಐಶ್ವರ್ಯಕ್ಕೆ ತಮ್ಮನ್ನು ಮಾರಿ ಕೊಂಡಿದ್ದಾರೆ–ಕೆಲವರು ನಿಶ್ಯಕ್ತರು. ಉಳಿದವರು, ಅವರೇ ಹೆಚ್ಚುಮಂದಿ, ಯಾವ ಉತ್ತಮ ಉದ್ದೇಶಗಳನ್ನು ಪಡೆಯಲು ಯೋಗ್ಯರಲ್ಲ. ನೀನೇನೊ ನನ್ನ ಆದರ್ಶ ಭಾವನೆಗಳನ್ನು ಹೊಂದಲು ಅರ್ಹ. ಆದರೆ ಅದನ್ನು ವ್ಯವ ಹಾರದಲ್ಲಿ ತರಲು ನಿನಗೆ ಸಾಧ್ಯವಿಲ್ಲ. ಈ ಕಾರಣಗಳಿಂದ ಒಮ್ಮೊಮ್ಮೆ ನನ್ನ ಮನಸ್ಸು ರೊಚ್ಚಿಗೇಳುವುದು. ಈ ಮಾನವ ದೇಹ ಧರಿಸಿರುವುದರಿಂದ ಇದು ಅಡ್ಡಿಬಂದು ನಾನು ಹೆಚ್ಚು ಕೆಲಸ ಮಾಡಲಾಗಲಿಲ್ಲ. ಆದಾಗ್ಯೂ ನಾನು ಸಂಪೂರ್ಣ ನಂಬಿಕೆ ಕಳೆದುಕೊಂಡಿಲ್ಲ. ಏಕೆಂದರೆ ದೇವರ ಇಚ್ಛೆ ಯಿಂದ ಈ ಕೆಲವು ಹುಡುಗರಿಂದಲೇ ಮುಂದೆ ಅನೇಕ ದೊಡ್ಡ ಕರ್ಮ ವೀರರು, ಆಧ್ಯಾತ್ಮಿಕ ವೀರರು ಹುಟ್ಟಿಬಂದು ನನ್ನ ಉದ್ದೇಶಗಳನ್ನು ಭವಿಷ್ಯದಲ್ಲಿ ಕಾರ್ಯರೂಪಕ್ಕೆ ತರಬಹುದು.

ಶಿಷ್ಯ:—ನಿಮ್ಮ ವಿಶಾಲ ಮತ್ತು ಸರಳ ಉದ್ದೇಶಗಳನ್ನು ಒಂದಲ್ಲ ಒಂದು ದಿನ ಇಡೀ ವಿಶ್ವವೇ ಸ್ವೀಕರಿಸುವುದೆಂದು ನನಗೆ ದೃಢವಾದ ನಂಬಿಕೆ ಯಿದೆ. ಏಕೆಂದರೆ ಅವು ಸರ್ವ ಭಾಗಗಳನ್ನೂ ಒಳಗೊಂಡಿವೆ, ಎಲ್ಲಾ ಅಭಿಪ್ರಾಯ ಕಾರ್ಯಗಳಿಗೆ ಶಕ್ತಿ ಒದಗಿಸುತ್ತದೆ. ದೇಶದ ಜನರೆಲ್ಲಾ ಪ್ರತ್ಯಕ್ಷವಾಗಿ ಆಗಲಿ ಪರೋಕ್ಷವಾಗಿ ಆಗಲಿ ನಿಮ್ಮ ಅಭಿಪ್ರಾಯಗಳನ್ನು ಒಪ್ಪಿಕೊಂಡು ಜನರಿಗೆ ಬೋಧಿಸುತ್ತಿದ್ದಾರೆ.

ಸ್ವಾಮಿಜಿ:—ಅವರು ನನ್ನ ಹೆಸರನ್ನು ಗೌರವಿಸಿದರೇನು ಬಿಟ್ಟ ರೇನು? ಅವರು ನನ್ನ ಅಭಿಪ್ರಾಯಗಳನ್ನು ಒಪ್ಪಿಕೊಂಡರೆ ಸಾಕು. ಕಾಮಿನಿ ಕಾಂಚನಗಳನ್ನು ತ್ಯಾಗ ಮಾಡಿದಮೇಲೂ ಶೇಕಡ ೯೯ ಮಂದಿ ಸಾಧುಗಳು ಹೆಸರು ಕೀರ್ತಿಗಳ ಬಲೆಗೆ ಸಿಕ್ಕಿ ಬೀಳುವರು. "ಕೀರ್ತಿ . . . . . . . ಉದಾತ್ತ ಮನಸ್ಸಿನ ಕಟ್ಟಕಡೆಯ ದುರ್ಬಲತೆ. . . . ." ನೀನದನ್ನು ಓದಿಲ್ಲವೆ? ಕರ್ಮಫಲದಾಸೆಯನ್ನೆಲ್ಲಾ ತ್ಯಜಿಸಿ ನಾವು ಕೆಲಸ ಮಾಡ

ಬೇಕು. ಜನರು ನಮ್ಮನ್ನು ಒಳ್ಳೆಯವರು ಕೆಟ್ಟವರು ಎಂದು ಎರಡನ್ನೂ ಹೇಳುತ್ತಾರೆ. ಆದರೆ ನಾವು ನಮ್ಮ ಗುರಿಯನ್ನು ಮುಂದಿಟ್ಟುಕೊಂಡು "ಜಾಣರು ನಮ್ಮನ್ನು ಹೊಗಳಲಿ ಬಿಡಲಿ" ಯಾವುದಕ್ಕೂ ಸೊಪ್ಪು ಹಾಕದೆ ಸಿಂಹಸದೃಶರಾಗಿ ಕೆಲಸ ಮಾಡಬೇಕು.

ಶಿಷ್ಯ :—ನಾವೀಗ ಯಾವ ಗುರಿಯನ್ನು ಅನುಸರಿಸಬೇಕು.

ಸ್ವಾಮಿಜಿ :—ಮಹಾ ವೀರನನ್ನು ನಮ್ಮ ಗುರಿಯಾಗಿಟ್ಟುಕೊಳ್ಳ ಬೇಕು. ರಾಮಚಂದ್ರನ ಆಣತಿಯಂತೆ ಅವನು ಹೇಗೆ ಸಮುದ್ರವನ್ನೇ ದಾಟಿದ ! ಅವನಿಗೆ ಜೀವನ ಮರಣ ಯಾವುಪರಮೇಲೂ ಗಮನವಿರಲಿಲ್ಲ. ಅವನು ಇಂದ್ರಿಯಗಳನ್ನು ಸಂಪೂರ್ಣ ತನ್ನ ವಶದಲ್ಲಿಟ್ಟುಕೊಂಡಿದ್ದ ತೀಕ್ಷ್ಣಮತಿಯಾಗಿದ್ದನು. ನೀವೀಗ ಈ ಸೇವೆಯ ಮಹೋದ್ದೇಶದ ಮೇಲೆ ನಿಮ್ಮ ಜೀವನವನ್ನು ಕಟ್ಟಬೇಕು. ಅದರ ಮೂಲಕ ಇತರ ಎಲ್ಲಾ ಉದ್ದೇಶಗಳೂ ಕ್ರಮೇಣ ವಿಕಸಿಸುವುವು. ಎರಡನೇ ಮಾತಿಲ್ಲದೆ ಗುರು ಮಾತಿಗೆ ವಿಧೇಯತೆ, ಬ್ರಹ್ಮಚರ್ಯ ಇದೇ ಜಯದ ರಹಸ್ಯ. ಹನುಮಂತ ಒಂದು ಕಡೆ ಸೇವೆಯ ಮಹೋದ್ದೇಶ ಇನ್ನೊಂದುಕಡೆ ಇಡೀ ಜಗತ್ತೇ ಬೆರಗಾಗುವಂತಹ ಸಿಂಹಸದೃಶ ಧೈರ್ಯವನ್ನು ಪ್ರತಿಬಿಂಬಿ ಸುತ್ತಾನೆ. ರಾಮನ ಕಲ್ಯಾಣಕ್ಕಾಗಿ ಪ್ರಾಣವನ್ನೇ ಅರ್ಪಿಸಲು ಅವನು ಸ್ವಲ್ಪವೂ ಅನುಮಾನಿಸಲಿಲ್ಲ. ರಾಮನ ಸೇವೆಯ ಹೊರತು ಉಳಿದುದೆಲ್ಲಾ ಅವನಿಗೆ ತಾತ್ಸಾರ. ಬ್ರಹ್ಮ ಶಿವ ಈ ಜಗತ್ತಿನ ದೇವತೆಗಳ ಪದವಿಯೆಲ್ಲಾ ಅವನಿಗೆ ಬೇಸರ. ಶ್ರೀರಾಮನ ಆಣತಿಯಂತೆ ನಡೆಯುವುದೊಂದೇ ಅವನ ಜೀವನದ ವ್ರತ. ಅಂತಹ ಹೃತ್ಪೂರ್ವಕ ಭಕ್ತಿ ಬೇಕಾಗಿದೆ. ತಾಳಕ್ಕೆ ಸರಿ ಯಾಗಿ ಕುಣಿಯುತ್ತಾ ಜನರೆಲ್ಲಾ ಅಧೋಗತಿಗಿಳಿದಿದ್ದಾರೆ.– ಮೊದಲನೆಯ ದಾಗಿ ಅಜೀರ್ಣವ್ಯಾಧಿಯುಳ್ಳ ಜನಾಂಗ. ಜೊತೆಗೆ ಹೀಗೆ ಕುಣಿತಕ್ಕೂ ಪ್ರಾರಂಭಿಸಿದರೆ ಅವರು ಹೇಗೆತಾನೆ ಇಷ್ಟೊಂದು ತ್ರಾಸವನ್ನು ಸಹಿಸ ಬಲ್ಲರು ? ಯಾವುದರ ಪ್ರಥಮ ಗುಣವೇ ಪವಿತ್ರತೆಯಾಗಿದೆಯೋ ಅಂತಹ ಉಚ್ಚಸಾಧನೆಯನ್ನು ಅನುಕರಿಸಹೋಗಿ ಸಂಪೂರ್ಣ ತಾಮಸದಲ್ಲಿಮುಳುಗಿ ಹೋಗಿರುವರು. ನೀನು ಪ್ರತಿಯೊಂದು ಗ್ರಾಮ ಪಟ್ಟಣಕ್ಕೂ ಹೋಗಿ ನೋಡು, ಎಲ್ಲೆಲ್ಲೂ ನಿನಗೆ ಈ ಕುಣಿತವೇ ಕಂಡು ಬರುವುದು. ದೇಶದಲ್ಲಿ ತಮಟೆಗಳನ್ನು ತಯಾರಿಸುವುದಿಲ್ಲವೆ? ಭರತಖಂಡದಲ್ಲಿ ತುತ್ತೂರಿ, ಡಮರು ಗಳು ಸಿಗುವುದಿಲ್ಲವೆ ? ಹುಡುಗರೆಲ್ಲಾ ಈ ತೂರ್ಯವಾಣಿಯನ್ನು ಕೇಳುವಂತೆ

ಮಾಡಿ. ಬಾಲ್ಯದಿಂದ ಈ ಕೋಮಲ ಸ್ವಭಾವದ ಸಂಗೀತವನ್ನು ಕೇಳಿ ಕೇಳಿ, ಕೀರ್ತನೆಗಳನ್ನು ಕೇಳಿ ದೇಶವೆಲ್ಲಾ ನಾರಿಯರ ದೇಶವಾಗಿ ಪರಿಣಮಿಸಿದೆ. ಇದಕ್ಕಿಂತ ಬೇರೆ ಅಧೋಗತಿ ಯಾವುದಿದೆ? ಕವಿಯ ಕಲ್ಪನೆ ಕೂಡ ಈ ಚಿತ್ರವನ್ನು ಕಲ್ಪಿಸಲಾರದು. ತಮಟೆ ಕಹಳೆಯನ್ನು ಕೂಗಿಸಬೇಕು. ತಮಟೆಗಳನ್ನು ರಣರಂಗದಲ್ಲಿ ಬಾರಿಸಿದಂತೆ ಬಾರಿಸಬೇಕು. "ಮಹಾವೀರ, ಮಹಾವೀರ" ಎಂಬ ಘರ್ಜನೆ ನಮ್ಮ ಬಾಯಿಂದ ಮೊರೆಯುತ್ತಿರಬೇಕು. "ಹರ, ಹರ, ಓಂ, ಓಂ!" ಎಂಬ ನಿನಾದದಿಂದ ದಶದಿಕ್ಕುಗಳೂ ಪ್ರತಿಧ್ವನಿತವಾಗುವಂತೆ ಮಾಡಬೇಕು. ಮಾನವನ ಮೃದು ಹೃದಯವನ್ನು ಮಿಡಿಯುವಂತಹ ಸಂಗೀತ ಇಂದು ನಮಗೆ ಬೇಕಾಗಿಲ್ಲ.—ಗೆಜ್ಜೆಧ್ವನಿಗಳ ನಾಟ್ಯಸಂಗೀತವನ್ನು ನಿಲ್ಲಿಸಿ. ಧ್ರುಪದ ಸಂಗೀತಕ್ಕೆ ಕಿವಿಗೊಡುವಂತೆ ಮಾಡಬೇಕು.—ಗಂಭೀರವಾದ ವೇದಘೋಷದ ಗರ್ಜನೆಯಿಂದ ದೇಶವನ್ನೆಲ್ಲ ತುಂಬಬೇಕು. ಪ್ರತಿಯೊಂದರಲ್ಲಿಯೂ ಪುರುಷಸಿಂಹನ ಕೆಚ್ಚೆದೆ ವ್ಯಕ್ತವಾಗುವಂತೆ ಮಾಡಬೇಕು. ಈ ಧ್ಯೇಯದ ಮೇಲೆ ನಿನ್ನ ಶೀಲವನ್ನು ಕಟ್ಟಬಲ್ಲೆಯಾದರೆ ಸಾವಿರಾರು ಜನ ನಿನ್ನನ್ನು ಹಿಂಬಾಲಿಸುವರು. ಆದರೆ ನಿನ್ನ ಧ್ಯೇಯದಿಂದ ಒಂದು ಅಂಗುಲವೂ ಹಿಮ್ಮೆಟ್ಟಬೇಡ. ಎದೆಗೆಡಬೇಡ—ಊಟ ಮಾಡುವಾಗ, ಉಡುಪು ಧರಿಸುವಾಗ, ಮಲಗಿರುವಾಗ, ಹಾಡುವಾಗ, ಆಟವಾಡುವಾಗ, ಸುಖದುಃಖ ಎಲ್ಲಾ ಅವಸ್ಥೆಯಲ್ಲೂ ಅತ್ಯುಚ್ಚ ಆಂತರಿಕ ಶಕ್ತಿ ನಿನ್ನಲ್ಲಿ ವಿಕಸಿಸಲಿ. ಆಗ ಮಾತ್ರ ನೀನು ಮಹಾಶಕ್ತಿ ಜಗನ್ಮಾತೆಯ ಕೃಪೆಗೆ ಪಾತ್ರನಾಗುವೆ.

ಶಿಷ್ಯ :—ಕೆಲವು ವೇಳೆ ಹೇಗೊ ನನಗೆ ಗೊತ್ತಿಲ್ಲದೆ ಮನಸ್ಸು ಅಧೋಗತಿಗಿಳಿಯುವುದು ಸ್ವಾಮಿಜಿ.

ಸ್ವಾಮಿಜಿ :—ಹಾಗಿದ್ದಲ್ಲಿ ಹೀಗೆ ಯೋಚಿಸು – "ನಾನು ಯಾರ ಮಗು, ಅವನ ಜೊತೆ ನಾನು ವ್ಯವಹರಿಸುವೆ—ನನಗೆ ಅಂತಹ ದುರ್ಬಲ ಮನಸ್ಸು ಅಧೋಗತಿ ಬರುವುದು ಸರಿಯೆ?" ಇಂತಹ ಮನಸ್ಸಿನ ದೌರ್ಬಲ್ಯತೆಯನ್ನು ಮೆಟ್ಟಿ ಎದ್ದುನಿಲ್ಲು, "ನನಗೆ ವೀರತ್ವವಿದೆ—ನನಗೆ ಶಾಶ್ವತ ಬುದ್ಧಿ ಇದೆ—ನಾನು ಬ್ರಹ್ಮಜ್ಞಾನಿ, ಆತ್ಮ ಸಾಕ್ಷಾತ್ಕಾರ ಪಡೆದವನು" ನಿನ್ನ ಸ್ಥಾನದ ಹಿರಿಮೆಯನ್ನು ಹೀಗೆ ಯೋಚಿಸಿ, "ಕಾಮಿನಿ ಕಾಂಚನ ತ್ಯಾಗಿಗಳಾದ ಶ್ರೀ ರಾಮಕೃಷ್ಣ ಪರಮಹಂಸರ ಒಡನಾಡಿಯಾಗಿದ್ದ ಅಂಥವರ ಶಿಷ್ಯ ನಾನು" ಎಂದು ಚೆನ್ನಾಗಿ ಮನನ ಮಾಡಿಕೊ.

ಇದರಿಂದ ಒಳ್ಳೆಯ ಪರಿಣಾಮ ಉಂಟಾಗುವುದು. ಯಾರಿಗೆ ಈ ಹೆಮ್ಮೆ ಇಲ್ಲವೊ ಅವನಲ್ಲಿ ಬ್ರಹ್ಮನ ಜಾಗೃತಿ ಕೊಂಚವೂ ಇಲ್ಲ. ರಾಮ ಪ್ರಸಾದನ ಹಾಡನ್ನು ಕೇಳಿಲ್ಲವೆ? ಅವನು ಹೇಳುತ್ತಿದ್ದ, "ನಾನು ಜಗನ್ಮಾತೆ ಆಳುತ್ತಿರುವ ಈ ಜಗತ್ತಿನಲ್ಲಿ ಆರನ್ನು ಕಂಡು ಭಯಪಡುವೆ" ಇಂತಹ ಹೆಮ್ಮೆಯನ್ನು ಯಾವಾಗಲೂ ಮನಸ್ಸಿನಲ್ಲಿ ಮೆಲಕುಹಾಕುತ್ತಿರು. ನಂತರ ಹೃದಯ ದೌರ್ಬಲ್ಯ ಮನೋ ದೌರ್ಬಲ್ಯ ಯಾವುದೂ ನಿನ್ನ ಬಳಿ ಸುಳಿಯಲಾರವು. ನಿನ್ನ ಮನಸ್ಸು ಎಂದೂ ದುರ್ಬಲವಾಗಲು ಅವಕಾಶ ಕೊಡಬೇಡ—ಮಹಾವೀರನನ್ನು ನೆನೆ. ಜಗನ್ಮಾತೆಯನ್ನು ಸ್ಮರಿಸು. ಆಗ ನಿನ್ನಿಂದ ಎಲ್ಲಾ ದೌರ್ಬಲ್ಯವೂ ಹೇಡಿತನವೂ ತಕ್ಷಣವೇ ಮಾಯವಾಗುವುದು.

ಈ ಮಾತುಗಳನ್ನು ಹೇಳುತ್ತಾ ಸ್ವಾಮಿಜಿ ಮಹಡಿಯಿಂದ ಕೆಳಗಿಳಿದುಬಂದು ಅಂಗಳದಲ್ಲಿ ತಾವು ದಿನವೂ ಕುಳಿತುಕೊಳ್ಳುತ್ತಿದ್ದ ಮಂಚದ ಮೇಲೆ ಕುಳಿತರು. ನಂತರ ಅಲ್ಲಿ ನೆರೆದಿದ್ದ ಸನ್ಯಾಸಿಗಳು, ಬ್ರಹ್ಮಚಾರಿಗಳನ್ನೆಲ್ಲಾ ಕುರಿತು ಈರೀತಿ ಹೇಳಿದರು– "ಇಲ್ಲಿ ತೆರೆ ಕಳಚಿದ ಬ್ರಹ್ಮನಿದ್ದಾನೆ. ಇದನ್ನು ನಂಬದೆ ಇತರ ವಸ್ತುಗಳಮೇಲೆ ಮನಸ್ಸಿಟ್ಟವರಿಗೆ ಧಿಃಕಾರ! ಓ! ಇಲ್ಲೇ ಬ್ರಹ್ಮಅಂಗೈಮೇಲಣ ನೆಲ್ಲಿಕಾಯಂತೆ ಪ್ರತ್ಯಕ್ಷವಾಗಿ ಇದ್ದಾನೆ–ನಿಮಗೆ ಕಾಣುವುದಿಲ್ಲವೆ? ಇಲ್ಲಿ!"

ಈ ಮಾತನ್ನು ಹೇಗೆ ಮನ ಮುಟ್ಟುವಂತೆ ಹೇಳಿದರೆಂದರೆ ಅಲ್ಲಿದ್ದವರೆಲ್ಲಾ ಪರದೆಯಮೇಲೆ ಚಿತ್ರಿಸಿದ ಗೊಂಬೆಗಳಂತೆ ಅಲ್ಲಾಡದೆ ನಿಂತರು. ಎಲ್ಲರನ್ನೂ ಗಾಢಧ್ಯಾನ ಆವರಿಸಿದಂತೆ ಇತ್ತು. ಕೊಂಚಕಾಲದ ಮೇಲೆ ಆ ತೀವ್ರತೆ ಕಡಿಮೆಯಾಗಿ ಪ್ರಜ್ಞೆಗೆ ಬಂದರು.

ಮುಂದೆ ಕೊಂಚಕಾಲದನಂತರ ನಡೆಯುತ್ತಿದ್ದಾಗ ಸ್ವಾಮಿಗಳು ಶಿಷ್ಯನಿಗೆ ಹೇಳಿದರು, "ಇಂದು ನೋಡಿದೆಯಾ? ಅವರೆಲ್ಲ ಹೇಗೆ ಏಕ ಮನಸ್ಕರಾದರೆಂದು—ಅವರೆಲ್ಲಾ ಶ್ರೀ ರಾಮಕೃಷ್ಣರ ಮಕ್ಕಳು. ಕೇವಲ ಆ ಮಾತುಗಳನ್ನು ತಿಳಿದುದರಿಂದಲೇ ಅವರಿಗೆ ಸತ್ಯದ ಅರಿವಾಯಿತು.

ಶಿಷ್ಯ:—ಅವರ ವಿಷಯ ಹಾಗಿರಲಿ, ನನ್ನ ಹೃದಯವೂ ಅನಿರ್ವಚನೀಯವಾದ ಆನಂದದಿಂದ ಪುಲಕಿತವಾಯಿತು.–ಈಗ ಅದೊಂದು ಮಾಯವಾದ ಸ್ವಪ್ನದಂತಿದೆ.

ಸ್ವಾಮಿಜಿ:—ಎಲ್ಲ ಸಕಾಲದಲ್ಲಿ ಬರುವುದು—ಈಗ ಕೆಲಸ ಮಾಡುತ್ತಾ ಹೋಗಿ–ಮೌಢ್ಯತೆ, ಅಜ್ಞಾನದಲ್ಲಿ ಮುಳುಗಿರುವವರನ್ನು ಎತ್ತಲು ಏನಾದರೂ ಕೊಂಚ ಕೆಲಸಮಾಡಿ. ಆಗ ನಿಮಗೇ ಅಂತಹ ಅನುಭವಗಳು ಬರುವುವು.

ಶಿಷ್ಯ:—ಆ ಕರ್ಮಕೋಟಿಯೊಳಗೆ ಹೋಗಲು ಹೆದರುತ್ತೇನೆ–ಅಷ್ಟು ಶಕ್ತಿಯೂ ಇಲ್ಲ–ಶಾಸ್ತ್ರಗಳೂ "ಕರ್ಮದ ಹಾದಿ ಗಹನ" ಎಂದು ಹೇಳುತ್ತವೆ.

ಸ್ವಾಮಿಜಿ:—ಹಾಗಾದರೆ ನೀನೇನು ಮಾಡಬಯಸುವೆ?

ಶಿಷ್ಯ:—ಎಲ್ಲಾ ಧರ್ಮಗ್ರಂಥಗಳ ಸತ್ಯವನ್ನೂ ಸಾಕ್ಷಾತ್ಕರಿಸಿಕೊಂಡಿರುವ ನಿಮ್ಮಂತಹ ಪೂಜ್ಯರೊಡನೆ ವಾಸಮಾಡುತ್ತಾ ಚರ್ಚಿಸುತ್ತಾ, ಅವನ್ನು ಕೇಳುವುದರಿಂದ, ಅವುಗಳ ಮನನ ಧ್ಯಾನದಿಂದ ಬ್ರಹ್ಮನನ್ನು ಈ ಜೀವನದಲ್ಲೇ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಇದಲ್ಲದೆ ಬೇರಾವುದಕ್ಕೂ ನನಗೆ ಉತ್ಸಾಹವೂ ಇಲ್ಲ, ಶಕ್ತಿಯೂ ಇಲ್ಲ.

ಸ್ವಾಮಿಜಿ:—ನೀನದನ್ನು ಇಚ್ಛಿಪಟ್ಟಲ್ಲಿ ಹಾಗೆಯೇ ಮಾಡು. ಶಾಸ್ತ್ರಗಳಲ್ಲಿ ನಿನ್ನ ಆಲೋಚನೆ ಮತ್ತು ನಿರ್ಧಾರಗಳನ್ನು ಇತರರಿಗೂ ಹೇಳು–ಅದರಿಂದ ಅವರಿಗೂ ಪ್ರಯೋಜನವಾಗುವುದು. ಎಲ್ಲಿಯವರೆಗೆ ದೇಹವಿರುವುದೋ ಅಲ್ಲಿಯವರೆಗೂ ಏನಾದರೊಂದು ಕೆಲಸ ಮಾಡುತ್ತಲೇ ಇರಬೇಕು. ಆದ್ದರಿಂದ ಇತರರಿಗೆ ಒಳ್ಳೆಯದಾಗುವಂತಹ ಕೆಲಸಗಳನ್ನು ಮಾಡು. ಶಾಸ್ತ್ರಗಳ ಮೇಲೆ ನಿನ್ನ ಸಾಕ್ಷಾತ್ಕಾರ ಮತ್ತು ನಿರ್ಧಾರಗಳು ಸತ್ಯವನ್ನು ಅರಸುತ್ತಿರುವ ಇನ್ನೊಬ್ಬನಿಗೆ ಉಪಯೋಗವಾಗಬಹುದು. ಅವುಗಳನ್ನು ಬರೆದಿಡುವುದರಿಂದ ಇತರರಿಗೆ ಸಹಾಯವಾಗುವುದು.

ಶಿಷ್ಯ:—ಮೊದಲು ನನಗೆ ಸತ್ಯಸಾಕ್ಷಾತ್ಕಾರವಾಗಲಿ, ನಂತರ ನಾನು ಬರೆಯುವೆ. ಶ್ರೀ ರಾಮಕೃಷ್ಣರು "ಅಧಿಕಾರದ ಮುದ್ರೆ ಇಲ್ಲದಿದ್ದಲ್ಲಿ ಯಾರೂ ನಿನ್ನ ಮಾತಿಗೆ ಕಿವಿಗೊಡುವುದಿಲ್ಲ" ಎಂದು ಹೇಳುತ್ತಿದ್ದರು.

ಸ್ವಾಮಿಜಿ:—ಈ ಪ್ರಪಂಚದಲ್ಲಿ ನೀನಿರುವ ಈ ಅವಸ್ಥೆಯಲ್ಲೇ ಆಧ್ಯಾತ್ಮಿಕ ಸಾಧನೆ ಮತ್ತು ತರ್ಕಾವಸ್ಥೆಯಲ್ಲೇ ಅನೇಕಮಂದಿ ಸಿಕ್ಕಿಕೊಂಡಿದ್ದಾರೆ. ಆ ಅವಸ್ಥೆಯಿಂದ ಅವರಿಗೆ ಮೀರಿ ಹೋಗಲಾಗುತ್ತಿಲ್ಲ–ನಿನ್ನ ಅನುಭವ ಮತ್ತು ಯೋಚನಾತರಂಗ ಕಡೆಯಪಕ್ಷ ಅವರಿಗಾದರೂ ಸಹಾಯವಾದೀತು. ನೀನು ಈ ಮಠದ ಸಾಧುಗಳೊಡನೆ ನಡೆಸಿದ ಸಂಭಾ

ಷಣೆ ತರ್ಕಗಳ ಸಾರವನ್ನು ಸರಳ ಭಾಷೆಯಲ್ಲಿ ಬರೆದರೆ ಅನೇಕರಿಗೆ ಸಹಾಯವಾಗುವುದು.

ಶಿಷ್ಯ:—ನೀವು ಹೇಗೆ ಇಚ್ಛೆಪಡುವುದರಿಂದ ಹಾಗೆ ಮಾಡುವೆ.

ಸ್ವಾಮಿಜಿ:—ಇತರರಿಗೆ ಉಪಯೋಗವಾಗದಂಥ, ಅಜ್ಞಾನರೂಪದಲ್ಲಿ ಮುಳುಗಿರುವ ಜನರ ಕಲ್ಯಾಣಕ್ಕೆ ನೆರವಾಗದ, ಕಾಮಿನಿಕಾಂಚನದ ಬಂಧನದಿಂದ ಅವರನ್ನು ಪಾರಾಗಲು ಸಹಾಯಮಾಡದ ಆಧ್ಯಾತ್ಮಿಕ ಸಾಧನೆ ಮತ್ತು ಸಾಕ್ಷಾತ್ಕಾರದಿಂದಾಗುವ ಫಲವೇನು? ಎಲ್ಲಿಯವರೆಗೆ ಒಬ್ಬ ಜೀವಿ ಬಂಧನದಲ್ಲಿದ್ದಾನೋ ಅಲ್ಲಿಯವರೆಗೂ ನಿನಗೆ ಮೋಕ್ಷ ದೊರಕುವುದೆಂದು ತಿಳಿದಿರುವೆಯಾ? ಅವನಿಗೆ ಮುಕ್ತಿಯಾಗುವವರೆಗೂ–ಅದಕ್ಕೆ ಹಲವು ಜನ್ಮಗಳು ಬೇಕಾಗಬಹುದು–ನೀನು ಅವನಿಗೆ ಬ್ರಹ್ಮ ಸಾಕ್ಷಾತ್ಕಾರವಾಗುವವರೆಗೂ ಸಹಾಯಮಾಡಲು ಹುಟ್ಟುತ್ತಿರಬೇಕು. ಪ್ರತಿಯೊಬ್ಬ ಜೀವಿಯೂ ನಿನ್ನ ಒಂದು ಭಾಗ–ಇತರರಿಗಾಗಿ ಮಾಡುವ ಎಲ್ಲಾ ಕೆಲಸದ ತತ್ತ್ವಾಧಾರ–ನಿನ್ನ ಹೆಂಡತಿ ಮಕ್ಕಳು ನಿನ್ನವರೆಂದು ತಿಳಿದು ಅವರಿಗೆ ಹೃತ್ಪೂರ್ವಕವಾಗಿ ಕಲ್ಯಾಣವನ್ನು ಬಯಸುವಂತೆಯೇ ಪ್ರತಿಯೊಬ್ಬ ಜೀವಿಗೂ ಅದೇ ಬಗೆಯ ಪ್ರೇಮ ಎಂದಿಗೆ ನಿನ್ನಲ್ಲಿ ಉದಿಸುವುದೋ ಅಂದು ನಿನ್ನಲ್ಲಿ ಬ್ರಹ್ಮ ಜಾಗ್ರತನಾಗಿರುವನೆಂದು ತಿಳಿಯುವೆ. ಅಲ್ಲಿಯವರೆಗೂ ಇಲ್ಲ. ಎಂದು ಯಾವ ಜಾತಿಗಳನ್ನೂ ಲೆಕ್ಕಿಸದೆ ಎಲ್ಲರಿಗೂ ಒಳ್ಳೆಯದಾಗಲೆಂದು ಬಯಸುವ ಭಾವನೆ ನಿನ್ನಲ್ಲಿ ಉದಿಸುವುದೋ ಅಂದು ನೀನು ನಿನ್ನ ಗುರಿಯೆಡೆಗೆ ಹೋಗುತ್ತಿರುವೆ ಎಂದು ಭಾವಿಸುವೆ.

ಶಿಷ್ಯ:—ಸ್ವಾಮಿಜಿ, ಇದೆಂತಹ ಪ್ರಚಂಡನಿರೂಪಣೆ–ಸರ್ವರಿಗೂ ಮುಕ್ತಿಯಾದಲ್ಲದೆ ವ್ಯಕ್ತಿಯೊಬ್ಬನಿಗೆ ಮುಕ್ತಿಯಿಲ್ಲ–ನಾನೆಂದೂ ಇಂತಹ ಅದ್ಭುತ ಪ್ರಸ್ತಾಪವನ್ನು ಕೇಳಿರಲಿಲ್ಲ.

ಸ್ವಾಮಿಜಿ:—ಒಂದು ಬಗೆಯ ವೇದಾಂತಿಗಳು ಈ ಭಾವನೆ ಹೊಂದಿದ್ದಾರೆ. ಅವರ ಪ್ರಕಾರ ವ್ಯಕ್ತಿಯಮೋಕ್ಷ ನಿಜವಾದ ಪರಿಪೂರ್ಣವಾದ ಮೋಕ್ಷವಲ್ಲ. ಮೋಕ್ಷದಲ್ಲಿ ಸಾರ್ವತ್ರಿಕ ಮೋಕ್ಷವೇ ನಿಜವಾದ ಮುಕ್ತಿ. ಈ ಪಂಥದ ಒಳ್ಳೆಯದು ಕೆಟ್ಟದ್ದು ಎರಡನ್ನೂ ತೋರಿಸಬಹುದು.

ಶಿಷ್ಯ:—ವೇದಾಂತದ ಪ್ರಕಾರ ವ್ಯಕ್ತಿಯ ಅವಸ್ಥೆಯೇ ಎಲ್ಲಾ ಬಂಧನದ ಮೂಲ. ಅನಂತ ಕರ್ಮದ ಆಸೆ ಪರಿಣಾಮದ

ಫಲವಾಗಿ ಆ ಎಲ್ಲೆಯಿರುವ ಅವಸ್ಥೆಯಲ್ಲಿ ಇರುವಂತೆ ತೋರುತ್ತದೆ. ವಿವೇಚನಾಶಕ್ತಿಯಿಂದ ಆ ಎಲ್ಲೆಯ ಅವಸ್ಥೆ ಮಾಯವಾದಾಗ ಜೀವ ಎಲ್ಲಾ ಬಗೆಯ ಆಧೀನಾವಸ್ಥೆಯಿಂದಲೂ ಬಿಡುಗಡೆ ಹೊಂದುವುದು. ಅಂದ ಮೇಲೆ ಜ್ಞಾನಾತೀತವಾದ ಆತ್ಮನಿಗೆ ಬಂಧನವೆಂದರೇನು? ಜೀವ, ಜಗತ್ತು ಯಾರಿಗೆ ಸತ್ಯವಾಗಿದೆಯೋ ಅವರು ಎಲ್ಲರಿಗೂ ಮುಕ್ತಿ ದೊರೆತ ಹೊರತು ತನಗೆ ಸಿಗುವುದಿಲ್ಲವೆಂದು ಯೋಚಿಸಬಹುದು. ಆದರೆ ಯಾವಾಗ ಮನಸ್ಸು ಆಧೀನಾವಸ್ಥೆಯ ಎಲ್ಲೆಕಟ್ಟನ್ನೆಲ್ಲಾ ಮೀರಿ ಬ್ರಹ್ಮನಲ್ಲಿ ಲೀನವಾಗುವುದೋ ಆಗ ಅವನಿಗೆ ಭೇದವಮಾಡಲು, ಹೇಗೆ ಸಾಧ್ಯ? ಆದ್ದರಿಂದ ಯಾವುದೂ ಅವನ ಮುಕ್ತಿಗೆ ಅಡ್ಡಿ ಬರುವುದಿಲ್ಲ.

ಸ್ವಾಮಿಜಿ:—ಹೌದು, ನೀನು ಹೇಳುವುದು ನಿಜ. ಮುಕ್ಕಾಲು ಪಾಲು ವೇದಾಂತಿಗಳೆಲ್ಲಾ ಹಾಗೆಯೇ ಅಭಿಪ್ರಾಯಪಡುತ್ತಾರೆ. ಅದೂ ಒಳ್ಳೆಯದೇ—ಈ ಅಭಿಪ್ರಾಯದಲ್ಲಿ ವ್ಯಕ್ತಿಯ ಮುಕ್ತಿಗೆ ಅಡ್ಡಿಯಿಲ್ಲ. ಆದರೆ ಯಾವ ಮನುಷ್ಯ ತನ್ನ ಜೊತೆಯಲ್ಲೇ ಇಡೀ ವಿಶ್ವವನ್ನೇ ಮುಕ್ತಿಗೆ ಒಯ್ಯುವೆನೆಂದು ಯೋಚಿಸುತ್ತಾನೋ ಅವನೆಂತಹ ಮಹಾತ್ಮನಿರಬೇಕು.

ಶಿಷ್ಯ:—ಸ್ವಾಮಿಜಿ, ಇದು ನಮ್ಮ ಧೈರ್ಯವನ್ನು ಸೂಚಿಸಬಹುವೇ ಹೊರತು ಇದಕ್ಕೆ ಶಾಸ್ತ್ರಸಮ್ಮತವಿಲ್ಲ.

ಸ್ವಾಮಿಗಳು ಬೇರಾವುದೋ ಯೋಚನೆಯಲ್ಲಿ ಮಗ್ನರಾದುದರಿಂದ ನನ್ನ ಮಾತುಗಳನ್ನು ಕೇಳಿಸಿಕೊಳ್ಳಲಿಲ್ಲ. ಅವರು ಕೊಂಚ ಹೊತ್ತಿನ ಮೇಲೆ ಹೇಳಿದರು: "ಹಗಲೂರಾತ್ರಿ ಬ್ರಹ್ಮನನ್ನು ಕುರಿತು ಯೋಚಿಸು? ಧ್ಯಾನಿಸು—ಒಂದೇ ಏಕಾಗ್ರತೆಯಿಂದ ಧ್ಯಾನಿಸು—ಬಾಹ್ಯ ಜೀವನದಲ್ಲಿ ಎಚ್ಚೆತ್ತಿರುವಾಗ ಇತರರಿಗಾಗಿ ಕೆಲಸಮಾಡಲು ಅಥವಾ ನಿನ್ನ ಮನಸ್ಸಿನಲ್ಲಿ "ಜಗತ್ತಿಗೂ ಜೀವನಿಗೂ ಕಲ್ಯಾಣವಾಗಲಿ" ಎಂದು ಮರಳಿ ಮರಳಿ ಯೋಚಿಸು. "ಎಲ್ಲರ ಮನಸ್ಸೂ ಬ್ರಹ್ಮನೆಡೆಗೆ ಹರಿಯಲಿ," ಎಂದೂ ಪುನಃ ಪುನಃ ಯೋಚಿಸು. ಇಂತಹ ನಿರರ್ಗಳ ಯೋಚನಾಪ್ರವಾಹದಿಂದ ಜಗತ್ತಿಗೂ ಉಪಯೋಗವಾಗುವುದು. ಪ್ರಪಂಚದಲ್ಲಿ ಯಾವ ಒಳ್ಳೆಯದು, ಅದು ಕೆಲಸವಾಗಲಿ, ಯೋಚನೆಯಾಗಲಿ, ಯಾವುದೂ ನಿರರ್ಥಕವಲ್ಲ. ನಿನ್ನ ಆಲೋಚನಾ ಪ್ರವಾಹ ಬಹುಶಃ ಅಮೇರಿಕಾದಲ್ಲಿರುವವನೊಬ್ಬನ ಧಾರ್ಮಿಕ ಭಾವನೆಯನ್ನು ಎಬ್ಬಿಸಬಹುದು.

ಶಿಷ್ಯ:— ಸ್ವಾಮಿಜಿ, ದಯವಿಟ್ಟು ನನ್ನನ್ನು ಹರಸಿ. ನನ್ನ

ಮನಸ್ಸು ಸತ್ಯದಲ್ಲಿ ಕೇಂದ್ರೀಕೃತವಾಗುವಂತೆ ಹರಿಸಿ.

ಸ್ವಾಮಿಜಿ:— ಹಾಗೇ ಆಗಲಿ. ನಿನಗೆ ಉತ್ಕಟ ಆಕಾಂಕ್ಷೆ ಇದ್ದರೆ ಖಂಡಿತ ಆಗುವುದು.

---

## ಅಧ್ಯಾಯ ೩೯

**ಸ್ಥಳ:— ಬೇಲೂರು ಮಠ. ವರ್ಷ:—ಕ್ರಿ.ಶ. ೧೯೦೧.**

ಬೇಲೂರು ಮಠ ಸ್ಥಾಪನೆಯಾದಾಗ ಅನೇಕ ಮಂದಿ ಸಂಪ್ರದಾಯ ಬದ್ಧ ಹಿಂದೂಗಳು ಮಠದ ಜೀವನದ ರೀತಿಯ ವಿಷಯದಲ್ಲಿ ಕಟುವಾಗಿ ಟೀಕಿಸುತ್ತಿದ್ದರು. ಶಿಷ್ಯನಿಂದ ಈ ಟೀಕೆಯ ವಿಷಯವನ್ನು ಕೇಳಿ ಸ್ವಾಮಿಗಳು ಹೇಳುತ್ತಿದ್ದರು:—( ತುಲಸೀದಾಸನ ಶ್ಲೋಕದಲ್ಲಿರುವ ) ಆನೆ ಅಂಗಡಿ ಬೀದಿಯಲ್ಲಿ ಹೋಗುತ್ತಿದ್ದಾಗ ಸಾವಿರಾರು ನಾಯಿಗಳು ಬೊಗಳಲು ಮೊದಲು ಮಾಡುವುವು. ಹೀಗೆ ಪ್ರಾಪಂಚಿಕ ಜನರು ಸಾಧುಗಳನ್ನು ಹಳಿದರೆ ಅದರಿಂದ ಸಾಧುಗಳಿಗಾವ ಕೆಟ್ಟ ಭಾವನೆಯೂ ಇರುವುದಿಲ್ಲ. ಅಥವಾ ಹೀಗೆ ಹೇಳುತ್ತಿದ್ದರು: "ಕಿರುಕುಳ ಕೊಡದೆ ಯಾವ ಉಪಯುಕ್ತವಾದ ಉದ್ದೇಶವೂ ಸಮಾಜದ ಹೃದಯವನ್ನು ಪ್ರವೇಶಿಸಲಾರದು." ಅಲ್ಲದೆ ಎಲ್ಲರಿಗೂ "ಪ್ರತಿಫಲದ ಮೇಲೆ ದೃಷ್ಟಿಯಿಡದೆ ನಿಮ್ಮ ಕರ್ಮದಲ್ಲಿ ತೊಡಗಿ. ಒಂದಲ್ಲ ಒಂದು ದಿನ ಅದರ ಫಲವನ್ನನ್ನುಭವಿಸೇ ತೀರುವಿರಿ" ಎಂದು ಬೋಧಿಸುತ್ತಿದ್ದರು. ಅಲ್ಲದೆ ಅನೇಕ ವೇಳೆ ಅವರ ಬಾಯಲ್ಲಿ "ಮಗು, ಸತ್ಕರ್ಮಿ ಎಂದೂ ದುಃಖಿಯಾಗುವುದಿಲ್ಲ" ಎಂಬ ಮಾತು ಸದಾ ಇರುತ್ತಿತ್ತು.

೧೯೦೧ನೇ ಇಸವಿ ಮೇ ಅಥವಾ ಜೂನ್ ತಿಂಗಳಲ್ಲಿ ಶಿಷ್ಯನನ್ನು ನೋಡಿ ಸ್ವಾಮಿಜಿ "ಆದಷ್ಟು ಬೇಗ ನನಗೆ ರಘುನಂದನನ ಅಷ್ಟವಿಂಶತಿ ತತ್ತ್ವದ ಒಂದು ಪ್ರತಿಯನ್ನು ತಂದುಕೊಡು" ಎಂದರು.

ಶಿಷ್ಯ:—ಹಾಗೆ ಆಗಲಿ. ಆದರೆ ಸ್ವಾಮಿಜಿ, ಈಗಿನ ಕಾಲದಲ್ಲಿ ಆ ಪುಸ್ತಕವನ್ನು ಒಂದು ಮೂಢಾಚಾರದ ರಾಶಿ ಎಂದು ಹೇಳುತ್ತಾರಲ್ಲ— ಅದನ್ನು ಕಟ್ಟಿಕೊಂಡೇನು ಮಾಡುವಿರಿ?

ಸ್ವಾಮಿಜಿ:—ಏಕೆ, ರಘುನಂದನನು ಆಗಿನ ಕಾಲದ ಪ್ರಚಂಡ ಪಂಡಿತ. ಪುರಾತನ ಸ್ಮೃತಿಗಳನ್ನೆಲ್ಲಾ ಒಂದುಗೂಡಿಸಿ, ಹಿಂದೂಗಳ ಪದ್ಧತಿ ಸಂಪ್ರದಾಯಗಳನ್ನೆಲ್ಲಾ ಆಗಿನ ಕಾಲಕ್ಕೆ ತಕ್ಕಂತೆ ಹೊಸದಾಗಿ ಮತ್ತು ವಾತಾವರಣಕ್ಕೆ ಸರಿಹೊಂದುವಂತೆ ಮಾರ್ಪಡಿಸಿ ನ್ಯಾಯಸೂತ್ರಗಳನ್ನು ಬರೆದನು. ಇಡೀ ಬಂಗಾಳ ಅವನಿಂದ ಬಂದ ಆ ನಿಯಮಗಳನ್ನೇ ಅನುಸರಿಸುತ್ತದೆ. ಆದರೆ ಹಿಂದೂಗಳನ್ನು ವ್ಯತ್ಯಸಮನಾದ ಸಿದ್ಧಾಂತಕ್ಕೆ ಕಟ್ಟಲು ಹೋಗಿ ಸಮಾಜವನ್ನೇ ಅಧೋಗತಿಗೆ ತಂದನು. ಮುಖ್ಯ ವಿಷಯಗಳ ವಿಚಾರ ಹಾಗಿರಲಿ; ತಿನ್ನುವುದು, ಮಲಗುವುದು ಮುಂತಾದ ನಿತ್ಯಕ್ರಿಯೆಗಳ ವಿಷಯದಲ್ಲೂ ಅವನು ನಿಯಮಗಳಿಗೆ ಒಳಪಡಿಸಲು ಯತ್ನಿಸಿದನು. ಈಗಿನ ಬದಲಾಯಿಸಿದ ಕಾಲದಲ್ಲಿ ಅದು ಬಹುಕಾಲ ನಿಲ್ಲಲಿಲ್ಲ. ಎಲ್ಲಾ ದೇಶಗಳಲ್ಲೂ ಎಲ್ಲಾ ಕಾಲಗಳಲ್ಲೂ ಸಮಾಜದ ವಾಡಿಕೆ ಸಂಪ್ರದಾಯಗಳನ್ನೊಳಗೊಂಡ ಕರ್ಮಕಾಂಡ ಅದರ ರೂಪನ್ನು ಬದಲಾಯಿಸುವುದು. ಕೇವಲ ಜ್ಞಾನಕಾಂಡ ಮಾತ್ರ ಬದಲಾಯಿಸುವುದಿಲ್ಲ. ವೇದಗಳ ಕಾಲದಲ್ಲಿ ಕೂಡ ವಿಧಿನಿಯಮಗಳು ಕ್ರಮೇಣ ಬದಲಾಯಿಸಿದುದನ್ನು ನೀನು ನೋಡುವೆ. ಆದರೆ ಉಪನಿಷತ್ತಿನ ತತ್ತ್ವಭಾಗಗಳು ಮಾತ್ರ ಇಲ್ಲಿಯವರೆಗೂ ಬದಲಾಯಿಸದೆ ಹಾಗೇ ಇವೆ– ಅದರ ಹಲವು ಭಾಷ್ಯಗಳಿವೆ ಇಷ್ಟೆ.

ಶಿಷ್ಯ:—ರಘುನಂದನನ ಸ್ಮೃತಿಯಿಂದ ನೀವೇನುಮಾಡುವಿರಿ?

ಸ್ವಾಮಿಜಿ:—ನಾನೀಬಾರಿ ದುರ್ಗಾ ಪೂಜೆಯನ್ನು ಆಚರಿಸಬೇಕೆಂದಿರುವೆ. ಖರ್ಚು ಒದಗಿದರೆ ಮಹಾ ಮಾಯೆಯ ಪೂಜೆಯನ್ನೂ ಮಾಡುವೆ. ಅದಕ್ಕೇ ಆ ಪೂಜೆಯ ವಿಧಿವತ್ತಾದ ಕ್ರಮವನ್ನು ಓದಬೇಕೆಂದಿರುವೆ. ಮುಂದಿನ ಭಾನುವಾರ ನೀನು ಬರುವಾಗ ಅದರದೊಂದು ಪ್ರತಿಯನ್ನು ತಂದೇ ತರಬೇಕು.

ಶಿಷ್ಯ:—ಹಾಗೇ ಆಗಲಿ, ಸ್ವಾಮಿಜಿ.

ಮುಂದಿನ ಶನಿವಾರ ಶಿಷ್ಯ ಆ ಪುಸ್ತಕದ ಪ್ರತಿಯೊಂದನ್ನು ತಂದ. ಸ್ವಾಮಿಜಿಗೆ ಅದನ್ನು ತೆಗೆದುಕೊಳ್ಳಲು ತುಂಬಾ ಸಂತೋಷವಾಯಿತು. ಇದಾದ ಒಂದು ವಾರದ ನಂತರ ಅವರು ಶಿಷ್ಯನಿಗೆ "ನೀನು ತಂದ ಆ ರಘುನಂದನನ ಸ್ಮೃತಿಯನ್ನು ನಾನು ಮುಗಿಸಿದೆ. ಸಾಧ್ಯವಿದ್ದಲ್ಲಿ ನಾನು ಜಗನ್ಮಾತೆಯ ಪೂಜೆಯನ್ನು ಆಚರಿಸುವೆ."

ತತ್ಕಾಲದಲ್ಲಿ ದುರ್ಗಾಪೂಜೆ ಬಹು ವಿಜೃಂಭಣೆಯಿಂದ ನಡೆಯಿತು.

* * * *

ಇದಾದ ಕೊಂಚ ದಿನಗಳ ತರುವಾಯ ಸ್ವಾಮಿಜಿ ಕಾಳಿಘಾಟ್‌ನಲ್ಲಿ ಕಾಳಿಮಾತೆಯ ಮುಂದೆ ಹೋಮ ಮಾಡಿದರು. ಈ ಸಂದರ್ಭದ ವಿಚಾರ ಮಾತನಾಡುತ್ತಾ ಒಮ್ಮೆ ಸ್ವಾಮಿಜಿ ಶಿಷ್ಯನಿಗೆ ಹೀಗೆ ಹೇಳಿದರು. "ಕಾಲಿಘಾಟ್‌ನಲ್ಲಿ ನಮ್ಮ ಹೃದಯ ವೈಶಾಲ್ಯತೆ ಇನ್ನೂ ಉಳಿದಿದೆ: ನಾನು ಪಾಶ್ಚಾತ್ಯ ದೇಶದಿಂದ ಹಿಂತಿರುಗಿ ಬಂದವನೆಂದು ತಿಳಿದಿದ್ದರೂ ಆ ದೇವಸ್ಥಾನದ ಅಧಿಕಾರಿಗಳು ನಾನು ದೇವಸ್ಥಾನವನ್ನು ಪ್ರವೇಶಿಸಲು ಸ್ವಲ್ಪವೂ ಅಡ್ಡಿಮಾಡಲಿಲ್ಲ. ಅದಕ್ಕೆ ಬದಲಾಗಿ ಅವರು ಆ ಪವಿತ್ರ ಪೂಜಾ ಸ್ಥಳಕ್ಕೆ ನನ್ನನ್ನು ಕರೆದೊಯ್ದು ನಾನು ಮಾತೆಯನ್ನು ಮನದಣಿಯ ಪೂಜೆ ಮಾಡಲು ಸಹಾಯ ಮಾಡಿದರು."

---

## ಅಧ್ಯಾಯ ೪೦.

**ಸ್ಥಳ:—ಬೇಲೂರು ಮಠ. ವರ್ಷ:—ಕ್ರಿ. ಶ. ೧೯೦೨**

ಇಂದು ಶ್ರೀ ರಾಮಕೃಷ್ಣರ ವಾರ್ಷಿಕೋತ್ಸವ. ಸ್ವಾಮಿಜಿ ಕಂಡ ಕಟ್ಟಕಡೆಯ ಉತ್ಸವ. ಶಿಷ್ಯ ಶ್ರೀ ರಾಮಕೃಷ್ಣರ ಮೇಲೆ ಕಟ್ಟಿದ ಪ್ರಾರ್ಥನಾ ಶ್ಲೋಕವೊಂದನ್ನು ಸ್ವಾಮಿಜಿಗೆ ಒಪ್ಪಿಸಿದ. ನಂತರ ಸ್ವಾಮಿಜಿ ಪಾದಗಳನ್ನು ಒತ್ತಲು ಪ್ರಾರಂಭಿಸಿದ. ಪದ್ಯವನ್ನೋದುವ ಮೊದಲು ಸ್ವಾಮಿಜಿ ಶಿಷ್ಯನಿಗೆ "ಪಾದಗಳು ಬಹು ನೋಯುತ್ತಿರುವುದರಿಂದ ಮೃದುವಾಗಿ ಒತ್ತು" ಎಂದು ಹೇಳಿದರು.

ಪದ್ಯವನ್ನೋದಿದ ಮೇಲೆ ಸ್ವಾಮಿಜಿ "ಚೆನ್ನಾಗಿ ಬರೆದಿರುವೆ" ಎಂದರು.

ಸ್ವಾಮಿಜಿ ಖಾಯಿಲೆ ಬಹು ದಾರುಣವಾದುದನ್ನು ನೋಡಿ ಶಿಷ್ಯನ ಹೃದಯ ಹಿಂಡಿದಂತಾಯಿತು. ಅವನ ಅಂತರಂಗದ ಭಾವನೆಗಳನ್ನು ತಿಳಿದು ಸ್ವಾಮಿಜಿ "ನೀನೇನು ಯೋಚಿಸುತ್ತಿರುವೆ? ದೇಹ ಹುಟ್ಟಿ ಆಯಿತು– ಅದು ಸತ್ತೇತೀರಬೇಕು. ನನ್ನ ಅಭಿಪ್ರಾಯಗಳಲ್ಲಿ

ಕೆಲವನ್ನಾದರೂ ನಿಮ್ಮಲ್ಲಿ ಬೇರೂರುವ ಹಾಗೆ ಮಾಡಿದ್ದರೆ ನಾನು ಹುಟ್ಟಿದ್ದು ನಿರರ್ಥಕವಲ್ಲವೆಂದು ಭಾವಿಸುವೆ" ಎಂದರು.

ಶಿಷ್ಯ:—ನಾವು ನಿಮ್ಮ ಕೃಪೆಗೆ ಅರ್ಹರೆ? ನೀವು ನನ್ನ ಅರ್ಹತೆಯನ್ನು ಗಣನೆಗೆ ತಾರದೆ ನನ್ನನ್ನು ಆಶೀರ್ವದಿಸಿದರೆ ನಾನು ಧನ್ಯನೆಂದು ಭಾವಿಸುವೆ.

ಸ್ವಾಮಿಜಿ:—ಯಾವಾಗಲೂ ತ್ಯಾಗವೇ ತಳಹದಿ ಎಂಬುದನ್ನು ನೆನಪಿನಲ್ಲಿಡು. ಎಲ್ಲಿಯುವರೆಗೆ ಈ ಭಾವನೆ ಬೇರೂರುವುದಿಲ್ಲವೊ ಅಲ್ಲಿಯವರೆಗೆ ಬ್ರಹ್ಮ ಅಥವಾ ಇತರ ಭೂಮಂಡಲದ ಯಾವ ದೇವರೂ ಮುಕ್ತಿ ಪಡೆಯಲು ಸಾಧ್ಯವಿಲ್ಲ.

ಶಿಷ್ಯ:—ಪ್ರತಿದಿನವೂ ನಿಮ್ಮ ಬಾಯಿಂದ ಇದನ್ನು ಕೇಳುತ್ತಿದ್ದರೂ ನಾನು ಸಾಕ್ಷಾತ್ಕರಿಸಿಕೊಳ್ಳಲಾರದೆ ಹೋದೆನೆಂದು ನನಗೆ ತೀವ್ರ ವೇದನೆಯುಂಟಾಗಿದೆ.

ಸ್ವಾಮಿಜಿ:—ತ್ಯಾಗ ಬಂದೇ ಬರುವುದು. ಆದರೆ ಸಕಾಲದಲ್ಲಿ ಬರುವುದು. ಕಾಲೇನಾತ್ಮನಿವಿಂದತಿ "ತತ್ಕಾಲದಲ್ಲಿ ನಮ್ಮಲ್ಲಿಯೇ ನಮಗೆ ಮುಕ್ತಿ ದೊರಕುವುದು." ಹಿಂದಿನ ಜನ್ಮದ ಸಂಸ್ಕಾರಗಳು ತೀರಿದಮೇಲೆ ತ್ಯಾಗ ಎದೆಯಲ್ಲಿ ಚಿಗುರುವುದು.

ಸ್ವಲ್ಪ ಹೊತ್ತಿನ ನಂತರ–"ನೀನು ಹೊರಗೇಕೆ ಜನರ ಆ ದೊಡ್ಡ ದೊಂಬಿಗೆ ಹೋಗಬೇಕು? ನೀನು ನನ್ನೊಡನೆಯೆ ಇರು. ನಿರಂಜನನಿಗೆ ಬಾಗಿಲಲ್ಲಿಯೇ ಇರಲು ಹೇಳು. ಯಾರೂ ನನ್ನನ್ನು ಇಂದು ತೊಂದರೆ ಕೊಡದೆ ಇರಲಿ" ಎಂದರು.

ನಂತರ ಕೆಳಗಣ ಸಂಭಾಷಣೆ ಶಿಷ್ಯನಿಗೂ ಸ್ವಾಮಿಜಿಗೂ ನಡೆಯಿತು.

ಸ್ವಾಮಿಜಿ:—ಇನ್ನು ಮುಂದೆ ವಾರ್ಷಿಕೋತ್ಸವ ಬೇರೆ ವಿಧವಾಗಿ ನಡೆದರೆ ವಾಸಿ ಎಂದು ನನಗೆ ತೋರುತ್ತದೆ. ಒಂದು ದಿನಕ್ಕೆ ಬದಲು ಉತ್ಸವ ಐದಾರು ದಿನ ನಡೆದರೆ ವಾಸಿ. ಮೊದಲನೆಯದಿನ ಧರ್ಮಶಾಸ್ತ್ರಗಳನ್ನು ಓದುವುದು, ಅದಕ್ಕೆ ಅರ್ಥ ಹೇಳುವುದು–ಎರಡನೆಯ ದಿನ ವೇದ ವೇದಾಂತಗಳಮೇಲೆ, ಅವುಗಳ ಸಮಸ್ಯೆ ಮತ್ತು ಪರಿಹಾರಗಳ ಮೇಲೆ ಸಂಭಾಷಣೆ—ಪ್ರಶ್ನೆಯ ತರಗತಿಯನ್ನೇರ್ಪಡಿಸುವುದು—ನಾಲ್ಕನೆಯ ದಿನ ಉಪನ್ಯಾಸಗಳನ್ನಿಡುವುದು, ಕಡೆಯ ದಿನ ಈಗ ನಡೆಯುವಂತೆ ಹಬ್ಬವನ್ನಾಚರಿಸುವುದು. ದುರ್ಗಾ ಪೂಜೆಯಂತೆಯೆ ನಾಲ್ಕೈದು ದಿನ

ನಡೆಯಬಹುದು. ಮೇಲೆ ಹೇಳಿದಹಾಗೆ ಮಾಡಿದರೆ ಶ್ರೀ ರಾಮಕೃಷ್ಣರ ಶಿಷ್ಯರ ಹೊರತು ಮತ್ತಾರೂ ಕಡೆಯದಿನ ಬಿಟ್ಟು ಉಳಿದ ದಿನಗಳಲ್ಲಿ ಅದಕ್ಕೆ ಸಹಕರಿಸಲಾಗದು. ಆದರೆ ಅದರಿಂದೇನೂ ಬಾಧಕವಿಲ್ಲ. ಒಂದು ದೊಡ್ಡ ಜನದೊಂಬಿ ಸೇರಿವರೆ ಶ್ರೀ ರಾಮಕೃಷ್ಣರ ಸಂದೇಶ ಸಾರಿ ದಂತಾಗುವುದಿಲ್ಲ.

ಶಿಷ್ಯ:—ಎಂತಹ ಸುಂದರವಾದ ಆಲೋಚನೆ. ಮುಂದಿನ ಬಾರಿ ತಮ್ಮ ಇಚ್ಛೆಯಂತೆಯೆ ಮಾಡಬಹುದು.

ಸ್ವಾಮಿಜಿ:—ನೋಡು ಮಗು, ನೀವೆಲ್ಲಾ ಅದರಂತೆ ಮಾಡಿ. ನನಗೆ ಅದರಮೇಲೆ ಅಂತಹ ಮನಸ್ಸೇನೂ ಇಲ್ಲ.

ಶಿಷ್ಯ:—ಸ್ವಾಮಿಜಿ ಈ ಬಾರಿ ಅನೇಕ ಸಂಗೀತಗಾರರ ಗುಂಪು ಬಂದಿದೆ.

ಈ ಮಾತನ್ನು ಕೇಳಿ ಸ್ವಾಮಿಜಿ ಎದ್ದುನಿಂತು ಕಿಟಕಿಯ ಕಂಬಿಗಳನ್ನು ಹಿಡಿದುಕೊಂಡು ಗುಂಪುಕೂಡಿದ ಭಕ್ತಗಣವನ್ನು ನೋಡಿದರು. ಕೊಂಚ ಹೊತ್ತಿನ ಮೇಲೆ ಕುಳಿತುಕೊಂಡರು.

ಸ್ವಾಮಿಜಿ:—ಶ್ರೀ ರಾಮಕೃಷ್ಣರ ದೈವಲೀಲೆಯಲ್ಲಿ ನೀವೆಲ್ಲಾ ನಟರು. ಇದಾದಮೇಲೆ ಇದರ ಮಾತೇಕೆ, ಜನರು ನಿಮ್ಮ ಹೆಸರನ್ನೂ ಪವಿತ್ರವಾಗಿ ಬಾವಿಸುವರು. ನೀನು ಬರೆಯುತ್ತಿರುವ ಈ ಶ್ಲೋಕಗಳು ಪ್ರೇಮ ಮತ್ತು ಜ್ಞಾನ ಸಂಪಾದನೆಗಾಗಿ ಜನರಿಂದ ಓದಲ್ಪಡುತ್ತವೆ.— ಆತ್ಮಜ್ಞಾನ ಪಡೆಯುವುದೇ ಜೀವನದ ಮಹೋದ್ದೇಶವೆಂದು ತಿಳಿ. ಜಗದ್ಗುರುಗಳಾದ ಅವತಾರ ಪುರುಷರಲ್ಲಿ ನಿನಗೆ ಭಕ್ತಿಯಿದ್ದರೆ ಅದು ತನ್ನಷ್ಟಕ್ಕೆ ತಾನೆ ಸಕಾಲದಲ್ಲಿ ಆವಿರ್ಭಾವನೆಯಾಗುವುದು.

ಶಿಷ್ಯ:—ಸ್ವಾಮಿಜಿ ನನಗೆ ಜ್ಞಾನಲಾಭವಾಗುವುದೆ ?

ಸ್ವಾಮಿಜಿ:—ಶ್ರೀ ರಾಮಕೃಷ್ಣರ ಆಶೀರ್ವಾದದಿಂದ ನಿನಗೆ ಜ್ಞಾನ ಲಾಭವಾಗುವುದು. ನಿನಗೆ ಪ್ರಾಪಂಚಿಕ ಜೀವನದಲ್ಲಿ ಹೆಚ್ಚು ಸುಖ ಸಿಗುವುದಿಲ್ಲ.

ಶಿಷ್ಯ:—ನೀವು ನನ್ನ ಮನಸ್ಸಿನ ದುರ್ಬಲತೆಯನ್ನು ನಾಶಮಾಡಲು ಅನುಗ್ರಹಿಸಿದರೆ ಮಾತ್ರ ನನಗೆ ಭರವಸೆಯುಂಟಾಗುವುದು.

ಸ್ವಾಮಿಜಿ:—ಅಂಜಿಕೆಯೇಕೆ? ನೀನು ಅನಿರೀಕ್ಷಿತವಾಗಿ ಇಲ್ಲಿಗೆ ಬಂದಿರುವೆ. ನೀನು ಮುಕ್ತಿ ಹೊಂದೇ ತೀರುವೆ.

ಶಿಷ್ಯ:—(ದೈನ್ಯದಿಂದ) ನೀವು ನನ್ನನ್ನು ಕಾಪಾಡಬೇಕು. ಈ ಜನ್ಮದಲ್ಲೇ ಅಜ್ಞಾನದಿಂದ ನನ್ನನ್ನು ಉದ್ಧರಿಸಬೇಕು.

ಸ್ವಾಮಿಜಿ:—ಯಾರು ಯಾರನ್ನು ಕಾಪಾಡಲು ಸಾಧ್ಯ ಹೇಳು? ಗುರು ಕೆಲವು ತೆರೆಗಳನ್ನು ತೆಗೆದುಹಾಕಲು ಮಾತ್ರ ಸಾಧ್ಯ. ಯಾವಾಗ ಈ ಮುಸುಕುಗಳೆಲ್ಲಾ ಹೋಗುವುವೋ ಆಗ ನಮ್ಮ ಆತ್ಮ ಸ್ವಯಂ ಪ್ರಕಾಶ ಮಾನವಾಗಿ ಸೂರ್ಯನಂತೆ ಪ್ರಜ್ವಲಿಸುವುದು.

ಶಿಷ್ಯ:—ಹಾಗಾದರೆ ಶಾಸ್ತ್ರದಲ್ಲಿ ನಾವೇಕೆ ಕೃಪೆ ಎಂಬುದನ್ನು ಓದುತ್ತೇವಲ್ಲ?

ಸ್ವಾಮಿಜಿ:—ಕೃಪೆ ಎಂದರೆ ಇದು: ಯಾರಿಗೆ ಆತ್ಮಸಾಕ್ಷಾತ್ಕಾರ ವಾಗಿದೆಯೊ ಅವನು ದೊಡ್ಡ ಶಕ್ತಿಯ ಭಂಡಾರವಾಗಿರುವನು. ಆತನನ್ನು ಕೇಂದ್ರವಾಗಿಟ್ಟುಕೊಂಡು ಒಂದು ವೃತ್ತವನ್ನೆಳೆದರೆ ಯಾರು ಆ ವೃತ್ತ ದೊಳಗೆ ಬರುವರೋ ಅವರು ಆತನ ಅಭಿಪ್ರಾಯಗಳ ಆಕರ್ಷಣೆ ಗೊಳಗಾಗುವರು. ಹಾಗೇ ಹೆಚ್ಚು ತಪಸ್ಸಿಲ್ಲದೆ ಆತನ ಅದ್ಭುತ ಆದ್ಯಾತ್ಮಿ ಕತೆಯ ಫಲವನ್ನು ಹೊಂದುವರು. ಇದನ್ನು ಕೃಪೆ ಎಂದು ನೀನು ಕರೆಯುವುದಾದರೇ ಹಾಗೇ ಕರೆ.

ಶಿಷ್ಯ:—ಇದಕ್ಕಿಂತ ಹೆಚ್ಚಿನ ಪದವಿ ಇಲ್ಲವೆ?

ಸ್ವಾಮಿಜಿ:—ಇದೆ. ಅವತಾರ ಪುರುಷರು ಬಂದಾಗ ಅವರೊಡನೆ ವಿಶ್ವನಾಟಕದ ಸಹಾಯಾರ್ಥವಾಗಿ ಅನೇಕ ಮುಕ್ತಾತ್ಮರೂ ಬರುವರು. ಲಕ್ಷಾಂತರ ಜೀವಿಗಳನ್ನು ಅಜ್ಞಾನದಿಂದ ಉದ್ಧಾರ ಮಾಡಿ ಅವರಿಗೆ ಅದೇ ಜನ್ಮದಲ್ಲೇ ಮುಕ್ತಿಕೊಡಲು ಅವತಾರ ಪುರುಷನಿಗೆ ಮಾತ್ರ ಸಾಧ್ಯ. ಇದಕ್ಕೆ ಕೃಪೆ ಎನ್ನುವರು. ನಿನಗೆ ಅರ್ಥವಾಯಿತೆ?

ಶಿಷ್ಯ:—ಆಯಿತು ಸ್ವಾಮಿಜಿ. ಅಂತಹವರ ದರ್ಶನ ಲಾಭದಿಂದ ಧನ್ಯರಾಗದವರ ಪಾಡೇನು?

ಸ್ವಾಮಿಜಿ:—ಅದಕ್ಕೆ ದಾರಿ ಆತನನ್ನು ಪ್ರಾರ್ಥಿಸುವುದೊಂದೆ–ಆತ ನನ್ನು ಪ್ರಾರ್ಥಿಸುವುದರಿಂದ ಅನೇಕ ಮಂದಿ ಆತನ ದರ್ಶನ ಲಾಭ ಪಡೆ ದಿದ್ದಾರೆ. ಮಾನವ ಶರೀರದಲ್ಲೇ ನೋಡಿ ಆತನ ಕೃಪೆಗೆ ಪಾತ್ರ ರಾಗಿದ್ದಾರೆ.

ಶಿಷ್ಯ:—ಶ್ರೀ ರಾಮಕೃಷ್ಣರ ನಿರ್ಯಾಣವಾದ ಮೇಲೆ ನೀವೆಂದಾದರೂ ಅವರನ್ನು ನೋಡಿದ್ದಿರಾ?

ಸ್ವಾಮಿಜಿ :—ಅವರು ದೇಹತ್ಯಾಗಮಾಡಿದ ಮೇಲೆ ನಾನು ಘಾಸಿಪುರದ ಪವಹಾರಿ ಬಾಬಾರೊಡನೆ ಕೆಲವುಕಾಲ ಸಂಪರ್ಕವನ್ನಿಟ್ಟುಕೊಂಡಿದ್ದೆ. – ಅವರ ಆಶ್ರಮಕ್ಕೆ ಕೊಂಚ ದೂರದಲ್ಲಿರುವ ತೋಟವೊಂದರಲ್ಲಿ ನಾನು ವಾಸಿಸುತ್ತಿದ್ದೆ—ಜನರು ಅದೊಂದು ದೆವ್ವದ ತೋಟವೆನ್ನುತ್ತಿದ್ದರು. ಆದರೆ ನನಗೇ ಗೊತ್ತಿರುವಂತೆ ನಾನೇ ಒಂದು ಭೂತವಾಗಿದ್ದುದರಿಂದ ನನಗೆ ದೆವ್ವದ ಭೀತಿಯೇನೂ ಇರಲಿಲ್ಲ. ಅದರಲ್ಲಿ ಅನೇಕ ನಿಂಬೆ ಹಣ್ಣಿನ ಗಿಡಗಳಿದ್ದು ಬೇಕಾದಷ್ಟು ಹಣ್ಣು ಬಿಟ್ಟಿತ್ತು. ಆಗ ನಾನು ಅತಿಸಾರದಿಂದ ನರಳುತ್ತಿದ್ದೆ. ಬ್ರೆಡ್‌ಹೊರತು ಮತ್ತೇನೂ ಆಹಾರವಿರಲಿಲ್ಲ. ಆದ್ದರಿಂದ ಜೀರ್ಣಿಸುವ ಶಕ್ತಿಯನ್ನು ವೃದ್ಧಿಮಾಡಿಕೊಳ್ಳಲು ನಾನು ತುಂಬಾ ನಿಂಬೆಹಣ್ಣನ್ನು ತಿನ್ನುತ್ತಿದ್ದೆ. ಪವಹಾರಿಬಾಬಾ ಜೊತೆ ಇದ್ದು ನಾನು ಅವರನ್ನು ತುಂಬಾ ಇಷ್ಟಪಟ್ಟೆ. ಆತನನ್ನು ತುಂಬಾ ಪ್ರೀತಿಸತೊಡಗಿದೆ. ಒಂದು ದಿನ ನಾನು ಶ್ರೀ ರಾಮಕೃಷ್ಣರ ಜೊತೆಯಲ್ಲಿ ಅಷ್ಟು ದಿನ ಇದ್ದರೂ ದೇಹವನ್ನು ಬಲಿಷ್ಠಮಾಡಲು ಯಾವ ಕಲೆಯನ್ನೂ ಕಲಿಯಲಿಲ್ಲ ಎಂದು ಯೋಚಿಸಿದೆ. ನಾನು ಪವಹಾರಿಬಾಬಾರವರಿಗೆ ಹಠಯೋಗ ಗೊತ್ತಿತ್ತೆಂದು ಕೇಳಿದ್ದೆ. ನನಗೆ ತಿಳಿದಿರುವಂತೆ ನನಗೆ ದೃಢನಿರ್ಧಾರವಾಗಿ ಯಾವುದರ ಮೇಲೆ ಮನಸ್ಸಿಡುವೆನೋ ಅದನ್ನೇ ಮಾಡೇತೀರುವೆ. ನಾನು ದೀಕ್ಷೆ ತೆಗೆದುಕೊಳ್ಳುವ ಹಿಂದಿನ ಸಂಜೆ ನಾನೊಂದು ಮಂಚದ ಮೇಲೆ ಮಲಗಿ ಯೋಚಿಸುತ್ತಿದ್ದೆ. ತಕ್ಷಣವೇ ನನ್ನ ಬಲಭಾಗದಲ್ಲಿ ಶ್ರೀ ರಾಮಕೃಷ್ಣರು ಬಹು ದುಃಖಿತರಾದಂತೆ ನಿಂತಿರುವುದನ್ನು ನೋಡಿದೆ. ನಾನು ಅವರಿಗೆ ನನ್ನನ್ನು ಸಂಪೂರ್ಣ ಅರ್ಪಿಸಿದೆ. ಈಗ ಮತ್ತೊಬ್ಬ ಗುರುವನ್ನು ಹೊಂದಲು ಯೋಚಿಸುತ್ತಿದ್ದ ನನ್ನ ಆಲೋಚನೆಯ ವಿಚಾರವಾಗಿ ನನಗೇ ನಾಚಿಕೆಯಾಗಿ ನಾನು ಅವರನ್ನು ನೋಡುತ್ತಾ ಇದ್ದೆ. ಹೀಗೇ ೨–೩ ಗಂಟೆಗಳಕಾಲ ಕಳೆದಿರಬಹುದು. ನನ್ನ ಬಾಯಿಂದ ಒಂದು ಮಾತೂ ಹೊರಡಲಿಲ್ಲ. ನಂತರ ಇದ್ದಕ್ಕಿದ್ದಂತೆ ಅವರು ಮಾಯವಾದರು. ಶ್ರೀ ರಾಮಕೃಷ್ಣರನ್ನು ನೋಡಿದುದರಿಂದ ಅಂದು ರಾತ್ರಿ ನನ್ನ ಮನಸ್ಸು ಅಲ್ಲೋಲ ಕಲ್ಲೋಲವಾಗಿ ಪವಹಾರಿಬಾಬಾ ಹತ್ತಿರ ದೀಕ್ಷೆ ತೆಗೆದುಕೊಳ್ಳುವುದನ್ನು ಮುಂದಕ್ಕೆ ಹಾಕಿದೆ. ಒಂದೆರಡು ದಿನಗಳಾದ ಮೇಲೆ ಪುನಃ ನನ್ನ ಮನಸ್ಸಿನಲ್ಲಿ ಪವಹಾರಿಬಾಬಾರವರಲ್ಲಿ ದೀಕ್ಷೆ ತೆಗೆದುಕೊಳ್ಳುವ ಯೋಚನೆ ಬಂತು. ಪುನಃ ರಾತ್ರೆ ಹಿಂದಿನಂತೆ

ಶ್ರೀ ರಾಮಕೃಷ್ಣರು ಕಾಣಿಸಿಕೊಂಡರು. ಹೀಗೆ ಒಂದಾದಮೇಲೊಂದರಂತೆ ಅನೇಕ ದಿನಗಳು ನನಗೆ ಶ್ರೀ ರಾಮಕೃಷ್ಣರ ದರ್ಶನವಾದ ಮೇಲೆ ಪ್ರತಿ ಬಾರಿ ನಾನು ನಿರ್ಧರಮಾಡಿದಾಗಲೂ ಆ ರೀತಿ ದರ್ಶನವಾಗುತ್ತಿದ್ದುದರಿಂದ ಇವರಿಂದ ಕೆಡಕುಂಟಾಗುವುದಲ್ಲದೆ ಒಳ್ಳೆಯದೇನೂ ಆಗುವುದಿಲ್ಲೆಂದು ನಾನು ದೀಕ್ಷೆ ತೆಗೆದುಕೊಳ್ಳುವ ಯೋಚನೆಯನ್ನು ಬಿಟ್ಟುಬಿಟ್ಟೆ.

ಕೊಂಚಕಾಲಾನಂತರ ಸ್ವಾಮಿಜಿ ಶಿಷ್ಯನನ್ನು ಕುರಿತು ಹೇಳಿದರು. "ಶ್ರೀ ರಾಮಕೃಷ್ಣನನ್ನು ನೋಡಿದವರೆಲ್ಲಾ ಧನ್ಯರು. ಅವರ ಜನ್ಮ ಅವರ ಕರ್ಮವೆಲ್ಲ ಪವಿತ್ರವಾಗಿವೆ. ನೀವೆಲ್ಲಾ ಅವರ ದರ್ಶನ ಪಡೆದೇ ಪಡೆಯುವಿರಿ. ನೀವು ಇಲ್ಲಿಗೆ ಬಂದ ಮೇಲೆ ಅವರಿಗೆ ಬಹಳ ಸಮೀಪದಲ್ಲಿರುವಿರಿ. ಶ್ರೀ ರಾಮಕೃಷ್ಣರಂತೆ ಈ ಭೂಮಿಗೆ ಯಾರು ಬಂದರೆಂದು ಯಾರಿಗೂ ಅರ್ಥವಾಗುವುದಿಲ್ಲ. ಅವರ ಅಂತರಂಗದ ಶಿಷ್ಯರೂ ಕೂಡ ಅದರ ಸತ್ಯಸಂಗತಿಯನ್ನರಿಯರು. ಕೇವಲ ಕೆಲವರಿಗೆ ಅವರ ವಿಚಾರ ಕೊಂಚ ತಿಳಿದಿದೆ. ಎಲ್ಲರಿಗೂ ಆಮೇಲೆ ಅರ್ಥವಾಗುವುದು.

ಸಂಭಾಷಣೆ ನಡೆಯುತ್ತಿರುವಾಗ ಸ್ವಾಮಿ ನಿರಂಜನಾನಂದರು ಬಾಗಿಲನ್ನು ತಟ್ಟಲು ಶಿಷ್ಯನು ಎದ್ದು "ಯಾರು ಬಂದಿದ್ದಾರೆ?" ಎಂದು ವಿಚಾರಿಸಿದ. ನಿರಂಜನರು "ಸೋದರಿ ನಿವೇದಿತೆ ಮತ್ತು ಇತರ ಆಂಗ್ಲೇಯ ಸ್ತ್ರೀಯರು" ಎಂದಮೇಲೆ ಅವರನ್ನು ಕೊಠಡಿಯೊಳಕ್ಕೆ ಬಿಡಲಾಯಿತು. ಅವರು ನೆಲದ ಮೇಲೆ ಕುಳಿತುಕೊಂಡು ಸ್ವಾಮಿಜಿ ಆರೋಗ್ಯವನ್ನು ವಿಚಾರಿಸಿಕೊಂಡರು. ಸ್ವಲ್ಪ ಮಾತಾದ ಮೇಲೆ ಅವರು ಹೊರಟುಹೋದರು. ನಂತರ ಸ್ವಾಮಿಜಿ ಶಿಷ್ಯನಿಗೆ ಹೇಳಿದರು "ನೋಡು, ಅವರೆಷ್ಟು ಸಂಸ್ಕೃತರು. ಅವರು ಬಂಗಾಳಿಗಳಾಗಿದ್ದರೆ ನಾನು ಆರೋಗ್ಯವಾಗಿಲ್ಲವೆಂದು ತಿಳಿದಿದ್ದರೂ ಅರ್ಧಗಂಟೆಯ ಹೊತ್ತಾದರೂ ಮಾತನಾಡದೆ ಹೋಗುತ್ತಿರಲಿಲ್ಲ."

ಈಗ ಎರಡೂವರೆ ಗಂಟೆಯಾಗಿರಬಹುದು. ಹೊರಗಡೆ ಬಹು ಮಂದಿ ಸೇರಿದ್ದರು. ಸ್ವಾಮಿಜಿ ಶಿಷ್ಯನ ಮನೋಗತಿಯನ್ನರಿತು "ಕೊಂಚ ಹೊರಗಡೆ ಹೋಗಿ ನೋಡಿಕೊಂಡು ಬಾ—ಆದರೆ ಬೇಗ ಬಂದುಬಿಡು" ಎಂದರು.

"ನನ್ನ ದೇಶದ ಬಡಜನರು ಉಪವಾಸದಿಂದ ನರಳುವುದನ್ನು ನೋಡಿದಾಗ ನನಗೆ ಈ ವಿಧಿಯುಕ್ತ ಪೂಜೆ, ಪಾಂಡಿತ್ಯವೆಲ್ಲವನ್ನೂ ಕಿತ್ತೊಗೆದು ಗ್ರಾಮ ಗ್ರಾಮಗಳಿಗೂ ಹೋಗಿ ಅಲ್ಲಿಯ ಹಣವಂತರಿಗೆ ನಮ್ಮ ಸಾಧನೆ ಮತ್ತು ಶೀಲದ ಬಲದಿಂದ ಮನದಟ್ಟು ಮಾಡಿಸಿ ಹಣವನ್ನು ಕೂಡಿಸಿ ಬಡವರಿಗೆ ಸೇವೆ ಮಾಡುತ್ತಾ ಇಡೀ ಜೀವನವನ್ನೆಲ್ಲಾ ಕಳೆಯಬೇಕೆನ್ನಿಸುವುದು.

"ಅಯ್ಯೋ! ಯಾರೂ ದೇಶದ ಬಡಬಗ್ಗರ ವಿಚಾರವಾಗಿ ಯೋಚಿಸುವುದಿಲ್ಲ.– ಅವರೇ ಪಟ್ಟಣದ ಮೂಲಾಧಾರ. ಅವರ ಶ್ರಮದಿಂದ ಆಹಾರ ಉತ್ಪತ್ತಿಯಾಗುತ್ತಿದೆ. ಈ ಬಡಜನರು, ಈ ಗುಡಿಸುವವರು ಕೂಲಿಕಾರರು ಒಂದು ದಿನ ತಮ್ಮ ಕೆಲಸವನ್ನು ನಿಲ್ಲಿಸಲಿ. ಇಡೀ ಪಟ್ಟಣವೇ ಹಾಹಾಕಾರವೇಳುವುದು. ಆದರೆ ಯಾರೂ ಅವರ ಬಗ್ಗೆ ಕನಿಕರಿಸುವುದಿಲ್ಲ. ಅವರ ಕಷ್ಟಗಳಲ್ಲಿ ಸಂತೈಸುವವರಿಲ್ಲ. ಸ್ವಲ್ಪ ನೋಡು, ಹಿಂದೂಗಳು ಸಹಾನುಭೂತಿ ತೋರದುದರ ಫಲವಾಗಿ ಮದ್ರಾಸಿನಲ್ಲಿ ಸಾವಿರಾರು ಜನ ಹೊಲೆಯರು ಕ್ರೈಸ್ತರಾಗುತ್ತಿದ್ದಾರೆ. ಇದಕ್ಕೆ ಕೇವಲ ಹಸಿವೇ ಮುಖ್ಯ ಕಾರಣವಲ್ಲ. ನಮ್ಮಿಂದ ಅವರಿಗೆ ಕೊಂಚವು ಸಹಾನುಭೂತಿ ದೊರಕದುದೇ ಇದಕ್ಕೆ ಕಾರಣ. ಹಗಲೂ ರಾತ್ರಿ ನಾವು ಅವರಿಗೆ "ಮುಟ್ಟಬೇಡಿ, ಮುಟ್ಟಬೇಡಿ" ಎಂದು ಕೂಗುತ್ತಿದ್ದೇವೆ. ದೇಶದಲ್ಲಿ ಕೊಂಚವಾದರೂ ಕನಿಕರ, ಸಹಾನುಭೂತಿ ಉಳಿದಿರುವುದೇನು! ಮುಟ್ಟಬೇಡಿ ಎಂಬ ಒಂದು ಪಂಗಡದ ಜನ ಅಂತಹ ಪದ್ಧತಿಯನ್ನೆಸೆದಿದ್ದಾರೆ. ಒಮ್ಮೊಮ್ಮೆ ನನಗೆ ಈ "ಮುಟ್ಟಬೇಡಿ" ಎಂಬ ಧರ್ಮದ ಎಲ್ಲೆಯನ್ನು ಕತ್ತರಿಸಿ ಹೊರಗೆ ನಿಂತು ಎಲ್ಲರಿಗೂ "ಯಾರು ಬಡವರೋ, ದುಃಖಿಗಳೋ, ದೀನರೋ, ದಳಿತರೋ ಎಲ್ಲರೂ ಬನ್ನಿ" ಎಂದು ಕರೆದು ಎಲ್ಲರನ್ನೂ ಶ್ರೀ ರಾಮಕೃಷ್ಣರ ಹೆಸರಿನಲ್ಲಿ ಒಂದುಗೂಡಿಸಬೇಕೆನ್ನಿಸುವುದು. ಅವರು ಮುಂದಕ್ಕೆ ಬಂದ ಹೊರತು ಮಾತೆಯೂ ಎಚ್ಚರಗೊಳ್ಳುವುದಿಲ್ಲ. ಇವರಿಗೆಲ್ಲಾ ಹೊಟ್ಟೆ ಬಟ್ಟೆಗಾಗುವಷ್ಟನ್ನು ನಾವು ಮಾಡಲಾರದೇ ಹೋದೆವು! ನಾವೇನು ಮಾಡಿದ್ದೇವೆ? ಅಯ್ಯೋ! ಅವರಿಗೆ ಪ್ರಾಪಂಚಿಕತೆ ಏನೆಂಬುದೇ ಗೊತ್ತಿಲ್ಲ. ಅದಕ್ಕೆ ರಾತ್ರಿ ಹಗಲೂ ದುಡಿದರೂ ಸಾಕಾಗುವಷ್ಟು ಆಹಾರ ಬಟ್ಟೆ ಹೊಂದಲು ಶಕ್ತರಾಗಿಲ್ಲ. ನಾವು ಅವರು ಕಣ್ತೆರೆಯುವಂತೆ ಮಾಡೋಣ– ಈ ಹಗಲಿನಷ್ಟೇ ಸ್ಪಷ್ಟವಾಗಿ ನೋಡುತ್ತಿರುವೆ– ಎಲ್ಲರಲ್ಲೂ ಇರುವುದು

ಒಬ್ಬನೇ ಬ್ರಹ್ಮ. ಅವರಲ್ಲಿ–ನನ್ನಲ್ಲಿ–ಒಂದೇ ಶಕ್ತಿ ಎಲ್ಲರಲ್ಲೂ ನೆಲಸಿದೆ. ವ್ಯತ್ಯಾಸ ಅದರ ಆವಿರ್ಭಾವನೆಯಲ್ಲಿದೆ. ಇಡೀ ದೇಹದಲ್ಲೆಲ್ಲಾ ರಕ್ತ ಸಂಚರಿಸಿದ ಹೊರತು ಯಾವ ದೇಶ ಯಾವ ಕಾಲದಲ್ಲಿ ಮುಂದುವರಿದಿದೆ? ಒಂದು ಅಂಗಕ್ಕೆ ಪಾರ್ಶ್ವವಾಯು ಬಂದರೆ ಉಳಿದ ಎಲ್ಲಾ ಅಂಗಗಳೂ ಸರಿಯಾಗಿದ್ದರೂ ಆ ದೇಹದಿಂದ ಹೆಚ್ಚೇನೂ ಮಾಡಲಾಗುವುದಿಲ್ಲ. ಇದನ್ನು ಚೆನ್ನಾಗಿ ನೆನಪಿನಲ್ಲಿಡು.''

ಶಿಷ್ಯ:—ಸ್ವಾಮಿಜಿ, ದೇಶದಲ್ಲಿ ಇಷ್ಟೊಂದು ಬಗೆಯ ವಿವಿಧಸಂಗಡಗಳು ಉದ್ದೇಶಗಳು ಇರುವುದರಿಂದಲೇ ಅವರನ್ನೆಲ್ಲಾ ಒಂದುಗೂಡಸಿ ಶಾಂತಿ ಬರುವಂತೆ ಮಾಡುವುದು ಬಹುಕಷ್ಟ ಕೆಲಸ.

ಸ್ವಾಮಿಜಿ:—(ಕೋಪದಿಂದ) ನೀನು ಯಾವ ಕೆಲಸವನ್ನೇ ಆಗಲಿ ಕಷ್ಟವೆಂದು ತಿಳಿದಿದ್ದರೆ ಇಲ್ಲಿಗೆ ಬರಬೇಡ. ಭಗವತ್ಕೃಪೆಯಿಂದ ಎಲ್ಲಾ ಹಾದಿಯೂ ಸುಗಮವಾಗುವುದು. ನಿನ್ನ ಕೆಲಸ ಜಾತಿ ಮತ ವರ್ಣಗಳನ್ನು ಲೆಕ್ಕಿಸದೆ ಬಡಬಗ್ಗರಿಗೆ ಸೇವೆಮಾಡುವುದಾಗಿದೆ. ಅದರ ಪರಿಣಾಮವನ್ನು ಯೋಚಿಸುವ ಆವಶ್ಯಕತೆಯೇನಿಲ್ಲ. ಕೇವಲ ಕೆಲಸಮಾಡುತ್ತಾ ಹೋಗುವುದು ನಿನ್ನ ಕರ್ತವ್ಯ. ನಂತರ ಎಲ್ಲವೂ ತನ್ನಷ್ಟಕ್ಕೆ ತಾನೇ ಹಿಂಬಾಲಿಸುವುದು. ನನ್ನ ಕೆಲಸ ನಿರ್ಮಿಸುವುದು, ಧ್ವಂಸವಲ್ಲ. ವಿಶ್ವದ ಚರಿತ್ರೆಯನ್ನು ಓದಿನೋಡು. ಒಂದು ದೇಶದ ಸಂದಿಗ್ಧ ಕಾಲದಲ್ಲಿ ಒಬ್ಬ ಮಹಾತ್ಮನಾದ ವ್ಯಕ್ತಿ ಅದರ ಜೀವನಾಡಿಯಾಗಿರುತ್ತಾನೆ. ಆತನ ಉದ್ದೇಶಗಳಿಂದ ನೂರಾರು ಜನ ಜಾಗ್ರತರಾಗಿ ಜಗತ್ತಿಗೆ ಒಳ್ಳೆಯದನ್ನು ಮಾಡಿದ್ದಾರೆ. ನೀವೆಲ್ಲಾ ಬುದ್ಧಿವಂತರಾದ ಹುಡುಗರು–ಅನೇಕ ದಿನಗಳಿಂದ ಇಲ್ಲಿಗೆ ಬರುತ್ತಿರುವಿರಿ, ಹೇಳಿ? ಇತರರ ಸೇವೆಗಾಗಿ ಒಂದು ಜೀವವನ್ನು ಅರ್ಪಿಸಲಾಗುವುದಿಲ್ಲವೆ? ಮುಂದಿನ ಜೀವನದಲ್ಲಿ ವೇದಾಂತ, ಧರ್ಮಶಾಸ್ತ್ರಗಳನ್ನೆಲ್ಲಾ ಓದಬಹುದು. ಈ ಜೀವನವನ್ನು ಇತರರ ಸೇವೆಗಾಗಿ ಅರ್ಪಿಸಿ. ಆಗ ನೀವು ಇಲ್ಲಿಗೆ ಬಂದುದು ವ್ಯರ್ಥವಾಗಲಿಲ್ಲವೆಂದು ನನಗೆ ಗೊತ್ತಾಗುವುದು.

ಈ ಮಾತುಗಳನ್ನಾಡುತ್ತಾ ಸ್ವಾಮಿಜಿ ಮೌನವಾಗಿ ಗಾಢ ಯೋಚನಾಮಗ್ನರಾದರು. ಕೊಂಚಹೊತ್ತಿನ ಮೇಲೆ ಅವರು ಹೇಳಿದರು. "ಅಷ್ಟೊಂದು ಕಠಿಣ ಸಾಧನೆಮಾಡಿದ ಮೇಲೆ ಇದು ನಿಜವಾಗಿ ಸತ್ಯ–ದೇವರು ಎಲ್ಲಾ ಜೀವಿಗಳಲ್ಲೂ ಇದ್ದಾನೆ. ಅವನಿಗಿಂತ ಬೇರೆ ದೇವರಿಲ್ಲ–

ಯಾರು ಜೀವರನ್ನು ಸೇವಿಸುತ್ತಾನೋ ಅವನು ದೇವರನ್ನು ಸೇವಿಸಿದಂತೆ ಎಂಬುದು ಮನದಟ್ಟಾಯಿತು.'' ಕೊಂಚ ಹೊತ್ತು ಸುಮ್ಮನಿದ್ದು ಶಿಷ್ಯನನ್ನುದ್ದೇಶಿಸಿ "ಇಂದು ನಾನು ಹೇಳಿದುದನ್ನು ನಿನ್ನ ಹೃದಯದಲ್ಲಿ ಚೆನ್ನಾಗಿ ಬರೆದಿಡು. ನೀನಿದನ್ನು ಮರೆಯದಂತೆ ನೋಡಿಕೊ.''

---

## ಅಧ್ಯಾಯ ೪೨

**ಸ್ಥಳ:—ಬೇಲೂರು ಮಠ; ವರ್ಷ: ಕಿ. ಶ. ೧೯೦೨.**

ಅಂದು ಶನಿವಾರ. ಶಿಷ್ಯ ಮಠಕ್ಕೆ ಬಂದ. ಮಠದಲ್ಲಿ ಸಾಧುಗಳು ತೀವ್ರ ಸಾಧನೆಯಲ್ಲಿ ನಿರತರಾಗಿದ್ದರು. ಸ್ವಾಮಿಜಿ ಮಠದ ಎಲ್ಲಾ ಬ್ರಹ್ಮಚಾರಿಗಳೂ ಸನ್ಯಾಸಿಗಳೂ ಬೆಳಗಿನ ಝಾವಕ್ಕೆ ಬಹು ಮುಂಚೆಯೇ ಎದ್ದು ಪೂಜಾಮಂದಿರದಲ್ಲಿ ಜಪಧ್ಯಾನ ಮಾಡಬೇಕೆಂದು ಅಪ್ಪಣೆ ಹೊರಡಿಸಿದ್ದರು. ಸ್ವಾಮಿಜಿಯವರಿಗೆ ಆ ದಿನಗಳಲ್ಲಿ ಬಹುಕೊಂಚ ನಿದ್ರೆ ಬರುತ್ತಿತ್ತು. ಬೆಳಗಿನ ಝಾವ ಮೂರು ಗಂಟೆಗೆಲ್ಲಾ ಏಳುತ್ತಿದ್ದರು.

ಮಠಕ್ಕೆ ಬಂದ ಕೂಡಲೆ ಶಿಷ್ಯ ಸ್ವಾಮಿಜಿಗೆ ಪ್ರಣಾಮಮಾಡಿದ. ಸ್ವಾಮಿಜಿ ಹೇಳಿದರು: "ನೋಡು ಅವರೆಲ್ಲಾ ಈ ದಿನಗಳಲ್ಲಿ ಹೇಗೆ ಸಾಧನೆಯನ್ನು ಮಾಡುತ್ತಿದ್ದಾರೆ. ಪ್ರತಿಯೊಬ್ಬರೂ ಬೆಳಿಗ್ಗೆ ಮತ್ತು ಸಂಜೆ ಎರಡು ಹೊತ್ತೂ ಹೆಚ್ಚು ಕಾಲವನ್ನು ಜಪ ಮತ್ತು ಧ್ಯಾನದಲ್ಲಿ ಕಳೆಯುತ್ತಾರೆ. ಇಲ್ಲಿ ನೋಡು, ಇಲ್ಲೊಂದು ಜಾಗಟೆ ಇದೆ. ಎಲ್ಲರನ್ನು ನಿದ್ರೆಯಿಂದ ಎಬ್ಬಿಸಲು ಇಟ್ಟಿದ್ದೇವೆ. ಪ್ರತಿಯೊಬ್ಬರೂ ಸೂರ್ಯೋದಯಕ್ಕೆ ಮುಂಚೆ ಏಳಬೇಕು. ಶ್ರೀ ರಾಮಕೃಷ್ಣರು ಹೇಳುತ್ತಿದ್ದರು: 'ಬೆಳಿಗ್ಗೆ ಮತ್ತು ಸಂಜೆ ಮನಸ್ಸು ಸಾತ್ತ್ವಿಕ ಸ್ವಭಾವದಿಂದ ತುಂಬಿರುತ್ತದೆ. ಮನಸ್ಸಿಟ್ಟು ಧ್ಯಾನಮಾಡಬೇಕಾದರೆ ಇದೇ ಸರಿಯಾದ ಕಾಲ.'

"ಶ್ರೀ ರಾಮಕೃಷ್ಣರ ನಿರ್ಯಾಣಾನಂತರ ನಾವು ಬಾರಾನಗರದ ಮಠದಲ್ಲಿ ಅನೇಕ ಕಠಿಣ ಸಾಧನೆಗಳನ್ನು ಮಾಡಿದೆವು. ಬೆಳಿಗ್ಗೆ ಮೂರು ಗಂಟೆಗೆ ಎದ್ದು ಮುಖ ತೊಳೆದು—ಕೆಲವರು ಸ್ನಾನ ಮಾಡಿ ಕೆಲವರು ಹಾಗೆಯೇ ಪೂಜಾಗೃಹದಲ್ಲಿ ಕುಳಿತು ಜಪ ಮತ್ತು ಧ್ಯಾನದಲ್ಲಿ ಮಗ್ನ

ರಾಗುತ್ತಿದ್ದೆವು. ಆ ದಿನಗಳಲ್ಲಿ ನಮಗೆ ಎಂಥಾ ಧೃಡವೈರಾಗ್ಯದ ಸ್ಫೂರ್ತಿ ಇತ್ತು? ಜಗತ್ತು ಇದೆಯೊ ಇಲ್ಲವೊ ಎಂಬುದರ ಯೋಚನೆಯೇ ನಮಗೆ ಇರಲಿಲ್ಲ. ರಾಮಕೃಷ್ಣಾನಂದರು ಮಾತ್ರ, ಹಗಲು ರಾತ್ರಿ ಶ್ರೀರಾಮ ಕೃಷ್ಣರ ಪೂಜೆಸೇವೆಗಳ ಕೆಲಸ, ಮತ್ತು ಒಂದು ಸಂಸಾರದಲ್ಲಿ ಯಜಮಾನಿ ಯಾವ ಕೆಲಸವಮಾಡುತ್ತಾಳೋ ಆ ಕೆಲಸವನ್ನೆಲ್ಲಾ ಮಠದಲ್ಲಿ ಮಾಡು ತ್ತಿದ್ದರು. ಶ್ರೀ ರಾಮಕೃಷ್ಣರ ಪೂಜೆಗೆ ಮತ್ತು ನಮ್ಮ ನಿರ್ವಹಣೆಗೆ ಬೇಕಾದುದನ್ನೆಲ್ಲಾ ಭಿಕ್ಷೆ ಎತ್ತಿ ತರುತ್ತಿದ್ದರು. ಅನೇಕ ದಿನಗಳು ಬೆಳಗಿನ ಝಾವ ನಾಲ್ಕು ಗಂಟೆಯಿಂದ ಸಂಜೆ ಐದು ಗಂಟೆಯವರೆಗೂ ಧ್ಯಾನ ಜಪ ತಪದಲ್ಲಿ ಕಳೆಯುತ್ತಿದ್ದೆವು. ರಾಮಕೃಷ್ಣಾನಂದರು ನಮ್ಮ ಆಹಾರವನ್ನು ಸಿದ್ಧಪಡಿಸಿ ಕಾದಿದ್ದು ನಮ್ಮನ್ನು ಕೇವಲ ಬಲವಂತದಿಂದ ಊಟಕ್ಕೆಬ್ಬಿಸು ತ್ತಿದ್ದರು. ಓ! ಅವರಲ್ಲಿ ಎಂತಹ ನಿರರ್ಗಳ ಭಕ್ತಿ ವಿಶ್ವಾಸಗಳನ್ನು ನಾವು ನೋಡುತ್ತಿದ್ದೆವು.''

ಶಿಷ್ಯ:—ಆಗ ಮಠದ ಖರ್ಚನ್ನು ಹೇಗೆ ನಿಭಾಯಿಸುತ್ತಿದ್ದಿರಿ?

ಸ್ವಾಮಿಜಿ:—ಎಂತಹ ಪ್ರಶ್ನೆ! ನಾವು ಸಾಧುಗಳು ಭಿಕ್ಷೆ ಎತ್ತಿ ಬಂದುದು ಮಠದ ಖರ್ಚಿಗಾಗಿ ಉಪಯೋಗಿಸಲ್ಪಡುತ್ತಿತ್ತು. ಇಂದು ಸುರೇಶ್ ಬಾಬು ಮತ್ತು ಬಲರಾಮ ಬಾಬು ಇವರಲ್ಲಿ ಯಾರೂ ಇಲ್ಲ–ಅವರು ಬದುಕಿದ್ದಿದ್ದರೆ ಈ ಮಠವನ್ನು ನೋಡಿ ತುಂಬಾ ಸಂತೋಷಪಡುತ್ತಿದ್ದರು. ನೀನು ಸುರೇಶಬಾಬುಗಳ ಹೆಸರನ್ನು ಖಂಡಿತವಾಗಿ ಕೇಳಿರುವೆ ಯಲ್ಲವೆ? ಒಂದು ಬಗೆಯಲ್ಲಿ ಅವನೇ ಈ ಮಠದ ಸ್ಥಾಪಕನೆಂದು ಹೇಳ ಬಹುದು. ಅವನೇ ಬಾರಾನಗರದ ಮಠದ ಖರ್ಚನ್ನೆಲ್ಲಾ ವಹಿಸಿಕೊಳ್ಳು ತ್ತಿದ್ದನು. ಆ ದಿನಗಳಲ್ಲಿ ನಮಗಾಗಿ ಯೋಚಿಸಿತ್ತಿದ್ದವನು ಸುರೇಶಮಿತ್ರ. ಅವನ ಭಕ್ತಿ ಮತ್ತು ಶ್ರದ್ಧೆಗೆ ಸರಿಸಮಾನರಾರೂ ಇಲ್ಲ.

ಶಿಷ್ಯ:—ಸ್ವಾಮಿಜಿ, ಅವರು ಮೃತ್ಯುಶಯ್ಯೆಯಲ್ಲಿದ್ದಾಗ ನೀವು ಅವ ರಲ್ಲಿಗೆ ಹೆಚ್ಚಾಗಿ ಹೋಗುತ್ತಿರಲಿಲ್ಲವೆಂದು ಕೇಳಿದೆ.

ಸ್ವಾಮಿಜಿ:—ಅವರ ನೆಂಟರು ಬಿಟ್ಟಿದ್ದರೆ ಖಂಡಿತವಾಗಿಯೂ ಹೋಗುತ್ತಿದ್ದೆವು. ಅದೊಂದು ದೊಡ್ಡ ಕಥೆ. ಆದರೆ ಇದನ್ನು ಚೆನ್ನಾಗಿ ನೆನಪಿನಲ್ಲಿಡು. ಪ್ರಾಪಂಚಿಕ ಜನರಿಗೆ ನೀನು ಬದುಕುವುದು ಸಾಯು ವುದು ಇದೆಲ್ಲಾ ಅಷ್ಟು ಗಣನೀಯವಲ್ಲ. ನೀನು ಸ್ವಲ್ಪ ಆಸ್ತಿಯನ್ನು ಬಿಟ್ಟುಹೋಗುವಂತಿದ್ದರೆ, ನಿನ್ನ ಜೀವಿತ ಕಾಲದಲ್ಲೇ ನಿನ್ನ ಗೃಹದಲ್ಲಿ

ಅದಕ್ಕಾಗಿ ಕಾದಾಟ ಶುರುವಾಗುವುದು. ನಿನ್ನ ಮರಣ ಶಯ್ಯೆಯಲ್ಲಿ ನಿನ್ನ ಹೆಂಡತಿ ಮಕ್ಕಳು ಕೂಡ ನಿನ್ನನ್ನು ಸಮಾಧಾನ ಪಡಿಸುವುದಿಲ್ಲ. ಇದೇ ಪ್ರಪಂಚದ ಹಾದಿ.

ಮಠದ ಹಿಂದಿನ ಸ್ಥಿತಿಯ ವಿಚಾರ ಮಾತಾಡುತ್ತಾ ಸ್ವಾಮಿಜಿ ಹೇಳಿದರು. "ಹಣವಿಲ್ಲದೆ ಅನೇಕವೇಳೆ ನಾನು ಮಠವನ್ನೇ ಮುಚ್ಚಿಬಿಡಬೇಕೆಂದು ಹೊಡೆದಾಡುತ್ತಿದ್ದೆ. ಆದರೆ ಏನು ಮಾಡಿದರೂ ರಾಮಕೃಷ್ಣಾನಂದರು ಈ ಅಭಿಪ್ರಾಯಕ್ಕೆ ಒಪ್ಪುತ್ತಿರಲಿಲ್ಲ. ರಾಮಕೃಷ್ಣಾನಂದರೇ ಮಠದ ಜೀವಾಳವಾಗಿದ್ದರು. ಅನೇಕ ದಿನಗಳು ಮಠದಲ್ಲಿ ಒಂದು ಕಾಳು ಆಹಾರವೂ ಇರುತ್ತಿರಲಿಲ್ಲ. ಭಿಕ್ಷೆಯಿಂದ ಕೊಂಚ ಅಕ್ಕಿ ಸಿಕ್ಕಿದರೆ ಅದರ ಜೊತೆಗೆ ತಿನ್ನಲು ಉಪ್ಪುಕೂಡಾ ಇರುತ್ತಿರಲಿಲ್ಲ. ಕೆಲವು ದಿನಗಳು ಕೇವಲ ಉಪ್ಪು ಅನ್ನ ಇಷ್ಟೇ ಇರುತ್ತಿತ್ತು. ಆದರೆ ಯಾರಿಗೂ ತಾನೇನು ತಿನ್ನುತ್ತಿರುವೆನೆಂಬುದರ ಕಡೆ ಗಮನವೇ ಇರುತ್ತಿರಲಿಲ್ಲ. ನಾವೆಲ್ಲಾ ಆಗ ದೊಡ್ಡದೊಂದು ಆಧ್ಯಾತ್ಮಿಕ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುತ್ತಿದ್ದೆವು. ಬೇಯಿಸಿದ ಬಿಂಬಾಪತ್ರ ಅನ್ನ ಉಪ್ಪು ಇಷ್ಟೆ ಒಂದು ತಿಂಗಳವರೆಗೆ ನಮ್ಮ ಆಹಾರವಾಗಿತ್ತು. ಓ! ಅದೆಂತಹ ಅದ್ಭುತ ದಿನಗಳು! ಆ ಕಾಲದ ಸಾಧನೆಗಳು, ಮನುಷ್ಯರ ಮಾತೇಕೆ ಭೂತಗಳಿಗೂ ಗಾಬರಿ ಹುಟ್ಟಿಸುವಂತಿದ್ದವು. ನಿನ್ನಲ್ಲಿ ನಿಜವಾದ ಅರ್ಹತೆಯಿದ್ದರೆ ನೀನಿರುವ ವಾತಾವರಣ ನಿನಗೆ ವಿರುದ್ಧವಾಗಿದ್ದಷ್ಟೂ ನಿನ್ನ ಆಂತರಿಕ ಶಕ್ತಿ ಹೆಚ್ಚು ವಿಕಾಸಗೊಳ್ಳುವುದೆಂಬುದು ಅದ್ಭುತ ಸತ್ಯ. ನಾನೇಕೆ ಮಠದಲ್ಲಿರುವವರಿಗೆ ತಕ್ಕಮಟ್ಟಿಗೆ ಒಳ್ಳೆಯ ಜೀವನಕ್ಕೆ ಆಗುವಷ್ಟು ಹಾಸಿಗೆ ಮುಂತಾದುವನ್ನು ಒದಗಿಸಿದ್ದೇನೆಂದರೆ ಈಗಿನ ಕಾಲದಲ್ಲಿ ಸನ್ಯಾಸಿಗಳಾಗಲು ಬರುವವರು ನಮ್ಮಷ್ಟು ಕಷ್ಟ ಸಹಿಷ್ಣುಗಳಲ್ಲ. ಶ್ರೀ ರಾಮಕೃಷ್ಣರ ಜೀವನ ನಮ್ಮ ಮುಂದಿತ್ತು. ಅದಕ್ಕೇ ನಾವು ದಾರಿದ್ರ್ಯ ಕಷ್ಟಗಳಿಗೆ ಕೊಂಚವೂ ಗಮನ ಕೊಡಲಿಲ್ಲ. ಈಗಿನ ಕಾಲದ ಹುಡುಗರು ಅಷ್ಟೊಂದು ಕಷ್ಟವನ್ನು ಸಹಿಸಲಾರರು. ಅದಕ್ಕೇ ನಾನು ಅವರಿಗೆ ವಸತಿ ಮತ್ತು ಜೀವನಾಧಾರಕ್ಕೆ ತಕ್ಕಷ್ಟು ಒದಗಿಸಿಕೊಟ್ಟಿದ್ದೇನೆ. ಅವರಿಗೆ ತಕ್ಕಷ್ಟು ಆಹಾರ ಬಟ್ಟೆ ಸಿಕ್ಕಿದರೆ ಹುಡುಗರು ಧಾರ್ಮಿಕ ಸಾಧನೆಗೆ ಮನಗೊಟ್ಟು ವಿಶ್ವಜನತೆಯ ಸೇವೆಗೆ ತಮ್ಮ ಜೀವನವನ್ನು ಅರ್ಪಿಸಲು ಕಲಿಯುವರು.

ಶಿಷ್ಯ:—ಸ್ವಾಮಿಜಿ, ಹೊರಗಿನ ಜನರು ಈ ಬಗೆಯ ಹಾಸಿಗೆ

ಮತ್ತು ಕುರ್ಚಿ ಮೇಜುಗಳ ವಿಚಾರವಾಗಿ ಬಹುವಾಗಿ ಟೀಕೆ ಮಾಡುವರು.

ಸ್ವಾಮಿಜಿ:—ಮಾಡಿಕೊಳ್ಳಲಿ. ಹಾಸ್ಯಕ್ಕಾದರೂ ಅವರೊಮ್ಮೆ ಈ ಮಠದ ವಿಚಾರ ಯೋಚಿಸುವರು. ದ್ವೇಷ ಬುದ್ಧಿಯನ್ನು ಬೆಳೆಸುವುದರ ಮೂಲಕ ಅವರು ಮುಕ್ತಿ ಪಡೆಯಬಹುದೆಂದು ಯೋಚಿಸುವರು. ಶ್ರೀ ರಾಮಕೃಷ್ಣರು "ಮನುಷ್ಯರನ್ನು ಹುಳುಗಳೆಂದೆಣಿಸಬೇಕು" ಎನ್ನುತ್ತಿದ್ದರು. ಇತರರು ಏನು ಹೇಳುವರೋ ಎಂದು ಅದಕ್ಕೆ ತಕ್ಕಂತೆ ನಾವು ನಡೆದುಕೊಳ್ಳಬೇಕೆಂದು ಹೇಳುವೆಯೇನು? ಧಿಃಕಾರ!

ಶಿಷ್ಯ:—ಸ್ವಾಮಿಜಿ, ನೀವು ಕೆಲವು ವೇಳೆ ಎಲ್ಲರೂ ನಾರಾಯಣರು ದೀನರು ಅವಶ್ಯಕತೆಯುಳ್ಳವರು ನನ್ನ ನಾರಾಯಣರೆಂದು ಹೇಳುವಿರಿ. ಪುನಃ ನೀವೇ ಮನುಷ್ಯನನ್ನು ಹುಳುಗಳೆಂದೆಣಿಸಬೇಕು ಎನ್ನುವಿರಿ. ನಿಜವಾಗಿಯೂ ನೀವು ಹೇಳುವುದೇನು?

ಸ್ವಾಮಿಜಿ:—ಎಲ್ಲರೂ ನಾರಾಯಣರೆಂಬುದರಲ್ಲಿ ಕೊಂಚವೂ ಸಂದೇಹವಿಲ್ಲ. ಆದರೆ ಎಲ್ಲಾ ನಾರಾಯಣರೂ ಮಠದ ಸಾಮಾನುಗಳ ವಿಚಾರ ಚರ್ಚಿಸುವುದಿಲ್ಲ. ಯಾರು ಎಷ್ಟೇ ಟೀಕಿಸಲಿ ಅದೊಂದಕ್ಕೂ ನಾನು ಕಿವಿಗೊಡದೆ ಇತರರ ಕಲ್ಯಾಣಕ್ಕಾಗಿ ದುಡಿಯುತ್ತಾ ಹೋಗುವೆನೆಂಬ ಅರ್ಥದಲ್ಲಿ "ಮನುಷ್ಯರನ್ನು ಹುಳುಗಳಂತೆ ನೋಡಬೇಕು" ಎಂದು ನಾನು ಹೇಳಿದೆ. ಯಾರಿಗೆ ಇಂತಹ ಪ್ರಚಂಡ ನಿರ್ಧಾರವಿದೆಯೊ ಅವನು ಎಲ್ಲವನ್ನೂ ಪಡೆಯುವನು. ಕೆಲವರು ಬೇಗ ಅದನ್ನು ಪಡೆಯಬಹುದು. ಇತರರು ಕೊಂಚ ನಿಧಾನವಾಗಿ ಪಡೆಯಬಹುದು ಅಷ್ಟೆ. ಆದರೆ ಖಂಡಿತವಾಗಿಯೂ ಎಲ್ಲರೂ ಗುರಿಯನ್ನು ಸೇರೇ ತೀರುವರು. ನಮಗೆ ಸ್ಥಿರವಾದ ನಿರ್ಧಾರವಿದ್ದುದರಿಂದ ನಾವೀಗ ಸಾಧಿಸಿರುವಷ್ಟು ಅಲ್ಪವನ್ನಾದರೂ ಸಾಧಿಸಲು ಸಾಧ್ಯವಾಯಿತು. ಇಲ್ಲದಿದ್ದಲ್ಲಿ ಎಷ್ಟೊಂದು ಘೋರವಾದ ದಾರಿದ್ರ್ಯದಲ್ಲಿ ನಾವು ನರಳಬೇಕಾಗಿತ್ತು; ಒಂದುದಿನ ಆಹಾರದ ಅಭಾವದಿಂದ ನಾನು ಜ್ಞಾನತಪ್ಪಿ ರಸ್ತೆಯ ಪಕ್ಕದಲ್ಲಿದ್ದ ಒಂದು ಮನೆಯ ಅಂಗಳದಲ್ಲಿ ಬಿದ್ದು ಬಿಟ್ಟೆ—ನನಗೆ ಪ್ರಜ್ಞೆ ಬರುವ ಹೊತ್ತಿಗೆ ಮಳೆ ನನ್ನ ಮೇಲೆ ಸುರಿದಿತ್ತು; ಮತ್ತೊಂದುದಿನ ನಾನು ಕಲ್ಕತ್ತೆಯಲ್ಲಿ ಆಹಾರವಿಲ್ಲದೆ ಒಂದು ಇಡೀ ದಿನ ಏನೇನೋ ಚಿಲ್ಲರೆ ಕೆಲಸಗಳನ್ನು ಮಾಡಬೇಕಾಯಿತು. ರಾತ್ರಿ ಹತ್ತು ಅಥವಾ ಹನ್ನೊಂದು ಗಂಟೆಗೆ ಮಠಕ್ಕೆ ಬಂದ

ಮೇಲೆ ಊಟಮಾಡಿದೆ. ಇದೊಂದೇ ಅಲ್ಲ. ಇಂತಹ ಹಲವಾರು ನಿದರ್ಶನಗಳಿವೆ.

ಈ ಮಾತುಗಳನ್ನು ಹೇಳುತ್ತಿದ್ದಂತೆಯೇ ಸ್ವಾಮಿಜಿ ಕೊಂಚ ಹೊತ್ತು ಯಾವುದೋ ಯೋಚನೆಯಲ್ಲಿ ಮಗ್ನರಾಗಿದ್ದರು. ನಂತರ ಮುಂದುವರಿಸಿದರು: "ನಿಜವಾದ ಸನ್ಯಾಸತ್ವವನ್ನು ಪಡೆಯುವುದು ಸುಲಭವಲ್ಲ. ಇಂತಹ ಜೀವನದಷ್ಟು ಕಷ್ಟತಮವಾದುದು ಯಾವುದೂ ಇಲ್ಲ. ನೀನು ಕೊಂಚ ಎಡವಿದರೆ ಸಾಕು. ದೊಡ್ಡ ಕಂದಕಕ್ಕೆ ಜಾರಿಬೀಳುವೆ–ಚೂರುಚೂರಾಗುವೆ. ಒಮ್ಮೆ ನಾನು ಆಗ್ರಾದಿಂದ ಪೂನಾಕ್ಕೆ ಕಾಲ್ನಡಗೆಯಲ್ಲಿ ಹೋಗುತ್ತಿದ್ದೆ. ನನ್ನಲ್ಲಿ ಒಂದು ಬಿಡಿಗಾಸೂ ಇರಲಿಲ್ಲ. ಬೃಂದಾವನಕ್ಕೆ ಇನ್ನೂ ಒಂದೆರಡು ಮೈಲಿ ದೂರವಿತ್ತು. ಹಾದಿಯ ಪಕ್ಕದಲ್ಲಿ ಒಬ್ಬ ಮನುಷ್ಯ ಗುಡಿಗುಡಿ ಸೇದುತ್ತಾ ಕುಳಿತ್ತಿದ್ದ. ಆ ತಕ್ಷಣ ನನಗೂ ಸೇದಬೇಕೆಂದು ಆಸೆಯಾಯಿತು. ನಾನು ಆ ಮನುಷ್ಯನಿಗೆ "ನಿನ್ನ ಚಿಲುಮೆಯಲ್ಲಿ ಒಮ್ಮೆ ಸೇದಲು ನನಗೆ ಅವಕಾಶ ಕೊಡುವೆಯಾ?" ಎಂದೆ. ಆ ಮನುಷ್ಯ ನನಗೆ ಅದನ್ನು ಕೊಡಲು ತುಂಬಾ ಹಿಂಜರಿಯುತ್ತಾ "ನಾನು ಜಲಗಾರ" ಎಂದ. ಇನ್ನೂ ನನ್ನಲ್ಲಿ ಹಿಂದಣ ಸಂಸ್ಕಾರದ ಪ್ರಭಾವವಿತ್ತು–ನಾನು ತಕ್ಷಣ ಹಿಂದೆ ಸರಿದು ಸೇದದೆ ಮುಂದಕ್ಕೆ ಹೊರಟೆ. ಕೊಂಚ ದೂರ ಹೋಗುವಷ್ಟರಲ್ಲಿಯೇ ನನಗೆ ನೆನಪಿಗೆ ಬಂತು: ನಾನೊಬ್ಬ ಸನ್ಯಾಸಿ, ಜಾತಿ, ಮತ, ಸಂಸಾರ, ಗೌರವ ಎಲ್ಲವನ್ನೂ ತ್ಯಜಿಸಿದವನು — ಆದರೂ ಆ ಮನುಷ್ಯ ಗುಡಿಸುವ ಜಾಡಮಾಲಿ ಎಂದ ಕೂಡಲೇ ಹಿಂದಕ್ಕೆ ಸರಿದೆ. ಅವನು ಮುಟ್ಟಿದ ಗುಡುಗುಡಿಯನ್ನು ಸೇದದೆ ಹೊರಟು ಬಂದೆ ಎಂಬುದು ನೆನಪಿಗೆ ಬಂದಿತು. ಈ ಯೋಚನೆ ನನ್ನ ಮನಸ್ಸನ್ನು ಕ್ಷುಬ್ಧಗೊಳಿಸಿತು. ನಾನಾಗಲೇ ಅರ್ಧ ಮೈಲಿ ದೂರ ಬಂದಿದ್ದೆ. ಪುನಃ ನಾನು ಹಿಂತಿರುಗಿ ಆ ಜಲಗಾರನಿದ್ದಲ್ಲಿಗೆ ಬಂದೆ. ಅವನಿನ್ನೂ ಅಲ್ಲಿಯೇ ಕುಳಿತಿದ್ದ. ನಾನು ತಕ್ಷಣ ಅವನಿಗೆ "ನನ್ನ ಪ್ರಿಯ ಗೆಳೆಯ, ದಯವಿಟ್ಟು ನನಗೊಂದು ಗುಡಿಗುಡಿಯನ್ನು ಸಿದ್ಧಪಡಿಸು" ಎಂದೆ. ಅವನು ಏನೇನು ಅಡ್ಡಿಗಳನ್ನು ಹೇಳಿದರೂ ಕೇಳದೆ ಅದನ್ನು ಕೊಟ್ಟೇ ತೀರಬೇಕೆಂದು ಹಠಹಿಡಿದೆ. ಆತ ನನಗೆ ಚಿಲುಮೆಯನ್ನು ಸಿದ್ಧಪಡಿಸಲೇಬೇಕಾಗಿ ಬಂತು. ನಂತರ ನಾನು ಸಂತೋಷದಿಂದ ಆ ಚಿಲುಮೆಯನ್ನು ಸೇದಿ ಬೃಂದಾವನಕ್ಕೆ ಹೊರಟೆ. ಯಾರು ಸನ್ಯಾಸಾಶ್ರಮ ಸ್ವೀಕರಿಸಿದ್ದಾರೋ

ಅವರು ಈ ಜಾತಿ ಮತ ಗೌರವ ಮುಂತಾದುವನ್ನೆಲ್ಲಾ ಮೀರಿಹೋಗಿದ್ದೇವೋ ಇಲ್ಲವೋ ಎಂದು ಚೆನ್ನಾಗಿ ಪರೀಕ್ಷಿಸಿಕೊಳ್ಳಬೇಕು. ನಿಜವಾದ ಶ್ರದ್ಧೆಯಿಂದ ಸನ್ಯಾಸಾಶ್ರಮವ್ರತವನ್ನು ಅನುಸರಿಸುವುದು ಬಹು ಕಷ್ಟ. ನಮ್ಮ ನಡೆ ನುಡಿ ಎರಡಕ್ಕೂ ಕೊಂಚವಾಗಲಿ ಯಾವ ವ್ಯತ್ಯಾಸವೂ ಇರಕೂಡದು.''

ಶಿಷ್ಯ:— ನೀವು ಒಮ್ಮೆ ಸನ್ಯಾಸಾಶ್ರಮದ ಧ್ಯೇಯ, ಮತ್ತೊಮ್ಮೆ ಗೃಹಸ್ಥಾಶ್ರಮದ ಧ್ಯೇಯವನ್ನು ಎತ್ತಿ ಹಿಡಿಯುವಿರಿ. ನಾನಾವುದನ್ನು ಅನುಸರಿಸಬೇಕು ?

ಸ್ವಾಮಿಜಿ:— ಎಲ್ಲವನ್ನೂ ಕೇಳು. ಕೊನೆಗೆ ನಿನಗೆ ಯಾವುದು ಮನಸ್ಸಿಗೆ ಹೆಚ್ಚಾಗಿ ಹಿಡಿಸುವುದೊ ಅದನ್ನು ಅನುಸರಿಸು. ಪಟ್ಟುಹಿಡಿದು ಅದನ್ನೇ ಅನುಸರಿಸು.

ಹೀಗೆ ಮಾತಮಾತನಾಡುತ್ತಾ ಸ್ವಾಮಿಜಿ ಕೆಳಗಿಳಿದು ಬಂದರು. ಒಮ್ಮೊಮ್ಮೆ '' ಶಿವ '' ಅಥವಾ '' ಓ ! ತಾಯಿ, ಅಮೃತತರಂಗಿಣಿ ನೀನು '' ಎನ್ನುವ ಜಗನ್ಮಾತೆಯ ಮೇಲಿನ ಹಾಡನ್ನು ಮೆಲ್ಲಗೆ ಹೇಳುತ್ತ ಸುತ್ತುತ್ತಿದ್ದರು.

---

## ಅಧ್ಯಾಯ ೪೪

**ಸ್ಥಳ:— ಬೇಲೂರು ಮಠ; ವರ್ಷ:—ಕ್ರಿ. ಶ. ೧೯೦೨.**

ಶಿಷ್ಯ ಸ್ವಾಮಿಜಿ ಕೊಠಡಿಯಲ್ಲೇ ಹಿಂದಿನ ರಾತ್ರಿಯನ್ನು ಕಳೆದಿದ್ದ. ಬೆಳಗಿನ ಝಾವ ನಾಲ್ಕು ಗಂಟೆಗೆ ಸ್ವಾಮಿಜಿ ಶಿಷ್ಯನನ್ನೆಬ್ಬಿಸಿ '' ಗಂಟೆಯನ್ನು ಹೊಡೆದು ಬ್ರಹ್ಮಚಾರಿಗಳನ್ನೂ, ಸಾಧುಗಳನ್ನೂ ನಿದ್ರೆಯಿಂದ ಎಬ್ಬಿಸು '' ಎಂದರು. ಅಪ್ಪಣೆಯ ಮೇರೆ ಶಿಷ್ಯ ನಿದ್ರಿಸುತ್ತಿದ್ದ ಸಾಧುಗಳ ಹತ್ತಿರ ಗಂಟೆ ಬಾರಿಸಿದ. ಆಶ್ರಮದ ನಿವಾಸಿಗಳೆಲ್ಲಾ ಪೂಜಾ ಮಂದಿರಕ್ಕೆ ತ್ವರೆಯಿಂದ ಧ್ಯಾನಮಾಡಲು ಹೊರಟರು.

ಸ್ವಾಮಿಜಿ ಅಪ್ಪಣೆಯಂತೆ ಶಿಷ್ಯ ಸ್ವಾಮಿ ಬ್ರಹ್ಮಾನಂದರ ಹಾಸಿಗೆಯ ಹತ್ತಿರ ಜೋರಾಗಿ ಗಂಟೆ ಬಾರಿಸಿದ: ಅವರು ಗಟ್ಟಿಯಾಗಿ ಒದರಿದರು.

"ಅಯ್ಯೊ ರಾಮ! ಈ ಬಂಗಾಳದವನಿಂದ ನಮಗೆ ಈ ಮಠಲ್ಲಿ ಉಳಿಗಾಲವಿಲ್ಲ" ಎಂದು. ಶಿಷ್ಯನಿಂದ ಇದನ್ನು ಕೇಳಿದ ಸ್ವಾಮಿಜಿ "ಒಳ್ಳೆಯ ಕೆಲಸಮಾಡಿದೆ" ಎಂದು ಹೇಳುತ್ತಾ ಹೊಟ್ಟೆ ಹುಣ್ಣಾಗುವಂತೆ ನಕ್ಕರು.

ಸನ್ಯಾಸಿಗಳೆಲ್ಲಾ, ಸ್ವಾಮಿ ಬ್ರಹ್ಮಾನಂದರೂ ಕೂಡ ಅಷ್ಟು ಹೊತ್ತಿಗಾಗಲೇ ಧ್ಯಾನಾರೂಢರಾಗಿದ್ದರು. ಸ್ವಾಮಿಜಿಗಾಗಿ ಒಂದು ಪ್ರತ್ಯೇಕ ಆಸನವನ್ನೇರ್ಪಡಿಸಲಾಗಿತ್ತು. ಸ್ವಾಮಿಜಿ ಪೂರ್ವಾಭಿ ಮುಖವಾಗಿ ಕುಳಿತುಕೊಂಡು ತಮ್ಮ ಮುಂದಿದ್ದ ಆಸನವನ್ನು ಶಿಷ್ಯನಿಗೆ ತೋರಿಸಿ "ಹೋಗು, ಅಲ್ಲಿಗೆ ಕುಳಿತು ಧ್ಯಾನಮಾಡು" ಎಂದರು.

ಆಸನಾರೂಢರಾಧ ಕೊಂಚ ಹೊತ್ತಿನಲ್ಲಿಯೇ ಸ್ವಾಮಿಜಿ ಸಂಪೂರ್ಣ ಶಾಂತ ಚಿತ್ತರಾಗಿ ಪ್ರತಿಮೆಯಂತೆ ಸ್ಥಿರವಾಗಿದ್ದರು – ಅವರ ಉಸಿರಾಡುವಿಕೆ ಬಹು ನಿಧಾನವಾಗುತ್ತಾ ಬಂತು. ಎಲ್ಲರೂ ತಮ್ಮ ತಮ್ಮ ಸ್ಥಳಗಳಲ್ಲಿ ಕುಳಿತಿದ್ದರು.

ಸುಮಾರು ಒಂದೂವರೆ ಘಂಟೆಯಾದ ಮೇಲೆ ಸ್ವಾಮಿಜಿ "ಶಿವ, ಶಿವ" ಎಂದು ಹೇಳುತ್ತಾ ಧ್ಯಾನದಿಂದ ಮೇಲೆದ್ದರು. ಅವರ ಕಣ್ಣುಗಳು ಪ್ರಜ್ವಲಿಸುತ್ತಿದ್ದುವು. ಮುಖಭಾವ ಪ್ರಶಾಂತವಾಗಿ, ಸೌಮ್ಯವಾಗಿ, ಗಂಭೀರವಾಗಿದ್ದಿತು. ಶ್ರೀರಾಮಕೃಷ್ಣರಿಗೆ ಪ್ರಣಾಮ ಮಾಡಿ, ಕೆಳಕ್ಕೆ ಇಳಿದು ಬಂದು ಮಠದ ವರಾಂಡದಲ್ಲಿ ಶತಪಥ ತಿರುಗುತ್ತಿದ್ದರು. ಕೊಂಚ ಹೊತ್ತಿನ ತರುವಾಯ ಶಿಷ್ಯನಿಗೆ ಹೇಳಿದರು, "ನೋಡಿದೆಯಾ, ಈಗ ಮಠದ ಸಾಧುಗಳು ಧ್ಯಾನ ಮುಂತಾದುವನ್ನು ಹೇಗೆ ಮಾಡುತ್ತಿರುವರೆಂದು. ಧ್ಯಾನ ಗಾಢವಾಗುತ್ತಾ ಹೋದ ಹಾಗೆಲ್ಲಾ ಅನೇಕ ಅದ್ಭುತವಾದ ಅನುಭವವಾಗುತ್ತವೆ. ಬಾರಾ ನಗರದ ಮಠದಲ್ಲಿ ಧ್ಯಾನಿಸುತ್ತಿದ್ದಾಗ ನಾನು ಇಡ ಮತ್ತು ಪಿಂಗಳ ಎಂಬ ನರಗಳನ್ನು ನೋಡಿದೆ. ಕೊಂಚ ಪರಿಶ್ರಮದಿಂದಲೇ ನಾವದನ್ನು ನೋಡಬಹುದು. ನಂತರ ಸುಷುಮ್ನೆಯನ್ನು ಯಾರು ನೋಡುವರೋ ಅವರು ತಮಗಿಷ್ಟ ಬಂದುದನ್ನು ನೋಡಬಹುದು. ಯಾರಿಗೆ ಗುರುವಿನಲ್ಲಿ ಅವಿಚ್ಛಿನ್ನವಾದ ಭಕ್ತಿ ಇದೆಯೊ ಅವನಿಗೆ ಜಪ ಧ್ಯಾನ ಮುಂತಾದುವು ತಾವಾಗಿಯೇ ಬರುವುವು. ಅದಕ್ಕಾಗಿ ಅವನು ಹೋರಾಡಬೇಕಾಗಿಲ್ಲ. "ಗುರುವೆ ಬ್ರಹ್ಮ, ಗುರುವೆ ವಿಷ್ಣು, ಗುರುವೆ ಮಹೇಶ್ವರ."

ನಂತರ ಶಿಷ್ಯ ಸ್ವಾಮಿಗಳಿಗೆ ತುಂಬಾಕನ್ನು ಸಿದ್ಧಪಡಿಸಿಡಲು ಸ್ವಾಮಿ

ಗಳು ಅದನ್ನು ಸೇದುತ್ತಾ ಹೇಳಿದರು: "ಅಂತರ್ಯದಲ್ಲಿರುವುದು ಸಿಂಹ–ನಿರಂತರ ಪವಿತ್ರ ಜ್ಯೋತಿರ್ಮಯ ಮುಕ್ತಾತ್ಮ–ಅವನನ್ನು ನೇರ ವಾಗಿ ಧ್ಯಾನ ಮತ್ತು ಚಿತ್ತೈಕಾಗ್ರತೆಯಿಂದ ಯಾರು ಸಾಕ್ಷಾತ್ಕರಿಸಿ ಕೊಳ್ಳು ವರೊ ಅವರಿಗೆ ಈ ಮಾಯಾ ಪ್ರಪಂಚ ಮಾಯವಾಗುವುದು. ಅವನು ಸರ್ವದರಲ್ಲಿಯೂ ಮೂರ್ತೀಭವಿಸಿದ್ದಾನೆ. ಹೆಚ್ಚು ಸಾಧನೆ ಮಾಡಿದಷ್ಟೂ ಬೇಗ ಕುಂಡಲಿನಿ ಜಾಗೃತಿಗೊಳ್ಳುವುದು. ಯಾವಾಗ ಈ ಶಕ್ತಿ ಶಿರವನ್ನು ಸೇರುವುದೋ ಆಗ ಅವನ ದೃಷ್ಟಿಗೆ ಯಾವುದೂ ಅಡಚಣೆಯಾಗುವು ದಿಲ್ಲ–ಅವನಿಗೆ ಆತ್ಮಸಾಕ್ಷಾತ್ಕಾರವಾಗುವುದು."

ಶಿಷ್ಯ:—ಸ್ವಾಮಿಜಿ, ನಾನು ಇವುಗಳನ್ನೆಲ್ಲಾ ಧರ್ಮ ಗ್ರಂಥಗಳಲ್ಲಿ ಓದಿದ್ದೇನೆ ಅಷ್ಟೆ. ಯಾವುದೂ ಸಾಕ್ಷಾತ್ಕಾರವಾಗಿಲ್ಲ.

ಸ್ವಾಮಿಜಿ:—ಯೋಗ್ಯಕಾಲದಲ್ಲಿ ಅದು ಬಂದೇ ಬರುವುದು. ಕೆಲವರು ಬೇಗ ಸಾಧಿಸುವರು, ಕೆಲವರು ಹೆಚ್ಚುಕಾಲ ತೆಗೆದುಕೊಳ್ಳುವರು. ಎಂದಿಗೂ ಬಿಡುವುದಿಲ್ಲೆಂಬ ನಿರ್ಧಾರದಿಂದ ಅದನ್ನೇ ಗಟ್ಟಿಯಾಗಿ ಹಿಡಿದಿರಬೇಕು. ಇದೇ ನಿಜವಾದ ಪುರುಷಾಕಾರ. ತಡೆಯಿಲ್ಲದ ಎಣ್ಣೆಯ ಪ್ರವಾಹದಂತೆ ಮನಸ್ಸನ್ನು ಒಂದೇ ವಸ್ತುವಿನಲ್ಲೇ ಏಕಾಗ್ರ ಮಾಡಬೇಕು. ಸಾಧಾರಣ ಮನುಷ್ಯನ ಮನಸ್ಸು ನಾನಾ ವಸ್ತುಗಳ ಮೇಲೆ ಹರಿದುಹಂಚಿಹೋಗಿರುತ್ತದೆ. ಧ್ಯಾನಕಾಲದಲ್ಲಿ ಪ್ರಾರಂಭದಲ್ಲಿ ಮನಸ್ಸು ಚಂಚಲವಾಗೇ ಆಗುವುದು. ಆದರೆ ಮನಸ್ಸಿನಲ್ಲಿ ಯಾವ ಆಸೆ ಬೇಕಾದರೂ ಬರಲಿ. ಶಾಂತನಾಗಿ ಕುಳಿತು ಯಾವ ಭಾವನೆ ಗಳು ಬರುತ್ತವೆಂಬುದನ್ನು ನೋಡು. ಹೀಗೆ ಪರೀಕ್ಷಿಸುತ್ತಾ ಹೋದ ಹಾಗೆ ಮನಸ್ಸೂ ಶಾಂತವಾಗಿ ಇತರ ಯೋಚನಾತರಂಗಗಳು ಬರುವುದಿಲ್ಲ. ಈ ತರಂಗಗಳು ಮನಸ್ಸಿನ ಯೋಚನಾಶಕ್ತಿಯ ಪ್ರತಿನಿಧಿಗಳು. ನೀನು ಹಿಂದೆ ಯಾವ ಯಾವ ಗಾಢ ಆಲೋಚನೆಯಲ್ಲಿ ಮುಳುಗಿದ್ದೆಯೋ ಅವೆಲ್ಲಾ ನಿನ್ನ ಸುಪ್ತಾವಸ್ಥೆಯ ತರಂಗಗಳಾಗಿ ಮಾರ್ಪಟ್ಟಿರುತ್ತವೆ–ಆದ್ದರಿಂದಲೇ ಧ್ಯಾನಾಸಕ್ತ ಮನಸ್ಸಿನಲ್ಲಿ ಬರುತ್ತವೆ. ಧ್ಯಾನದಲ್ಲಿರುವಾಗ ಮನಸ್ಸಿದಲ್ಲಿ ಈ ರೀತಿ ಅಲೆಗಳು ಅಥವಾ ಆಲೋಚನೆಗಳು ಏಳುವುದರಿಂದಲೇ ನಿನ್ನ ಮನಸ್ಸು ಅನೇಕ ಭಾವನೆಗಳ ಮೇಲೆ ಕೇಂದ್ರೀಕೃತವಾಗಿರುತ್ತವೆ. ಇದಕ್ಕೆ ಸವಿಕಲ್ಪ ಅಥವಾ ಆಂದೋಲನದ ಮೇಲಿನ ಧ್ಯಾನ ಎಂದು ಹೆಸರು. ಆದರೆ ಯಾವಾಗ ಮನಸ್ಸು ಎಲ್ಲಾ ಬಗೆಯ ಕಾರ್ಯಗಳಿಂದಲೂ ಬಿಡುಗಡೆ

ಹೊಂದುವುದೋ ಆಗ ಅದು ಆಂತರಿಕಶಕ್ತಿಯಲ್ಲಿ ಲೀನವಾಗುವುದು. ಇದೇ ಅಖಂಡ, ಅನಂತ ಜ್ಞಾನ ತನ್ನ ನೆಲೆ ತಾನೇ ಆಗಿರುವುದು. ಇದೇ ನಿರ್ವಿಕಲ್ಪ ಸಮಾಧಿ – ಎಲ್ಲಾ ಬಗೆಯ ಕರ್ಮಗಳಿಂದಲೂ ವಿಮುಕ್ತವಾಗಿರುವುದು. ಶ್ರೀ ರಾಮಕೃಷ್ಣರಲ್ಲಿ ನಾವು ಅನೇಕಬಾರಿ ಈ ಎರಡು ಬಗೆಯ ಸಮಾಧಿಗಳನ್ನೂ ನೋಡುತ್ತಿದ್ದೆವು. ಅವರು ಈ ಸ್ಥಿತಿ ಹೊಂದಲು ಹೋರಾಡಬೇಕಾಗಿರಲಿಲ್ಲ. ಅವು ಸಹಜವಾಗಿಯೇ ಅವರಿಗೆ ಯಾವಾಗೆಂದರೆ ಆಗ ಬರುತ್ತಿದ್ದುವು. ಅದೊಂದು ಅದ್ಭುತ ಪ್ರಸಂಗ. ಅವರನ್ನು ಪ್ರತ್ಯಕ್ಷನೋಡಿದ ಮೇಲೆ ನಮಗೆ ಈ ವಿಷಯಗಳನ್ನು ಗ್ರಹಿಸಲು ಸಾಧ್ಯವಾಯಿತು. ಪ್ರತಿದಿನವೂ ಏಕಾಂಗಿಯಾಗಿ ಧ್ಯಾನಮಾಡು. ಎಲ್ಲವೂ ತಮ್ಮಷ್ಟಕ್ಕೆ ತಾವೇ ಗೋಚರವಾಗುವುವು. ಈಗ ಜಗನ್ಮಾತೆ, ಜ್ಯೋತಿರ್ಮಯಮೂರ್ತಿ ನಿನ್ನಲ್ಲಿ ನಿದ್ರಿಸುತ್ತಿರುವಳು. ಅದಕ್ಕೇ ನೀನೇನೂ ತಿಳಿದುಕೊಳ್ಳಲಾರೆ. ಅವಳೇ ಕುಂಡಲಿನಿ. ಧ್ಯಾನಕ್ಕೆ ಮುಂಚೆ ನೀನು 'ನರಶುದ್ಧಿ' ಮಾಡುವಾಗ ಮಾನಸಿಕವಾಗಿ ನಿನ್ನ ಮೂಲಾಧಾರದಲ್ಲಿರುವ ಕುಂಡಲಿನಿಯನ್ನು ಹೊಡೆದೆಬ್ಬಿಸು—"ಏಳು ತಾಯಿ, ಏಳು" ಎನ್ನು. ಇವನ್ನು ನಿಧಾನವಾಗಿ ಸಾಧನೆ ಮಾಡಬೇಕು. ಧ್ಯಾನದ ವೇಳೆಯಲ್ಲಿ ನಿನ್ನ ಉದ್ರೇಕ ಭಾವನೆಗಳನ್ನು ಆದಷ್ಟು ನಿಗ್ರಹಿಸು. ಅದು ಬಹಳ ಅಪಾಯಕಾರಿ. ಯಾರು ಹೆಚ್ಚು ಉದ್ವೇಗಪರರೋ ಅವರಲ್ಲಿ ಕುಂಡಲಿನಿ ಬಹುಬೇಗ ಜಾಗ್ರತಗೊಳ್ಳುವುದು. ಹಾಗೇ ಅಷ್ಟೇ ಬೇಗ ಅದು ಕೆಳಕ್ಕೂ ಹೋಗುವುದು. ಅದು ಕೆಳಕ್ಕೆ ಬಂದಾಗ ಭಕ್ತನನ್ನು ತುಂಬಾ ಶೋಚನೀಯಾವಸ್ಥೆಯಲ್ಲಿ ಬಿಟ್ಟುಹೋಗುವುದು. ಅದಕ್ಕೇ ಕೀರ್ತನೆ ಮುಂತಾದ ಈ ಉದ್ರೇಗಪರ ಭಾವಕ್ಕೆ ಸಹಕಾರಿಯಾಗಿರುವುಗಳಲ್ಲಿ ಒಂದು ದೊಡ್ಡ ಕೊರತೆ ಇದೆ. ಕುಣಿತ ಮುಂತಾದುವುಗಳಿಂದ ಆ ಕ್ಷಣಕ್ಕೆ ಈ ಶಕ್ತಿ ಮೇಲೇರುವುದೇನೊ ನಿಜ. ಆದರೆ ಅದೊಂದೂ ಸ್ಥಿರವಲ್ಲ. ಅದಕ್ಕೆ ಬದಲು ಅದು ತನ್ನ ಸ್ಥಾನಕ್ಕೆ ಹಿಂತಿರುಗಿ ಬಂದು ವ್ಯಕ್ತಿಯ ಕಾಮವನ್ನು ಉದ್ರೇಕಿಸುವುದು. ಅಮೆರಿಕಾದಲ್ಲಿ ನನ್ನ ಉಪನ್ಯಾಸಗಳನ್ನು ಕೇಳಿ ತಾತ್ಕಾಲಿಕ ಉದ್ವೇಗದಿಂದ ಪ್ರೇಕ್ಷಕರಲ್ಲಿ ಹಲವರು ಭಾವವಶರಾಗುತ್ತಿದ್ದರು. ಕೆಲವರು ವಿಗ್ರಹದಂತೆ ನಿಶ್ಚಲರಾಗಿಬಿಡುತ್ತಿದ್ದರು. ನಂತರ ವಿಚಾರಿಸಿದುದರಮೇಲೆ ಅವರಲ್ಲಿ ಅನೇಕರಿಗೆ ಈ ಅವಸ್ಥೆ ಕಳೆದ ಕೂಡಲೇ ಕಾಮಾಸಕ್ತಿ ಹೆಚ್ಚಾಗುತ್ತಿತ್ತೆಂದು ತಿಳಿಯಿತು. ಆದರೆ ಇದು

ಸರಿಯಾಗಿ ಜಪಧ್ಯಾನ ಮಾಡದ ಕಾರಣ ಹೀಗಾಗುವುದು.

ಶಿಷ್ಯ—ಸ್ವಾಮಿಜಿ, ಯಾವ ಧರ್ಮಗ್ರಂಥಗಳಲ್ಲೂ ನಾನು ಈ ಆಧ್ಯಾತ್ಮಿಕ ಸಾಧನೆಯ ರಹಸ್ಯವನ್ನು ಓದಿರಲಿಲ್ಲ–ಇಂದು ಅನೇಕ ಹೊಸ ವಿಷಯಗಳನ್ನು ಕೇಳಿದೆ.

ಸ್ವಾಮಿಜಿ:—ಧರ್ಮಶಾಸ್ತ್ರಗಳು ಆಧ್ಯಾತ್ಮಿಕ ಸಾಧನೆಯ ಎಲ್ಲಾ ರಹಸ್ಯವನ್ನೂ ಒಳಗೊಂಡಿರುವವೆಂದು ತಿಳಿದೆಯಾ? ಇವೆಲ್ಲಾ ಗುರು ಶಿಷ್ಯ ಪೀಳಿಗೆಯಿಂದ ರಹಸ್ಯವಾಗಿ ಕೊಡಲ್ಪಡುತ್ತವೆ. ಬಹು ಎಚ್ಚರಿಕೆಯಿಂದ ಧ್ಯಾನ ಜಪವನ್ನು ಮಾಡು. ಸುವಾಸನಾ ಪುಷ್ಪಗಳನ್ನು ಇಟ್ಟು ಊದಿನಕಡ್ಡಿ ಹಚ್ಚಿಸು. ಪ್ರಾರಂಭದಲ್ಲಿ ಮನಸ್ಸು ಪರಿಶುದ್ಧವಾಗಲು ಈ ಬಾಹ್ಯ ಸಹಾಯವನ್ನು ತೆಗೆದುಕೊ. ನೀನು ನಿನ್ನ ಗುರು ಮತ್ತು ಇಷ್ಟ ದೇವತೆಯ ಮಂತ್ರವನ್ನು ಜಪಿಸುತ್ತಿರುವಾಗ ಹೇಳು: ಸರ್ವ ಜೀವಿಗಳಿಗೂ ಶಾಂತಿ ಇರಲಿ ವಿಶ್ವದಲ್ಲೆಲ್ಲಾ ಶಾಂತಿ ಇರಲಿ. ಮೊದಲು ಈ ಶುಭಾಷಯಗಳನ್ನು ಉತ್ತರ, ದಕ್ಷಿಣ, ಪೂರ್ವ, ಪಶ್ಚಿಮ, ಮೇಲೆ ಕೆಳಗೆ–ಎಲ್ಲಾ ಕಡೆಗೂ ಕಳುಹಿಸು. ನಂತರ ಧ್ಯಾನಕ್ಕೆ ಕುಳಿತುಕೊ. ಪ್ರಥಮ ಮಟ್ಟದಲ್ಲಿ ಎಲ್ಲರೂ ಹೀಗೆ ಮಾಡಬೇಕು. ನಂತರ ಸ್ಥಿರವಾಗಿ ಕುಳಿತು (ಯಾವ ದಿಕ್ಕಿಗೆ ಬೇಕಾದರೂ ಕುಳಿತುಕೊ) ನಾನು ನಿನಗೆ ದೀಕ್ಷೆ ಕೊಟ್ಟರೀತಿ ಧ್ಯಾನಮಾಡು. ಒಂದು ದಿನವನ್ನೂ ಹಾಗೆಯೇ ಬಿಡಬೇಡ. ನಿನಗೆ ತುಂಬಾ ಜರೂರಾದ ಕೆಲಸವಿದ್ದಲ್ಲಿ ಒಂದು ಕಾಲುಗಂಟೆಯಾದರೂ ನಿನ್ನ ಆಧ್ಯಾತ್ಮಿಕ ಸಾಧನೆ ಮಾಡು. ಮಗು, ನಿನ್ನಲ್ಲಿ ನಿಶ್ಚಲ ಭಕ್ತಿಯಿಲ್ಲದಿದ್ದಲ್ಲಿ ನಿನ್ನ ಗುರಿಯನ್ನು ಹೇಗೆ ಸೇರಬಲ್ಲೆ.

ಸ್ವಾಮಿಜಿ ಮಹಡಿಗೆ ಹೋದರು. ಹೋಗುವಾಗ ಹೇಳಿದರು "ನೀವೆಲ್ಲಾ ಹೆಚ್ಚು ಶ್ರಮವಿಲ್ಲದೆ ಆಧ್ಯಾತ್ಮಿಕ ಅಂತಶ್ಶಕ್ತಿ ಹೊಂದಿದಿರಿ. ನೀವಿಲ್ಲಿಗೆ ಬರುವಷ್ಟು ಅದೃಷ್ಟಶಾಲಿಗಳಾದುದರಿಂದ ನಿಮಗೆ ಮುಕ್ತಿ ಸಮೀಪದಲ್ಲೆ ಇದೆ. ಈಗ ನಿಮ್ಮ ಧ್ಯಾನ ಮುಂತಾದುವುಗಳೊಂದಿಗೆ ಹೃತ್ಪೂರ್ವಕವಾಗಿ ಗೋಳಿನಿಂದ ತುಂಬಿರುವ ವಿಶ್ವಜನತೆಯ ಕಷ್ಟ ನಷ್ಟಗಳನ್ನು ಕಡಿಮೆಮಾಡಲು ಪ್ರಯತ್ನಿಸಿ. ಕಠಿಣ ತಪಶ್ಚರ್ಯೆಯಿಂದ ನಾನು ಈ ದೇಹವನ್ನು ನಾಶಮಾಡಿರುವೆ. ನನ್ನೀ ಮೂಳೆ ಮಾಂಸಗಳ ಚೀಲದಲ್ಲಿ ಕೊಂಚಕೂಡ ಶಕ್ತಿಇಲ್ಲ. ಈಗ ನೀವು ಕೆಲಸಕ್ಕೆ ಹೊರಡಿ. ನನಗೆ ಕೊಂಚ ವಿಶ್ರಾಂತಿ ಕೊಡಿ. ನೀವು ಮತ್ತಾವುದನ್ನು ಮಾಡಿ ಜಯ

ಶೀಲರಾಗಿದ್ದರೂ ಚಿಂತೆಯಿಲ್ಲ. ಇಲ್ಲಿಯುವರಿಗೂ ವ್ಯಾಸಂಗ ಮಾಡಿರುವ ಆಧ್ಯಾತ್ಮಿಕ ಸತ್ಯಗಳನ್ನು ಜನತೆಗೆ ಬೋಧಿಸಿ. ಇದಕ್ಕಿಂತ ಹೆಚ್ಚಾದ ಧ್ಯಾನವಿಲ್ಲ. ಏಕೆಂದರೆ ಪ್ರಪಂಚದಲ್ಲಿ ಜ್ಞಾನ ದಾನಕ್ಕಿಂತ ಮಿಗಿಲಾದ ದಾನವಿಲ್ಲ.''

---

## ಅಧ್ಯಾಯ ೪೪

**ಸ್ಥಳ:**— ಬೇಲೂರು ಮಠ. ವರ್ಷ:– ಕ್ರಿ. ಶ. ೧೯೦೨.

ಸ್ವಾಮಿಜಿ ಈಗ ಮಠದಲ್ಲಿಯೇ ಇರುತ್ತಿದ್ದರು. ಶಿಷ್ಯನು ಮಠಕ್ಕೆ ಬಂದು ಸ್ವಾಮಿಜಿ ಮತ್ತು ಸ್ವಾಮಿ ಪ್ರೇಮಾನಂದರೊಡನೆ ಸಂಜೆ ತಿರುಗಾಡಿಕೊಂಡು ಬರಲು ಹೋಗಿದ್ದನು. ಸ್ವಾಮಿಜಿ ಆಲೋಚನಾ ಮಗ್ನರಾಗಿದ್ದುದನ್ನು ನೋಡಿ ಶಿಷ್ಯನು ಸ್ವಾಮಿ ಪ್ರೇಮಾನಂದರೊಡನೆ ಶ್ರೀ ರಾಮಕೃಷ್ಣರು ಸ್ವಾಮಿಜಿ ಮಹಿಮೆಯ ವಿಚಾರವಾಗಿ ಏನು ಹೇಳುತ್ತಿದ್ದರೆಂಬುದನ್ನು ಮಾತನಾಡುತ್ತಿದ್ದನು. ಕೊಂಚದೂರ ಹೋದ ಮೇಲೆ ಸ್ವಾಮಿಜಿ ಮಠಕ್ಕೆ ಹಿಂತಿರುಗಲು ಹೊರಟರು. ತಮ್ಮ ಬಳಿಯಿದ್ದ ಸ್ವಾಮಿ ಪ್ರೇಮಾನಂದ ಮತ್ತು ಶಿಷ್ಯನನ್ನು ನೋಡಿ ಸ್ವಾಮಿಜಿ "ನೀವೇನು ಮಾತನಾಡುತ್ತಿದ್ದಿರಿ?'' ಎಂದು ಕೇಳಿದರು. ಶಿಷ್ಯ "ನಾವು ಶ್ರೀ ರಾಮ ಕೃಷ್ಣರು ಮತ್ತು ಅವರಿಗೆ ಸಂಬಂಧಪಟ್ಟ ವಿಚಾರ ಮಾತನಾಡುತ್ತಿದ್ದೆವು'' ಎಂದನು. ಸ್ವಾಮಿಜಿ ಉತ್ತರವನ್ನು ಕೇಳಿದರು ಮಾತ್ರ–ಪುನಃ ಯೋಚನಾಮಗ್ನರಾದರು. ರಸ್ತೆಯ ಮೂಲಕ ಮಠದಿಂದ ಹಿಂತಿರುಗಿ ದರು. ಮಾವಿನ ಮರದ ಕೆಳಗೆ ಇಟ್ಟಿದ್ದ ದಾರದ ಮಂಚದ ಮೇಲೆ ಕೊಂಚಹೊತ್ತು ವಿಶ್ರಮಿಸಿಕೊಂಡರು. ಮುಖತೊಳೆದುಕೊಂಡು ಮೇಲಣ ವರಾಂಡದಲ್ಲಿ ತಿರುಗಾಡುತ್ತಾ ಹೇಳಿದರು "ನೀನಿರುವ ಪ್ರದೇಶದಲ್ಲೇಕೆ ವೇದಾಂತ ಪ್ರಚಾರಮಾಡಲು ಪ್ರಯತ್ನಿಸಬಾರದು? ಅಲ್ಲಿ ತಾಂತ್ರಿಕ ಸಂಪ್ರ ದಾಯ ಭೀಷಣವಾಗಿ ಹಬ್ಬಿದೆ. ಅದ್ವೈತವಾದದ ಸಿಂಹಗರ್ಜನೆಯಿಂದ ದೇಶವನ್ನು ಅಲ್ಲೋಲಕಲ್ಲೋಲ ಮಾಡಿ, ಎಬ್ಬಿಸಿ. ಆಗ ನೀನೊಬ್ಬ ವೇದಾಂತಿ ಎನ್ನುತ್ತೇನೆ. ಮೊದಲು ಅಲ್ಲೊಂದು ಶಾಲೆ ತೆರೆದು

ಉಪನಿಷತ್ತು ಮತ್ತು ಬ್ರಹ್ಮಸೂತ್ರಗಳನ್ನು ಬೋಧಿಸಿ. ಹುಡುಗರಿಗೆ ಬ್ರಹ್ಮಚರ್ಯೆಯ ವಿಚಾರವಾಗಿ ಬೋಧಿಸಿ. ನೀನಿರುವ ಪ್ರದೇಶದಲ್ಲಿ ನ್ಯಾಯ ಪ್ರಧಾನ ತರ್ಕ, ಮಾತಿಗೆ ಮಾತು ಜೋಡಿಸುವುದು ಹೆಚ್ಚೆಂದು ಕೇಳಿದ್ದೇನೆ. ಅದರಲ್ಲಿ ಏನಿದೆ? ಕೇವಲ ವ್ಯಾಪ್ತಿ ಮತ್ತು ಅನುಮಾನ ಅಷ್ಟೇ. ಈ ವಿಷಯಗಳ ಮೇಲೆ ನೈಯಾಯಿಕ ಪಂಡಿತರು ತಿಂಗಳು ಗಟ್ಟಲೆ ಚರ್ಚಿಸುವರು. ಆತ್ಮಜ್ಞಾನಕ್ಕೆ ಇದು ಎಷ್ಟರಮಟ್ಟಿಗೆ ಸಹಾಯ ಕಾರಿ? ನಿಮ್ಮ ಹಳ್ಳಿ ಅಥವಾ ನಾಗಮಹಾಶಯರ ಹಳ್ಳಿಯಲ್ಲಿ ಒಂದು ಶಾಲೆ ತೆಗೆದು ಧರ್ಮಶಾಸ್ತ್ರ, ಶ್ರೀ ರಾಮಕೃಷ್ಣರ ಜೀವನ ಮತ್ತು ಉಪದೇಶಗಳನ್ನು ಓದುವಂತೆ ಮಾಡಿ. ಇದರಿಂದ ನಿಮಗೆ ಶ್ರೇಯಸ್ಸಾಗುವುದಲ್ಲದೆ ಜಗತ್ಕಲ್ಯಾಣವಾಗಿ ನಿಮ್ಮ ಕೀರ್ತಿ ಶಾಶ್ವತವಾಗಿ ಉಳಿಯುವುದು.

ಶಿಷ್ಯ:—ಸ್ವಾಮಿಜಿ, ನನಗೆ ಹೆಸರು ಕೀರ್ತಿಗಳ ಆಸೆ ಇಲ್ಲ. ಕೇವಲ ಒಮ್ಮೊಮ್ಮೆ ಮಾತ್ರ ನೀವು ಹೇಳಿದಂತೆ ಮಾಡಬೇಕೆನ್ನಿಸುವುದು. ಆದರೆ ಮದುವೆಯಾಗಿರುವುದರಿಂದ ಸಂಸಾರತಾಪತ್ರಯಕ್ಕೆ ಸಿಕ್ಕಿ ಈ ಆಸೆ ಕೇವಲ ನನ್ನ ಮನಸ್ಸಿನಲ್ಲಿಯೇ ಉಳಿದುಬಿಡುವುದೇನೋ ಎಂದು ಹೆದರಿಕೆ ಯಾಗುವುದು.

ಸ್ವಾಮಿಜಿ:—ನೀನು ಮದುವೆಯಾಗಿದ್ದರೇನಂತೆ? ನಿನ್ನ ತಂದೆ ತಾಯಿಗಳು, ಸಹೋದರರನ್ನು ಹಿಟ್ಟುಬಟ್ಟೆಕೊಟ್ಟು ಸಾಕುತ್ತಿರುವಂತೆಯೆ ನಿನ್ನ ಹೆಂಡತಿಗೂ ಮಾಡು. ಆಕೆಗೂ ಆಧ್ಯಾತ್ಮಿಕ ಸಲಹೆಗಳನ್ನು ಕೊಟ್ಟು ನಿನ್ನ ದಾರಿಯೆಡೆಗೆ ತಿರುಗುವಂತೆ ಮಾಡು. ಆಕೆಯನ್ನು ನಿನ್ನ ಆಧ್ಯಾತ್ಮಿಕ ಜೀವನದ ಜೊತೆಗಾತಿ, ಸಹಾಯಕಳೆಂದು ತಿಳಿ. ಉಳಿದಕಾಲಗಳಲ್ಲಿ ಇತರರನ್ನು ನೋಡುವಂತೆಯೇ ಆಕೆಯನ್ನೂ ನೋಡು. ಈ ರೀತಿ ಯೋಚಿಸುವುದರಿಂದ ಮನಸ್ಸಿನ ಚಂಚಲತೆಯೆಲ್ಲಾ ಮಾಯವಾಗುವುದು. ಅಂಜಿಕೆಯೇಕೆ?

ಶಿಷ್ಯನಿಗೆ ಈ ಮಾತುಗಳಿಂದ ತುಂಬಾ ಸಮಾಧಾನವಾಯಿತು. ಊಟವಾದಮೇಲೆ ಸ್ವಾಮಿಜಿ ತಮ್ಮ ಹಾಸಿಗೆಯ ಮೇಲೆ ಕುಳಿತು ಕೊಂಡರು. ಶಿಷ್ಯನಿಗೆ ಈಗ ಕೊಂಚ ಸ್ವಾಮಿಜಿಗೆ ಸೇವೆಮಾಡಲು ಅವಕಾಶ ದೊರಕಿತು.

ಸ್ವಾಮಿಜಿ ಶಿಷ್ಯನಿಗೆ ಮಠದ ನಿವಾಸಿಗಳ ವಿಷಯದಲ್ಲಿ ಎಷ್ಟು

ಗೌರವವಿಡಬೇಕೆಂಬುದರ ವಿಚಾರವಾಗಿ ಮಾತನಾಡಿದರು, "ನೀನೀಗ ನೋಡುತ್ತಿರುವ ಶ್ರೀರಾಮಕೃಷ್ಣರ ಮಕ್ಕಳ, ಅದ್ಭುತ ತ್ಯಾಗಿಗಳು. ಅವರನ್ನು ಸೇವಿಸುವುದರಿಂದ ನಿನ್ನ ಮನಶ್ಶುದ್ಧಿಯಾಗಿ ಆತ್ಮಸಾಕ್ಷಾತ್ಕಾರ ಪಡೆದು ಧನ್ಯನಾಗುವೆ. ನಿನಗೆ ಗೀತೆಯ "ಮಹಾತ್ಮರ ಸೇವೆ ಮಾಡುವುದರ ಮೂಲಕ ಮತ್ತು ಪ್ರಶ್ನಿಸುವುದರಿಂದ" ಎಂಬ ವಾಕ್ಯ ನೆನಪಿದೆಯೆ? ಆದ್ದರಿಂದ ನೀನು ಅವರನ್ನು ಖಂಡಿತ. ಸೇವಿಸಬೇಕು. ಇದರಿಂದ ನೀನು ನಿನ್ನ ಗುರಿಯನ್ನು ಮುಟ್ಟುವುದಲ್ಲದೆ, ಅವರು ನಿನ್ನನ್ನು ಎಷ್ಟು ಪ್ರೀತಿಸುವರೆಂಬುದನ್ನು ತಿಳಿಯುವೆ.

ಶಿಷ್ಯ:—ಆದರೆ ಅವರನ್ನು ಅರ್ಥಮಾಡಿಕೊಳ್ಳಲು ನನಗೆ ಬಹು ಕಷ್ಟವಾಗುತ್ತದೆ. ಪ್ರತಿಯೊಬ್ಬರೂ ಬೇರೆಬೇರೆ ಗುಂಪಿಗೆ ಸೇರಿದವರೆಂದು ಅನ್ನಿಸುವುದು.

ಸ್ವಾಮಿಜಿ:—ಶ್ರೀ ರಾಮಕೃಷ್ಣರು ಒಬ್ಬ ಅದ್ಭುತ ತೋಟಗಾರರು. ಬಗೆಬಗೆಯ ಹೂಗಳಿಂದ ಹೂ ಗೊಂಚಲನ್ನು ಮಾಡಿ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. ಬಗೆಬಗೆಯ ನಮೂನೆ ಮತ್ತು ಭಾವನೆಗಳು ಅಲ್ಲಿವೆ. ಮುಂದೆಯೂ ಬರುತ್ತ ಇರುವುವು. ಶ್ರೀ ರಾಮಕೃಷ್ಣರು "ಯಾರು ಹೃತ್ಪೂರ್ವಕವಾಗಿ ದೇವರನ್ನು ಒಂದು ದಿನವಾದರೂ ಪ್ರಾರ್ಥಿಸಿರುವರೋ ಅವರು ಇಲ್ಲಿಗೆ ಬಂದೇ ಬರುವರು" ಎನ್ನುತ್ತಿದ್ದರು. ಇಲ್ಲಿರುವ ಪ್ರತಿಯೊಬ್ಬರೂ ಒಂದು ದೊಡ್ಡ ಆಧ್ಯಾತ್ಮಿಕ ಶಕ್ತಿಯೆಂದು ತಿಳಿ. ಅವರು ನನ್ನ ಮುಂದೆ ಸಂಕುಚಿತವಾದಂತಿದ್ದರೂ ಅವರು ಕೇವಲ ಸಾಧಾರಣ ಮನುಷ್ಯರೆಂದು ತಿಳಿಯಬೇಡ. ಅವರು ಯಾವಾಗ ಹೊರಗೆ ಹೋಗುವರೊ ಆಗ ಜನರಲ್ಲಿ ಆಧ್ಯಾತ್ಮಿಕ ಜಾಗೃತಿಯನ್ನುಂಟುಮಾಡುವರು. ಅನಂತ ಧಾರ್ಮಿಕ ಭಾವನೆಗಳ ಮೂರ್ತಿಮತ್ತಾದ ಶ್ರೀ ರಾಮಕೃಷ್ಣರ ಆಧ್ಯಾತ್ಮಿಕ ದೇಹದ ಭಾಗಗಳು ಅವರೆಂದು ತಿಳಿ. ನಾನು ಅವರನ್ನೆಲ್ಲಾ ಈ ದೃಷ್ಟಿಯಿಂದ ನೋಡುತ್ತೇನೆ. ಉದಾಹರಣೆಗೆ ಇಲ್ಲಿರುವ ಸ್ವಾಮಿ ಬ್ರಹ್ಮಾನಂದರನ್ನು ನೋಡು — ಅವರಲ್ಲಿರವಷ್ಟು ಆಧ್ಯಾತ್ಮಿಕತೆ ನನ್ನಲ್ಲಿಯೂ ಇಲ್ಲ. ಶ್ರೀ ರಾಮಕೃಷ್ಣರು ಅವರನ್ನು ತಮ್ಮ ಆಧ್ಯಾತ್ಮಿಕ ಪುತ್ರರೆಂದು ಭಾವಿಸಿ ಅವರೊಡನೆಯೆ ಎಲ್ಲ ವ್ಯವಹಾರದಲ್ಲಿಯೂ ಬೆರೆಯುತ್ತಿದ್ದರು. ಅವರು ನಮ್ಮ ಮಠದ ಆಭರಣ — ನಮ್ಮ ರಾಜ. ಹಾಗೆಯೇ ಪ್ರೇಮಾನಂದ, ತುರಿಯಾನಂದ, ತ್ರಿಗುಣಾತೀತ, ಅಖಂಡಾನಂದ, ಶಾರದಾ

ನಂದ, ರಾಮಕೃಷ್ಣಾನಂದ, ಸುಬೋಧಾನಂದ ಮತ್ತಿತರರು. ನೀನು ಪ್ರಪಂಚದ ಯಾವ ಕಡೆ ಬೇಕಾದರೂ ಹುಡುಕಿ ನೋಡು, ಇಷ್ಟೊಂದು ಆಧ್ಯಾತ್ಮಿಕತೆ, ದೇವರಲ್ಲಿ ಶ್ರದ್ಧೆ ಇರುವವರು ಸಿಗುವುದು ದುರ್ಲಭ. ಅವರಲ್ಲಿ ಒಬ್ಬೊಬ್ಬರೂ ಆಧ್ಯಾತ್ಮಿಕ ಶಕ್ತಿಯ ಕೇಂದ್ರ. ಯೋಗ್ಯಕಾಲದಲ್ಲಿ ಆ ಶಕ್ತಿ ವಿಕಾಸಗೊಳ್ಳುವುದು.''

ಶಿಷ್ಯ ಆಶ್ಚರ್ಯದಿಂದೆಲ್ಲವನ್ನೂ ಕೇಳಿಕೊಂಡ. ಸ್ವಾಮಿಜಿ ಮತ್ತೂ ಹೇಳಿದರು: "ಆದರೆ ನಿಮ್ಮ ಊರಿನ ಕಡೆಯಿಂದ ನಾಗಮಹಾಶಯರು ಹೊರತು ಮತ್ತಾರೂ ಶ್ರೀ ರಾಮಕೃಷ್ಣರ ಬಳಿಗೆ ಬರಲಿಲ್ಲ. ಶ್ರೀ ರಾಮಕೃಷ್ಣರನ್ನು ಸಂದರ್ಶಿಸಿದ ಕೆಲವರು ಅವರ ಮಹತ್ವವನ್ನು ಅರಿಯಲಾರದವರಾಗಿದ್ದರು.'' ನಾಗಮಹಾಶಯರ ಯೋಚನೆ ಬಂದೊಡನೆ ಸ್ವಾಮಿಜಿ ಕೊಂಚಹೊತ್ತು ಮೌನವಾಗಿದ್ದರು. ಅವರಿನ್ನೂ ಕಾಲವಾಗಿ ೪-೫ ತಿಂಗಳಾಗಿತ್ತು. ಒಮ್ಮೆ ನಾಗಮಹಾಶಯರ ಮನೆಯಲ್ಲಿ ಗಂಗೆಯುದ್ಭವವಾದ ವಿಷಯವನ್ನು ಸ್ವಾಮಿಜಿ ಕೇಳಿದ್ದರು. ಅದನ್ನು ಜ್ಞಾಪಿಸಿಕೊಂಡು ಶಿಷ್ಯನನ್ನು ಕುರಿತು "ಆ ಘಟನೆ ಹೇಗೆ ನಡೆಯಿತು? ಅದರ ವಿಚಾರ ಹೇಳು'' ಎಂದರು.

ಶಿಷ್ಯ:— ಕೇವಲ ಆ ವಿಷಯ ನಾನು ಕೇಳಿದ್ದೇನೆಯೇ ಹೊರತು ಕಣ್ಣಾರ ನೋಡಲಿಲ್ಲ. ಮಹಾ ವಾರುಣಿಯೋಗದಲ್ಲಿ ನಾಗಮಹಾಶಯರು ತಂದೆಯೊಡನೆ ಕಲ್ಕತ್ತೆಗೆ ಹೊರಟರಂತೆ, ಆದರೆ ಹೊಗೆ ಬಂಡಿಯಲ್ಲಿ ಸ್ಥಳ ಸಿಗದ ಕಾರಣ ನಾರಾಯಣಗಂಜಿನಲ್ಲಿ ನಾಲ್ಕೈದು ದಿನಗಳು ತಂಗಬೇಕಾಯಿತಂತೆ. ಆದರೂ ವಿಫಲರಾಗಿ ಮನೆಗೆ ಹಿಂತಿರುಗಿದರು. ಆಗ ನಾಗಮಹಾಶಯರು ತಮ್ಮ ತಂದೆಗೆ "ಮನಸ್ಸು ಪರಿಶುದ್ಧವಾಗಿದ್ದರೆ ಗಂಗೆಯೇ ಪ್ರತ್ಯಕ್ಷಳಾಗುವಳು'' ಎಂದರಂತೆ. ನಂತರ ಆ ಪವಿತ್ರಸ್ನಾನ ಮಾಡುವ ಗಳಿಗೆ ಸಮೀಪಿಸಿದೊಡನೆಯೆ ಒಂದು ನೀರಿನ ಚಿಲುಮೆ ಅವರ ಅಂಗಳದ ನೆಲವನ್ನು ಭೇದಿಸಿಕೊಂಡು ಬಂದಿತು. ಅದನ್ನು ನೋಡಿದ ಹಲವರು ಇನ್ನೂ ಇರುವರು. ಆದರೆ ನಾನವರನ್ನು ನೋಡಿದ್ದು ಈ ಸಂಗತಿಯಾದ ಹಲವು ವರುಷಗಳ ಮೇಲೆ.

ಸ್ವಾಮಿಜಿ:— ಇದರಲ್ಲಿ ಹೊಸದೇನೂ ಇಲ್ಲ. ಅವರೊಬ್ಬ ಸತ್ಯಸಂಕಲ್ಪ ಮಹಾತ್ಮರು. ಅವರ ವಿಷಯವಾಗಿ ಈ ಘಟನೆ ಸೋಜಿಗವೇನಲ್ಲ ಎಂದು ನನ್ನ ಭಾವನೆ.

ಸ್ವಾಮೀಜಿ ಇದನ್ನು ಹೇಳುತ್ತಿರುವಾಗ ನಿದ್ರೆ ಬರುವ ಹಾಗಾಗಲು ಮಲಗಿದರು. ಆಗ ಶಿಷ್ಯ ಭೋಜನಮಾಡಲು ಕೆಳಗಿಳಿದು ಬಂದ.

---

## ಅಧ್ಯಾಯ ೪೫

**ಸ್ಥಳ:— ದೋಣಿಯಲ್ಲಿ ಹೋಗುತ್ತಿದ್ದಾಗ ವರ್ಷ:—ಕ್ರಿ. ಶ. ೧೯೦೨.**

ಒಂದು ದಿನ ಮಧ್ಯಾಹ್ನ ಕಲ್ಕತ್ತೆಯಲ್ಲಿ ಗಂಗಾತೀರದಲ್ಲಿ ಅಡ್ಡಾಡುತ್ತಿದ್ದಾಗ ಒಬ್ಬ ಸನ್ಯಾಸಿಯು ದೂರದಿಂದ ಅಹಿರಿಟೋಲಘಾಟಿನ ಕಡೆಗೆ ಬರುತ್ತಿರುವುದು ಶಿಷ್ಯನಿಗೆ ಕಾಣಿಸಿತು. ಹತ್ತಿರ ಬಂದಾಗ ಶಿಷ್ಯನಿಗೆ ಅವರು ಮತ್ತಾರೂ ಅಲ್ಲ, ತನ್ನ ಗುರು, ಸ್ವಾಮಿ ವಿವೇಕಾನಂದರೆಂದು ತಿಳಿಯಿತು. ಅವರ ಎಡಗೈಯಲ್ಲಿದ್ದ ಎಲೆಯ ಸಂಪುಟದಲ್ಲಿ ಹುರಿಗಾಳು ಇತ್ತು. ಅದನ್ನು ಚಿಕ್ಕ ಹುಡುಗನಂತೆ ತಿನ್ನುತ್ತಾ ತುಂಬಾ ಹರ್ಷದಿಂದ ದಾರಿಯಲ್ಲಿ ನಡೆದುಕೊಂಡು ಬರುತ್ತಿದ್ದರು. ಶಿಷ್ಯನ ಮುಂದೆ ನಿಂತಾಗ ಶಿಷ್ಯ ಪ್ರಣಾಮಮಾಡಿ ಅವರು ಕಲ್ಕತ್ತೆಗೆ ಬಂದ ಕಾರಣವನ್ನು ಕೇಳಿದನು.

ಸ್ವಾಮಿಜಿ:— ನಾನು ಕಾರ್ಯಾರ್ಥವಾಗಿ ಇಲ್ಲಿಗೆ ಬಂದಿದ್ದೆ. ನೀನೂ ಮಠಕ್ಕೆ ಬರುವೆಯೇನು? ಕೊಂಚ ಈ ಹುರಿಗಾಳನ್ನು ತಿನ್ನು. ಇದು ಉಪ್ಪು ಖಾರವಾಗಿ ರುಚಿಯಾಗಿದೆ.

ಶಿಷ್ಯನು ಸಂತೋಷದಿಂದ ಆ ತಿಂಡಿಯನ್ನು ತೆಗೆದುಕೊಂಡು ಸ್ವಾಮಿಜಿಯೊಡನೆ ಮಠಕ್ಕೆ ಹೋಗಲೊಪ್ಪಿದನು.

ಸ್ವಾಮಿಜಿ:— ಹಾಗಾದರೆ ದೋಣಿಯೊಂದನ್ನು ನೋಡು.

ಶಿಷ್ಯನು ದೋಣಿಯನ್ನು ಬಾಡಿಗೆಗೆ ಗೊತ್ತುಮಾಡಲು ಅವಸರದಿಂದ ಹೋದನು. ದೋಣಿಯವನು ಎಂಟು ಆಣೆಗಳನ್ನು ಕೇಳಿದಾಗ ದೋಣಿಯ ಬಾಡಿಗೆಯನ್ನು ಚೌಕಾಸಿ ಮಾಡುತ್ತಿದ್ದ ಶಿಷ್ಯನನ್ನು ಸ್ವಾಮಿಜಿ ನಿಲ್ಲಿಸಿ ತಾವೇ ಮುಂದೆ ಬಂದು "ನೀನೇಕೆ ಅವರೊಂದಿಗೆ ಚೌಕಾಸಿ ಮಾಡುತ್ತಿರುವೆ" ಎಂದು ಹೇಳಿ ದೋಣಿಯವನಿಗೆ "ಆಗಲಿ, ನಿನಗೆ ಎಂಟು ಆಣೆಯನ್ನೇ ಕೊಡುತ್ತೇನೆ" ಎಂದು ದೋಣಿಯನ್ನು ಹತ್ತಿದರು. ದೋಣಿ ಪ್ರವಾಹಕ್ಕೆದುರಾಗಿ ನಿಧಾನವಾಗಿ ಮುಂದುವರಿದು ಮಠವನ್ನು ಸೇರಲು

ಸುಮಾರು ಒಂದೂವರೆ ಗಂಟೆ ತೆಗೆದುಕೊಂಡಿತು. ದೋಣಿಯಲ್ಲಿ ಸ್ವಾಮಿಜಿಯೊಬ್ಬರೇ ಇದ್ದುದರಿಂದ ಶಿಷ್ಯನಿಗೆ ಎಲ್ಲಾ ವಿಷಯಗಳನ್ನೂ ಯಾವ ಅಡ್ಡಿಯೂ ಇಲ್ಲದೆ ನಿರಾತಂಕನಾಗಿ ಸ್ವಾಮಿಗಳೊಡನೆ ಮಾತ ನಾಡುವ ಸದವಕಾಶ ದೊರೆಯಿತು. ಶ್ರೀರಾಮಕೃಷ್ಣರ ಶಿಷ್ಯರ ಘನತೆ ಯನ್ನು ಹಾಡುವ ಒಂದು ಗೌರವಯುತ ಹಾಡನ್ನು ಶಿಷ್ಯನು ಇತ್ತೀಚೆಗೆ ರಚಿಸಿದ್ದನು. ಅದರ ವಿಷಯವಾಗಿ ಮಾತನಾಡುತ್ತಾ ಸ್ವಾಮಿಜಿ "ನೀನು ಶ್ಲೋಕದಲ್ಲಿ ಹೇಳಿರುವವರೆಲ್ಲ ಶ್ರೀರಾಮಕೃಷ್ಣರ ಅಂತರಂಗ ಶಿಷ್ಯ ರೆಂದು ನೀನು ಹೇಗೆ ಬಲ್ಲೆ ?" ಎಂದು ಕೇಳಿದರು.

ಶಿಷ್ಯ :—ಸ್ವಾಮಿಜಿ, ನಾನು ಶ್ರೀ ರಾಮಕೃಷ್ಣರ ಸನ್ಯಾಸಿ ಭಕ್ತರು ಮತ್ತು ಗೃಹಸ್ಥ ಭಕ್ತರೊಡನೆ ಇಷ್ಟೊಂದು ವರುಷಗಳು ಕಲೆತಿದ್ದೇನೆ. ನಾನು ಅವರ ಬಾಯಿಂದಲೇ ಅವರೆಲ್ಲಾ ಶ್ರೀರಾಮಕೃಷ್ಣರ ಶಿಷ್ಯರೆಂದು ಕೇಳಿರುವೆ.

ಸ್ವಾಮಿಜಿ :—ಹೌದು. ಅವರೆಲ್ಲಾ ಶ್ರೀ ರಾಮಕೃಷ್ಣರ ಭಕ್ತರು. ಆದರೆ ಎಲ್ಲರೂ ಶ್ರೀ ರಾಮಕೃಷ್ಣರ ಅತ್ಯಂತ ನಿಕಟವಾದ, ಅಂತರಂಗ ವರ್ಗಕ್ಕೆ ಸೇರಿದವರಲ್ಲ. ಕಾಶೀಪುರದ ತೋಟದಲ್ಲಿದ್ದಾಗ ಶ್ರೀರಾಮಕೃಷ್ಣರು ನಮಗೆ "ಇವರೆಲ್ಲಾ ನನ್ನ ಅಂತರಂಗ ಭಕ್ತರಲ್ಲವೆಂದು, ಜಗನ್ಮಾತೆ ನನಗೆ ತೋರಿಸಿದಳು" ಎಂದು ಹೇಳಿದ್ದರು. ಸ್ತ್ರೀ ಮತ್ತು ಪುರುಷ ಭಕ್ತರೆಲ್ಲರ ವಿಷಯವಾಗಿ ಅವರು ಹಾಗೆ ಹೇಳಿದರು.

ನಂತರ ಶ್ರೀ ರಾಮಕೃಷ್ಣರು ತಮ್ಮ ಶಿಷ್ಯ ವರ್ಗದಲ್ಲಿ ಹೇಗೆ ದೊಡ್ಡವರು ಸಣ್ಣವರೆಂಬ ಮಟ್ಟವನ್ನು ತೋರಿಸಿಕೊಡುತ್ತಿದ್ದರು ಎಂಬ ವಿಷಯವಾಗಿ ಮಾತನಾಡುತ್ತಾ ಸ್ವಾಮಿಗಳು ಶಿಷ್ಯನಿಗೆ ಗೃಹಸ್ಥ ಮತ್ತು ಸನ್ಯಾಸಿ ಜೀವನದ ಮಹತ್ತರವಾದ ಭೇದವನ್ನು ವಿಸ್ತಾರವಾಗಿ ವಿವರಿಸಿದರು.

ಸ್ವಾಮಿಜಿ :—ಯಾರು ಕಾಮಿನಿ ಕಾಂಚನಕ್ಕೆ ದಾಸರಾಗಿದ್ದಾರೊ ಅವರು ಶ್ರೀ ರಾಮಕೃಷ್ಣರನ್ನು ಸರಿಯಾಗಿ ಅರ್ಥಮಾಡಿಕೊಳ್ಳುವುದೇನು ? ಅದು ಎಂದಾದರೂ ಸಾಧ್ಯವೇನು ? ಅಂತಹ ಮಾತುಗಳನ್ನು ಕೊಂಚವೂ ನಂಬಬೇಡ. ಶ್ರೀ ರಾಮಕೃಷ್ಣರ ಭಕ್ತರಲ್ಲಿ ಅನೇಕರು ತಾವು "ಈಶ್ವರ ಕೋಟಿಗಳು, ಅಂತರಂಗ ಶಿಷ್ಯರು" ಎಂದು ಕೊಚ್ಚಿಕೊಳ್ಳುತ್ತಿರುವರು. ಅವರು ಆ ಉಚ್ಚತ್ಯಾಗ ಅಥವಾ ವೈರಾಗ್ಯವನ್ನು ಗ್ರಹಿಸಲು ಕೂಡ

ಅಶಕ್ತರು. ಅಂಥವರು ತಾವು ಅವರ ಅಂತರಂಗ ಭಕ್ತರೆಂದು ಹೇಳಿಕೊಳ್ಳು ತ್ತಿರುವರು. ಅವರು ತ್ಯಾಗಚಕ್ರವರ್ತಿ (ಶಿರೋಮಣಿ) ಗಳಾಗಿದ್ದರು. ಅವರ ಕೃಪಾಕಟಾಕ್ಷಬಿದ್ದ ಯಾವನಾದರೂ ಕಾಮಿನಿಕಾಂಚನ ಭೋಗ ದಲ್ಲಿ ತನ್ನ ಜೀವನವನ್ನು ಕಳೆಯಲು ಸಾಧ್ಯವೆ?

ಶಿಷ್ಯ:—ಹಾಗಾದರೆ, ಸ್ವಾಮಿಜಿ, ದಕ್ಷಿಣೇಶ್ವರದಲ್ಲಿದ್ದಾಗ ಅವರ ಹತ್ತಿರ ಬಂದವರಾರೂ ಅವರ ಭಕ್ತರಲ್ಲವೆ?

ಸ್ವಾಮಿಜಿ:—ಹಾಗೆಂದವರಾರು? ಯಾರು ಯಾರು ಶ್ರೀ ರಾಮ ಕೃಷ್ಣರ ಹತ್ತಿರ ಹೋಗಿದ್ದರೊ ಅವರೆಲ್ಲಾ ಆಧ್ಯಾತ್ಮಿಕತೆಯಲ್ಲಿ ಮುಂದು ವರಿದಿರುವರು, ಮುಂದುವರಿಯುತ್ತಿರುವರು, ಮುಂದುವರಿಯುವರು. ಹಿಂದಿನ ಕಲ್ಪದಲ್ಲಿ ಪರಿಪೂರ್ಣತೆ ಪಡೆದ ಋಷಿಗಳು ಮನುಷ್ಯದೇಹಧಾರಣೆ ಮಾಡಿ ಅವತಾರಪುರುಷರೊಡನೆ ಈ ಭೂಮಿಗೆ ಬರುವರು. ಅವರೇ ದೇವನ ಒಡನಾಡಿಗಳು. ಭಗವಂತನು ಅವರ ಮೂಲಕ ಕೆಲಸಮಾಡಿ ತನ್ನ ಧರ್ಮವನ್ನು ಪ್ರಚಾರಮಾಡುವನು. ಯಾರು ಇತರರಿಗಾಗಿ ತಮ್ಮ ಸರ್ವಸ್ವವನ್ನೂ ತ್ಯಾಗಮಾಡುವರೊ, ಯಾರು ಭೋಗಲಾಲಸೆಯನ್ನೆಲ್ಲಾ ತಿರಸ್ಕರಿಸಿ ಬಿಟ್ಟು ತಮ್ಮ ಜೀವಮಾನವನ್ನೆಲ್ಲಾ ಜೀವಿಗಳ ಉದ್ಧಾರ ಕ್ಕಾಗಿ ಜಗತ್ಕಲ್ಯಾಣಕ್ಕಾಗಿ ಅರ್ಪಿಸುವರೊ, ಅವರು ಮಾತ್ರ ಅವತಾರ ಪುರುಷರ ಸಹಚರರೆಂದು ತಿಳಿ. ಜೀಸಸ್ ಶಿಷ್ಯರೆಲ್ಲಾ ಸನ್ಯಾಸಿಗಳು. ಶಂಕರ, ರಾಮಾನುಜ, ಶ್ರೀ ಚೈತನ್ಯ ಮತ್ತು ಬುದ್ಧ ಇವರ ಕೃಪೆಗೆ ನೇರವಾಗಿ ಪಾತ್ರವಾದವರು ಸರ್ವಪರಿತ್ಯಾಗಿಗಳಾದ ಸನ್ಯಾಸಿಗಳು. ಇಂತಹ ಮುದೆ ಹೊಂದಿದವರೇ ಜಗತ್ತಿಗೆಲ್ಲಾ ಬ್ರಹ್ಮವಿದ್ಯೆಯನ್ನು ತಮ್ಮ ಶಿಷ್ಯಪರಂಪರೆ ಯಿಂದ ಪ್ರಚಾರಮಾಡಿದವರು. ಕಾಮಿನಿಕಾಂಚನಕ್ಕೆ ದಾಸನಾಗಿರುವ ಮನುಷ್ಯ ಮತ್ತೊಬ್ಬನನ್ನು ಮುಕ್ತನನ್ನಾಗಿ ಮಾಡಿರುವುದನ್ನು ಅಥವಾ ದೇವರ ಹಾದಿಯನ್ನು ತೋರಿಸಬಲ್ಲವನಾಗಿರುವನೆಂಬುದನ್ನು ನೀನು ಎಲ್ಲಿ ಯಾದರೂ, ಯಾವಾಗಲಾದರೂ ಕೇಳಿರುವೆಯೇನು? ತಾನೇ ಬದ್ಧನಾಗಿರು ವಾಗ ಇತರರನ್ನು ಮುಕ್ತರನ್ನಾಗಿ ಮಾಡಲು ಹೇಗೆ ಸಾಧ್ಯ? ವೇದ, ವೇದಾಂತ, ಇತಿಹಾಸ, ಪುರಾಣ ಯಾವುದರಲ್ಲಿ ನೋಡಿದರೂ ಕೇವಲ ಸನ್ಯಾಸಿಗಳೇ ಎಲ್ಲಾ ಯುಗಗಳಲ್ಲೂ ಧರ್ಮಬೋಧಕರಾಗಿದ್ದರೆಂಬುದನ್ನು ನೋಡುವೆ. ಇತಿಹಾಸ ಪುನರಾವೃತ್ತಿಯಾಗುವುದು. ಈಗಲೂ ಹಾಗೆಯೇ ಆಗುವುದು. ಸರ್ವಧರ್ಮಸಮನ್ವಯಾಚಾರ್ಯರಾದ ಶ್ರೀ ರಾಮಕೃಷ್ಣರ

ಸಮರ್ಥ ಸನ್ಯಾಸಿ ಮಕ್ಕಳು ಎಲ್ಲೆಡೆಯಲ್ಲಿಯೂ ಮಾನವರ ಗುರುಗಳೆಂದು ಗೌರವಿಸಲ್ಪಡುವರು. ಇತರರ ಮಾತು ಪೊಳ್ಳುಧ್ವನಿಯಂತೆ ಗಾಳಿಯಲ್ಲಿ ವ್ಯರ್ಥವಾಗುವುದು. ಮಠದ ಸ್ವಾರ್ಥತ್ಯಾಗಿಗಳಾದ ಸನ್ಯಾಸಿಗಳು ಧಾರ್ಮಿಕ ಭಾವನೆಗಳ ಕೇಂದ್ರವಾಗಿ, ಅವುಗಳನ್ನು ಹರಡುವರು. ನಿನಗೆ ಅರ್ಥವಾಯಿತೆ ?

ಶಿಷ್ಯ:—ಹಾಗಾದರೆ ಶ್ರೀ ರಾಮಕೃಷ್ಣರ ಗೃಹಸ್ಥ ಭಕ್ತರು ಅವರ ವಿಷಯವಾಗಿ ವಿಧವಿಧವಾಗಿ ಪ್ರಚಾರಮಾಡುತ್ತಿರುವುದು ನಿಜವಲ್ಲ ವೇನು ?

ಸ್ವಾಮಿಜಿ :—ಅವರು ಹೇಳುವುದೆಲ್ಲ ಸಂಪೂರ್ಣವಾಗಿ ಸುಳ್ಳೆಂದು ಹೇಳಲಾಗುವುದಿಲ್ಲ. ಆದರೆ ಅವರು ಶ್ರೀ ರಾಮಕೃಷ್ಣರ ವಿಷಯವಾಗಿ ಹೇಳುತ್ತಿರುವುದೆಲ್ಲಾ ಪಕ್ಷಪಾತವುಳ್ಳ ಸತ್ಯ. ಪ್ರತಿಯೊಬ್ಬರೂ ಅವರವರ ಯೋಗ್ಯತೆಗೆ ತಕ್ಕಂತೆ ಶ್ರೀ ರಾಮಕೃಷ್ಣರನ್ನು ಅರ್ಥಮಾಡಿಕೊಂಡಿದ್ದಾರೆ. ಹಾಗೆ ಅವರ ವಿಷಯವಾಗಿ ಚರ್ಚಿಸುತ್ತಿರುವರು. ಹೀಗೆ ಮಾಡುವುದರಲ್ಲಿ ಕೆಟ್ಟದ್ದೇನೂ ಇಲ್ಲ. ಆದರೆ ಅವರ ಯಾವ ಭಕ್ತನೇ ಆಗಲಿ ತಾನು ಅವ ರನ್ನು ಅರ್ಥಮಾಡಿಕೊಂಡಿರುವುದೇ ಸತ್ಯ, ಎಂದು ನಿಷ್ಕರ್ಷಿಸಿದರೆ ಅಂಥ ವನ ವಿಷಯವಾಗಿ ಕನಿಕರ ಪಡಬೇಕಷ್ಟೆ. ಕೆಲವರು ಶ್ರೀ ರಾಮಕೃಷ್ಣರು ಒಬ್ಬ ತಾಂತ್ರಿಕರೆಂದು, ಕೌಲರೆಂದೂ, ಮತ್ತೆ ಕೆಲವರು ನಾರದೀಯ ಭಕ್ತಿಯನ್ನು ಹರಡಲು ಅವತರಿಸಿರುವ ಶ್ರೀ ಚೈತನ್ಯರೆಂದೂ, ಇನ್ನು ಕೆಲ ವರು ಅವರು ಸಾಧನೆಗಳನ್ನು ಮಾಡಿದುದರಿಂದ ಅವರು ಅವತಾರಪುರುಷ ರಲ್ಲವೆಂದೂ, ಮತ್ತೂ ಕೆಲವರು ಸನ್ಯಾಸ ತೆಗೆದುಕೊಳ್ಳುವುದು ಅವರ ಉಪದೇಶಕ್ಕೆ ವಿರುದ್ಧವೆಂದೂ ಅಭಿಪ್ರಾಯ ಪಡುವರು. ಈ ಮಾತು ಗಳನ್ನು ನೀನು ಅವರ ಗೃಹಸ್ಥ ಭಕ್ತರಿಂದ ಕೇಳಿರಬಹುದು. ಈ ಪಕ್ಷಪಾತ ದೃಷ್ಟಿಯುಳ್ಳ ಅಭಿಪ್ರಾಯಕ್ಕೆ ಕೊಂಚವೂ ಗಮನ ಕೊಡಬೇಡ. ನಮ್ಮ ಇಡೀ ಜೀವಮಾನವನ್ನೆಲ್ಲಾ ಸಾಧನೆಯಲ್ಲಿ ಕಳೆದರೂ ಅವರೇನೆಂಬುದನ್ನು, ಹಿಂದಿನ ಎಷ್ಟೊಂದು ಅವತಾರಗಳು ಅವರಲ್ಲಿ ಮೂರ್ತಿಮತ್ತಾಗಿದ್ದತ್ತೆಂದು ಗ್ರಹಿಸಲಾರದೆ ಹೋದೆವು. ಅದಕ್ಕೇ ಅವರ ವಿಚಾರ ಮಾತನಾಡು ವಾಗ ಬಹು ಎಚ್ಚರಿಕೆಯಿಂದ, ಹಿಡಿತದಿಂದ ಮಾತನಾಡಬೇಕು. ಅವರ ವರ ಯೋಗ್ಯತಾನುಸಾರ ಅವರ ಭಾವನೆಗಳನ್ನು ಗ್ರಹಿಸಿದ್ದೇವೆ. ಅವರ ಆಧ್ಯಾತ್ಮಿಕ ತುಂಬುಸಾಗರದ ಒಂದು ತುಂತುರನ್ನು ಸಾಕ್ಷಾತ್ಕರಿಸಿಕೊಂಡರೆ

ಸಾಕು, ಮಾನವ ದೇವನಾಗುತ್ತಾನೆ. ಪ್ರಪಂಚದ ಇತಿಹಾಸದಲ್ಲಿ ಮತ್ತೊಮ್ಮೆ ಎಲ್ಲಿಯೂ ಇಂತಹ ವಿಶ್ವಭಾವನೆಗಳ ಸಂಯೋಗ ಲಭಿಸುವುದಿಲ್ಲ. ಇದರಿಂದಲೇ ನೀನು ಶ್ರೀ ರಾಮಕೃಷ್ಣರು ಎಂತಹ ಮನುಷ್ಯರಾಗಿ ಹುಟ್ಟಿದ್ದರೆಂಬುದನ್ನು ಅರ್ಥಮಾಡಿಕೊ. ಅವರು ತಮ್ಮ ಸನ್ಯಾಸಿ ಶಿಷ್ಯರಿಗೆ ಶಿಕ್ಷಣಕೊಡುತ್ತಿದ್ದಾಗ ತಮ್ಮ ಪೀಠದಿಂದೆದ್ದು ಯಾರಾದರೂ ಗೃಹಸ್ಥರು ಅಲ್ಲಿಗೆ ಬರುತ್ತಿರುವರೋ ಎಂದು ಸರಿಯಾಗಿ ನೋಡುತ್ತಿದ್ದರು. ಯಾರೂ ಕಾಣದಿದ್ದಲ್ಲಿ ಆವೇಶಪೂರಿತ ಮಾತುಗಳಿಂದ ನಮಗೆ ತ್ಯಾಗ ಮತ್ತು ತಪಸ್ಸಿನ ಮಹಿಮೆಯನ್ನು ವರ್ಣಿಸುತ್ತಿದ್ದರು. ಇದರ ಪರಿಣಾಮದಿಂದುಂಟಾದ ತೀಕ್ಷ್ಣವೈರಾಗ್ಯದ ಶಕ್ತಿಯಿಂದಲೇ ನಾವು ಪ್ರಪಂಚವನ್ನು ತ್ಯಜಿಸಿ ಪ್ರಾಪಂಚಿಕತೆಗೆ ವಿಮುಖರಾದೆವು.

ಶಿಷ್ಯ:—ಅವರು ಸನ್ಯಾಸಿಗಳಿಗೂ ಮತ್ತು ಗೃಹಸ್ಥರಿಗೂ ಅಷ್ಟೊಂದು ಭೇದ ಮಾಡುತ್ತಿದ್ದರೆ!

ಸ್ವಾಮಿಜಿ:—ಗೃಹಸ್ಥ ಭಕ್ತರನ್ನೇ ಆ ವಿಷಯವಾಗಿ ಕೇಳಿ ತಿಳಿದುಕೊ. ನೀನೇ ಯೋಚಿಸಿ ನೋಡು, ಯಾರು ಹೆಚ್ಚೆಂದು–ದೇವರ ಸಾಕ್ಷಾತ್ಕಾರಕ್ಕಾಗಿ ಪ್ರಾಪಂಚಿಕ ಜೀವನದ ಎಲ್ಲಾ ಭೋಗಗಳನ್ನೂ ತ್ಯಜಿಸಿ ಬೆಟ್ಟಗಳಲ್ಲಿ, ಕಾಡುಗಳಲ್ಲಿ, ತೀರ್ಥ ಆಶ್ರಮಗಳಲ್ಲಿ ಸಾಧನೆಮಾಡುತ್ತಾ ಜೀವನವನ್ನು ಕಳೆಯುತ್ತಿರುವರು ಹೆಚ್ಚೊ ಅಥವಾ ಕೇವಲ ದೇವರ ಹೆಸರು ಮತ್ತು ನೆನಪುಗಳ ಕೊಂಡಾಡುತ್ತಾ ಪ್ರಪಂಚದ ಮಾಯೆಯಲ್ಲಿ ಮುಳುಗಿ ಏಳಲಾರದೇ ಇರುವವರು ಹೆಚ್ಚೊ? ಯಾರು ವಿಶ್ವಜನತೆಯ ಸೇವೆಗಾಗಿ, ಅವರನ್ನು ಆತ್ಮವೆಂದು ಭಾವಿಸಿ ಮುಂದೆ ಬರುವರೊ, ಯಾರು ಸಣ್ಣ ವಯಸ್ಸಿನಿಂದಲೂ ಬ್ರಹ್ಮಚರ್ಯೆಯಲ್ಲಿದ್ದು, ತ್ಯಾಗ ವೈರಾಗ್ಯಗಳ ಮೂರ್ತಿವೆತ್ತಂತಿರುವರೊ ಅಂಥವರು ಹೆಚ್ಚೊ ಅಥವಾ ನೊಣಗಳಂತೆ ಒಮ್ಮೆ ಪುಷ್ಪದಮೇಲೆ ಮರುಗಳಿಗೆಯೆ ಗೊಬ್ಬರದ ಗುಂಡಿಯ ಮೇಲೆ ಕುಳಿತುಕೊಳ್ಳುವರೊ ಅಂಥವರು ಹೆಚ್ಚೊ? ನೀನೆ ಇದನ್ನು ಯೋಚಿಸಿ ನಿರ್ಧರಿಸು.

ಶಿಷ್ಯ:— ಆದರೆ ಸ್ವಾಮಿಜಿ, ಯಾರು ಭಗವತ್ಕೃಪೆಗೆ ಪಾತ್ರರಾಗಿದ್ದಾರೊ ಅವರು ಈ ಪ್ರಪಂಚವನ್ನು ಹೇಗೆ ನೋಡುವರು? ಅವರು ಗೃಹಸ್ಥರಾಗಿಯೆ ಉಳಿಯಲಿ ಅಥವಾ ಸನ್ಯಾಸಿಗಳಾಗಲಿ— ಅದರಿಂದೇನೂ ಬಾಧಕವಿಲ್ಲ ಎಂದು ನನಗನ್ನಿಸುವುದು.

ಸ್ವಾಮಿಜಿ:— ಯಾರು ನಿಜವಾಗಿ ಆತನ ಕೃಪೆಯನ್ನು ಪಡೆದಿರುವರೊ ಅಂಥವರು ಪ್ರಾಪಂಚಿಕತೆಗೆ ಎಂದೂ ವಶರಾಗಿರುವುದಿಲ್ಲ. ಆತನ ಕೃಪೆಯ ನಿಜವಾದ ಒರೆಗಲ್ಲೆ — ಕಾಮಿನಿಕಾಂಚನ ವಿರಕ್ತತೆ. ಯಾವ ಮನುಷ್ಯನ ಜೀವನದಲ್ಲಿ ಇದು ಬಂದಿಲ್ಲವೊ ಅಂತಹವನಿಗೆ ಖಂಡಿತವಾಗಿಯೂ ಭಗವತ್ಕೃಪೆ ಲಭಿಸಿಲ್ಲ.

ಮೇಲಿನ ಸಂಭಾಷಣೆ ಹೀಗೆ ಕೊನೆಗಂಡನಂತರ ಬೇರೊಂದು ವಿಷಯವನ್ನೆತ್ತುತ್ತಾ ಶಿಷ್ಯ ಸ್ವಾಮಿಜಿಯವರನ್ನು ಕುರಿತು "ಸ್ವಾಮಿಜಿ, ನೀವು ಇಲ್ಲಿ ಮತ್ತು ಪರದೇಶಗಳಲ್ಲೆಲ್ಲಾ ಮಾಡಿದ ಕೆಲಸದ ಫಲಿತಾಂಶವೇನು?

ಸ್ವಾಮಿಜಿ:— ನಾನು ಮಾಡಿರುವುದರಲ್ಲಿ ಎಲ್ಲೋ ಕೊಂಚ ಭಾಗ ಮಾತ್ರ ಈಗ ಪ್ರಕಾಶಕ್ಕೆ ಬಂದಿದೆ, ಅಷ್ಟೆ. ಯೋಗ್ಯಕಾಲದಲ್ಲಿ ಇಡೀ ಪ್ರಪಂಚವೇ ಶ್ರೀ ರಾಮಕೃಷ್ಣರ ಸಾರ್ವತ್ರಿಕ ಉದಾರ ಭಾವಗಳನ್ನು ಅಂಗೀಕರಿಸುವುದು. ಈಗ ಆಗಿರುವುದು ಕೇವಲ ಆರಂಭ ಮಾತ್ರ. ಈ ಪ್ರವಾಹ ಮುಂದೆ ಎಲ್ಲರನ್ನೂ ಕೊಚ್ಚಿಕೊಂಡು ಹೋಗುವುದು.

ಶಿಷ್ಯ:— ದಯವಿಟ್ಟು ನನಗೆ ಶ್ರೀರಾಮಕೃಷ್ಣರ ವಿಷಯವಾಗಿ ಇನ್ನೂ ಹೇಳಿ. ನಿಮ್ಮ ಬಾಯಿಂದ ಅವರ ವಿಷಯ ಕೇಳಲು ನನಗೆ ತುಂಬಾ ಇಷ್ಟ.

ಸ್ವಾಮಿಜಿ:— ನೀನು ಯಾವಾಗ ನೋಡಿದರೂ ಅವರ ವಿಷಯ ಎಷ್ಟೊಂದು ವಿಚಾರವನ್ನು ಕೇಳುತ್ತಿರುವೆಯಲ್ಲವೆ? ಇನ್ನೇನು ಬೇಕು? ಅವರನ್ನು ಅವರೇ ಸರಿಗಟ್ಟಬೇಕು. ಅವರನ್ನು ಮೀರಿಸಿದವರು ಯಾರಾದರೂ ಇರುವರೆ?

ಶಿಷ್ಯ:—ಅವರನ್ನು ನೋಡುವ ಭಾಗ್ಯವಿಲ್ಲದ ನಮಗೆ ಯಾವ ಹಾದಿ ಇದೆ?

ಸ್ವಾಮಿಜಿ:— ಪ್ರತ್ಯಕ್ಷವಾಗಿ ಅವರ ಕೃಪೆಗೆ ಪಾತ್ರರಾಗಿರುವ ಈ ಸಾಧುಗಳ ಸಹವಾಸಭಾಗ್ಯ ನಿನಗೆ ಲಭಿಸಿದೆ. ಅಂದಮೇಲೆ ನೀನು ಹೇಗೆ ಅವರನ್ನು ನೋಡಿಲ್ಲವೆಂದು ಹೇಳುವೆ. ಅವರು ತಮ್ಮ ಸನ್ಯಾಸಿ ಶಿಷ್ಯರಲ್ಲೇ ಪ್ರತ್ಯಕ್ಷರಾಗಿದ್ದಾರೆ. ಅವರನ್ನು ಸೇವೆಮಾಡುವುದರ ಮೂಲಕ, ಸತ್ಕಾಲದಲ್ಲಿ ನಿನ್ನ ಹೃದಯದಲ್ಲೆ ಅವರು ಪ್ರತ್ಯಕ್ಷರಾಗುವರು. ಯೋಗ್ಯ ಕಾಲದಲ್ಲಿ ನೀನು ಎಲ್ಲವನ್ನು ಸಾಧಿಸುವೆ.

ಶಿಷ್ಯ:— ಆದರೆ ಸ್ವಾಮಿಜಿ, ನೀವು ಅವರ ಕೃಪೆಗೆ ಪಾತ್ರರಾದವರ

ವಿಚಾರವನ್ನೇ ಮಾತನಾಡುತ್ತಿರುವಿರಿ. ಆದರೆ ಎಂದೂ ಅವರು ನಿಮ್ಮ ವಿಚಾರ ಏನು ಹೇಳುತ್ತಿದ್ದರೆಂಬುದನ್ನು ಹೇಳುವುದೇ ಇಲ್ಲ.

ಸ್ವಾಮಿಜಿ.— ನನ್ನ ವಿಚಾರ ನಾನು ಏನು ಹೇಳಲಿ? ನೋಡು ಮಗು ನಾನು ಅವರ ಭೂತಗಳಲ್ಲೊಂದಾಗಿರಬೇಕು. ಪ್ರತ್ಯಕ್ಷ ಅವರ ಎದುರಿನಲ್ಲಿಯೇ ನಾನದೆಷ್ಟೋ ಬಾರಿ ಅವರನ್ನು ನಿಂದಿಸುತ್ತಿದ್ದೆ. ಅದನ್ನು ಕೇಳಿ ಅವರು ನಗುತ್ತಿದ್ದರು.

ಹೀಗೆ ಹೇಳುತ್ತಾ ಸ್ವಾಮಿಗಳು ಗಂಭೀರ ಯೋಚನೆಯಲ್ಲಿ ಮಗ್ನರಾಗಿ, ನದಿಯ ಕಡೆ ನೋಡುತ್ತಾ ಕೊಂಚ ಹೊತ್ತು ಸ್ಥಿರವಾಗಿ ಕುಳಿತುಕೊಂಡಿದ್ದರು. ಕೊಂಚ ಹೊತ್ತಿನಲ್ಲಿಯೇ ಸಾಯಂಕಾಲವಾಗಿ ದೋಣಿಯೂ ಮಠವನ್ನು ತಲಪಿತು. ಸ್ವಾಮಿಜಿ ಮೆಲ್ಲಮೆಲ್ಲಗೆ ಹಾಡನ್ನು ಹಾಡಿಕೊಳ್ಳುತ್ತಿದ್ದರು: "ಈಗ ಜೀವನದ ಸಂಜೆಯಲ್ಲಿ, ಮಗುವನ್ನು ಮನೆಗೆ ಹಿಂತಿರುಗಿ ಕರೆದುಕೊ."

ಹಾಡು ಮುಗಿದಮೇಲೆ ಸ್ವಾಮಿಜಿ "ನಿಮ್ಮ ಕಡೆಯಲ್ಲಿ (ಪೂರ್ವ ಬಂಗಾಳ) ಮಂಜುಳ ಧ್ವನಿಯಿಂದ ಹಾಡುವರು ಹುಟ್ಟೇ ಇಲ್ಲ. ಗಂಗಾ ಮಾತೆಯ ಜಲವನ್ನು ಪಾನಮಾಡಿದಲ್ಲದೆ ಸುಮಧುರ ಕಂಠ ಬರುವುದಿಲ್ಲ. ಬಾಡಿಗೆಯನ್ನು ಕೊಟ್ಟಾದಮೇಲೆ ಸ್ವಾಮಿಜಿ ದೋಣಿಯಿಂದಿಳಿದು ತಮ್ಮ ಕೋಟನ್ನು ಬಿಚ್ಚಿ ಮಠದ ಪಶ್ಚಿಮ ವರಾಂಡದಲ್ಲಿ ಕುಳಿತುಕೊಂಡರು. ಅವರ ಗೌರವವರ್ಣ ಜೊತೆಗೆ ಕಾವಿಬಟ್ಟೆ ಒಂದು ಸುಂದರ ನೋಟವನ್ನು ಕೊಡುತ್ತಿದ್ದವು.

---

## ಅಧ್ಯಾಯ ೪೬

**ಸ್ಥಳ:— ಬೇಲೂರು ಮಠ; ವರ್ಷ:— ಕ್ರಿ. ಶ. ೧೯೦೨.**

ಇಂದು ಆಶಾಢದ ಮೊದಲದಿನ. ಬಾಲಿಯಿಂದ ಶಿಷ್ಯನು ಸಂಜೆಗೆ ಮುಂಚೆಯೇ ಉಡುಪನ್ನು ಬದಲಾಯಿಸಲು ವೇಳೆಯಿಲ್ಲದ್ದರಿಂದ ಕಛೇರಿಯ ಉಡುಪಿನಲ್ಲಿಯೇ ಮಠಕ್ಕೆ ಬಂದಿದ್ದ. ಮಠಕ್ಕೆ ಬಂದು ಸ್ವಾಮಿಜಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಅವರ ಆರೋಗ್ಯದ ವಿಷಯ

ವಾಗಿ ಪ್ರಶ್ನಿಸಿದ. ಸ್ವಾಮಿಜಿ ತಾವು ಆರೋಗ್ಯವೆಂದು ಹೇಳಿ ಶಿಷ್ಯನ ಉಡುಪನ್ನು ನೋಡುತ್ತಾ "ನೀನು ಕೋಟು ಷರಾಯಿ ಹಾಕಿಕೊಂಡಿರುವೆ, ಕತ್ತಿನ ಪಟ್ಟಿಯನ್ನೇಕೆ ಹಾಕಿಕೊಂಡಿಲ್ಲ" ಎಂದು ಹೇಳಿ ಹತ್ತಿರವಿದ್ದ ಶಾರದಾನಂದರನ್ನು ಕರೆದು "ನಾಳೆ ನನ್ನ ಪೆಟ್ಟಿಗೆಯಿಂದ ಎರಡು ಕತ್ತಿನ ಪಟ್ಟಿಯನ್ನು ಇವನಿಗೆ ತೆಗೆದುಕೊಡು" ಎಂದರು. ಅವರ ಅಪ್ಪಣೆಗೆ ಶಾರದಾನಂದರು ಒಪ್ಪಿಕೊಂಡರು.

ನಂತರ ಶಿಷ್ಯ ತನ್ನ ಉಡುಪನ್ನು ಬದಲಾಯಿಸಿಕೊಂಡು ಸ್ವಾಮಿಗಳ ಹತ್ತಿರ ಬಂದಾಗ ಸ್ವಾಮಿಗಳು ಅವನನ್ನುದ್ದೇಶಿಸಿ "ನಮ್ಮ ದೇಶೀಯ ಉಡುಪು ಆಹಾರ ಮತ್ತು ಜೀವನದ ಕ್ರಮವನ್ನು ಬಿಡುವುದರಿಂದ ನಾವು ನಮ್ಮ ಜನಾಂಗದ ಧರ್ಮವನ್ನೇ ಕಳೆದುಕೊಳ್ಳುವೆವು. ನಾವು ಎಲ್ಲರಿಂದಲೂ ಕಲಿತುಕೊಳ್ಳಬಹುದು. ಆದರೆ ಯಾವುದನ್ನು ಕಲಿಯುವುದರಿಂದ ನಮ್ಮ ರಾಷ್ಟ್ರದ ವೈಶಿಷ್ಟ್ಯವನ್ನೇ ಕಳೆದುಕೊಳ್ಳುವೆವೊ ಅಂತಹುದರಿಂದ ನಮ್ಮ ಏಳಿಗೆಗೇನೂ ಸಹಾಯವಾಗುವುದಿಲ್ಲ ಅಲ್ಲದೆ ನಾವೂ ಅಧೋಗತಿಗಿಳಿಯುವೆವು.

ಶಿಷ್ಯ :—ಸ್ವಾಮಿಜಿ, ಮೇಲಿನ ಐರೋಪ್ಯ ಅಧಿಕಾರ ವರ್ಗ ಒಪ್ಪುವ ಉಡುಪನ್ನು ಧರಿಸದೆ ವಿಧಿಯಿಲ್ಲ.

ಸ್ವಾಮಿಜಿ :—ಯಾರೂ ಅದಕ್ಕೆ ಅಡ್ಡಿ ಬರುವುದಿಲ್ಲ. ನಿನ್ನ ಕೆಲಸದ ಹಿತಕ್ಕಾಗಿ ನೀನು ಆಫೀಸಿನಲ್ಲಿ ಆ ಬಗೆಯ ಉಡುಪನ್ನೇ ಧರಿಸುವೆ. ಆದರೆ ಮನೆಗೆ ಹಿಂತಿರುಗಿದಾಗ, ಹರಿದಾಡುವ ವಸ್ತ್ರ, ದೇಶೀಯ ಜುಬ್ಬ, ಹೆಗಲ ಮೇಲಿನ ಉತ್ತರೀಯ ಇವುಗಳನ್ನು ಧರಿಸಿದ ಅಚ್ಚ ಬಂಗಾಳಿ-ಬಾಬುವೇ ಆಗಿರಬೇಕು. ನಿನಗೆ ತಿಳಿಯಿತೆ?

ಶಿಷ್ಯ :—ತಿಳಿಯಿತು ಸ್ವಾಮಿಜಿ.

ಸ್ವಾಮಿಜಿ :—ನೀವು ಮನೆಮನೆಗೆ ಆಂಗ್ಲೇಯ ಜುಬ್ಬವನ್ನು ಧರಿಸಿ ಹೋಗುವಿರಿ. ಪಾಶ್ಚಾತ್ಯದೇಶದಲ್ಲಿ, ಹೀಗೆ ಬರೀ ಜುಬ್ಬ ಧರಿಸಿ ಜನರನ್ನು ಭೇಟಿ ಮಾಡಲು ಹೋದರೆ ಅದು ಸಭ್ಯ ಮನುಷ್ಯನ ವರ್ತನೆಯಲ್ಲ. ಹೀಗೆ ಹೋದರೆ ಅಲ್ಲಿ ನಗ್ನರಾಗಿ ಹೋದಂತೆ. ಜುಬ್ಬದ ಮೇಲೆ ಕೋಟನ್ನು ಹಾಕಿಕೊಂಡು ಹೋದ ಹೊರತು ನಿಮಗೆ ಯಾವ ಸಭ್ಯಗೃಹಸ್ಥನ ಮನೆಯಲ್ಲೂ ಸ್ವಾಗತ ದೊರಕಲಾರದು. ಈ ಉಡುಪಿನ ವಿಷಯ ಅನುಕರಿಸ ಹೋಗಿ ನೀವೆಂತಹ ಅಸಂಬದ್ಧತೆಯನ್ನು ಕಲಿತಿರುವಿರಿ! ಈಗಿನ ಕಾಲದ

ಯುವಕರು ಧರಿಸುವ ಉಡುಪು ಎಷ್ಟು ವಿಚಿತ್ರವಾಗಿದೆಯೆಂದರೆ ಅದು ಪಾಶ್ಚಾತ್ಯರ ಉಡುಪನ್ನೂ ಹೋಲುವುದಿಲ್ಲ, ಹಿಂದೂ ದೇಶೀಯರ ಉಡುಪನ್ನೂ ಹೋಲುವುದಿಲ್ಲ– ಅದೊಂದು ವಿಲಕ್ಷಣ ಸಂಯೋಗವಾಗಿದೆ.

ಹೀಗೆ ಮಾತನಾಡಿದ ಮೇಲೆ ಸ್ವಾಮಿಜಿ ನದಿ ತೀರದಲ್ಲಿ ಅಡ್ಡಾಡ ತೊಡಗಿದರು. ಶಿಷ್ಯನೊಬ್ಬನೇ ಅವರ ಜೊತೆಯಲ್ಲಿದ್ದನು. ಸ್ವಾಮಿಜಿಗಳನ್ನು ಆಧ್ಯಾತ್ಮಿಕ ಸಾಧನೆಯ ವಿಷಯವಾಗಿ ಏನನ್ನೋ ಕೇಳಬೇಕೆಂದು ಅನುಮಾನ ಪಡುತ್ತಿದ್ದನು.

ಸ್ವಾಮಿಜಿ:—ಏನನ್ನು ಯೋಚಿಸುತ್ತಿರುವೆ? ಅದನ್ನು ಹೊರಗೆಡಹು.

ಶಿಷ್ಯ ತುಂಬಾ ಸಂಕೋಚದಿಂದ ಹೇಳಿದ "ಸ್ವಾಮಿಜಿ, ಮನಸ್ಸು ಕೊಂಚ ಹೊತ್ತಿನಲ್ಲಿಯೇ ಏಕಾಗ್ರತೆ ಹೊಂದಿ ಅದರಿಂದ ನಾನು ಬೇಗ ಧ್ಯಾನದಲ್ಲಿ ಮುಳುಗುವಂತಹ ಯಾವುದಾದರೂ ರೀತಿಯನ್ನು ನೀವು ನನಗೆ ಹೇಳಿಕೊಟ್ಟರೆ ನನಗೆ ತುಂಬಾ ಉಪಕಾರವಾಗುವುದು. ನನ್ನ ಪ್ರಾಪಂಚಿಕ ಕರ್ತವ್ಯಗಳ ಮಧ್ಯೆ ಮನಸ್ಸನ್ನು ಸಾಧನೆಯಲ್ಲಿ ಸ್ಥಿರಗೊಳಿಸಲು ನನಗೆ ತುಂಬಾ ಕಷ್ಟವಾಗುವುದು."

ಸ್ವಾಮಿಗಳಿಗೆ ಶಿಷ್ಯನ ನಮ್ರಭಾವನೆಯನ್ನೂ ಆತನ ಆಸಕ್ತಿಯನ್ನೂ ನೋಡಿ ಹರ್ಷವುಂಟಾಯಿತು. ಅವರು ಪ್ರೇಮದಿಂದ ಹೇಳಿದರು "ಕೊಂಚ ಹೊತ್ತಿನಮೇಲೆ ನಾನು ಮಹಡಿಯಮೇಲೆ ಒಬ್ಬನೇ ಇದ್ದಾಗ ಬಾ. ನಾನು ಈ ವಿಚಾರ ನಿನ್ನೊಡನೆ ಮಾತನಾಡುವೆ" ಎಂದರು.

ಕೊಂಚ ಹೊತ್ತಿನಮೇಲೆ ಮಹಡಿಗೆ ಬಂದಾಗ ಸ್ವಾಮಿಗಳು ಪಶ್ಚಿಮ ಮುಖವಾಗಿ ಕುಳಿತು ಧ್ಯಾನನಿರತರಾಗಿದ್ದದ್ದನ್ನು ಶಿಷ್ಯನು ನೋಡಿದನು. ಅವರ ಮುಖದಲ್ಲಿ ಒಂದು ಅದ್ಭುತ ಭಾವವಿತ್ತು. ಅವರ ಇಡೀ ದೇಹ ಸಂಪೂರ್ಣವಾಗಿ ನಿಶ್ಚಲವಾಗಿತ್ತು. ಶಿಷ್ಯನು ಧ್ಯಾನದಲ್ಲಿದ್ದ ಸ್ವಾಮಿಗಳ ಈ ಸ್ಥಿತಿಯನ್ನು ನೋಡಿ ಸ್ತಂಭೀಭೂತನಾಗಿ ನಿಂತುಬಿಟ್ಟನು. ಬಹು ಹೊತ್ತು ಈ ರೀತಿ ಇದ್ದರೂ ಅವರಲ್ಲಿ ಬಾಹ್ಯಪ್ರಜ್ಞೆ ಕಾಣದಿರಲು ಶಿಷ್ಯನೂ ಹತ್ತಿರ ನಿಶ್ಶಬ್ದವಾಗಿ ಕುಳಿತುಕೊಂಡ. ಅರ್ಧಗಂಟೆಯಾದಮೇಲೆ ಸ್ವಾಮಿಗಳು ಬಾಹ್ಯಪ್ರಜ್ಞೆತಾಳುವ ಲಕ್ಷಣಗಳು ಕಂಡು ಬಂದುವು. ಅವರ ಜೋಡಿಸಿದ ಕೈಗಳು ಸಡಿಲವಾಗಿ ಕೆಲವು ನಿಮಿಷಗಳಲ್ಲಿಯೇ ಅವರು ಕಣ್ತೆರೆದು ಶಿಷ್ಯನನ್ನು ನೋಡಿ "ನೀನು ಯಾವಾಗ ಬಂದೆ?" ಎಂದು ಕೇಳಿದರು.

ಶಿಷ್ಯ:—ಈಗ ಕೊಂಚ ಹೊತ್ತಾಯಿತು.

ಸ್ವಾಮಿಜಿ:—ಒಳ್ಳೆಯದು ನನಗೊಂದು ಲೋಟ ನೀರನ್ನು ತಾ.

ಶಿಷ್ಯ ಬೇಗ ನೀರನ್ನು ತಂದು ಕೊಟ್ಟ. ಸ್ವಾಮಿಗಳು ಕೊಂಚ ಕುಡಿದು ಶಿಷ್ಯನನ್ನು ಲೋಟವನ್ನು ಸರಿಯಾದ ಸ್ಥಳದಲ್ಲಿಡಲು ಹೇಳಿದರು. ಶಿಷ್ಯನು ಇಟ್ಟುಬಂದು ಸ್ವಾಮಿಗಳ ಬಳಿ ಕುಳಿತುಕೊಂಡ.

ಸ್ವಾಮಿಜಿ:—ಈದಿನ ನಾನು ಗಾಢವಾದ ಧ್ಯಾನದಲ್ಲಿದ್ದೆ.

ಶಿಷ್ಯ:—ದಯವಿಟ್ಟು ನನಗೂ ನನ್ನ ಮನಸ್ಸೂ ಧ್ಯಾನದಲ್ಲಿ ಮುಳುಗುವಂತೆ ಹೇಳಿಕೊಡಿ.

ಸ್ವಾಮಿಜಿ:—ನಾನಾಗಲೇ ನಿನಗೆ ಎಲ್ಲಾ ರೀತಿಯನ್ನೂ ಹೇಳಿರುವೆ. ಅದರಂತೆ ನಿತ್ಯವೂ ಧ್ಯಾನಿಸು. ಯೋಗ್ಯಕಾಲದಲ್ಲಿ ನಿನಗೂ ಹಾಗೇ ಅನುಭವವಾಗುವುದು. ಈಗ ಹೇಳು, ನಿನಗೆ ಯಾವ ಬಗೆಯ ಸಾಧನೆ ಇಷ್ಟ?

ಶಿಷ್ಯ:—ಸ್ವಾಮಿಜಿ, ನಾನು ನಿತ್ಯವೂ ನೀವು ಹೇಳಿದಂತೆಯೇ ಸಾಧನೆ ಮಾಡುವೆ. ಆದರೂ ನನಗೆ ಗಾಢಧ್ಯಾನ ಬರುವುದಿಲ್ಲ. ಕೆಲವು ವೇಳೆ ನಾನು ಈ ರೀತಿ ಧ್ಯಾನ ಮಾಡುವುದು ನಿಷ್ಫಲವೆನ್ನಿಸುವುದು. ಆದ್ದರಿಂದ ನಾನು ಇನ್ನು ಅದರಲ್ಲಿ ಮುಂದುವರೆಯಲಾರೆ ಎನ್ನಿಸಿ ನಿಮ್ಮೊಡನೆ ನಿರಂತರ ಸಹವಾಸ ಮಾತ್ರ ಮಾಡಬೇಕೆಂಬ ಆಸೆ ಬಲವಾಗಿದೆ.

ಸ್ವಾಮಿಜಿ:—ಇದು ಮನಸ್ಸಿನ ದುರ್ಬಲತೆ. ಯಾವಾಗಲೂ ನಿರಂತರ ಪ್ರತಿಷ್ಠಿತ ಆತ್ಮನಲ್ಲಿ ತನ್ಮಯವಾಗಲು ಯತ್ನಿಸು. ಒಮ್ಮೆ ನಿನಗೆ ಆತ್ಮದರ್ಶನವಾದರೆ ನಿನಗೆಲ್ಲವೂ ಲಭಿಸುವುದು. ಜನನ ಮರಣ ಬಂಧನದ ಕಟ್ಟು ಕಳಚಿಹೋಗುವುದು.

ಶಿಷ್ಯ:—ನೀವು ನಾನದನ್ನು ಪಡೆಯುವಂತೆ ಆಶೀರ್ವದಿಸಿ. ನೀವು ನಾನಿಂದು ಓರ್ವನೇ ಬರುವಂತೆ ಹೇಳಿದಿರಿ. ಅದರಂತೆ ಬಂದಿರುವೆ. ಹೇಗಾದರೂ ಮಾಡಿ ನನ್ನ ಮನಸ್ಸು ಏಕಾಗ್ರತೆ ಹೊಂದುವಂತೆ ಮಾಡಿ.

ಸ್ವಾಮಿಜಿ:—ನಿನಗೆ ಯಾವಾಗ ಕಾಲ ಸಿಗುವುದೊ ಆಗೆಲ್ಲಾ ಧ್ಯಾನ ಮಾಡು. ಮನಸ್ಸು ಒಮ್ಮೆ ಸುಷುಮ್ನಾ ಹಾದಿಯನ್ನು ಪ್ರವೇಶಿಸಿದರೆ ಸಾಕು ಎಲ್ಲವೂ ಸರಿಯಾಗುವುದು. ಅದಾದನಂತರ ನೀನು ಮಾಡಬೇಕಾದ್ದು ಹೆಚ್ಚೇನು ಇರುವುದಿಲ್ಲ.

ಶಿಷ್ಯ:—ನೀವು ಅನೇಕ ವಿಧವಾಗಿ ನನ್ನನ್ನು ಪ್ರೋತ್ಸಾಹಗೊಳಿಸುತ್ತೀರಿ. ನಿಜವಾಗಿಯೂ ನನಗೆ ಸತ್ಯಸಾಕ್ಷಾತ್ಕಾರವಾಗುವ ಲಭ್ಯವಿದೆಯೆ?

ಸತ್ಯ ಜ್ಞಾನ ಪಡೆದು ನಾನು ಮುಕ್ತನಾಗುವೆನೆ?

ಸ್ವಾಮಿಜಿ:—ಹೌದು, ಖಂಡಿತವಾಗಿಯೂ ಹೌದು. ಕೀಟದಿಂದ ಹಿಡಿದು ಬ್ರಹ್ಮನವರೆಗೆ ಎಲ್ಲರೂ ಮುಕ್ತಿಯನ್ನು ಪಡೆಯುವರು. ನೀನೊಬ್ಬನೇ ಆಗುವುದಿಲ್ಲವೇನು? ಇವೆಲ್ಲಾ ಮನಸ್ಸಿನ ದುರ್ಬಲತೆ. ಇಂಥ ವಿಷಯಗಳನ್ನು ಎಂದೂ ಯೋಚಿಸಬೇಡ.

ನಂತರ ಅವರು ಪುನಃ ಹೇಳಿದರು "ಶ್ರದ್ಧೆ, ವೀರ್ಯವನ್ನು ಪಡೆ. ಆತ್ಮ ಜ್ಞಾನವನ್ನು ಹೊಂದು. ಇತರರ ಕಲ್ಯಾಣಕ್ಕಾಗಿ ನಿನ್ನ ಜೀವನವನ್ನು ಬಲಿದಾನಮಾಡು—ಇದೇ ನನ್ನ ಅಭೀಷ್ಟ ಮತ್ತು ಆಶೀರ್ವಾದ."

ಇದೇ ವೇಳೆಗೆ ಸರಿಯಾಗಿ ಊಟದ ಗಂಟೆ ಬಾರಿಸಲು ಸ್ವಾಮಿಜಿ ಶಿಷ್ಯನಿಗೆ ಅಲ್ಲೇ ಊಟಮಾಡಲು ಹೇಳಿದರು. ಸ್ವಾಮಿಗಳ ಪಾದಕ್ಕೆ ಸಾಷ್ಟಾಂಗ ಪ್ರಣಾಮ ಮಾಡುತ್ತಾ ಶಿಷ್ಯ ಅವರ ಆಶೀರ್ವಾದಕ್ಕಾಗಿ ಪ್ರಾರ್ಥಿಸಿದನು. ಶಿಷ್ಯನ ಶಿರದ ಮೇಲೆ ತಮ್ಮ ಹಸ್ತವನ್ನಿರಿಸಿ ಸ್ವಾಮಿಜಿ ಹರಸಿದರು. ನಂತರ ಹೇಳಿದರು: "ನನ್ನ ಆಶೀರ್ವಾದದಿಂದ ನಿನಗೇನಾದರೂ ಒಳ್ಳೆಯದಾಗುವಹಾಗಿದ್ದರೆ–ನಾನು ಹೇಳುವೆ–ಶ್ರೀ ಭಗವಾನ್ ಶ್ರೀ ರಾಮ ಕೃಷ್ಣರು ನಿನಗೆ ಕೃಪೆನೀಡಲಿ– ಇದಕ್ಕಿಂತ ಹೆಚ್ಚಾದ ಆಶೀರ್ವಾದ ನನಗೆ ಗೊತ್ತಿಲ್ಲ"–ಊಟವಾದ ಮೇಲೆ ಶಿಷ್ಯ ಸ್ವಾಮಿಜಿ ಬೇಗ ಮಲಗಿದುದರಿಂದ ಮಹಡಿಗೆ ಪುನಃ ಹೋಗಲಿಲ್ಲ. ಮಾರನೆಯ ದಿನ ಬೆಳಗ್ಗೆ ಶಿಷ್ಯನು ಕಲ್ಕತ್ತೆಗೆ ತನ್ನ ಕೆಲಸದ ನಿಮಿತ್ತ ಹೋಗಬೇಕಾಗಿದ್ದುದರಿಂದ ಮಹಡಿಗೆ ಸ್ವಾಮಿಗಳನ್ನು ಕಾಣಲು ಹೋದ.

ಸ್ವಾಮಿಜಿ:— ನೀನು ಈಗಲೇ ಹೊರಡುವೆಯಾ?

ಶಿಷ್ಯ:—ಹೌದು ಸ್ವಾಮಿಜಿ.

ಸ್ವಾಮಿಜಿ:—ಮುಂದಿನ ಭಾನುವಾರ ಮತ್ತೊಮ್ಮೆ ಬಾ. ಬರುವೆಯಾ?

ಶಿಷ್ಯ:—ಖಂಡಿತ ಬರುವೆ, ಸ್ವಾಮಿಜಿ.

ಸ್ವಾಮಿಜಿ:—ಸರಿ ಹಾಗಾದರೆ, ಅದೋ ಒಂದು ದೋಣಿ ಬರುತ್ತಿದೆ.

ಶಿಷ್ಯನು ಸ್ವಾಮಿಗಳನ್ನು ಬೀಳ್ಕೊಟ್ಟ. ಇದೇ ತನ್ನ ಇಷ್ಟದೇವರ ಭೌತಿಕ ಶರೀರದ ಅಂತಿಮದರ್ಶನವೆಂದು ಶಿಷ್ಯನಿಗೆ ಆಗ ಗೊತ್ತಾಗಲಿಲ್ಲ. ಸ್ವಾಮಿಗಳು ಹರುಷಚಿತ್ತದಿಂದ ಶಿಷ್ಯನನ್ನು ಬೀಳ್ಕೊಟ್ಟರು. "ಭಾನುವಾರ ಬಾ" ಎಂದರು. ಶಿಷ್ಯನೂ "ಬರುತ್ತೇನೆ" ಎಂದು ಕೆಳಗೆ ಬಂದ.

ದೋಣಿಯ ನಾವಿಕರು ಶಿಷ್ಯನನ್ನು ಕೂಗುತ್ತಿದ್ದರು. ಆದ್ದರಿಂದ ಅವನು ದೋಣಿಗೆ ಓಡಿಹೋದ. ದೋಣಿಯನ್ನು ಹತ್ತುವಾಗ ಶಿಷ್ಯನು ಸ್ವಾಮಿಗಳು ಮೇಲಿನ ವರಾಂಡದಲ್ಲಿ ಶತಪಥ ಸುತ್ತುತ್ತಿರುವುದನ್ನು ನೋಡಿದ. ಅವರನ್ನು ನಮಸ್ಕರಿಸಿ ದೋಣಿಯನ್ನು ಪ್ರವೇಶಿಸಿದ.

ಇದಾದ ಒಂದು ವಾರದ ಮೇಲೆ ಸ್ವಾಮಿಗಳು ಮರ್ತ್ಯ ಜೀವನದಿಂದ ಪಾರಾದರು. ಶಿಷ್ಯನಿಗೆ ಈ ಮುಂಬರುವ ಆಘಾತದ ಸುಳಿವು ಕೊಂಚವೂ ಇರಲಿಲ್ಲ. ಸ್ವಾಮಿಗಳು ಕಾಲವಾದ ಮಾರನೆಯ ದಿನ ಈ ಸಂಗತಿ ಕೇಳಿದ. ಶಿಷ್ಯ ಮಠಕ್ಕೆ ಬಂದ. ಪುನಃ ಸ್ವಾಮಿಗಳ ಭೌತಿಕ ಶರೀರವನ್ನು ಕಾಣುವ ಸುಯೋಗವೂ ಅವನ ಹಣೆಯಲ್ಲಿ ಬರೆದಿರಲಿಲ್ಲ.



## ಭಾಗ ೨

### ( ಪ್ರಿಯನಾಥ ಸಿಂಹ )

೧

ನಾವು ಸಂಭಾಷಣೆ ಮಾಡುವಾಗ ಅಥವಾ ಸಂಗೀತ ಮೊದಲಾದ ಸಾರ್ವಲೌಕಿಕ ಕ್ರಿಯೆಗಳಲ್ಲಿ ಮಾತನಾಡುವಾಗ ಕೊಂಚವೂ ಹತೋಟಿ ಯಿಲ್ಲದೆ ಇರುತ್ತೇವೆ. ಪ್ರತಿಯೊಬ್ಬರೂ ತಾವು ಅಗ್ರಗಣ್ಯರೆಂದು ತೋರ್ಪಡಿಸಿ ಕೊಳ್ಳಲು ಯತ್ನಿಸುತ್ತಾರೆ. ಬೇಲೂರು ಮಠದಲ್ಲಿ ಒಮ್ಮೆ ಈ ವಿಷಯ ವಾಗಿ ಸ್ವಾಮಿಜಿ ಸ್ನೇಹಿತನೊಬ್ಬನು ಅವರೊಡನೆ ಮಾತನಾಡಿದನು. ಸ್ವಾಮಿಜಿ ಹೇಳಿದ್ದೇನೆಂದರೆ "ನೋಡಿ, ನಮ್ಮಲ್ಲಿ ಒಂದು ಗಾದೆ ಇದೆ– ನಿನ್ನ ಮಗನಿಗೆ ವ್ಯಾಸಂಗದಲ್ಲಿ ಅಭಿರುಚಿ ಇಲ್ಲದಿದ್ದಲ್ಲಿ ಅವನನ್ನು ( ಸಭೆ) ದರ್ಬಾರಿನಲ್ಲಿಡು ಎಂದು. ಇಲ್ಲಿ ಸಭೆ ಎಂದರೆ ಕೆಲವು ಸಂದರ್ಭಗಳಲ್ಲಿ ನಮ್ಮ ಮನೆಗಳಲ್ಲಿ ಸೇರುವ ಸಮಾಜದ ಸಭೆಯಲ್ಲ. ದೊರೆಗಳ ದರ್ಬಾರು. ಬಂಗಾಳದ ನಿರಂಕುಶ ಪ್ರಭುಗಳ ಕಾಲದಲ್ಲಿ ಬೆಳಿಗ್ಗೆ ಮತ್ತು ಸಂಜೆ ಎರಡು ಹೊತ್ತೂ ರಾಜಸಭೆ ಸೇರುತ್ತಿತ್ತು. ಅಲ್ಲಿ ದೇಶದ ಎಲ್ಲಾ ಸ್ಥಿತಿಗಳೂ ಬೆಳಿಗ್ಗೆ ಚರ್ಚಿಸಲ್ಪಡುತ್ತಿದ್ದುವು. ಆಗಿನ ಕಾಲದಲ್ಲಿ ವರ್ತಮಾನ ಪತ್ರಿಕೆಗಳಿಲ್ಲದ ಕಾರಣ ರಾಜನಾದವನು ರಾಜಧಾನಿಯ ಪ್ರಮುಖ ಸಭ್ಯರೊಡನೆ ಜನರ ಮತ್ತು ರಾಜ್ಯದ ವಿಷಯವಾಗಿ ಸಂಭಾಷಿಸುತ್ತಿದ್ದನು. ಈ ಸಭ್ಯ ಮನು ಷ್ಯರು ಆ ಸಭೆಗಳಿಗೆ ಹೋಗಲೇ ಬೇಕಾಗಿತ್ತು. ಅವರು ಹಾಗೆ ಮಾಡ ದಿದ್ದಲ್ಲಿ ರಾಜನು ಅವರ ಗೈರುಹಾಜರಿಯನ್ನು ಪ್ರಶ್ನಿಸುತ್ತಿದ್ದನು. ಇಂತಹ ದರ್ಬಾರುಗಳು ನಮ್ಮ ದೇಶದಲ್ಲಿ ಮಾತ್ರವೇ ಅಲ್ಲ, ಎಲ್ಲಾ ದೇಶ ಗಳಲ್ಲಿಯೂ ನಾಗರಿಕತೆಯ ಕೇಂದ್ರವಾಗಿದ್ದುವು. ಈಗಿನ ಕಾಲದಲ್ಲಿ ಪಶ್ಚಿಮ ಇಂಡಿಯಾ ಅದರಲ್ಲೂ ರಾಜಪುಟಾಣವು ಈ ವಿಷಯದಲ್ಲಿ ಬಂಗಾಳ ಕ್ಕಿಂತಲೂ ಹೆಚ್ಚು ಉತ್ತಮ ಸ್ಥಿತಿಯಲ್ಲಿದೆ. ಈಗಲೂ ಅಲ್ಲಿ ಇಂತಹ ದರ್ಬಾರುಗಳನ್ನು ಕಾಣಬಹುದು.

ಪ್ರಶ್ನೆ:—ಹಾಗಾದರೆ, ಸ್ವಾಮಿಜಿ, ನಮ್ಮ ಜನಗಳಿಗೆ ದೊರೆಗಳಿಲ್ಲದ ಕಾರಣ ಒಳ್ಳೆಯ ನಡೆವಳಿಕೆಗಳನ್ನು ಕಳೆದುಕೊಂಡಿರುವರೆ?

ಸ್ವಾಮಿಜಿ:—ಇದೆಲ್ಲಾ ಅವನತ ಸ್ಥಿತಿ, ಸ್ವಾರ್ಥತೆಯೇ ಇದರ

ಮೂಲ. ಹಡಗನ್ನು ಹತ್ತುವಾಗ ನಾವು "ಮಾವ, ನಿನ್ನ ಪ್ರಾಣ ರಕ್ಷಿಸಿಕೊ" ಎಂಬ ಅಸಭ್ಯ ಗಾದೆಯನ್ನನುಸರಿಸುವೆವು. ಸಂಗೀತ ಮತ್ತು ವಿನೋದಗಳಲ್ಲಿ ನಮ್ಮನ್ನೇ ಪ್ರದರ್ಶಿಸಿಕೊಳ್ಳಲು ಪ್ರಯತ್ನಿಸುವೆವು. ಇದೇ ನಮ್ಮ ವಿಶೇಷ ಲಕ್ಷಣ. ಕೊಂಚ ಆತ್ಮತ್ಯಾಗದ ತರಬೇತು ಕೊಟ್ಟರೆ ಅದೆಲ್ಲಾ ಮಾಯವಾಗುವುದು. ಇದೆಲ್ಲಾ ತಮ್ಮ ಮಕ್ಕಳಿಗೆ ಒಳ್ಳೆಯ ನಡತೆಯನ್ನು ಕೂಡ ಕಲಿಸದ ತಂದೆತಾಯಿಗಳ ತಪ್ಪು. ಸ್ವಾರ್ಥ ತ್ಯಾಗವೇ ನಿಜವಾಗಿಯೂ ಎಲ್ಲಾ ನಾಗರಿಕತೆಯ ತಳಹದಿ.

ಮತ್ತೊಂದು ದೃಷ್ಟಿಯಿಂದ ನೋಡಿದರೆ, ಈ ತಂದೆತಾಯಿಗಳು ತಮ್ಮ ಮಕ್ಕಳಮೇಲೆ ಚಲಾಯಿಸುವ ಮಿತಿಮಿರಿದ ಅಧಿಕಾರದಿಂದ, ನಮ್ಮ ಹುಡುಗರ ಅನಿರ್ಬಂಧವಾದ ಬೆಳವಣಿಗೆಗೆ ಅವಕಾಶವಿಲ್ಲ. ಸಂಗೀತ ಅನುಚಿತವೆಂದು ತಂದೆತಾಯಿಗಳ ಅಭಿಪ್ರಾಯ. ಯಾವಾಗ ಮಗ ಒಳ್ಳೆಯ ಸಂಗೀತವನ್ನು ಕೇಳುವನೋ ಆಗ ಸಂಪೂರ್ಣವಾಗಿ ಅವನ ಮನಸ್ಸೆಲ್ಲಾ ಹೇಗೆ ಅದನ್ನು ಕಲಿಯುವುದೆಂಬುದರಲ್ಲಿ ತೊಡಗುವುದು. ಆಗ ಸಹಜವಾಗಿ ಅದನ್ನು ಕಲಿಯಲು ಅಯೋಗ್ಯರ ಸಹವಾಸಕ್ಕೆ ತಿರುಗುವರು. ಪುನಃ "ಧೂಮ್ರಪಾನ ಮಾಡುವುದು ಪಾಪಕರ" ಆದ್ದರಿಂದ ಆ ಯುವಕ ಮನೆಯ ಆಳುಕಾಳುಗಳೊಡನೆ ಸೇರಿ ಗೋಪ್ಯ ವಾಗಿ ಈ ಚಟವನ್ನು ತೃಪ್ತಿಪಡಿಸಿಕೊಳ್ಳದೆ ಮತ್ತೇನು ಮಾಡಬಲ್ಲ? ಪ್ರತಿಯೊಬ್ಬರಲ್ಲಿಯೂ ಅಸಂಖ್ಯಾತ ಪ್ರವೃತ್ತಿಗಳಿವೆ. ಅವು ತೃಪ್ತಿ ಹೊಂದಲು ಸರಿಯಾದ ಅವಕಾಶವಿರಬೇಕು. ಆದರೆ ನಮ್ಮ ದೇಶದಲ್ಲಿ ಇದನ್ನು ಅನುಮೋದಿಸುವುದಿಲ್ಲ. ಇದನ್ನು ಬೇರೆ ಸ್ಥಿತಿಗೆ ತಿರುಗಿಸಬೇಕಾ ದರೆ ತಂದೆ ತಾಯಿಗಳಿಗೆ ಹೊಸ ಬಗೆಯ ಶಿಕ್ಷಣ ಕೊಡಬೇಕು. ಇದೇ ಈಗಿನ ಅವಸ್ಥೆ! ಎಂತಹ ಅನ್ಯಾಯ! ನಾವಿನ್ನೂ ನಾಗರಿಕತೆಯ ಮೇಲ್ಮಟ್ಟಕ್ಕೆ ಬಂದಿಲ್ಲ. ಆದರೂ ನಮ್ಮ ವಿದ್ಯಾವಂತ ಬಾಬುಗಳು ಆಂಗ್ಲೇಯರು ನಮಗೆ ಸರಕಾರವನ್ನು ವಹಿಸಿಕೊಡಬೇಕೆಂದು ಇಚ್ಛಿಸುವರು. ಇದನ್ನು ನೋಡಿ ನನಗೆ ನಗು ಅಳು ಎರಡೂ ಒಟ್ಟಿಗೆ ಬರುತ್ತವೆ. ಆಗಲಿ, ನಮ್ಮಲ್ಲಿ ಎಲ್ಲಿ ಆ ಶೂರತ್ವದ ಸ್ಫೂರ್ತಿ ಇದೆ? ಅದಕ್ಕೆ ಪ್ರಾರಂಭದಲ್ಲೇ ಆವಶ್ಯಕವಾಗಿರುವ ಆತ್ಮ ನಿಗ್ರಹ ಸೇವೆ ವಿಧೇಯತೆ ಎಲ್ಲಿವೆ? ಕೆಚ್ಚೆದೆಯ ಸ್ಫೂರ್ತಿ ಎಂದರೆ ಆತ್ಮ ಪ್ರತಿಷ್ಠೆಯಲ್ಲ ಆತ್ಮತ್ಯಾಗ ಎಲ್ಲಿದೆ? ನಾವು ಇತರರ ಹೃದಯವನ್ನು ಆಳಬೇಕಾದರೆ ಮೊದಲು ನಾವು ಆಜ್ಞೆಯ ಮಾತನ್ನು

ಕೇಳಿದಕೂಡಲೇ ನಮ್ಮ ಜೀವವನ್ನು ಒತ್ತೆಯಿಟ್ಟು ಮುಂದೆ ಬರಬೇಕು. ನಮ್ಮನ್ನು ನಾವು ಮೊದಲು ಅರ್ಪಿಸಬೇಕು.

ಒಮ್ಮೆ ಶ್ರೀ ರಾಮಕೃಷ್ಣರ ಭಕ್ತನೊಬ್ಬನು ತನ್ನ ಒಂದು ಪುಸ್ತಕ ದಲ್ಲಿ ಯಾರು ಯಾರು ಶ್ರೀ ರಾಮಕೃಷ್ಣರನ್ನು ಅವತಾರಪುರುಷರೆಂದು ನಂಬಲಿಲ್ಲವೋ ಅವರ ಮೇಲೆಲ್ಲಾ ತೀವ್ರವಾಗಿ ಟೀಕಿಸಿ ಬರೆದಿದ್ದ. ಸ್ವಾಮಿಜಿ ಆ ಗ್ರಂಥಕರ್ತನನ್ನು ಬರಹೇಳಿ ಅವನಿಗೆ ಈ ರೀತಿ ಆವೇಶದಿಂದ ಹೇಳಿದರು :

"ಇತರರನ್ನು ಈ ರೀತಿ ನಿಂದಿಸಲು ನಿನಗೇನು ಅಧಿಕಾರವಿದೆ? ನಿನ್ನ ಸ್ವಾಮಿಯಲ್ಲಿ ಅವರು ನಂಬಿಕೆ ಇಡದಿದ್ದರೆ ಬಾಧಕವೇನು? ನಾವೊಂದು ಮತವನ್ನು ಸೃಷ್ಟಿಸಿದ್ದೇವೆಯೆ? ಯಾರು ಅವರನ್ನು ಪೂಜಿಸುವುದಿಲ್ಲವೊ ಅವರೆಲ್ಲಾ ನಮ್ಮ ಶತ್ರುಗಳೆಂದು ಹೇಳಲು ನಾವು ರಾಮಕೃಷ್ಣ ಮತೀಯ ರೇನು? ನಿನ್ನ ಈ ಮತಭ್ರಾಂತಿಯಿಂದ ನೀನು ಶ್ರೀ ರಾಮಕೃಷ್ಣರನ್ನು ಕೆಳ ಅಂತಸ್ತಿಗೆ ತಂದುದೂ ಅಲ್ಲದೆ ಅವರನ್ನು ಸಣ್ಣವರನ್ನಾಗಿ ಮಾಡಿದೆ? ನಿನ್ನ ಸ್ವಾಮಿಯು ದೇವರೇ ಆಗಿದ್ದರೆ, ಆತನನ್ನು ಯಾವ ಹೆಸರಿನಲ್ಲಿ ಕರೆದರೂ ಆತನನ್ನು ಪೂಜಿಸಿದಂತೆಯೇ ಎಂದು ನಿನಗೆ ತಿಳಿದಿರಬೇಕು—ಇತರರನ್ನು ನಿಂದಿಸಲು ನೀನಾರು? ನೀನು ಅವರಿಗೆ ವಿರುದ್ಧವಾಗಿ ದೂರಿದ ಮಾತ್ರಕ್ಕೆ ಅವರು ನಿನ್ನ ಮಾತನ್ನು ಕೇಳುವರೇನು? ಎಂತಹ ತಿಳಿಗೇಡಿತನ! ನೀನು ಮತ್ತೊಬ್ಬರಿಗಾಗಿ ಆತ್ಮತ್ಯಾಗ ಮಾಡಿದರೆ ಮಾತ್ರ ನೀನು ಇತರರ ಹೃದಯವನ್ನು ಒಲಿಸಿಕೊಳ್ಳಬಲ್ಲೆ. ಇಲ್ಲದಿದ್ದಲ್ಲಿ ಅವರೇಕೆ ನಿನ್ನ ಮಾತನ್ನು ಕೇಳುವರು?"

ಕೊಂಚ ಹೊತ್ತಿನಲ್ಲಿಯೆ ಸ್ವಾಮಿಜಿ ಮೊದಲಿನಂತೆ ಶಾಂತಚಿತ್ತರಾಗಿ ಶೋಕಪೂರಿತ ಧ್ವನಿಯಲ್ಲಿ ಹೀಗೆ ಹೇಳಿದರು: "ನನ್ನ ಪ್ರಿಯಗೆಳೆಯನೇ ಯಾರಾದರೂ ತಾನೇ ಒಬ್ಬ ವೀರನಲ್ಲದಿದ್ದಲ್ಲಿ, ದೇವರಲ್ಲಿ ಶ್ರದ್ಧೆ ಅಥವಾ ಆತ್ಮಾರ್ಪಣೆ ಮಾಡಿಕೊಳ್ಳಲು ಸಾಧ್ಯವೆ? ನಾವು ಧೀರರಾಗುವವರೆಗೂ ನಮ್ಮ ಹೃದಯದಿಂದ ದ್ವೇಷ ಅಸೂಯೆಗಳು ಮಾಯವಾಗುವುದಿಲ್ಲ. ಇವುಗಳಿಂದ ಪಾರಾಗದಿದ್ದಲ್ಲಿ ನಾವು ನಾಗರಿಕರಾಗಲು ಹೇಗೆ ಸಾಧ್ಯ? ನಮ್ಮ ದೇಶದಲ್ಲಿ ಇಂತಹ ದೃಢಕಾಯರಾದ ಪೌರುಷವುಳ್ಳ ಗಂಡಸರು ಇಂತಹ ವೀರಸ್ಫೂರ್ತಿಯುಳ್ಳವರು ಎಲ್ಲಿದ್ದಾರೆ? ಅಯ್ಯೋ! ಎಲ್ಲಿಯೂ ಇಲ್ಲ. ಇದಕ್ಕಾಗಿ ನಾನು ಅನೇಕ ವೇಳೆ ಹುಡುಕಿದ್ದೇನೆ. ಕೇವಲ ಒಂದೇ

ಒಂದು ನಿದರ್ಶನಮಾತ್ರ ನನಗೆ ಸಿಕ್ಕಿದೆ.''

ಪ್ರಶ್ನೆ:—ನೀವು ಯಾರಲ್ಲಿ ಇದನ್ನು ನೋಡಿದಿರಿ. ಸ್ವಾಮಿಜಿ?

ಸ್ವಾಮಿಜಿ:—ಗಿರೀಶಚಂದ್ರ ಘೋಷರಲ್ಲಿ ಮಾತ್ರ ನಾನೀರೀತಿಯ ಸತ್ಯವಾದ ಆತ್ಮಾರ್ಪಣೆಯನ್ನು-ಭಗವಂತನ ಸೇವಕ ತಾನೆಂಬ ನಮ್ರಭಾವ ವನ್ನು ನೋಡಿದೆ. ಅವರು ನಿರಂತರ ಆತ್ಮತ್ಯಾಗಕ್ಕೆ ಸಿದ್ಧರಾಗಿದ್ದುದ ರಿಂದಲೇ ಅಲ್ಲವೆ ಶ್ರೀರಾಮಕೃಷ್ಣರು ಅವರ ಜವಾಬ್ದಾರಿಯನ್ನೆಲ್ಲಾ ತಾವೇ ವಹಿಸಿಕೊಂಡುದು? ದೇವರಲ್ಲಿ ಎಂತಹ ಅಪೂರ್ವ ಶರಣಾಗತ ಭಾವನೆ! ಅವರಿಗೆ ಸರಿಸಮಾನರಾದವರನ್ನು ನಾನಾರನ್ನೂ ನೋಡಿಲ್ಲ. ಅವರಿಂದ ನಾವು ಈ ಆತ್ಮಾರ್ಪಣೆಯ ಪಾಠವನ್ನು ಕಲಿತೆವು.

ಹೀಗೆ ಹೇಳುತ್ತಾ ಸ್ವಾಮಿಗಳು ಅವರನ್ನು ಗೌರವಿಸಲು ಕೈಗಳನ್ನೆತ್ತಿ ನಮಸ್ಕರಿಸಿದರು.

೨

ಸ್ವಾಮಿಗಳು ಎರಡನೆಯ ಬಾರಿ ಇಂಡಿಯಾದಿಂದ ಅಮೆರಿಕಾಕ್ಕೆ ಹೋಗಲು (೧೮೯೯ರಲ್ಲಿ) ಸಿದ್ಧತೆಗಳಾಗುತ್ತಿದ್ದುವು. ಅವರು ಕಲ್ಕತ್ತೆಗೆ ತಮ್ಮ ಸ್ನೇಹಿತರೊಬ್ಬರನ್ನು ನೋಡಲು ಹೋಗಿದ್ದರು. ಹಿಂತಿರುಗಿ ಬರು ವಾಗ ಬಾಗ ಬಜಾರಿನಲ್ಲಿ ಬಲರಾಮಬಾಬುಗಳ ಮನೆಯಲ್ಲಿ ಕೆಲವು ನಿಮಿಷ ಗಳಿದ್ದರು. ಮಠಕ್ಕೆ ತಮ್ಮ ಜೊತೆಯಲ್ಲಿ ಬರಲು ಮತ್ತೊಬ್ಬ ಗೆಳೆಯನಿಗೆ ಹೇಳಿಕಳುಹಿದರು. ಆ ಸ್ನೇಹಿತನು ಬರಲು ಅವನಿಗೂ ಸ್ವಾಮಿಗಳಿಗೂ ಈ ರೀತಿ ಸಂಭಾಷಣೆ ಜರುಗಿತು.

ಸ್ವಾಮಿಜಿ:—ಇಂದು ಒಂದು ಕೌತುಕದ ಸಂಗತಿ ಜರುಗಿತು. ನಾನೊಬ್ಬ ಸ್ನೇಹಿತನ ಮನೆಗೆ ಹೋಗಿದ್ದೆ. ಅವನ ಬಳಿ ಒಂದು ತೈಲ ಚಿತ್ರ ವಿತ್ತು. ಶ್ರೀಕೃಷ್ಣನು ಕುರುಕ್ಷೇತ್ರದ ಯುದ್ಧಭೂಮಿಯಲ್ಲಿ ಅರ್ಜುನನಿಗೆ ಭಗವದ್ಗೀತೆಯನ್ನು ಬೋಧಿಸುತ್ತಿದ್ದ ವಿಷಯ ಚಿತ್ರಿತವಾಗಿತ್ತು. ಶ್ರೀಕೃಷ್ಣನು ರಥದಲ್ಲಿ ನಿಂತುಕೊಂಡು, ಲಗಾಮನ್ನು ಕೈಯಲ್ಲಿ ಹಿಡಿದು ಕೊಂಡು, ಅರ್ಜುನನಿಗೆ ಗೀತೆಯನ್ನು ಉಪದೇಶಿಸುತ್ತಿದ್ದನು. ಅವನು ನನಗೆ ಆ ಪಠವನ್ನು ತೋರಿಸಿ ಅದನ್ನು ನಾನು, ಹೇಗೆ ಇಷ್ಟಪಡುವೆನೆಂದು ಕೇಳಿದ. ''ಸುಮಾರಾಗಿ ಚೆನ್ನಾಗಿದೆ'' ಎಂದೆ. ಆದರೆ ಅವನು ನನ್ನ ವಿಮರ್ಶೆ ಯನ್ನು ಹೇಳಲೇಬೇಕೆಂದು ಒತ್ತಿಹೇಳಿದುದರಿಂದ ನಾನು, ಸತ್ಯವಾದ

ಅಭಿಪ್ರಾಯವನ್ನೆ ಕೊಟ್ಟೆ. ಇದರಲ್ಲಿ ಪ್ರಶಂಸನೀಯವಾದುದೇನೂ ನನಗೆ ತೋರವುದಿಲ್ಲ. ಏಕೆಂದರೆ ಮೊದಲನೆಯದಾಗಿ ಶ್ರೀಕೃಷ್ಣನ ಕಾಲದಲ್ಲಿದ್ದ ರಥ ಇದರಲ್ಲಿರುವ ಈಗಿನ ಕಾಲದ ಗೋಪುರಾಕಾರದ ವಾಹನದಂತೆ ಇರಲಿಲ್ಲ. ಅಲ್ಲದೆ ಶ್ರೀಕೃಷ್ಣನ ಆಕೃತಿ ಭಾವಶೂನ್ಯವಾಗಿದೆ.

ಪ್ರಶ್ನೆ :—ಆಗ ಗೋಪುರಾಕೃತಿಯ ರಥಗಳಿರಲಿಲ್ಲವೆ?

ಸ್ವಾಮಿಜಿ :— ಬೌದ್ಧರ ಕಾಲದಿಂದೀಚೆಗೆ ನಮ್ಮ ದೇಶದಲ್ಲಿ ಎಲ್ಲದರಲ್ಲಿಯೂ ಬಹಳ ಗಲಿಬಿಲಿಯಾಗಿದೆ ಎಂದು ನಿನಗೆ ಗೊತ್ತಿಲ್ಲವೆ? ದೊರೆಗಳು ಗೋಪುರಾಕೃತಿಯ ರಥಗಳಲ್ಲಿ ಎಂದೂ ಯುದ್ಧ ಮಾಡುತ್ತಿರಲಿಲ್ಲ. ಈಗಲೂ ರಾಜಪುಟಾಣದಲ್ಲಿರುವ ಕೆಲವು ರಥಗಳು ಪೂರ್ವದ ರಥಗಳನ್ನೇ ಹೋಲುತ್ತವೆ. ಗ್ರೀಕರ ಪುರಾಣಗಳಲ್ಲಿರುವ ರಥದ ಚಿತ್ರಗಳನ್ನು ನೀನು ನೋಡಿಲ್ಲವೆ? ಅದಕ್ಕೆ ಎರಡು ಚಕ್ರಗಳಿರುತ್ತದೆ, ಅವನ್ನು ಹಿಂದುಗಡೆಯಿಂದ ಹತ್ತಬೇಕು. ನಮ್ಮಲ್ಲಿ ಅಂತಹ ರಥಗಳಿದ್ದುವು. ವಿವರಗಳೆಲ್ಲಾ ತಪ್ಪುತಪ್ಪಾಗಿ ಇರುವ ತೈಲಚಿತ್ರ ಬರೆಯುವುದರಿಂದ ಪ್ರಯೋಜನವೇನು? ಸರಿಯಾಗಿ ವ್ಯಾಸಂಗ ಮತ್ತು ಪರಿಶೋಧನೆಗಳನ್ನು ಮಾಡಿ ಆಗಿನ ಕಾಲದಲ್ಲಿ ವಸ್ತುಗಳು ಹೇಗಿದ್ದವೊ ಹಾಗೆಯೇ ಚಾಚೂ ತಪ್ಪದೆ ಚಿತ್ರಿತವಾಗಿದ್ದರೆ ಅಂತಹ ಚಿತ್ರವೀಗ ಅತಿ ಶ್ರೇಷ್ಠವಾದ ತರಗತಿಗೆ ಸೇರಿದುದೆಂದು ಹೇಳಬಹುದು. ವಾಸ್ತವವಾಗಬೇಕು. ಇಲ್ಲದಿದ್ದಲ್ಲಿ ಆ ಚಿತ್ರದಿಂದೇನು ಪ್ರಯೋಜನ. ಈಗಿನ ಕಾಲದಲ್ಲಿ ಯಾರು ವರ್ಣಚಿತ್ರಕಾರರಾಗಲು ಇಷ್ಟಪಡುವರೋ ಅವರೆಲ್ಲಾ ಸಾಧಾರಣವಾಗಿ ಶಾಲೆಯಲ್ಲಿ ಅಪಜಯ ಹೊಂದಿದವರು ಮತ್ತು ಮನೆಯಲ್ಲಿ ಏನೂ ಕೆಲಸಕ್ಕೆ ಬಾರದವರಾಗಿರಬೇಕು— ಇಂಥವರಿಂದ ಎಂತಹ ಕಲಾಕೃತಿಯನ್ನು ನಿರೀಕ್ಷಿಸಬಹುದು? ಉತ್ತಮ ಮಟ್ಟದ ಕಲಾಕೃತಿಯನ್ನು ಚಿತ್ರಿಸಬೇಕಾದರೆ ಒಂದು ಮೇಲ್ಮಟ್ಟದ ನಾಟಕವನ್ನು ಬರೆಯಲು ಎಂತಹ ಪ್ರತಿಭೆ ಬೇಕೋ ಅಂತಹ ಸಾಮರ್ಥ್ಯ ಆವಶ್ಯಕ.

ಪ್ರಶ್ನೆ :—ಹಾಗಾದರೆ, ಈಗ ಪ್ರಶ್ನೆಯಿರುವ ಚಿತ್ರದಲ್ಲಿ ಶ್ರೀಕೃಷ್ಣನನ್ನು ಹೇಗೆ ಚಿತ್ರಿಸಬೇಕು!

ಸ್ವಾಮಿಜಿ :—ಗೀತೆಯ ಮೂರ್ತಿಮತ್ತಾದ ಶ್ರೀಕೃಷ್ಣನನ್ನು ಅವನು ನಿಜವಾಗಿಯೆ ಇದ್ದಂತೆಯೇ ಚಿತ್ರಿಸಬೇಕು. ಭ್ರಾಂತಿ ಮತ್ತು ಹೇಡಿತನಕ್ಕೆ ಒಳಗಾಗಿದ್ದ ಅರ್ಜುನನಿಗೆ ಧರ್ಮಮಾರ್ಗವನ್ನು ಬೋಧಿಸುತ್ತಿದ್ದುದರಿಂದ

ಗೀತೆಯ ಪ್ರಧಾನಭಾವ ಕೃಷ್ಣನ ಇಡೀ ದೇಹದಿಂದ ಹೊರಹೊಮ್ಮು ವಂತಿರಬೇಕು.

ಎಂದು ಹೇಳುತ್ತಾ ಸ್ವಾಮಿಗಳು ಶ್ರೀಕೃಷ್ಣನು ಯಾವರೀತಿಯಲ್ಲಿ ಚಿತ್ರಿತವಾಗಬೇಕೆಂದು ತಾವೇ ಆ ಭಂಗಿಯನ್ನು ತೋರಿಸಿದರು. ನಂತರ ಮುಂದುವರಿಸಿ ಈ ರೀತಿ ಹೇಳಿದರು: "ಇಲ್ಲಿ ನೋಡು, ಹೀಗೆ ಅವನು ಆ ಕುದುರೆಗಳ ಲಗಾಮನ್ನು ಹಿಡಿದಿರಬೇಕು — ಎಷ್ಟು ಬಿಗಿಯಾಗಿ ಹಿಡಿದಿರಬೇಕೆಂದರೆ, ಕುದುರೆಗಳು ತಮ್ಮ ಮುಂಗಾಲುಗಳಿಂದ ಗಾಳಿಯನ್ನು ಬಡಿಯುತ್ತಾ ಇರಬೇಕು. ಬಾಯಿ ತೆರೆದು ನಿಂತಿರಬೇಕು. ಇದು ಶ್ರೀಕೃಷ್ಣನ ಆಕೃತಿಯಲ್ಲಿ ಒಂದು ಪ್ರಚಂಡ ಕರ್ಮದ ಅಭಿನಯವನ್ನು ತೋರಿಸುವುದು. ಅವನ ಸ್ನೇಹಿತ, ಜಗದ್ವಿಖ್ಯಾತ ವೀರ, ಎರಡು ಸೈನ್ಯಗಳ ಮಧ್ಯೆ, ತನ್ನ ಬಿಲ್ಲು ಬಾಣಗಳನ್ನು ಬಿಸುಟು ಹೇಡಿಯಂತೆ ರಥದಲ್ಲಿ ಕುಗ್ಗಿ ಕುಳಿತಿದ್ದಾನೆ. ಆಗ ಶ್ರೀಕೃಷ್ಣ ಒಂದು ಕೈಯಲ್ಲಿ ಚಾವಟಿ, ಮತ್ತೊಂದು ಕೈಯಲ್ಲಿ ಬಿಗಿಹಿಡಿದ ಲಗಾಮು ಹಿಡಿದು ಅರ್ಜುನ ನೆಡೆಗೆ ತಿರುಗಿದ್ದಾನೆ.— ಆತನ ಶಿಶುಸಹಜವಾದ ಮುಖದಾವರೆ ಅಲೌಕಿಕ ವಾದ ಪ್ರೇಮ ದಯೆಯಿಂದ ತುಂಬಿ ತುಳುಕಾಡುತ್ತಿದೆ; ಪ್ರಶಾಂತವಾದ ಸ್ಥಿರವಾದ ಮುಖಮುದ್ರೆಯಿಂದ ಕೂಡಿದ ಶ್ರೀಕೃಷ್ಣ ತನ್ನ ಪ್ರಿಯತಮ ಗೆಳೆಯನಿಗೆ ಗೀತಾ ಸಂದೇಶವನ್ನು ಬೋಧಿಸುತ್ತಿದ್ದಾನೆ. ಈಗ ಹೇಳು ಗೀತಾಸಂದೇಶಕನ ಈ ಚಿತ್ರ ನಿನಗಾವ ಭಾವವನ್ನು ತಿಳಿಸುತ್ತದೆಂದು.

ಸ್ನೇಹಿತ:— ದೃಢತೆ ಮತ್ತು ಗಭೀರಭಾವದಿಂದ ಕೂಡಿದ ಕ್ರಿಯೆ ಯನ್ನು ತಿಳಿಸುವುದು.

ಸ್ವಾಮಿಜಿ:— ಹೌದು! ಅದೇ! ಇಡೀ ದೇಹದಲ್ಲೆಲ್ಲಾ ತೀವ್ರ ಚಲನೆ, ಜೊತೆಗೆ ಮುಖದಲ್ಲಿ ನೀಲಿಮ ಆಕಾಶದಂತಹ ಪ್ರಶಾಂತತೆ ಮತ್ತು ನಿಶ್ಚಲತೆ. ಇದೇ ಗೀತೆಯ ಜೀವಾಳ ಎಲ್ಲಾ ಪರಿಸ್ಥಿತಿಯಲ್ಲೂ ಪ್ರಶಾಂತವಾಗಿ ದೃಢವಾಗಿದ್ದು ತನುಮನ ಆತ್ಮವೆಲ್ಲಾ ಆತನ ಪಾದಪದ್ಮ ಗಳಲ್ಲಿ ಕೇಂದ್ರೀಕೃತವಾಗಬೇಕು.

ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ-ಚ ಕರ್ಮ ಯಃ ।
ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥

[ಗೀತಾ, IV ೧೮.]

ಯಾರು ಕರ್ಮದಲ್ಲಿ ನಿರತರಾಗಿದ್ದರೂ, ಪ್ರಶಾಂತ ಚಿತ್ತರೊ ಕರ್ಮ

ಮಾಡದಿರುವಾಗಲೂ ಬ್ರಹ್ಮಧ್ಯಾನವೆಂಬ ಕರ್ಮದಲ್ಲಿ ನಿರತರಾಗಿರುವರೊ ಅವರೇ ಬುದ್ಧಿವಾನ್, ಯೋಗಿ, ಕರ್ಮಕುಶಲಿ.

ಆ ಸಮಯಕ್ಕೆ ಸರಿಯಾಗಿ ದೋಣಿಯನ್ನು ಗೊತ್ತುಮಾಡಿಕೊಂಡು ಬರಲು ಹೋಗಿದ್ದ ಮನುಷ್ಯ ಹಿಂತಿರುಗಿ ಅದು ಸಿದ್ಧವಾಗಿದೆ ಎಂದು ತಿಳಿಸಿದ. ಸ್ವಾಮಿಜಿ ಸ್ನೇಹಿತನಿಗೆ "ನಡೆ, ಮಠಕ್ಕೆ ಹೋಗೋಣ. ನೀನು ಮನೆಯಲ್ಲಿ ಹೇಳಿ ಬಂದಿರಬೇಕಲ್ಲವೆ ನನ್ನ ಜೊತೆಯಲ್ಲಿ ಹೋಗುವೆನೆಂದು ?"

ಹೀಗೆ ಮಾತನಾಡುತ್ತಲೇ ಅವರು ದೋಣಿಯೆಡೆಗೆ ಹೋದರು.

ಸ್ವಾಮಿಜಿ:—ಕೆಲಸ–ಕೆಲಸ–ನಿರಂತರ ಕೆಲಸ–ಈ ಉದ್ದೇಶವನ್ನು ಎಲ್ಲರಿಗೂ ಬೋಧಿಸಬೇಕು. ಪ್ರತಿಫಲಾಪೇಕ್ಷೆಗೆ ಗಮನಕೊಡದೆ, ಇಡೀ ಮನಸ್ಸು ಆತ್ಮವನ್ನೆಲ್ಲಾ ಭಗವಂತನ ಅಡಿದಾವರೆಯಲ್ಲಿ ನಿಶ್ಚಲವಾಗಿ ನೆಲಸುವಂತೆ ಮಾಡಬೇಕು.

ಪ್ರಶ್ನೆ:—ಆದರೆ ಇದು ಕರ್ಮಯೋಗವಲ್ಲವೆ?

ಸ್ವಾಮಿಜಿ:—ಹೌದು, ಇದು ಕರ್ಮಯೋಗ. ಆದರೆ ಆಧ್ಯಾತ್ಮಿಕ ಸಾಧನೆ ಮಾಡದೆ ಕರ್ಮಯೋಗವನ್ನು ನೀನು ಮಾಡಲಾರೆ. ನಾಲ್ಕು ವಿಧವಾದ ಯೋಗಗಳನ್ನೂ ನೀನು ಸಮರಸ ಮಾಡಬೇಕು. ಇಲ್ಲದಿದ್ದಲ್ಲಿ ಸಂಪೂರ್ಣವಾಗಿ ಮನಸ್ಸನ್ನೆಲ್ಲಾ ಭಗವಂತನಲ್ಲಿಡಲು ಹೇಗೆ ಸಾಧ್ಯ?

ಪ್ರಶ್ನೆ:—ಗೀತೆಯ ಪ್ರಕಾರ ವೇದಗಳಲ್ಲಿ ಹೇಳುವ ಹೋಮ ಮತ್ತು ಇದರ ಧಾರ್ಮಿಕ ವಿಧಿಗಳನ್ನು ಮಾಡುವುದೇ ಕರ್ಮ ಎಂದು ಸಾಧಾರಣವಾಗಿ ಹೇಳುವರಲ್ಲ. ಇತರ ಯಾವ ಬಗೆಯ ಕೆಲಸವೂ ನಿಷ್ಫಲ.

ಸ್ವಾಮಿಜಿ:—ಹಾಗೆಯೇ ಇಟ್ಟುಕೊಳ್ಳೋಣ. ನೀನು ಅದನ್ನು ಇನ್ನೂ ಹೆಚ್ಚು ವಿವರವಾಗಿ ಹೇಳಬೇಕು. ನೀನು ಮಾಡುವ ಪ್ರತಿಯೊಂದು ಕೆಲಸಕ್ಕೂ, ನೀನು ಉಸಿರಾಡುವುದಕ್ಕೂ ನೀನು ಯೋಚಿಸುವ ಪ್ರತಿಯೊಂದು ಆಲೋಚನೆಗೂ ಯಾರು ಹೊಣೆ? ನೀನೇ ಅದಕ್ಕೆ ಹೊಣೆಯಲ್ಲವೆ?

ಸ್ನೇಹಿತ:—ಹೌದು ಮತ್ತು ಅಲ್ಲ. ನಾನಿದನ್ನು ಸ್ಪಷ್ಟವಾಗಿ ವಿವರಿಸಲಾರೆ. ವಾಸ್ತವಾಂಶವೇನೆಂದರೆ ಮಾನವ ಒಂದು ಯಂತ್ರ. ಭಗವಂತ ಕರ್ತ. ಆದ್ದರಿಂದ ನಾನು ಯಾವಾಗ ಆತನ ಇಚ್ಛೆಯಂತೆ ನಡೆಯುವೆನೊ ಆಗ ನಾನು ಹೇಗೆ ನಾನು ಮಾಡುವ ಕರ್ಮಕ್ಕೆ ಜವಾಬ್ದಾರನಾಗುವೆ?

ಸ್ವಾಮಿಜಿ:—ಸರಿ, ಇದನ್ನು ಭಗವತ್ಸಾಕ್ಷಾತ್ಕಾರದ ಅತ್ಯಂತ ಉನ್ನತ ಮಟ್ಟಕ್ಕೆ ಹೋದಾಗ ಹೇಳಬಹುದು. ಯಾವಾಗ ಮನಸ್ಸು ಕರ್ಮದಿಂದ ಪರಿಶುದ್ಧವಾಗುವುದೋ ಆಗ ನೀನು ಖಂಡಿತ ನೋಡುವೆ ಆತನೇ ಎಲ್ಲಾ ಕರ್ಮಕ್ಕೂ ಕಾರಣನೆಂದು. ಆಗ ಮಾತ್ರ ನೀನು ಈ ರೀತಿ ಮಾತನಾಡಲು ಅರ್ಹನಾಗುವೆ. ಇಲ್ಲದೆ ಇದ್ದರೆ ಇದೆಲ್ಲಾ ಬರಿಯ ಹುಸಿಮಾತು; ಕಪಟ. ಅಷ್ಟೆ.

ಪ್ರಶ್ನೆ:—ಹಾಗೇಕೆ? ಭಗವಂತನೇ ನಮ್ಮೆಲ್ಲಾ ಕೆಲಸಗಳಿಗೂ ಕಾರಣನೆಂದು ತರ್ಕದಿಂದ ನಮಗೆ ಸ್ಪಷ್ಟವಾಗಿ ಗೊತ್ತಾದರೆ?

ಸ್ವಾಮಿಜಿ:—ನಮಗೆ ಹಾಗೆ ಗೊತ್ತಾದರೆ ಅದೇನೋ ಒಳ್ಳೆಯದಾಗ ಬಹುದು. ಆದರೆ ಅದು ಕೇವಲ ಒಂದು ಕ್ಷಣ ಮಾತ್ರ. ಆಮೇಲೆ ಲೇಶಮಾತ್ರವೂ ಇರುವುದಿಲ್ಲ. ಆಗಲಿ, ನೀನು ಪ್ರತಿನಿತ್ಯವೂ ಮಾಡುವು ದನ್ನೆಲ್ಲಾ ಅದಕ್ಕೆ ನೀನು ಕರ್ತನಲ್ಲವೆಂಬ ಅಹಂಭಾವನೆಯನ್ನು ಬಿಟ್ಟು ಮಾಡುವೆಯೇನು? ಸರಿಯಾಗಿ ಯೋಚಿಸಿ ನೋಡು. ದೇವರೇ ನಿನ್ನನ್ನು ಈ ರೀತಿ ಕೆಲಸಮಾಡಿಸುತ್ತಿರುವನೆಂದು ನೀನು ಎಷ್ಟು ಹೊತ್ತು ನೆನಪಿನಲ್ಲಿಡ ಬಲ್ಲೆ? ಆದರೆ ನೀನು ಹೀಗೆ ಬಾರಿಬಾರಿಗೂ ಪರೀಕ್ಷಿಸುತ್ತಾ ಹೋದ ಹಾಗೆಲ್ಲಾ, ಅಹಂಭಾವ ಮಾಯವಾಗುವ ಮಟ್ಟಕ್ಕೆ ಬರುವೆ. ಆ ಸ್ಥಳ ದಲ್ಲಿ ಭಗವಂತನು ಬರುವನು. ಆಗ ನೀನು ನ್ಯಾಯವಾಗಿ ಹೇಳಬಹುದು. ಓ ದೇವರೇ! ನೀನೇ ನನ್ನೆಲ್ಲಾ ಕೆಲಸಗಳನ್ನು ಅಂತರ್ಯದೊಳಗಿಂದ ಮಾಡಿಸುತ್ತಿರುವೆ–ಆದರೆ, ಸ್ನೇಹಿತನೆ, ಅಹಂಭಾವ ನಿನ್ನ ಹೃದಯವ ನ್ನೆಲ್ಲಾ ಸಂಪೂರ್ಣವಾಗಿ ಆವರಿಸಿದ್ದರೆ, ಭಗವಂತನಿಗೆ ಅಲ್ಲಿಗೆ ಪ್ರವೇಶಿ ಸಲು ನಿಜವಾಗಿ ಎಲ್ಲಿ ಸ್ಥಳವಿದೆ? ಆಗ ಭಗವಂತ ಸತ್ಯವಾಗಿಯೂ ಅಲ್ಲಿರುವುದಿಲ್ಲ.

ಪ್ರಶ್ನೆ:—ಆದರೆ ಅವನೇ ನನಗೆ ಕೆಟ್ಟ ಪ್ರೇರೇಪಣೆಗಳನ್ನು ಕೊಡು ವವನು?

ಸ್ವಾಮಿಜಿ:—ಇಲ್ಲ, ಖಂಡಿತವಾಗಿಯೂ ಇಲ್ಲ. ಈ ರೀತಿ ಯೋಚಿಸುವುದು ದೇವರನ್ನು ನಿಂದಿಸಿದಂತೆ. ಅವನು ನಿನ್ನನ್ನು ಕೆಟ್ಟ ಕಾರ್ಯ ಗಳಿಗೆ ಪ್ರೇರೇಪಿಸುತ್ತಿಲ್ಲ. ಇದೆಲ್ಲಾ ನಿನ್ನ ಭೋಗ ಲಾಲಸೆ. ದೇವರೇ ಪ್ರತಿ ಯೊಂದಕ್ಕೂ ಕಾರಣಕರ್ತನೆಂದು ಹೇಳಿ ಮನಃಪೂರ್ವಕವಾಗಿ ಕೆಟ್ಟ ಕೆಲಸಗಳಲ್ಲಿ ಛಲದಿಂದ ಪ್ರಯತ್ನಿಸಿದರೆ ಅವನು ನಿಜವಾಗಿ ಹಾಳಾಗುವನು.

ಇದೇ ಆತ್ಮವಂಚನೆಯ ಮೂಲ. ನೀನೊಂದು ಒಳ್ಳೆಯ ಕೆಲಸವನ್ನು ಮಾಡಿದಕೂಡಲೇ ನಿನಗೊಂದು ಬಗ್ಗೆಯ ಉಲ್ಲಾಸವಾಗುವುದಿಲ್ಲವೆ? ಆಗ ನೀನೇನೊ ಒಂದು ಒಳ್ಳೆಯ ಕೆಲಸವನ್ನು ಮಾಡಿದೆ ಎಂದು ಹೆಮ್ಮೆ ಪಡುವೆ. ಇದು ಮನುಷ್ಯ ಸಹಜವಾದುದು. ನೀನೇನೂ ಮಾಡಲಾರೆ. ಆದರೆ ಒಳ್ಳೆಯಕೆಲಸಮಾಡಿದಾಗ ಅದರ ಕೀರ್ತಿಯನ್ನು ನೀನು ತೆಗೆದುಕೊಂಡು, ಕೆಟ್ಟಕೆಲಸಮಾಡಿದಾಗ ಮಾತ್ರ ಅದನ್ನು ದೇವರ ಮೇಲೆ ಹೊರಿಸುವುದು ಎಂತಹ ತಿಳಿಗೇಡಿತನ! ಇದೊಂದು ಅಪಾಯಕರವಾದ ಭಾವನೆ. ಗೀತೆ, ವೇದಾಂತಗಳನ್ನು ಅಪಾರ್ಥಮಾಡಿಕೊಂಡುದರ ಫಲ. ಈ ದೃಷ್ಟಿಯ ನ್ನೆಂದಿಗೂ ಇಟ್ಟುಕೊಳ್ಳಬೇಡ. ಅದಕ್ಕೆ ಬದಲು ಒಳ್ಳೆಯಕೆಲಸಗಳನ್ನೆಲ್ಲಾ ಅವನು ಮಾಡಿಸುತ್ತಿದ್ದಾನೆ, ಕೆಟ್ಟಕೆಲಸಗಳಿಗೆಲ್ಲಾ ನೀನು ಹೊಣೆ ಎಂಬ ಭಾವನೆ ಇಟ್ಟುಕೊ. ಇದರಿಂದ ನಿನ್ನಲ್ಲಿ ಶ್ರದ್ಧೆ ಮತ್ತು ಭಕ್ತಿ ಯುಂಟಾಗುವುದು. ಹೆಜ್ಜೆಹೆಜ್ಜೆಗೂ ನೀನು ಅವನ ಕೃಪೆಯ ಆವಿರ್ಭಾವನೆ ಯನ್ನು ನೋಡುವೆ. ವಾಸ್ತವಾಂಶವೇನೆಂದರೆ ಯಾರೂ ನಿನ್ನನ್ನು ಸೃಷ್ಟಿ ಸಿಲ್ಲ. ನೀನೇ ನಿನ್ನನ್ನು ಸೃಷ್ಟಿಸಿಕೊಂಡಿರುವೆ. ಇದೇ ವಿವೇಚನೆ, ಇದೇ ವೇದಾಂತ. ಭಗವತ್ಸಾಕ್ಷಾತ್ಕಾರಕ್ಕೆ ಮುಂಚೆ ಇದು ಯಾರಿಗೂ ಅರ್ಥ ವಾಗುವುದಿಲ್ಲ. ಆದ್ದರಿಂದ ಸಾಧಕನು ಯಾವಾಗಲೂ ದೇವರು ಒಳ್ಳೆಯ ಕೆಲಸಗಳಿಗೆ ಕಾರಣ, ತಾನು ಕೆಟ್ಟಕಾರ್ಯಗಳಿಗೆ ಕರ್ತ ಎಂಬ ದ್ವೈತಭಾವನೆ ಯಿಂದ ಪ್ರಾರಂಭಿಸಬೇಕು. ಇದೇ ಮನಸ್ಸನ್ನು ಶುದ್ಧಿಮಾಡಲು ಸುಲಭ ಮಾರ್ಗ. ಅದಕ್ಕೇ ವೈಷ್ಣವರಲ್ಲಿ ಈ ದ್ವೈತಭಾವನೆ ಅತ್ಯಂತ ಪ್ರಬಲವಾಗಿರು ವುದನ್ನು ನೋಡುವೆವು. ಪ್ರಾರಂಭದಲ್ಲೇ ಅದ್ವೈತಭಾವನೆಗೆ ಎಡೆ ಗೊಡುವುದು ಬಹುಕಷ್ಟ. ದ್ವೈತಭಾವನೆಯೇ ಕ್ರಮೇಣ ಅದ್ವೈತದ ಸಾಕ್ಷಾತ್ಕಾರಕ್ಕೆ ಒಯ್ಯುವುದು.

ಕಪಟಾಚರಣೆ ಯಾವಾಗಲೂ ತುಂಬಾ ಅಪಾಯಕರ. ತಿಳಿಯದೆ ಮಾಡುವ ಆತ್ಮವಂಚನೆ. ಎಂದರೆ ಅತ್ಯಂತ ಕೆಟ್ಟ ಪ್ರೇರೇಪಣೆ ಕೂಡ ಭಗ ವಂತನಿಂದಲೇ ಪ್ರೇರಿತವಾದದ್ದೆಂದು ಮನಃಪೂರ್ವಕವಾಗಿ ಯಾರು ನಂಬು ವನೋ ಅಂತಹವನು ಬಹುಕಾಲ ಈ ಕೀಳು ಕೆಲಸಗಳನ್ನು ಮಾಡಬೇಕಾಗು ವುದಿಲ್ಲವೆಂದು ದೃಢವಾಗಿ ನಂಬು. ಆತನ ಮನಸ್ಸಿನ ಕಲ್ಮಷವೆಲ್ಲಾ ಬಹು ಬೇಗ ನಾಶವಾಗುವುದು. ನಮ್ಮ ಪೂರ್ವ ಧರ್ಮಗ್ರಂಥಕರ್ತರು ಇವನ್ನು ಚೆನ್ನಾಗಿ ಗ್ರಹಿಸಿದ್ದರು. ಬೌದ್ಧಮತದ ಅವನತಿಯ ಕಾಲದಲ್ಲಿ ತಾಂತ್ರಿಕ

ಪೂಜಾ ವಿಧಾನವು ಪ್ರಾರಂಭವಾಗಿರಬೇಕೆಂದು ನನಗನ್ನಿಸುವುದು. ಬೌದ್ಧರ ದಬ್ಬಾಳಿಕೆಯಿಂದ ಜನರು ವೇದ ಕಾಲದ ಹೋಮಗಳನ್ನು ರಹಸ್ಯವಾಗಿ ಮಾಡಲುಪಕ್ರಮಿಸಿದರು. ಅವುಗಳನ್ನು ಎರಡು ತಿಂಗಳವರೆಗೆ ಅನಿರ್ಬಂಧವಾಗಿ ಮಾಡಲು ಅವಕಾಶಸಿಗದೆ ಹೋದ ಕಾರಣ ಅವರು ಮಣ್ಣಿನ ವಿಗ್ರಹಗಳನ್ನು ಮಾಡಿ, ಒಂದೇ ರಾತ್ರಿಯಲ್ಲಿ ಎಲ್ಲವನ್ನೂ ಪೂರೈಸಿ ಯಾವ ಗುರುತೂ ಇಲ್ಲದಂತೆ ನೀರಿನ ಪಾಲು ಮಾಡಿಬಿಡುತ್ತಿದ್ದರು. ಮಾನವ ಸಾಕಾರ ಸಂಕೇತವನ್ನು ಆಶಿಸುವನು. ಇಲ್ಲದಿದ್ದಲ್ಲಿ ಅವನ ಹೃದಯಕ್ಕೆ ತೃಪ್ತಿಯಾಗುವುದಿಲ್ಲ. ಆದ್ದರಿಂದ ಪ್ರತಿಯೊಂದು ಮನೆಯಲ್ಲಿಯೂ "ಒಂದು ರಾತ್ರಿ ಹೋಮ" ಮಾಡಲು ಪ್ರಾರಂಭವಾಯಿತು. ಆದರೆ ಜನರ ಪ್ರವೃತ್ತಿಗಳು ಕ್ರಮೇಣ ಇಂದ್ರಿಯಾಸಕ್ತವಾದುವು. ಶ್ರೀ ರಾಮಕೃಷ್ಣರು ಹೇಳುತ್ತಿದ್ದರು :—"ಕೆಲವರು ಮನೆಯನ್ನು ಜಾಡಮಾಲಿ ಪ್ರವೇಶಿಸುವ ಬಾಗಿಲಿನಿಂದ ಪ್ರವೇಶಿಸುವರು" ಎಂದು. ಅದಕ್ಕೆ ಆಗಿನ ಆಧ್ಯಾತ್ಮಿಕ ಗುರುಗಳು ಯಾರಿಗೆ ಅವರ ಕೆಟ್ಟ ಪ್ರವೃತ್ತಿಗಳ ಪರಿಣಾಮವಾಗಿ ಯಾವೊಂದು ಧಾರ್ಮಿಕ ವಿಧಿಗಳನ್ನೂ ಮಾಡಲಾರದವರಾಗಿರುವರೋ ಅಂಥವರೂ ಯಾವುದಾದರೊಂದು ಹಾದಿಯಿಂದ ಕ್ರಮೇಣ ಒಳ್ಳೆಯ ದಾರಿಗೆ ಬರುವುದು ಆವಶ್ಯಕವೆಂದು ತಿಳಿದರು. ಅವರಿಗಾಗಿ ಕೆಲವು ವಿಲಕ್ಷಣ ತಾಂತ್ರಿಕ ವಿಧಿಗಳನ್ನು ನಿರ್ಮಿಸಿದರು?

ಪ್ರಶ್ನೆ :—ಅವರು ಕೆಟ್ಟಕಾರ್ಯಗಳನ್ನೆಲ್ಲಾ ಅವು ಒಳ್ಳೆಯ ಕೆಲಸಗಳೆಂದು ತಿಳಿದು ಮಾಡುತ್ತಾ ಹೋದರೆ ಅದು ಅವರ ಕೆಟ್ಟ ಪ್ರವೃತ್ತಿಗಳನ್ನು ಹೇಗೆ ನಿವಾರಿಸುವುವು?

ಸ್ವಾಮಿಜಿ:—ಏಕೆ, ಅವರು ಅವರ ಪ್ರವೃತ್ತಿಗಳನ್ನು ಬೇರೆ ಮಾರ್ಗಕ್ಕೆ ತಿರುಗಿಸಿದರು— ದೇವರ ಸಾಕ್ಷಾತ್ಕಾರಕ್ಕಾಗಿಯೇ ಅವರು ಅವುಗಳನ್ನು ಮಾಡಿದರು.

ಪ್ರಶ್ನೆ :— ಇದು ನಿಜವಾಗಿಯೂ ಸಾಧ್ಯವೆ ?

ಸ್ವಾಮಿಜಿ :—ಅದರ ಗುರಿಯೂ ಒಂದೇ. ಉದ್ದೇಶ ಮಾತ್ರ ಸರಿಯಾಗಿರಬೇಕು. ಅವರು ಜಯಶಾಲಿಗಳಾಗಲು ಯಾವ ಆತಂಕವಿದೆ?

ಪ್ರಶ್ನೆ :—ಆದರೆ ಎಷ್ಟೋ ಮಂದಿ ಈ ಬಗೆಯ ಸಾಧನದ ಮೂಲಕ ಹೋಗಬೇಕೆಂದು ಪ್ರಯತ್ನಿಸಿ, ಕುಡಿತ ಮಾಂಸ ಭಕ್ಷಣ ಮುಂತಾದುವುಗಳ ಬಲೆಗೆ ಬಿದ್ದಿರುವರು.

ಸ್ವಾಮಿಜಿ:—ಅದಕ್ಕೇ ಶ್ರೀ ರಾಮಕೃಷ್ಣರು ಬಂದುದು. ಆ ರೀತಿ ತಂತ್ರ ಸಾಧನೆ ಮಾಡುತ್ತಿದ್ದಕಾಲ ಕಳೆದುಹೋಯಿತು. ಅವರೂ ತಾಂತ್ರಿಕ ಸಾಧನೆ ಮಾಡಿದರು, ಈ ದೃಷ್ಟಿಯಿಂದಲ್ಲ. ಎಲ್ಲಿ ಮದ್ಯಕುಡಿಯ ಬೇಕೆಂಬ ಕಟ್ಟಳೆ ಇದೆಯೋ ಅಲ್ಲಿ ಅವರು ಒಂದು ತೊಟ್ಟನ್ನು ಸುಮ್ಮನೆ ತಲೆಗೆ ಸೋಕಿಸಿಕೊಳ್ಳುತ್ತಿದ್ದರು. ತಾಂತ್ರಿಕ ಸಾಧನೆಯ ಪೂಜೆ ಬಹಳ ಕೃತ್ರಿಮದ ಹಾದಿ. ಅದಕ್ಕೇ ನಾನು ಹೇಳಿದ್ದು ಈ ಪ್ರದೇಶದಲ್ಲಿ ಸಾಕಷ್ಟು ತಾಂತ್ರಿಕ ಸಾಧನೆಯಾಗಿದೆ. ಈಗ ಅದನ್ನು ಮೀರಿ ಹೋಗಬೇಕು. ವೇದಗಳನ್ನು ವ್ಯಾಸಂಗ ಮಾಡಬೇಕು. ನಾಲ್ಕು ಬಗೆಯ ಯೋಗಗಳ ಸಾಮರಸ್ಯವನ್ನು ಸಾಧನೆ ಮಾಡಬೇಕು. ಸಂಪೂರ್ಣ ಜಿತೇಂದ್ರಿಯತ್ವವನ್ನು ಉಳಿಸಿಕೊಳ್ಳಬೇಕು.

ಪ್ರಶ್ನೆ:—ನಾಲ್ಕು ಯೋಗಗಳ ಸಾಮರಸ್ಯ ಎಂದರೆ ನಿಮ್ಮ ಅಭಿಪ್ರಾಯವೇನು?

ಸ್ವಾಮಿಜಿ:—ಸತ್ಯ ಮಿಥ್ಯೆಗಳ ವಿವೇಚನಾ ಜ್ಞಾನ, ವೈರಾಗ್ಯ ಭಕ್ತಿ, ಕರ್ಮ ಧ್ಯಾನ ಇವುಗಳೊಡನೆ ಸ್ತ್ರೀಯರಲ್ಲಿ ಪೂಜ್ಯಭಾವನೆ ಇರಬೇಕು.

ಪ್ರಶ್ನೆ:—ಸ್ತ್ರೀಯರನ್ನು ಹೇಗೆ ಪೂಜ್ಯ ದೃಷ್ಟಿಯಿಂದ ನೋಡುವುದು?

ಸ್ವಾಮಿಜಿ:—ಅವರು ಜಗನ್ಮಾತೆಯ ಪ್ರತಿನಿಧಿಸ್ವರೂಪರು. ಎಂದು ಜಗನ್ಮಾತೆಯ ನಿಜವಾದ ಪೂಜೆ ಪ್ರಾರಂಭವಾಗುವುದೊ ಪ್ರತಿಯೊಬ್ಬ ಮನುಷ್ಯನೂ ಮಾತೆಯ ಸಾನ್ನಿಧ್ಯದಲ್ಲಿ ತನ್ನನ್ನು ಅರ್ಪಿಸಿಕೊಳ್ಳುವನೊ ಅಂದಿನಿಂದ ಭರತಖಂಡದ ನಿಜವಾದ ಏಳ್ಗೆ ಪ್ರಾರಂಭವಾಗುವುದು.

ಪ್ರಶ್ನೆ:—ಸ್ವಾಮಿಜಿ, ನೀವು ಹುಡುಗರಾಗಿದ್ದಾಗ, ನಿಮ್ಮನ್ನು ಮದುವೆಮಾಡಿಕೊಳ್ಳಿರೆಂದು ಪ್ರಶ್ನಿಸಿದಾಗ ನೀವು "ಮಾಡಿಕೊಳ್ಳುವುದಿಲ್ಲ, ನಾನೇನಾಗುವೆನೆಂಬುದನ್ನು ನೀವು ನೋಡುತ್ತೀರಿ" ಎಂದು ಉತ್ತರ ಕೊಡುತ್ತಿದ್ದಿರಿ. ನಿಮ್ಮ ಮಾತುಗಳನ್ನು ಅಕ್ಷರಶಃ ಸಮರ್ಥಿಸಿದಿರಿ.

ಸ್ವಾಮಿಜಿ:—ಹೌದು, ನನ್ನ ಪ್ರಿಯಸಹೋದರ! ನೀನೇ ನೋಡಿದ್ದೆ. ನನಗೆಷ್ಟು ಆಹಾರದ ಅಭಾವವಿತ್ತು, ಜೊತೆಗೆ ನಾನೆಷ್ಟು ಕಷ್ಟಪಟ್ಟು ಕೆಲಸಮಾಡಬೇಕಾಗಿತ್ತು. ಓ! ಅದೆಂತಹ ಕಠೋರವಾದ ದುಡಿತ! ಇಂದು ಅಮೆರಿಕನ್ನರು ಪ್ರೀತಿಯಿಂದ ಈ ಒಳ್ಳೆಯ ಹಾಸಿಗೆಯನ್ನು ಕೊಟ್ಟಿರುವರು. ನನಗೆ ಉಣ್ಣಲೂ ಕೊಂಚ ಇದೆ. ಆದರೆ ಅಯ್ಯೊ! ನನಗೆ ಶಾರೀರಕವಾಗಿ ಸುಖಪಡಲು ಹಣೆಯಲ್ಲಿ ಬರೆದಿಲ್ಲ. ಈ ಸುಪ್ಪತ್ತಿಗೆ

ಯಲ್ಲಿ ಮಲಗುವುದರಿಂದ ನನ್ನ ಖಾಯಿಲೆ ಇನ್ನೂ ಉಲ್ಬಣವಾಗಿ ನನಗೆ ಉಸಿರು ಕಟ್ಟಿದಂತಾಗುವುದು. ಅದರ ವಿಮೋಚನೆಗಾಗಿ ನಾನು ಇಳಿದು ಬಂದು ನೆಲದಮೇಲೆ ಮಲಗಬೇಕು.

೩

ನಮ್ಮ ಮನೆ ಸ್ವಾಮಿಜಿ ಮನೆಗೆ ತುಂಬ ಸಮೀಪದಲ್ಲಿತ್ತು. ನಾವು ಪಟ್ಟಣದ ಒಂದೇ ಭಾಗದಲ್ಲಿದ್ದ ಹುಡುಗರಾಗಿದ್ದುದರಿಂದ ನಾನು ಅವರೊಡನೆ ಅನೇಕವೇಳೆ ಆಟವಾಡುತ್ತಿದ್ದೆ. ಬಾಲ್ಯಾರಭ್ಯ ಅವರನ್ನು ಕಂಡರೆ ನನಗೆ ಅನನ್ಯ ವಿಶ್ವಾಸವಿತ್ತು. ಅವರು ಒಬ್ಬ ಪ್ರಖ್ಯಾತ ವ್ಯಕ್ತಿಗಳಾಗುವರೆಂದು ನನಗೆ ದೃಢವಾದ ನಂಬುಗೆಯಿತ್ತು. ಅವರು ಸನ್ಯಾಸಿಗಳಾದಾಗ ಉಚ್ಚಪದವಿಗೇರುವರೆಂಬ ಭರವಸೆಯೆಲ್ಲಾ ವ್ಯರ್ಥವಾಯಿತು.

ನಂತರ ಅವರು ಅಮೆರಿಕಾಕ್ಕೆ ಹೋದಾಗ ನಾನು ವರ್ತಮಾನ ಪತ್ರಿಕೆಗಳಲ್ಲಿ ಅವರು ಚಿಕಾಗೋ ಸರ್ವಧರ್ಮಸಮ್ಮೇಳನದಲ್ಲಿ ಮತ್ತು ಅಮೆರಿಕಾದ ಹಲವು ಭಾಗಗಳಲ್ಲಿ ಮಾಡಿದ ಭಾಷಣಗಳ ಸುದ್ದಿಯನ್ನೋದಿದೆ. "ಬಟ್ಟೆಯ ಕೆಳಗೆ ಮುಚ್ಚಿಟ್ಟ ಬೆಂಕಿಯು ಎಂದಿಗೂ ಸುಮ್ಮನಿರುವುದಿಲ್ಲ" ಆಗ ಎಂದುಕೊಂಡೆ. (ಬಟ್ಟೆಯ ಕೆಳಗೆ ಬೆಂಕಿಯನ್ನು ಬಚ್ಚಿಡಲಾಗುವುದೆ?) ಸ್ವಾಮಿಜಿಯಲ್ಲಿ ಇಷ್ಟು ದಿನಗಳೂ ಹುದುಗಿದ್ದ ಕೆಚ್ಚು ತೇಜಸ್ಸು ಈಗ ಉಜ್ವಲವಾಗಿ ಹೊರಹೊಮ್ಮಿತು. ಇಷ್ಟು ವರುಷಗಳ ನಂತರ ಮೊಗ್ಗು ಅರಳಿತು, ಈಗ ಹೂವಾಯಿತು.

ಕೆಲವು ಕಾಲಾನಂತರ ಅವರು ಭರತಖಂಡಕ್ಕೆ ಹಿಂತಿರುಗಿರುವರೆಂದೂ ಮದ್ರಾಸಿನಲ್ಲಿ ಪ್ರಚಂಡ ಭಾಷಣಗಳನ್ನು ಕೊಡುತ್ತಿರುವರೆಂದು ನನಗೆ ತಿಳಿದುಬಂತು. ಅವುಗಳನ್ನೋದಿ ನನಗೆ ಹಿಂದೂ ಧರ್ಮದಲ್ಲಿ ಇಂತಹ ಮಹತ್ವ ಸತ್ಯಗಳೂ ಇವೆ, ಅವುಗಳನ್ನು ಇಷ್ಟೊಂದು ಸ್ಪಷ್ಟವಾಗಿ ವಿವರಿಸಲೂ ಸಾಧ್ಯ ಎಂದು ಆಶ್ಚರ್ಯವಾಯಿತು. ಅವರಿಗೆ ಎಂತಹ ಅಸಾಧಾರಣ ಶಕ್ತಿ ಇತ್ತು! ಅವರು ಮಾನವರೊ, ದೇವತೆಗಳೊ!

ಸ್ವಾಮಿಜಿ ಕಲ್ಕತ್ತೆಗೆ ಬಂದಾಗ ಪ್ರಚಂಡ ಉತ್ಸಾಹ ಹಬ್ಬಿತ್ತು. ನಾವು ಕಾಶೀಪುರದಲ್ಲಿ ಗಂಗಾನದಿಯ ಮೇಲಿದ್ದ ಸೀಲ್‌ರವರ ತೋಟದ ಮನೆಗೆ ಅವರನ್ನು ಹಿಂಬಾಲಿಸಿ ಹೋದೆವು. ಕೆಲವು ದಿನಗಳ ನಂತರ ರಾಜಾ ರಾಧಾಕಾಂತದೇವ್‌ರವರ ನಿವಾಸದಲ್ಲಿ "ಕಲ್ಕತ್ತೆಯ ಹುಡುಗ"

ಒಂದು ಪ್ರಚಂಡ ಜನಸಮುದಾಯಕ್ಕೆ ತಮ್ಮ ಸ್ವಾಗತದ ಬಿನ್ನವತ್ತಳೆಗೆ ಉತ್ತರ ಕೊಡುತ್ತ ಒಂದು ಸ್ಫೂರ್ತಿದಾಯಕವಾದ ಭಾಷಣವನ್ನು ಮಾಡಿದರು. ಕಲ್ಕತ್ತೆಯು ಮೊದಲುಬಾರಿ ಅವರ ಭಾಷಣವನ್ನು ಕೇಳಿ ಅವರನ್ನು ಮೆಚ್ಚಿ ಕೊಂಡಾಡಿತು.

ಅವರು ಕಲ್ಕತ್ತೆಗೆ ಬಂದಮೇಲೆ ನಾನವರನ್ನೊಮ್ಮೆ ಏಕಾಂತದಲ್ಲಿ ಭೇಟಿಮಾಡಿ ನಾವು ಹುಡುಗರಾಗಿದ್ದಾಗ ಮಾತನಾಡುತ್ತಿದ್ದಂತೆ ಸದರವಾಗಿ ಮಾತನಾಡಬೇಕೆಂದು ತುಂಬಾ ಉತ್ಸುಕನಾಗಿದ್ದೆ. ಆದರೆ ಯಾವಾಗಲೂ ಅವರ ಸುತ್ತಲೂ ಕುತೂಹಲಿಗಳಾದ ಅನ್ವೇಷಕರು ಮುತ್ತಿರುತ್ತಿದ್ದುದರಿಂದ ಸಂಭಾಷಣೆ ನಿರರ್ಗಳವಾಗಿ ಸಾಗುತ್ತಿತ್ತು. ಆದ್ದರಿಂದ ಕೆಲವು ಕಾಲದ ವರೆಗೆ ನನಗೆ ಅವಕಾಶ ದೊರಕಲಿಲ್ಲ. ಒಮ್ಮೆ ನಾವಿಬ್ಬರೂ ಗಂಗಾತೀರ ದಲ್ಲಿದ್ದ ತೋಟದಲ್ಲಿ ಅಡ್ಡಾಡಲು ಹೋಗಿದ್ದಾಗ ಈ ಅವಕಾಶ ದೊರಕಿತು. ಕೂಡಲೇ ಸ್ವಾಮಿಜಿ ಹಿಂದಿನ ನನ್ನ ಬಾಲ್ಯ ಸ್ನೇಹಿತನಂತೆ ನನ್ನೊಡನೆ ಮಾತನಾಡತೊಡಗಿದರು. ಕೊಂಚ ನಾವು ಮಾತನಾಡುವಷ್ಟರಲ್ಲೇ ಬಾರಿ ಬಾರಿಗೂ ಸ್ವಾಮಿಜಿಗೆ ಅನೇಕ ಸಭ್ಯ ಗೃಹಸ್ಥರು ಅವರ ಭೇಟಿಗಾಗಿ ಬಂದಿರುವರೆಂದು ಕರೆ ಬರತೊಡಗಿತು. ಕೊನೆಗೆ ಸ್ವಾಮಿಜಿ ಕೊಂಚ ರೇಗಿ, ಆ ಸುದ್ದಿ ತಂದವನಿಗೆ "ಮಗು, ನನಗೆ ಕೊಂಚ ವಿಶ್ರಾಂತಿಕೊಡು. ನನ್ನ ಬಾಲ್ಯ ಸ್ನೇಹಿತನಾದ ಇವನೊಡನೆ ಕೊಂಚ ಮಾತನಾಡಲು ಬಿಡು. ಕೊಂಚ ಹೊತ್ತು ನಾನು ಬಯಲಿನಲ್ಲಿರಲು ಬಿಡಿ. ಹೋಗು, ಬಂದವರನ್ನು ಸ್ವಾಗತಿಸಿ ಅವರಿಗೆ ಕುಳ್ಳಿರಲು ಹೇಳಿ ಹೊಗೆಸೊಪ್ಪನ್ನು ಕೊಟ್ಟು, ಕೊಂಚ ಕಾದಿರಬೇಕೆಂದು ಅರಿಕೆ ಮಾಡಿಕೊ" ಎಂದರು.

ಪುನಃ ನಾವಿಬ್ಬರೇ ಆದಾಗ ನಾನವರನ್ನು ಕೇಳಿದೆ: "ಸ್ವಾಮಿಜಿ, ನೀವೊಬ್ಬ ಸಾಧುಗಳು. ನಿಮ್ಮ ಸ್ವಾಗತ ಸಮಾರಂಭಕ್ಕಾಗಿ ಚಂದಾ ಎತ್ತಿ ಹಣವನ್ನು ಕೂಡಿಸಿದ್ದರು. ಈಗ ಈ ದೇಶದಲ್ಲಿ ಬರಗಾಲ (ಕ್ಷಾಮ) ಬಂದಿರುವುದರಿಂದ ನೀವು ಕಲ್ಕತ್ತೆಗೆ ಬರುವ ಮೊದಲೇ ಒಂದು ತಂತಿ ಯನ್ನು "ನನ್ನ ಸ್ವಾಗತಕ್ಕಾಗಿ ಒಂದು ಬಿಡಿಕಾಸನ್ನೂ ಖರ್ಚುಮಾಡ ಬೇಡಿ. ಬದಲು ಕ್ಷಾಮನಿವಾರಣಾನಿಧಿಗೆ ಆ ಹಣವನ್ನೆಲ್ಲಾ ಕೊಟ್ಟು ಸಹಾಯಮಾಡಿ" ಎಂದು ಕಳುಹಿಸುವಿರೆಂದುಕೊಂಡಿದ್ದೆ. ಆದರೆ ನೀವು ಆರೀತಿ ಮಾಡಲಿಲ್ಲವೆಂದು ನನಗೆ ಗೊತ್ತಾಯಿತು. ಅದು ಹೇಗೆ?

ಸ್ವಾಮಿಜಿ:—ಏಕೆ? ನಾನು ಪ್ರಚಂಡ ಉತ್ಸಾಹವನ್ನು ಎಬ್ಬಿಸ

ಬೇಕೆಂದು ಇಚ್ಛೆಪಟ್ಟೆ. ನೀನೇ ನೋಡು, ಹೀಗೆ ಮಾಡದೇ ಇದ್ದಿದ್ದರೆ ಶ್ರೀ ರಾಮಕೃಷ್ಣರೆಡೆಗೆ ಜನರೆಲ್ಲಾ ಹೇಗೆ ಆಕರ್ಷಿತರಾಗಿ ಆತನ ಹೆಸರಿನಲ್ಲಿ ಹೇಗೆ ಉತ್ಸುಕರಾಗುತ್ತಿದ್ದರು? ಉತ್ಸಾಹಪೂರ್ಣ ಸ್ವಾಗತ ನನ್ನ ವ್ಯಕ್ತಿತ್ವಕ್ಕಾಗಿಯೋ ಅಥವಾ ಇದರಿಂದ ಅವರ ಹೆಸರಿಗೆ ಕೀರ್ತಿ ಬಂತೂ? ನೋಡು, ಜನರ ಮನಸ್ಸಿನಲ್ಲೆಲ್ಲಾ ಅವರ ವಿಷಯ ಹೆಚ್ಚು ತಿಳಿಯಬೇಕೆಂದು ಎಂತಹ ತೃಷೆ ಉತ್ಪನ್ನವಾಗಿದೆ? ಈಗ ಅವರು ಕ್ರಮೇಣ ಅವರ ವಿಷಯವನ್ನು ತಿಳಿದುಕೊಳ್ಳುವರು. ಇದರಿಂದ ದೇಶದ ಏಳ್ಗೆಗೆ ಸಹಾಯವಾಗುವುದಿಲ್ಲವೆ? ಯಾರು ನಮ್ಮ ದೇಶದ ಕಲ್ಯಾಣಕ್ಕಾಗಿ ಬಂದರೊ ಅವರ ವಿಷಯವೆ ಜನರಿಗೆ ಗೊತ್ತಿಲ್ಲದೆ ಹೋದರೆ ಅವರಿಗೆ ಹೇಗೆ ಒಳ್ಳೆಯದಾಗುವುದು? ಅವರು ನಿಜವಾಗಿ ಯಾರೆಂಬುದು ತಿಳಿದಾಗ ಮನುಷ್ಯರು–ನಿಜವಾದ ಮನುಷ್ಯರು ಆಗುವರು. ಯಾವಾಗ ಅಂತಹ ಮನುಷ್ಯರಿರುವರೊ ಆಗ ದೇಶದಿಂದ ಈ ಕ್ಷಾಮ ಮುಂತಾದುವನ್ನು ಹೊಡೆದೋಡಿಸಲು ಎಷ್ಟು ಸಮಯ ಬೇಕಾಗುವುದು? ಅದಕ್ಕೆ ನಾನು ಹೇಳುವೆ–ಕಲ್ಕತ್ತೆಯಲ್ಲಿ ಕೊಂಚ ಉತ್ಸಾಹ, ಗಡಿಬಿಡಿಯಾಗಲಿ, ಇದರಿಂದ ಜನಸಾಮಾನ್ಯರು ಶ್ರೀ ರಾಮಕೃಷ್ಣ ಸಂಸ್ಥೆಯಲ್ಲಿ ನಂಬಿಕೆಇಟ್ಟು ಕೊಂಚವಾದರೂ ಅದಕ್ಕೆ ಮನಸ್ಸುಕೊಡಲಿ, ಎಂದು ಇಚ್ಛೆಪಟ್ಟೆ. ಇಲ್ಲದಿದ್ದಲ್ಲಿ ಕೇವಲ ನನಗಾಗಿ ಇಷ್ಟೊಂದು ಗದ್ದಲದ ಆವಶ್ಯಕತೆ ಏನಿತ್ತು? ಇದನ್ನು ಕಟ್ಟಿಕೊಂಡು ನನಗೇನು? ನಿಮ್ಮ ಮನೆಯಲ್ಲಿ ನಿನ್ನೊಡನೆ ಆಟವಾಡುತ್ತಿದ್ದಾಗಿನಿಂದಲೂ ಈಗ ನಾನು ಹೆಚ್ಚು ಶ್ರೇಷ್ಠನಾಗಿರುವೆನೇನು? ನಾನು ಎಂದಿನಂತೆ ಇಂದೂ ಇರುವೆ. ಹೇಳು ನಿನಗೆ ನನ್ನಲ್ಲಿ ಏನಾದರೂ ಬದಲಾವಣೆ ಕಂಡುಬರುವುದೇನು?

ನಾನು "ಇಲ್ಲ, ಹೇಳುವಷ್ಟು ನಿಮ್ಮಲ್ಲಿ ಯಾವ ಬದಲಾವಣೆಯೂ ಆಗಿಲ್ಲ" ಎಂದು ಬಾಯಲ್ಲಿ ಹೇಳಿದರೂ ಮನಸ್ಸಿನಲ್ಲಿ "ನಿಜವಾಗಿಯೂ ಈಗ ನೀನು ದೇವರಾಗಿರುವೆ" ಎಂದುಕೊಂಡೆ. ಸ್ವಾಮಿಜಿ ಮುಂದುವರಿಸಿದರು "ನಮ್ಮ ದೇಶದಲ್ಲಿ ಕ್ಷಾಮ ಒಂದು ನಿರಂತರ ವಿಪತ್ತಾಗಿತ್ತು. ಈಗ ಅದು ಒಂದು ರೋಗವಾಗಿ ಪರಿಣಮಿಸಿದೆ. ಇನ್ನಾವ ದೇಶದಲ್ಲಾದರೂ ಕ್ಷಾಮದ ಹಾವಳಿ ಮೇಲಿಂದಮೇಲೆ ಸಂಭವಿಸುವುದನ್ನು ನೋಡಿರುವೆಯಾ? ಇಲ್ಲ. ಏಕೆಂದರೆ ಇತರ ದೇಶಗಳಲ್ಲಿ ಮನುಷ್ಯರಿದ್ದಾರೆ. ನಮ್ಮ ದೇಶದಲ್ಲಾದರೋ ಜನರು ಜಡರಾಗಿ ನಿರ್ಜೀವ ವಸ್ತು

ಗಳಾಗಿದ್ದಾರೆ. ಮೊದಲು ಜನರು ಶ್ರೀ ರಾಮಕೃಷ್ಣರ ವಿಷಯವನ್ನು ಓದಿ ಅವರು ನಿಜವಾಗಿಯೂ ಯಾರೆಂಬುದನ್ನು ತಿಳಿದು ತಮ್ಮ ಸ್ವಾರ್ಥ ಬುದ್ಧಿಯನ್ನು ತ್ಯಾಗ ಮಾಡುವುದನ್ನು ಕಲಿಯಲಿ. ನಂತರ ಪದೇ ಪದೇ ಬರುತ್ತಿರುವ ಕ್ಷಾಮವನ್ನು ನಿಲ್ಲಿಸಲು ನಿಜವಾದ ಪ್ರಯತ್ನಗಳು ಉತ್ಪನ್ನವಾಗುವುವು. ಸದ್ಯದಲ್ಲೇ ನಾನು ಆ ಕಾರ್ಯಕ್ಕೂ ಕೊಂಚ ಪ್ರಯತ್ನಪಡಬೇಕೆಂದಿರುವೆ. ನೀನೇ ನೋಡುವೆ.

ನಾನು:—ಅದು ಒಳ್ಳೆಯದು. ಹಾಗಾದರೆ ನೀವಿಲ್ಲಿ ಅನೇಕ ಭಾಷಣಗಳನ್ನು ಕೊಡುವಿರೆಂದು ಭಾವಿಸುವೆ. ಇಲ್ಲದಿದ್ದಲ್ಲಿ ಅವರ ಹೆಸರನ್ನು ಬೋಧಿಸಲು ಹೇಗೆ ಸಾಧ್ಯ?

ಸ್ವಾಮಿಜಿ:—ಕೆಲಸಕ್ಕೆ ಬಾರದುದು! ಆ ಬಗೆಯೇನೂ ಇಲ್ಲ! ಅವರ ಹೆಸರು ಪ್ರಕಾಶಕ್ಕೆ ಬರಲು ಯಾವ ಕೆಲಸವಾದರೂ ಆಗದೆ ಹಾಗೇ ನಿಂತಿರುವುದೇನು? ಆ ಹಾದಿಯಲ್ಲಿ ಸಾಕಷ್ಟು ಮಾಡಿಯಾಗಿದೆ. ಈ ದೇಶದಲ್ಲಿ ಭಾಷಣಗಳಿಂದೇನು ಪ್ರಯೋಜನವಿಲ್ಲ. ನಮ್ಮ ದೇಶದ ವಿದ್ಯಾವಂತರು ಅದನ್ನು ಕೇಳುವರು. ಹೆಚ್ಚೆಂದರೆ ಆನಂದದಿಂದ ಪ್ರೋಷಿಸಿ ಬಹಳ ಚೆನ್ನಾಗಿದೆ ಎಂದು ಕೈ ಚಪ್ಪಾಳೆ ತಟ್ಟುವರು. ಅಷ್ಟೇ, ನಂತರ ಅವರು ಮನೆಗೆ ಹೋಗಿ, ನಾವು ಹೇಳುವ ಹಾಗೆ, ಕೇಳಿದುದೆಲ್ಲವನ್ನೂ ತಮ್ಮ ಊಟದೊಂದಿಗೆ ಜೀರ್ಣಿಸಿಕೊಳ್ಳುವರು. ತುಕ್ಕು ಹಿಡಿಯಲ್ಪಟ್ಟ ಹಳೆಯ ಕಬ್ಬಿಣದ ತುಂಡನ್ನು ಸುತ್ತಿಗೆಯಿಂದ ಎಷ್ಟು ಕುಟ್ಟಿದರೆ ತಾನೇ ಏನು ಪ್ರಯೋಜನ? ಅದು ಕೇವಲ ಪುಡಿಪುಡಿಯಾಗುವುದಕ್ಕೆ ಮೊದಲು ಅದನ್ನು ಕೆಂಪಗೆ ಕೆಂಡದಂತೆ ಕಾಯಿಸಿ ನಂತರ ಸುತ್ತಿಗೆಯಿಂದ ಹೊಡೆದು ನಮಗೆ ಬೇಕಾದ ಆಕಾರವನ್ನು ಕೊಡಬಹುದು. ನಮ್ಮ ದೇಶದಲ್ಲಿ ಉಜ್ವಲವಾದ ಜೀವಂತ ದೃಷ್ಟಾಂತವನ್ನು ಜನರೆದುರಿಗಿಟ್ಟ ಹೊರತು ಯಾವುದೂ ಪ್ರಯೋಜನವಿಲ್ಲ. ನಮಗೆ ಬೇಕಾಗಿರುವುದು ಎಲ್ಲವನ್ನೂ ತ್ಯಾಗಮಾಡಿ ದೇಶಕ್ಕಾಗಿ ತಮ್ಮ ಜೀವನವನ್ನೇ ಅರ್ಪಿಸುವಂತಹ ಕೆಲವು ಮಂದಿ ಯುವಕರು. ಮೊದಲು ನಾವು ಅವರ ಜೀವನವನ್ನು ಮಾದರಿಯ ಜೀವನವನ್ನಾಗಿ ಮಾಡಬೇಕು. ನಂತರ ಅವರಿಂದ ಕೊಂಚ ನಿಜವಾದ ಕೆಲಸವನ್ನು ನಿರೀಕ್ಷಿಸಬಹುದು.

ನಾನು:—ಸರಿ, ಸ್ವಾಮಿಜಿ, ನನಗೆ ಯಾವಾಗಲೂ ಇದನ್ನು ಬಗೆಹರಿಸಲಾಗುವುದಿಲ್ಲ. ನಮ್ಮ ದೇಶೀಯರು ತಮ್ಮ ಸ್ವಧರ್ಮವನ್ನೇ ಅರ್ಥಮಾಡಿ

ಕೊಳ್ಳಲಾರವೆ ಪರಧರ್ಮಗಳಾದ ಕ್ರೈಸ್ತ, ಮುಹಮ್ಮದೀಯರ ಧರ್ಮವನ್ನವ ಲಂಬಿಸತೊಡಗಿದ್ದಾಗ, ನೀವು ಅವರಿಗೆ ಏನನ್ನಾದರೂ ಮಾಡುವುದನ್ನು ಬಿಟ್ಟು, ಇಂಗ್ಲೆಂಡ್ ಮತ್ತು ಅಮೆರಿಕಾ ದೇಶಕ್ಕೆ ಹಿಂದೂಧರ್ಮ ಪ್ರಚಾರ ಮಾಡಲು ಹೋದಿರಲ್ಲ.

ಸ್ವಾಮಿಜಿ:—ಪರಿಸ್ಥಿತಿ ಈಗ ಬದಲಾಯಿಸಿರುವುದು ಕಾಣುವುದಿಲ್ಲವೆ? ನಮ್ಮ ದೇಶೀಯರಿಗೆ ಸತ್ಯವಾದ ಧರ್ಮವನ್ನು ಅವಲಂಬಿಸಿ, ಅದನ್ನು ಸಾಧನೆಮಾಡುವಷ್ಟು ಶಕ್ತಿಯಾದರೂ ಉಳಿದಿರುವುದೇನು? ತಾವು ಸಾತ್ತ್ವಿಕರೆಂದು ತಮ್ಮಲ್ಲಿ ತಾವೇ ಹೆಮ್ಮೆಪಡುವುದೊಂದೇ ಅವರಿಗಿರುವುದು. ಒಂದು ಕಾಲದಲ್ಲಿ ಅವರು ಸಾತ್ತ್ವಿಕರಾಗಿದ್ದರೆಂಬುದು ಖಂಡಿತವಾಗಿಯೂ ನಿಜ. ಆದರೆ ಈಗ ಅವರು ತುಂಬಾ ಅಧೋಗತಿಗಿಳಿದಿರುವರು. ಸತ್ತ್ವದಿಂದ ಉರುಳಿದವನು ಒಂದೇ ಬಾರಿ ತಾಮಸಕ್ಕೆ ಬೀಳುವನು. ಅವರಿಗಾಗಿರುವುದು ಇದೇ. ಯಾವ ಮನುಷ್ಯ ಕೊಂಚವೂ ದೇಹಶ್ರಮಪಡದೆ ಕೇವಲ ಹರಿನಾಮವನ್ನು ಜಪಿಸುತ್ತಾ ಕೊಠಡಿಯ ಬಾಗಿಲನ್ನು ಮುಚ್ಚಿಕೊಂಡು ಕುಳಿತಿರುವನೊ, ಯಾರು ಸ್ವತಃ ತನ್ನ ಕಣ್ಣೆದುರಿಗೇ ಇತರರಿಗಾಗುತ್ತಿರುವ ಅನ್ಯಾಯ ಅತ್ಯಾಚಾರಗಳನ್ನು ನೋಡಿಯೂ ಮೌನವಾಗಿ ಉದಾಸೀನದಿಂದಿರುವನೋ ಅಂತಹ ಮನುಷ್ಯನಿಗೆ ಸಾತ್ತ್ವಿಕ ಗುಣವಿದೆಯೆನ್ನುವೆಯೇನು? ಖಂಡಿತವಾಗಿಯೂ ಇಲ್ಲ. ಅಂಥವನು ಸಂಪೂರ್ಣ ತಾಮಸದ ಆವರಣದಿಂದ ಆಚ್ಛಾದಿತನಾಗಿರುವನು. ಒಂದು ದೇಶದ ಜನರು ತಮ್ಮ ಹಸಿವನ್ನಿಂಗಿಸಲು ಸಾಕಷ್ಟು ಆಹಾರವೂ ಇಲ್ಲದೆ ಇದ್ದಾಗ ಹೇಗೆ ತಾನೆ ಧರ್ಮವನ್ನು ಸಾಧಿಸಬಲ್ಲರು? ಭೋಗದ ಆಸೆ ಆಕಾಂಕ್ಷೆ ತುಂಬಿದ ಮನಸ್ಸಿಗೆ ಕೊಂಚವೂ ತೃಪ್ತಿ ಸಿಗದೆ ಇರುವಾಗ ಆ ದೇಶದ ಜನರಿಗೆ ತ್ಯಾಗಬುದ್ಧಿ ಹೇಗೆ ತಾನೆ ಬರುವುದು? ಆದ್ದರಿಂದಲೇ ಮೊಟ್ಟಮೊದಲು ಜನರಿಗೆ ಸಾಕಷ್ಟು ತಿನ್ನಲು ಆಹಾರ ಮತ್ತು ಕೊಂಚ ಭೋಗಿಸಲು ಸಾಕಷ್ಟು ಭೋಗಸಾಮಗ್ರಿ ಇಷ್ಟು ಸಿಗುವ ಮಾರ್ಗೋಪಾಯವನ್ನು ಕಂಡು ಹಿಡಿ. ನಂತರ ಕ್ರಮೇಣ ನಿಜವಾದ ವೈರಾಗ್ಯ ಬರುವುದು. ಜನರು ಜೀವನದಲ್ಲಿ ಧರ್ಮಸಾಕ್ಷಾತ್ಕಾರಮಾಡಿಕೊಳ್ಳಲು ಅರ್ಹರಾಗಿ, ಸಿದ್ಧವಾಗುವರು. ಇಂಗ್ಲೆಂಡ್ ಮತ್ತುಅಮೆರಿಕಾ ದೇಶೀಯರು ಎಂತಹ ರಾಜಸಿಕ ಪ್ರವೃತ್ತಿಯಿಂದ ತುಂಬಿತುಳುಕಾಡುತ್ತಿರುವರು! ಅವರು ಎಲ್ಲಾ ಬಗೆ ಪ್ರಾಪಂಚಿಕ ಸುಖ ಭೋಗಗಳಿಂದಲೂ ಸಂತೃಪ್ತರಾಗಿ

ದ್ದಾರೆ. ಅದೂ ಅಲ್ಲದೆ ಶ್ರದ್ಧೆ ಮತ್ತು ಮೂಢಭಕ್ತಿಯ ಧರ್ಮವಾದ ಕ್ರೈಸ್ತ ಧರ್ಮ ನಮ್ಮ ಪುರಾಣಗಳ ಧರ್ಮದ ಮಟ್ಟಕ್ಕೆ ಸೇರುವುದು. ಪಾಶ್ಚಾತ್ಯರಿಗೆ ವಿದ್ಯೆ ಮತ್ತು ಸಂಸ್ಕೃತಿಯ ಹರಡುವಿಕೆಯಿಂದ ಇನ್ನು ಖಂಡಿತವಾಗಿಯೂ ಶಾಂತಿ ಸಿಗುವುದಿಲ್ಲ. ಅವರ ಈಗಿನ ಸ್ಥಿತಿ ಹೇಗಿದೆಯೆಂದರೆ ಅವರನ್ನು ಕೊಂಚ ಎತ್ತಿದರೆ ಸಾಕು, ಅವರು ಸಾತ್ತ್ವಿಕರಾಗುವರು. ಅದೂ ಅಲ್ಲದೆ, ಈಗಿನ ಕಾಲದಲ್ಲಿ ಒಬ್ಬ ಬಿಳಿಯುವನು (ಪಾಶ್ಚಾತ್ಯ) ಬಂದು ನಿಮ್ಮ ಧರ್ಮದ ಮೇಲೆ ಮಾತನಾಡಿದಾಗ ಅವನ ಮಾತನ್ನು ಒಪ್ಪಿಕೊಳ್ಳುವಷ್ಟೇ ಹರಕುಚಿಂದಿ ಧರಿಸಿದ ಸನ್ಯಾಸಿಯೊಬ್ಬನ ಮಾತನ್ನು ಒಪ್ಪಿಕೊಳ್ಳುವಿರಾ?

ನಾನು:—ನಿಜವಾಗಿ ಸರಿ! ಸ್ವಾಮಿಜಿ. ಶ್ರೀಮಾನ್ ಎನ್. ಎನ್. ಘೋಷ್‌ರೂ ಕೂಡ ಇದೇ ಭಾವನೆಯಿಂದ ಮಾತನಾಡುತ್ತಿದ್ದರು.

ಸ್ವಾಮಿಜಿ:—ಹೌದು. ಸರಿಯಾದ ತರಪೇತು ಮತ್ತು ಜ್ಞಾನವನ್ನು ಗಳಿಸಿ ನನ್ನ ಐರೋಪ್ಯ ಶಿಷ್ಯರು ಒಬ್ಬರಾಗುತ್ತಲೊಬ್ಬರು ಬಂದು ನಿಮ್ಮನ್ನು "ನೀವೆಲ್ಲಾ ಏನು ಮಾಡುತ್ತಿರುವಿರಿ? ನಿಮಗೇಕೆ ಇಷ್ಟೊಂದು ಅಲ್ಪ ಶ್ರದ್ಧೆ? ನಿಮ್ಮ ಆಚಾರ ವ್ಯವಹಾರ, ಧರ್ಮ, ನಡೆನುಡಿ, ನೀತಿಗಳು ಯಾವ ಭಾಗದಲ್ಲಿ ಕಡಿಮೆಯಾಗಿದೆ? ನಾವು ನಿಮ್ಮ ಧರ್ಮವೇ ಅತ್ಯಂತ ಉಚ್ಚತಮವಾದುದೆಂದು ಭಾವಿಸುವೆವು" ಎಂದು ಕೇಳಿದರೆ, ನಮ್ಮಲ್ಲಿಯ ಅನೇಕ ಮಂದಿ ದೊಡ್ಡವರು ಮತ್ತು ಪ್ರತಿಭಾವಂತರ ತಂಡವೇ ಅವರ ಮಾತನ್ನು ಕೇಳಲು ಬರುವರು. ಹೀಗೆ ಅವರಿಂದ ನಮ್ಮ ದೇಶಕ್ಕೆ ಅಪಾರ ಲಾಭವಾಗುವುದು. ಅವರು ನಿಮ್ಮ ಧರ್ಮಬೋಧಕರ ಸ್ಥಾನವನ್ನಾಕ್ರಮಿಸಲು ಬರುವರೆಂದು ಒಂದು ಗಳಿಗೆಯೂ ಯೋಚಿಸಬೇಡ. ನಿಸ್ಸಂದೇಹವಾಗಿ, ಅವರು ನಿಮ್ಮ ಪ್ರಾಪಂಚಿಕ ಸ್ಥಿತಿಗಳ ಸುಧಾರಣೆಗಾಗಿ ಮಾಡುವ ವ್ಯಾವಹಾರಿಕ ವಿಜ್ಞಾನಗಳ ವಿಷಯದಲ್ಲಿ ನಿಮ್ಮ ಗುರುಗಳಾಗುವರು— ನಮ್ಮ ಜನರು ಧರ್ಮಕ್ಕೆ ಸಂಬಂಧಪಟ್ಟ ವಿಷಯವೆಲ್ಲಕ್ಕೂ ಅವರಿಗೆ ಗುರುಗಳಾಗುವರು. ಈ ಬಗೆಯ ಗುರು ಶಿಷ್ಯ ಬಾಂಧವ್ಯ ಧರ್ಮ ರಾಜ್ಯದಲ್ಲಿ ಭರತಖಂಡ ಮತ್ತು ಪ್ರಪಂಚದ ಇನ್ನುಳಿದ ಭಾಗಗಳಿಗೂ ನಡುವೆ ಎಂದೆಂದಿಗೂ ಉಳಿದಿರುವುದು.

ನಾನು:—ಅದು ಹೇಗೆ ಸಾಧ್ಯ ಸ್ವಾಮಿಜಿ? ಅವರು ಎಂತಹ ದ್ವೇಷ ಭಾವನೆಯಿಂದ ನಮ್ಮನ್ನು ಕಾಣುತ್ತಿರುವರೆಂಬ ಬಗ್ಗೆ ವಿಚಾರಿಸಿ ನೋಡಿದರೆ.

ಅವರು ಸಂಪೂರ್ಣ ನಿಸ್ವಾರ್ಥ ಭಾವನೆಯಿಂದ ನಮಗೆ ಒಳ್ಳೆಯದನ್ನು ಮಾಡುವರೆಂಬುದು ಅಸಂಭವ ಅನ್ನಿಸುವುದು.

ಸ್ವಾಮಿಜಿ:—ಅವರು ನಮ್ಮನ್ನು ದ್ವೇಷಿಸಲು ಅನೇಕ ಕಾರಣಗಳಿವೆ. ಅದಕ್ಕೇ ಅವರು ತಾವೀರೀತಿ ಮಾಡುವುದು ಸರಿಯೆಂದು ತಮ್ಮನ್ನು ಸಮರ್ಥಿಸಿಕೊಳ್ಳಬಹುದು. ಮೊದಲನೆಯದಾಗಿ ನಾವು ಅವರಿಂದ ಜಯಿಸಲ್ಪಟ್ಟ ಜನಾಂಗ, ಅಲ್ಲದೆ ಇಷ್ಟೊಂದು ಮಂದಿ ಭಿಕ್ಷುಕರಿರುವ ಜನಾಂಗ ಪ್ರಪಂಚದಲ್ಲಿ ಮತ್ತೆಲ್ಲಿಯೂ ಇಲ್ಲ. ನಮ್ಮಲ್ಲಿ ಅಧಿಕ ಸಂಖ್ಯೆಯಲ್ಲಿರುವ ಕೀಳು ಜಾತಿಯ ಜನರು ಮೇಲು ಜಾತಿಯವರ ನಿರಂತರ ದಬ್ಬಾಳಿಕೆಯಿಂದಲೂ ಮತ್ತು ಅವರಿಂದ ಹೆಜ್ಜೆಹೆಜ್ಜೆಗೂ ಹೊಡೆತ ಒದೆತಗಳನ್ನು ತಿಂದು ಕಡೆಗೆ ತಮ್ಮ ಪುರುಷತ್ವವನ್ನೇ ಕಳೆದುಕೊಂಡು ವೃತ್ತಿಯಿಂದಲೇ ಭಿಕ್ಷುಕರಾಗಿಬಿಟ್ಟಿದ್ದಾರೆ. ಇದರಿಂದ ಒಂದು ಹೆಜ್ಜೆ ಮುಂದೆ ಹೋದವರು ಒಂದೆರಡು ಪುಟ ಇಂಗ್ಲೀಷನ್ನೋದಿ ಕೈಯಲ್ಲಿ ಅರ್ಜಿಯನ್ನು ಹಿಡಿದು ಸಾರ್ವಜನಿಕ ಕಛೇರಿಗಳ ಬಾಗಿಲಲ್ಲಿ ಬಿದ್ದಿದ್ದಾರೆ. ಇಪ್ಪತ್ತು ಅಥವಾ ಮೂವತ್ತು ರೂಪಾಯಿ ಸಂಬಳವಿರುವ ಕೆಲಸ ಖಾಲಿ ಬಿದ್ದರೆ ಐನೂರು ಮಂದಿ ಬಿ.ಎ. ಮತ್ತು ಎಂ.ಎ. ಗಳು ಅದಕ್ಕೆ ಅರ್ಜಿ ಹಾಕಿಕೊಳ್ಳುವರು. ಆಹಾ! ಆ ಅರ್ಜಿಗಳಾದರೂ ಎಂತಹ ವಿಚಿತ್ರ ಪದಗಳಿಂದ ಕೂಡಿರುತ್ತೆ. "ನನಗೆ ಮನೆಯಲ್ಲಿ ತಿನ್ನಲಿಕ್ಕೆ ಏನೇನೂ ಇಲ್ಲ. ನನ್ನ ಹೆಂಡತಿ ಮಕ್ಕಳು ಉಪವಾಸ. ಸ್ವಾಮಿ ನನಗೆ ಮತ್ತು ನನ್ನ ಸಂಸಾರಕ್ಕೆ ಒಂದು ಹಾದಿಯನ್ನು ಕಲ್ಪಿಸಿಕೊಡಬೇಕೆಂದು ನಿಮ್ಮನ್ನು ಸೆರಗೊಡ್ಡಿ ಬೇಡಿಕೊಳ್ಳುತ್ತಿದ್ದೇನೆ. ಇಲ್ಲದಿದ್ದಲ್ಲಿ ನಾವೆಲ್ಲ ಉಪವಾಸದಿಂದ ಸಾಯುವೆವು!" ಅವರು ಕೆಲಸಕ್ಕೆ ಸೇರಿದ ಮೇಲೂ ಕೂಡ ತಮ್ಮ ಆತ್ಮ ಗೌರವವನ್ನೆಲ್ಲಾ ಗಾಳಿಗೆ ತೂರಿಬಿಡುವರು. ಅವರು ಸಾಧಿಸುವುದು ಅತ್ಯಂತ ಕೀಳು ದರ್ಜೆಯ ಗುಲಾಮಗಿರಿ. ನಮ್ಮ ದೇಶದ ಜನಸಾಮಾನ್ಯರ ಪರಿಸ್ಥಿತಿ ಹೀಗಿದೆ! ನಿಮ್ಮಲ್ಲಿ ಉಚ್ಚತಮ ವಿದ್ಯಾವಂತರಾಗಿ ಪ್ರಮುಖರಾಗಿರುವವರೆಲ್ಲಾ ತಾವೇ ಒಂದು ಸಮಾಜ ರಚಿಸಿಕೊಂಡು ಉಚ್ಚಕಂಠದಿಂದ "ಅಯ್ಯೋ! ಭರತಖಂಡ ದಿನ ದಿನಕ್ಕೆ ಹಾಳಾಗಿ ಹೋಗುತ್ತಿದೆ. ಓ! ಆಂಗ್ಲೇಯ ಪ್ರಭುಗಳೇ, ನಮ್ಮ ದೇಶೀಯರಿಗೆ ದೊಡ್ಡ ದೊಡ್ಡ ಹುದ್ದೆಗಳು ದೊರಕುವಂತೆ ಮಾಡಿ. ಕ್ಷಾಮದಿಂದ ನಮ್ಮನ್ನು ಪಾರುಮಾಡಿ" ಎಂದು ಮೊರೆಯಿಡುತ್ತಾ ಹಗಲು ರಾತ್ರಿ "ಕೊಡಿ," "ಕೊಡಿ" ಎಂಬ

ಅವಿಚ್ಛಿನ್ನ ರೋದನದಿಂದ ಆಕಾಶವನ್ನು ತುಂಬುತ್ತೀರಿ. ಅವರ ಭಾಷಣದ ಸಾರಾಂಶವೆಲ್ಲ "ಆಂಗ್ಲೇಯರೇ, ನಮಗೆ ಕೊಡಿ, ಮತ್ತೂ ಹೆಚ್ಚಾಗಿ ಕೊಡಿ"! ಅಯ್ಯೋ! ಅವರು ನಿಮಗೆ ಮತ್ತಿನ್ನೇನು ಕೊಡಬೇಕು? ಅವರು ಹೊಗೆಬಂಡಿ, ತಂತಿಸಮಾಚಾರ, ದೇಶಕ್ಕೆ ಸುವ್ಯವಸ್ಥಿತವಾದ ರಾಜ್ಯಾಡಳಿತವನ್ನು ಕೊಟ್ಟಿದ್ದಾರೆ–ಕಳ್ಳರನ್ನು ಸಂಪೂರ್ಣವಾಗಿ ಎನ್ನು ವಂತೆಯೇ ಅಡಗಿಸಿದ್ದಾರೆ–ವಿಜ್ಞಾನವ್ಯಾಸಂಗಕ್ಕೆ ಅವಕಾಶ ಕಲ್ಪಿಸಿದ್ದಾರೆ– ಅವರು ಇನ್ನೇನನ್ನು ಕೊಡಬೇಕು? ಸಂಪೂರ್ಣ ನಿಸ್ವಾರ್ಥತೆಯಿಂದ ಇನ್ನೊಬ್ಬರಿಗೆ ಏನನ್ನೇ ಆಗಲಿ ಯಾರು ಕೊಡುವರು? ಅವರು ನಿಮಗೆ ಎಷ್ಟೊಂದು ಕೊಟ್ಟಿದ್ದಾರೆ. ನಾನು ಕೇಳುವೆ, ನೀವು ಅದಕ್ಕೆ ಪ್ರತಿಯಾಗಿ ಅವರಿಗೆ ಏನನ್ನು ಕೊಟ್ಟಿರುವಿರಿ?

ನಾನು:—ನಾವೇನನ್ನು ಕೊಡಬೇಕು ಸ್ವಾಮಿಜಿ? ನಾವು ತೆರಿಗೆ ಯನ್ನು ಕೊಡುವುದಿಲ್ಲವೆ?

ಸ್ವಾಮಿಜಿ:—ಹೌದೇನು, ನಿಜವಾಗಿ? ನೀವು ಕೇವಲ ನಿಮ್ಮ ಸ್ವಂತ ಇಚ್ಛೆಯಿಂದ ತೆರಿಗೆಯನ್ನು ಕೊಡುವಿರೇನು? ಅಥವಾ ದೇಶ ಶಾಂತಿಯಿಂದಿರಲು ಅವರೇ ಕಡ್ಡಾಯವಾಗಿ ಅದನ್ನು ಸೆಳೆದುಕೊಳ್ಳು ವರೊ? ನಿರ್ವಂಚನೆಯಿಂದ ಹೇಳು. ಅವರು ನಮಗೆ ಮಾಡಿರುವುದ ಕ್ಕೆಲ್ಲಾ ನೀವೇನು ಪ್ರತಿಫಲ ಕೊಟ್ಟಿದ್ದೀರಿ? ಅವರಿಗೆ ಯಾವುದಿಲ್ಲವೋ ಅದನ್ನು ನೀವು ಕೊಡಬೇಕು. ನೀವು ಇಂಗ್ಲೆಂಡಿಗೆ ಹೋಗುವಿರಿ. ಆದರೆ ಅದೂ ಕೂಡ ಭಿಕ್ಷುಕನ ತೊಡಿಗೆಯಲ್ಲಿ— ವಿದ್ಯಾರ್ಜನೆಗೆ ಕೆಲವರು ಹೋಗುವರು, ಹೆಚ್ಚೆಂದರೆ ಅವರು ಬಹುಶಃ, ಕೆಲವು ಕಡೆ ಪಾಶ್ಚಾತ್ಯ ಧರ್ಮವನ್ನು ಪ್ರಶಂಸಿಸಿ ಭಾಷಣಮಾಡಿ ಹಿಂತಿರುಗಿ ಬರಬಹುದು. ಅಷ್ಟೆ. ಎಂತಹ ಮಹಾಕಾರ್ಯ ಸಾಧನೆ! ನಿಜವಾಗಿ! ಏಕೆ? ಅವರಿಗೆ ಕೊಡಲು ನಿಮ್ಮಲ್ಲೇನೂ ಇಲ್ಲವೆ? ನೀವು ಕೊಡ ಬೇಕಾದರೆ ನಿಮ್ಮಲ್ಲಿ ಅಮೌಲ್ಯ ಸಂಪತ್ತಿದೆ–ನಿಮ್ಮ ಧರ್ಮವನ್ನು ಕೊಡಿ. ನಿಮ್ಮ ತತ್ತ್ವಶಾಸ್ತ್ರವನ್ನು ಕೊಡಿ! ಇಡೀ ಜಗತ್ತಿನ ಇತಿಹಾಸವನ್ನೆಲ್ಲಾ ಓದಿನೋಡಿ. ಎಲ್ಲೆಲ್ಲಿ ಉದಾತ್ತಧ್ಯೇಯಗಳಿರುವುದೊ ಅಲ್ಲೆಲ್ಲಾ ಭರತಖಂಡವೇ ಮೂಲವೆಂದು ನೋಡುವೆ. ಪ್ರಾಚೀನ ಕಾಲದಿಂದಲೂ ಭರತಖಂಡ ಅಮೋಘವಾದ ಆದರ್ಶಗಳ ಗಣಿಯಾಗಿದೆ. ತಾನೇ ಮಹ ತ್ತಾದ ಧ್ಯೇಯಗಳ ತೌರೂರಾಗಿ ಅವುಗಳನ್ನು ಇಡೀ ಜಗತ್ತಿಗೇ ಉದಾರ

ವಾಗಿ ಪ್ರಚಾರ ಮಾಡಲು ನೀಡಿದೆ. ಇಂದು ಆಂಗ್ಲೇಯರು ಭರತಖಂಡದಲ್ಲಿರುವುದು ಆ ಮಹತ್ತಾದ ಉದ್ದೇಶಗಳನ್ನು ಸಂಗ್ರಹಿಸಲು, ವೇದಾಂತ ಜ್ಞಾನವನ್ನಾರ್ಜಿಸಲು ಮತ್ತು ನಿಮ್ಮ ಶಾಶ್ವತ ಧರ್ಮದಲ್ಲಿರುವ ಗಾಢರಹಸ್ಯಗಳನ್ನು ಒಳಹೊಕ್ಕುನೋಡಲು. ನೀವು ಅವರಿಂದ ಪಡೆದಿರುವುದಕ್ಕೆ ಪ್ರತಿಯಾಗಿ ನೀವು ಈ ಅಮೌಲ್ಯ ರತ್ನಗಳನ್ನವರಿಗೆ ನೀಡಿ. ನಮಗೆ ಅವರು ಆರೋಪಿಸಿರುವ ಭಿಕ್ಷಾವೃತ್ತಿಯ ಅಸಮಾನ್ಯತೆಯನ್ನು ತೊಡೆದುಹಾಕುವುದಕ್ಕಾಗಿ ದೇವರು ನನ್ನನ್ನು ಅವರ ದೇಶಕ್ಕೆ ಹೋಗುವಂತೆ ಮಾಡಿದ. ಆದರೆ ಬರೇ ತಿರುಪೆಗಾಗಿಯೇ ಇಂಗ್ಲೆಂಡಿಗೆ ಹೋಗುವುದು ಸರಿಯಲ್ಲ. ಅವರೇ ಯಾವಾಗಲೂ ನಮಗೆ ಭಿಕ್ಷೆ ನೀಡಬೇಕು? ಎಂದೆಂದೂ ಯಾರಾದರೂ ಹಾಗೆ ಮಾಡುವರೆ? ನಿರಂತರವಾಗಿ ಭಿಕ್ಷುಕರಂತೆ ಕೈಚಾಚಿ ದಾನವನ್ನು ತೆಗೆದುಕೊಳ್ಳುವುದು ಪ್ರಕೃತಿಯ ನಿಯಮವಲ್ಲ. ಕೊಟ್ಟು ತೆಗೆದುಕೊಳ್ಳುವುದು ಪ್ರಕೃತಿ ನಿಯಮ. ಯಾವ ವ್ಯಕ್ತಿಯೇ ಆಗಲಿ ಸಂಗಡ ಅಥವಾ ಜನಾಂಗವೇ ಆಗಲಿ ಈ ನಿಯಮವನ್ನು ಪಾಲಿಸುವುದಿಲ್ಲವೊ ಅದು ಜೀವನದಲ್ಲಿ ಎಂದಿಗೂ ಏಳ್ಗೆ ಹೊಂದುವುದಿಲ್ಲ. ನಾವೂ ಕೂಡ ಆ ನಿಯಮವನ್ನನುಸರಿಸಬೇಕು. ಅದಕ್ಕೇ ನಾನು ಅಮೆರಿಕಾಕ್ಕೆ ಹೋದುದು. ಅಲ್ಲಿಯ ಜನರಿಗೆ ಧರ್ಮದ ತೃಷೆ ಎಷ್ಟು ಉತ್ಕಟವಾಗಿದೆಯೆಂದರೆ ನನ್ನಂತಹ ಸಾವಿರಾರು ಮಂದಿ ಅಲ್ಲಿಗೆ ಹೋದರೂ ಅವರಿಗೆ ಸಾಕಷ್ಟು ಸ್ಥಳವಿದೆ. ದೀರ್ಘಕಾಲದಿಂದಲೂ ಅವರು ನಿಮಗೆ ತಮ್ಮಲ್ಲಿರುವ ಐಶ್ವರ್ಯವನ್ನು ದಾನಮಾಡುತ್ತಾ ಬಂದಿರುವರು. ಈಗ ನೀವು ನಿಮ್ಮ ಅಮೂಲ್ಯ ಸಂಪತ್ತನ್ನು ಅವರೊಂದಿಗೆ ಹಂಚಿಕೊಳ್ಳುವ ಸಕಾಲ ಬಂದಿದೆ. ಎಷ್ಟು ಬೇಗ ಅವರ ದ್ವೇಷಭಾವನೆ ನಿಮ್ಮ ಮೇಲಿನ ಶ್ರದ್ಧೆ ಭಕ್ತಿ ಗೌರವವಾಗಿ ಮಾರ್ಪಟ್ಟು ನಿಮ್ಮ ದೇಶಕ್ಕೆ ಕೇಳದೆಯೇ ಎಷ್ಟೊಂದು ಕಲ್ಯಾಣವನ್ನು ಅವರು ಮಾಡುವರೆಂಬುದನ್ನು ನೀನೇ ನೋಡುವೆ. ಅವರೊಂದು ಶೂರ ಜನಾಂಗ. ಅವರೆಂದೂ ತಮಗಾದ ಕಲ್ಯಾಣವನ್ನು ಮರೆಯುವವರಲ್ಲ.

ನಾನು:— ಸರಿ. ಸ್ವಾಮಿಜಿ, ನೀವು ಪಾಶ್ಚಾತ್ಯ ದೇಶಗಳಲ್ಲಿ ಕೊಟ್ಟ ಭಾಷಣಗಳಲ್ಲಿ ಪದೇಪದೇ ನೀವು ನಮ್ಮ ವೈಯಕ್ತಿಕವಾದ ಮೇಧಾಶಕ್ತಿ ಮತ್ತು ಸದ್ಗುಣಗಳ ವಿಷಯವಾಗಿ ಅಮೋಘವಾಗಿ ಭಾಷಣ ಮಾಡಿದ್ದೀರಿ. ನಮಗೆ ಧರ್ಮದ ಮೇಲಿರುವ ಮನಃಪೂರ್ವಕವಾದ ಪ್ರೇಮ

ವನ್ನು ಪುಷ್ಟೀಕರಿಸುವ ಅನೇಕ ಪ್ರಮಾಣಗಳನ್ನು ಅವರ ಮುಂದಿಟ್ಟಿದ್ದೀರಿ. ಆದರೆ ಈಗ ನಾವು ಸಂಪೂರ್ಣ ತಾಮಸದಲ್ಲಿ ಮುಳುಗಿದ್ದೇವೆಂದು ಹೇಳುತ್ತಿದ್ದೀರಿ. ಅದೇ ಕಾಲದಲ್ಲಿ ಜಗತ್ತೆಲ್ಲಾ ನಾವು ಋಷಿಗಳ ಶಾಶ್ವತ ಧರ್ಮದ ಆಚಾರ್ಯರೆಂದು ಅಂಗೀಕರಿಸುವಂತೆ ಮಾಡುತ್ತಿದ್ದೀರಿ! ಅದು ಹೇಗೆ?

ಸ್ವಾಮಿಜಿ:—ನಾನು ಪರದೇಶಗಳಿಗೆ ಹೋಗಿ ಜನಸಾಮಾನ್ಯರೆದುರಿಗೆ ನಮ್ಮ ನ್ಯೂನತೆಗಳನ್ನು ಕುರಿತು ವಿಸ್ತಾರವಾಗಿ ಉಪನ್ಯಾಸ ಮಾಡಬೇಕೆಂದು ಹೇಳುತ್ತೀಯೇನು! ಅದಕ್ಕೆ ಬದಲು ನಮ್ಮನ್ನು ಒಂದು ಜನಾಂಗವಾಗಿ ಪ್ರತ್ಯೇಕಿಸುವ ವಿಶೇಷ ಸದ್ಗುಣಗಳನ್ನು ಅವರ ಮುಂದೆ ಎತ್ತಿ ಹಿಡಿಯಬೇಕಲ್ಲವೆ? ಒಬ್ಬ ಮನುಷ್ಯನಿಗೆ ನೇರವಾಗಿ ಅವನಲ್ಲಿರುವ ಮಾನ್ಯತೆಯನ್ನು ಹೇಳು, ಸ್ನೇಹಭಾವನೆಯಿಂದ ಅವುಗಳನ್ನು ಅವನಿಗೆ ಮನದಟ್ಟು ಮಾಡಿಸಿ ಅವನು ತಿದ್ದಿಕೊಳ್ಳುವಂತೆ ಮಾಡುವುದು ಯಾವಾಗಲೂ ಒಳ್ಳೆಯದು. ಆದರೆ ಇತರರ ಮುಂದೆ ನೀನು ಅವನ ಸುಗುಣಗಳನ್ನು ಪ್ರಶಂಸೆ ಮಾಡಬೇಕು. ಶ್ರೀ ರಾಮಕೃಷ್ಣರು ನಾವು ಒಬ್ಬ ಕೆಟ್ಟ ಮನುಷ್ಯನನ್ನು ಪದೇಪದೇ ಅವನು ಒಳ್ಳೆಯವನೆಂದು ಹೇಳುತ್ತಿದ್ದರೆ ಸಕಾಲದಲ್ಲಿ ಅವನು ಒಳ್ಳೆಯವನೇ ಆಗುತ್ತಾನೆ; ಹಾಗೆಯೇ ಒಬ್ಬ ಒಳ್ಳೆಯ ಮನುಷ್ಯನನ್ನು ಕೆಟ್ಟವನೆಂದು ಪದೇಪದೇ ಹೇಳುತ್ತಿದ್ದರೆ ಅವನು ಕೆಟ್ಟವನೇ ಆಗುವನು ಎಂದು ಹೇಳುತ್ತಿದ್ದರು. ಪಾಶ್ಚಾತ್ಯ ದೇಶಗಳಲ್ಲಿ ಆ ಜನರಿಗೆ ನಾನು ಸಾಕಷ್ಟು ಅವರ ಕುಂದು ಕೊರತೆಗಳನ್ನು ಹೇಳಿದ್ದೇನೆ. ನೆನಪಿನಲ್ಲಿದೆಯೆ! ನನ್ನ ಕಾಲದ ವರೆಗೂ ನಮ್ಮ ದೇಶದಿಂದ ಐರೋಪ್ಯ ದೇಶಗಳಿಗೆ ಹೋದವರೆಲ್ಲಾ ಅವರ ಉತ್ಕೃಷ್ಟತೆಯನ್ನು ಹೊಗಳಿ ಅವರಮೇಲೆ ಜಯಘೋಷ ಗೀತೆಯನ್ನು ಹಾಡಿದ್ದಾರೆ. ಅವರ ಕಿವಿಗೆ ಕೇವಲ ನಮ್ಮ ನ್ಯೂನತೆಗಳ ಕಹಳೆಯನ್ನೂದಿದ್ದಾರೆ. ಪರಿಣಾಮವಾಗಿ ಅವರು ನಮ್ಮನ್ನು ದ್ವೇಷಿಸಲು ತೊಡಗಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಕಾರಣದಿಂದಲೇ ಈಗ ನಾನು ನಿಮಗೆ ನ್ಯೂನತೆಗಳನ್ನು ತೋರಿಸಿ ಅವರ ಒಳ್ಳೆಯ ಗುಣಗಳನ್ನು ಹೇಳುತ್ತಿರುವಂತೆಯೇ ಅವರ ಮುಂದೆ ನಿಮ್ಮ ಸದ್ಗುಣಗಳನ್ನಿಟ್ಟು ಅವರ ಕುಂದುಕೊರತೆಗಳನ್ನು ತೋರಿಸಿಕೊಟ್ಟಿದ್ದೇನೆ. ನೀವೆಷ್ಟೇ ತಾಮಸದಿಂದ ತುಂಬಿದ್ದರೂ ಪುರಾತನ ಋಷಿಗಳ ಸ್ವಭಾವದ ಅಂಶ ಅದೆಷ್ಟೇ ಅಲ್ಪವಾಗಿದ್ದರೂ ನಿಸ್ಸಂದೇಹವಾಗಿ ಇನ್ನೂ ನಿಮ್ಮಲ್ಲಿದೆ. ಕಡೆಯ ಪಕ್ಷ ಅಸ್ತಿ

ಭಾರವಾದರೂ ಇದೆ. ಆದರೆ ಇದರಿಂದ ನಾವು ಈ ತಕ್ಷಣವೇ ಆಚಾರ್ಯ ಪಟ್ಟವಹಿಸಿ ಐರೋಪ್ಯ ದೇಶಗಳಿಗೆ ಬೋಧಿಸಲು ಹೊರಡಬೇಕೆಂದರ್ಥವಲ್ಲ. ಮೊಟ್ಟಮೊದಲು, ಏಕಾಂತದಲ್ಲಿ ನಮ್ಮ ಆಧ್ಯಾತ್ಮಿಕ ಜೀವನವನ್ನು ಸಂಪೂರ್ಣವಾಗಿ ರೂಪಿಸಿಕೊಳ್ಳಬೇಕು. ಸಂಪೂರ್ಣ ತ್ಯಾಗ ಜೀವಿಗಳಾಗ ಬೇಕು, ಬ್ರಹ್ಮಚರ್ಯವನ್ನು ನಿರರ್ಗಳವಾಗಿ ಕಾದಿಡಬೇಕು. ತಾಮಸ ಪ್ರವೃತ್ತಿ ನಿಮ್ಮನ್ನು ಪ್ರವೇಶಿಸಿದೆ– ಆದರೇನಂತೆ? ತಾಮಸವನ್ನು ಧ್ವಂಸ ಮಾಡಲಿಕ್ಕಾಗುವುದಿಲ್ಲವೆ? ಒಂದು ಕ್ಷಣದಲ್ಲಿ ಅದನ್ನು ಮಾಡಬಹುದು. ಈ ತಾಮಸದ ನಾಶಕ್ಕಾಗಿಯೇ ಭಗವಾನ್ ಶ್ರೀ ರಾಮಕೃಷ್ಣರು ನಮ್ಮಲ್ಲಿಗೆ ಬಂದುದು.

ನಾನು:—ಸ್ವಾಮಿಜಿ; ನಿಮ್ಮಂತೆ ಯಾರು ಆಗಬಲ್ಲರು?

ಸ್ವಾಮಿಜಿ:—ನಾನು ಸತ್ತಮೇಲೆ ವಿವೇಕಾನಂದರು ಇರುವುದಿಲ್ಲ ವೆಂದು ಯೋಚಿಸುವೆಯೇನು? ಈಗ ಸ್ವಲ್ಪಹೊತ್ತಿಗೆ ಮುಂಚೆ ನನ್ನ ಮುಂದೆ ಒಂದು ಸಂಗೀತವನ್ನು ಹಾಡಿದ ಯುವಕರ ತಂಡ, ಯಾರನ್ನು ನೀವು ಕುಡು ಕರು ದುರ್ವ್ಯಸನಿಗಳು ಕೆಲಸಕ್ಕೆ ಬಾರದವರೆಂದು ತಿರಸ್ಕರಿಸುತ್ತಿದ್ದೀರೊ, ಅವರೇ ದೇವರಿಚ್ಛೆಯಿದ್ದರೆ, ಒಬ್ಬೊಬ್ಬನೂ ಒಬ್ಬ ವಿವೇಕಾನಂದನಾಗ ಬಹುದು. ಜಗತ್ತಿಗೆ ಆವಶ್ಯಕತೆಯಿದ್ದರೆ ವಿವೇಕಾನಂದರಂಥವರಿಗೆ ಕೊರತೆ ಯಿರುವುದಿಲ್ಲ– ಸಾವಿರಾರು, ಲಕ್ಷಾಂತರ ವಿವೇಕಾನಂದರು ಕಾಣಿಸಿಕೊಳ್ಳು ವರು–ಎಲ್ಲಿಂದ–ಯಾರಿಗೆ ಗೊತ್ತು! ನನ್ನಿಂದ ಮಾಡಲ್ಪಟ್ಟ ಕೆಲಸ ಖಂಡಿತ ವಾಗಿಯೂ ವಿವೇಕಾನಂದರ ಕೆಲಸವಲ್ಲ. ಅದು ಭಗವಂತನ ಕೆಲಸ– ಅವನ ಸ್ವಂತ ಕೆಲಸ! ಒಬ್ಬ ಗೌರ್ನರ್ ಜನರಲ್ ನಿವೃತ್ತನಾದರೆ ಚಕ್ರವರ್ತಿ ಮತ್ತೊಬ್ಬನನ್ನು ಆ ಸ್ಥಾನಕ್ಕೆ ಖಂಡಿತವಾಗಿಯೂ ಕಳುಹಿಸುವನು. ತಾಮಸದಿಂದ ನೀವು ಎಷ್ಟೇ ಆಚ್ಛಾದಿತರಾಗಿದ್ದರೂ ನೀವು ಅಂತಃಕರಣ ಪೂರ್ವಕವಾಗಿ ನಿರ್ವಂಚನೆಯಿಂದ ಅವನಲ್ಲಿ ಶರಣು ಹೊಂದಿದರೆ ಎಲ್ಲವೂ ತೊಳೆದು ಹೋಗುವುವು. ಭವರೋಗ ವೈದ್ಯನು ಬಂದಿರುವನು– ಇದು ಯುಕ್ತಕಾಲವಾಗಿದೆ. ನೀನು ಆತನ ಹೆಸರನ್ನು ತೆಗೆದುಕೊಂಡು ಕೆಲಸಕ್ಕೆ ತೊಡಗಿದರೆ ಅವನೇ ಎಲ್ಲವನ್ನೂ ನಿನ್ನ ಮೂಲಕ ಈಡೇರಿಸುವನು. ತಾಮಸವೇ ಉಚ್ಛತಮ ಸತ್ತ್ವವಾಗಿ ಮಾರ್ಪಡುವುದು.

ನಾನು:—ನೀವೇನುಬೇಕಾದರೂ ಹೇಳಿ. ನನಗೆ ಮಾತ್ರ ಈ ಮಾತುಗಳಲ್ಲಿ ನಂಬಿಕೆ ಬರುವುದಿಲ್ಲ. ನಿಮ್ಮಂತೆ ತತ್ತ್ವಶಾಸ್ತ್ರಗಳನ್ನು

ವಿಶದವಾಗಿ ವಿವರಿಸುವಂತಹ ವಾಗ್ವೈಖರಿಯನ್ನು ಯಾರು ಪಡೆಯ ಬಲ್ಲರು ?

ಸ್ವಾಮಿಜಿ :—ನಿನಗೆ ತಿಳಿಯದು? ಆ ಶಕ್ತಿ ಎಲ್ಲರಿಗೂ ಬರಬಹುದು. ಯಾರು ಅವಿಚ್ಛಿನ್ನವಾಗಿ ಬ್ರಹ್ಮಚರ್ಯವನ್ನು ಹನ್ನೆರಡು ವರುಷಗಳು ಕೇವಲ ಭಗವತ್ಸಾಕ್ಷಾತ್ಕಾರ ಪಡೆಯುವ ಉದ್ದೇಶದಿಂದ ಪಾಲಿಸುತ್ತಾರೊ ಅಂತಹವರಿಗೆ ಈ ಶಕ್ತಿ ಬರುವುದು. ಈ ಬಗೆಯ ಬ್ರಹ್ಮಚರ್ಯೆಯನ್ನು ನಾನೇ ಸಾಧನೆಮಾಡಿದ್ದೇನೆ. ಅಂತೆಯೇ ನನ್ನ ಮೆದುಳಿನಿಂದ ಒಂದು ತೆರೆಯನ್ನು ಎತ್ತಿದಂತಾಗಿದೆ. ಈ ಕಾರಣದಿಂದಲೇ ನಾನು ಯಾವ ಭಾಷಣಕ್ಕೇ ಆಗಲಿ ಎಂತಹ ಗಹನವಾದ ಧರ್ಮತತ್ತ್ವಗಳ ವಿಚಾರವಾಗಿದ್ದರೂ ಅದಕ್ಕಾಗಿ ಏನೂ ಯೋಚಿಸಬೇಕಾಗಿಲ್ಲ. ಸಿದ್ಧತೆ ಮಾಡಿಕೊಳ್ಳಬೇಕಾಗಿಲ್ಲ. ನಾನು ನಾಳೆ ಒಂದು ಭಾಷಣ ಮಾಡ ಬೇಕಾಗಿದೆ ಎಂದಿಟ್ಟುಕೊಳ್ಳೋಣ. ನಾನು ನಾಳೆ ಏನು ಮಾತನಾಡ ಬೇಕೊ ಅದೆಲ್ಲಾ ಇಂದು ರಾತ್ರೆ ನನ್ನ ಕಣ್ಣಮುಂದೆ ಅನೇಕ ಚಿತ್ರಗಳಂತೆ ಸುಳಿದುಹೋಗುವುವು. ಮರುದಿನ ನಾನು ಭಾಷಣಮಾಡುವಾಗ ನಾನು ನೋಡಿದ್ದ ವಿಷಯಗಳನ್ನೇ ನನ್ನ ಭಾಷಣದಲ್ಲಿ ಮಾತನಾಡುವೆ. ಆದ್ದರಿಂದ ಈ ಶಕ್ತಿ ಕೇವಲ ಪ್ರತ್ಯೇಕವಾಗಿ ನನ್ನದೇ ಎಂದು ನೀನು ಭಾವಿಸದಿರು. ಯಾರು ನಿರಾತಂಕವಾಗಿ ಹನ್ನೆರಡು ವರುಷಗಳು ಬ್ರಹ್ಮಚರ್ಯವ್ರತಾಚರಣೆ ಮಾಡುವರೊ ಅಂತಹವರಿಗೆ ಖಂಡಿತವಾಗಿಯೂ ಇದು ದೊರೆಯುವುದು. ನೀನೂ ಹಾಗೆ ಮಾಡಿದರೆ ನೀನೂ ಅದನ್ನು ಪಡೆಯುವೆ. ಕೇವಲ ಇಂಥವನು ಅದನ್ನು ಪಡೆಯುವನು, ಇತರರು ಪಡೆಯಲಾರರು ಎಂದು ನಮ್ಮ ಶಾಸ್ತ್ರಗಳೇನೂ ಹೇಳುವುದಿಲ್ಲ.

ನಾನು:—ಸ್ವಾಮಿಜಿ, ನಿಮಗೆ ನೆನಪಿದೆಯೆ, ಒಂದು ದಿನ ನೀವು ಸನ್ಯಾಸಿಗಳಾಗುವ ಮುನ್ನ–ರ ಮನೆಯಲ್ಲಿ ನಾವೆಲ್ಲಾ ಕುಳಿತಿರುವಾಗ ನೀವು ನಮಗೆಲ್ಲಾ ಸಮಾಧಿಯ ರಹಸ್ಯವನ್ನು ವಿವರಿಸಲು ಯತ್ನಿ ಸುತ್ತಿದ್ದುದು ? ನಾನು ಕಲಿಯುಗದಲ್ಲಿ ಸಮಾಧಿ ಅಸಾಧ್ಯವೆಂದು ನಿಮ್ಮ ಮಾತಿನ ಸತ್ಯಾಂಶವನ್ನು ಸಂದೇಹಿಸಲು ನೀವು ತೀಕ್ಷ್ಣವಾಗಿ "ನೀನು ಸಮಾಧಿಯನ್ನು ನೋಡಬೇಕೇನು ಅಥವಾ ನೀನೇ ಆ ಸ್ಥಿತಿಯನ್ನು ಪಡೆಯಲಿಚ್ಛಿಸುವೆಯೊ? ನಾನು ಖಂಡಿತ ಸಮಾಧಿ ಹೊಂದಿರುವೆ, ನೀನೂ ಅದನ್ನು ಹೊಂದುವಂತೆ ಮಾಡಬಲ್ಲೆ" ಎಂದು ಹೇಳಿದ್ದಿರಿ. ನೀವು

ಇನ್ನೂ ಆ ಮಾತನ್ನು ಪೂರ್ಣಮಾಡುವಷ್ಟರಲ್ಲೇ ಯಾವನೋ ಆಗುಂತುಕನೊಬ್ಬನು ಬಂದುದರಿಂದ ನಾವು ಆ ವಿಷಯವನ್ನು ಮುಂದುವರಿಸಲಿಲ್ಲ.

ಸ್ವಾಮಿಜಿ :—ಹೌದು ಆ ಸಂದರ್ಭ ನನಗೆ ನೆನಪಿದೆ.

ನಂತರ ನಾನೂ ಸಮಾಧಿ ಪಡೆಯುವಂತೆ ಮಾಡಬೇಕೆಂದು ಅವರನ್ನು ಒತ್ತಾಯ ಮಾಡಲು ಅವರು, "ನೋಡು, ಅನೇಕ ವರುಷಗಳು ನಿರಂತರ ಭಾಷಣ ಮಾಡಿ ಮಾಡಿ ತುಂಬಾ ಕಠಿಣವಾಗಿ ಕೆಲಸ ಮಾಡಿದುದರಿಂದ ನನ್ನಲ್ಲೀಗ ರಾಜಸಗುಣ ಪ್ರಬಲವಾಗಿದೆ. ಅದಕ್ಕೇ ಆ ಶಕ್ತಿ ಈಗ ನನ್ನಲ್ಲಿ ಸುಪ್ತವಾಗಿ ಅಡಗಿದೆ. ನಾನೀಗ ಎಲ್ಲಾ ಕೆಲಸವನ್ನೂ ಬಿಟ್ಟು ಹಿಮಾಲಯಕ್ಕೆ ಹೋಗಿ ಏಕಾಂತವಾಗಿ ಧ್ಯಾನ ಮಾಡಿದರೆ ಆಗ ಆ ಶಕ್ತಿ ಪುನಃ ನನ್ನಲ್ಲಿ ವ್ಯಕ್ತವಾಗುತ್ತದೆ" ಎಂದರು.

೪

ಇದಾಗಿ ಒಂದೆರಡು ದಿನಗಳ ನಂತರ ಸ್ವಾಮಿಜಿಯನ್ನು ನೋಡುವ ಸಲುವಾಗಿ ನಾನು ಮನೆಯಿಂದ ಹೊರಕ್ಕೆ ಬಂದಾಗ ನನ್ನ ಇಬ್ಬರು ಸ್ನೇಹಿತರು ಸಿಕ್ಕಿ ತಾವು ಸ್ವಾಮಿಜಿಯನ್ನು ಪ್ರಾಣಾಯಾಮದ ವಿಚಾರವಾಗಿ ಏನನ್ನೋ ಕೇಳಬೇಕೆಂದಿರುವರೆಂದೂ, ನನ್ನ ಜೊತೆಯಲ್ಲಿ ಬರಲು ಇಚ್ಛಿಸುವರೆಂದೂ ವ್ಯಕ್ತಪಡಿಸಿದರು. ದೇವಸ್ಥಾನಕ್ಕೇ ಆಗಲಿ, ಒಬ್ಬ ಸಾಧುವಿನ ಸಂದರ್ಶನಕ್ಕೇ ಆಗಲಿ ಯಾವಾಗಲೂ ಬರಿಗೈಯಲ್ಲಿ ಹೋಗಬಾರದೆಂದು ನಾನು ಕೇಳಿದ್ದುದರಿಂದ ನಾವು ಕೊಂಚ ಹಣ್ಣು ಮತ್ತು ಮಿಠಾಯಿಯನ್ನು ನಮ್ಮೊಡನೆ ತೆಗೆದುಕೊಂಡು ಹೋಗಿ ಅವರ ಮುಂದಿರಿಸಿದೆವು. ಸ್ವಾಮಿಜಿ ಅವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ತಮ್ಮ ತಲೆಗೆ ಸೋಕಿಸಿ ನಾವು ಅವರಿಗೆ ಪ್ರಣಾಮ ಮಾಡುವ ಮೊದಲೇ ನಮಗೆ ತಲೆಬಾಗಿದರು. ನನ್ನ ಸ್ನೇಹಿತರಲ್ಲೊಬ್ಬರು ಸ್ವಾಮಿಜಿ ಸಹಪಾಠಿಗಳಾಗಿದ್ದರು. ಸ್ವಾಮಿಜಿ ತಕ್ಷಣವೇ ಅವರನ್ನು ಗುರುತಿಸಿ ಅವರ ಯೋಗಕ್ಷೇಮವನ್ನು ವಿಚಾರಿಸಿದರು, ನಂತರ ನಮ್ಮನ್ನು ತಮ್ಮ ಹತ್ತಿರ ಕುಳ್ಳಿರಿಸಿಕೊಂಡರು. ಇನ್ನೂ ಅನೇಕರು ಅವರನ್ನು ನೋಡಲು ಮತ್ತು ಮಾತನಾಡಲು ಅಲ್ಲಿಗೆ ಬಂದಿದ್ದರು. ಆ ಸಭ್ಯ ಗೃಹಸ್ಥರಲ್ಲಿ ಕೆಲವರು ಕೇಳಿದ ಪ್ರಶ್ನೆಗಳಿಗೆ ಉತ್ತರವಾಗಿ ಸ್ವಾಮಿಜಿ ಸಂಭಾಷಣೆಯ ನಡುವೆ ಪ್ರಾಣಾಯಾಮದ ವಿಚಾರವಾಗಿ ಮಾತನಾಡ ತೊಡಗಿದರು. ಮೊಟ್ಟಮೊದಲು ಅವರು ಆಧುನಿಕ ವಿಜ್ಞಾನದ

ಮೂಲಕ ವಸ್ತುವಿನ ಮೂಲವನ್ನು ವಿವರಿಸಿದರು. ನಂತರ ಪ್ರಾಣಾಯಾಮ ಏನೆಂಬುದನ್ನು ತೋರಿಸಲು ಮುಂದುವರಿದರು. ನಾವು ಮೂವರೂ ಅವರ ರಾಜಯೋಗವೆಂಬ ಪುಸ್ತಕವನ್ನು ಮುಂಚೆಯೇ ಎಚ್ಚರಿಕೆಯಿಂದ ಓದಿದ್ದೆವು. ಆದರೆ ಅಂದು ಅವರ ಬಾಯಿಂದ ಪ್ರಾಣಾಯಾಮದ ವಿಚಾರವಾಗಿ ನಾವು ಕೇಳಿದುದರಲ್ಲಿ ಅವರಲ್ಲಿರುವ ಜ್ಞಾನದ ಎಲ್ಲೋ ಅತಿ ಸ್ವಲ್ಪ ಭಾಗ ಮಾತ್ರ ಆ ಪುಸ್ತಕದಲ್ಲಿ ನಿರೂಪಿಸಿದೆ ಎಂದೆನ್ನಿಸಿತು. ಅವರು ಹೇಳಿದುದೆಲ್ಲಾ ಕೇವಲ ಬರಿಯ ಪುಸ್ತಕ ಪಾಂಡಿತ್ಯವಲ್ಲ. ಏಕೆಂದರೆ ಯಾರಿಗೆ ತಾನೆ ಹಾಗೆ ತಾವೇ ಸತ್ಯಸಾಕ್ಷಾತ್ಕಾರವನ್ನು ಪಡೆಯದೆ ವಿಜ್ಞಾನದ ಸಹಾಯವನ್ನೂ ತೆಗೆದುಕೊಂಡು ಧರ್ಮದ ಎಲ್ಲಾ ಜಟಿಲ ಸಮಸ್ಯೆಗಳನ್ನೂ ಅಷ್ಟೊಂದು ಸ್ಪಷ್ಟವಾಗಿ ವಿಸ್ತಾರವಾಗಿ ವಿವರಿಸಲು ಸಾಧ್ಯ?

ಅವರ ಪ್ರಾಣಾಯಾಮದ ಮೇಲಿನ ಸಂಭಾಷಣೆ ಮಧ್ಯಾಹ್ನ ಮೂರು ಗಂಟೆಯಿಂದ ಸಂಜೆ ಏಳುವರೆ ಗಂಟೆಯವರೆಗೂ ನಡೆಯಿತು. ಆ ಭೇಟಿ ಮುಕ್ತಾಯವಾಗಿ ನಾವು ಹೊರಟು ಬಂದಮೇಲೆ ನನ್ನ ಸ್ನೇಹಿತರು ನನ್ನನ್ನು ಸ್ವಾಮಿಜಿ ತಮ್ಮ ಮನಸ್ಸಿನಲ್ಲಿದ್ದ ಪ್ರಶ್ನೆಗಳನ್ನೆಲ್ಲಾ ಹೇಗೆ ತಿಳಿದುಕೊಂಡರೆಂದು ಅಥವಾ ನಾನೇನಾದರೂ ಅವರಿಗೆ ಆ ಪ್ರಶ್ನೆಗಳನ್ನೆಲ್ಲಾ ಕೇಳಿ ತಿಳಿಸಿಬಿಟ್ಟಿದ್ದೆನೊ ಎಂದು ಕೇಳಿದರು.

ಈ ಪ್ರಸಂಗ ನಡೆದ ಕೆಲವು ದಿನಗಳನಂತರ ನಾನು ಸ್ವಾಮಿಜಿಯನ್ನು ಬಾಗಬಜಾರಿನಲ್ಲಿರುವ ದಿವಂಗತ ಪ್ರಿಯನಾಥ ಮುಖರ್ಜಿಗಳ ಮನೆಯಲ್ಲಿ ನೋಡಿದೆ. ಅಲ್ಲಿ ಸ್ವಾಮಿ ಬ್ರಹ್ಮಾನಂದರು ಸ್ವಾಮಿ ಯೋಗಾನಂದರು ಶ್ರೀಮಾನ್ ಜೆ. ಸಿ. ಘೋಷರು, ಅತುಲಬಾಬು ಮತ್ತು ಇನ್ನೂ ಒಬ್ಬಿಬ್ಬರು ಸ್ನೇಹಿತರೂ ಇದ್ದರು. ನಾನು ಅವರಿಗೆ ಹೇಳಿದೆ: "ಸ್ವಾಮಿಜಿ, ಅಂದು ನಿಮ್ಮನ್ನು ನೋಡಲು ಬಂದಿದ್ದ ಇಬ್ಬರು ಸಭ್ಯ ಗೃಹಸ್ಥರು ಪ್ರಾಣಾಯಾಮದ ವಿಚಾರವಾಗಿ ನಿಮ್ಮನ್ನು ಕೆಲವು ಪ್ರಶ್ನೆಗಳನ್ನು ಕೇಳಬೇಕೆಂದಿದ್ದರು. ನೀವು ಭರತಖಂಡಕ್ಕೆ ಹಿಂತಿರುಗುವುದಕ್ಕೆ ಕೊಂಚ ದಿನಗಳ ಮೊದಲೇ ನಿಮ್ಮ ರಾಜಯೋಗದ ಪುಸ್ತಕವನ್ನು ಓದಿದಾಗ ಅವರ ಮನಸ್ಸಿನಲ್ಲಿದ್ದ ಕೆಲವು ಪ್ರಶ್ನೆಗಳನ್ನು ನನ್ನಲ್ಲಿ ಆಗ ಹೇಳಿದ್ದರು. ಆದರೆ ಅಂದು ಅವರು ನಿಮ್ಮನ್ನು ಏನನ್ನಾದರೂ ಕೇಳುವ ಮೊದಲೇ ಅವರಿಗೆ ಉಂಟಾಗಿದ್ದ ಅನುಮಾನಗಳನ್ನೇ ನೀವು ಎತ್ತಿ ಅವುಗಳನ್ನು ಪರಿಹರಿಸಿದಿರಿ!

ಅವರಿಗೆ ತುಂಬಾ ಆಶ್ಚರ್ಯವಾಗಿ ಮೊದಲೇ ನಾನೇನಾದರೂ ನಿಮಗೆ ಅವರ ಸಂದೇಹಗಳನ್ನು ತಿಳಿಸಿರಬಹುದೆ ಎಂದು ವಿಚಾರಿಸಿದರು'' ಎಂದು ಹೇಳಿದೆ. ಸ್ವಾಮಿಜಿ ಪಾಶ್ಚಾತ್ಯದೇಶಗಳಲ್ಲೂ ಇಂತಹ ಪ್ರಸಂಗಗಳು ಅನೇಕವೇಳೆ ನಡೆದಾಗ ಜನರು ನನ್ನನ್ನು ಪದೇ ಪದೇ 'ನಿಮಗೆ ಹೇಗೆ ನಮ್ಮ ಮನಸ್ಸನ್ನು ಕಲಕುತ್ತಿದ್ದ ಪ್ರಶ್ನೆಗಳು ಗೊತ್ತಾಗುತ್ತವೆ?' ಎಂದು ಕೇಳುತ್ತಿದ್ದರು. ಈ ಬಗೆಯ ಜ್ಞಾನ ನನಗೆ ಪದೇ ಪದೇ ಉಂಟಾಗುವುದಿಲ್ಲ. ಆದರೆ ಶ್ರೀ ರಾಮಕೃಷ್ಣರಿಗೆ ಮಾತ್ರ ಇದು ಯಾವಾಗಲೂ ಗೊತ್ತಾಗುತ್ತಿತ್ತು.''

ಈ ಸಂದರ್ಭದಲ್ಲಿ ಅತುಲಬಾಬುಗಳು ಸ್ವಾಮಿಜಿಯನ್ನು ''ನೀವು ರಾಜಯೋಗದಲ್ಲಿ ನಮ್ಮ ಪೂರ್ವಜನ್ಮದ ವಿಷಯವನ್ನೆಲ್ಲಾ ತಿಳಿದುಕೊಳ್ಳಬಹುದೆಂದು ಹೇಳುವಿರಿ. ನಿಮಗೆ ಅವು ಗೊತ್ತಿದೆಯೆ?'' ಎಂದು ಕೇಳಿದರು.

ಸ್ವಾಮಿಜಿ :—ಹೌದು, ಗೊತ್ತಿದೆ.

ಅತುಲಬಾಬು :— ನಿಮಗೇನು ಗೊತ್ತಿದೆ ಅವನ್ನು ಹೇಳಲು ಅಭ್ಯಂತರ ಉಂಟೆ?

ಸ್ವಾಮಿಜಿ :—ನಾನು ಅವನ್ನು ತಿಳಿಯಬಲ್ಲೆ–ನನಗೆ ಅವು ತಿಳಿದಿವೆ–ಆದರೆ ಯಾವುದನ್ನೂ ನಾನು ವಿವರವಾಗಿ ಹೇಳಲು ಇಚ್ಛೆಪಡುವುದಿಲ್ಲ.

೫

೧೮೯೮ನೇ ಜುಲೈ ತಿಂಗಳು. ಬೇಲೂರಿನ ನಿಲಾಂಬರ ಮುಖರ್ಜಿಗಳ ತೋಟದ ಮನೆಯಲ್ಲಿದ್ದ ಮಠದಲ್ಲಿ ಒಂದು ಸಂಜೆ ಸ್ವಾಮಿಜಿ ತಮ್ಮೆಲ್ಲ ಶಿಷ್ಯರೊಡನೆಯೂ ಧ್ಯಾನಮಾಡುತ್ತಿದ್ದರು. ಧ್ಯಾನ ಪೂರೈಸಿದ ಮೇಲೆ ಈಚೆಗೆ ಬಂದು ಕೊಠಡಿಯೊಂದರಲ್ಲಿ ಕುಳಿತುಕೊಂಡರು. ಅಂದು ತುಂಬಾ ಜೋರುಮಳೆ. ಶೀತಲವಾದ ಗಾಳಿ ಬೀಸುತ್ತಿದ್ದುದರಿಂದ ಸ್ವಾಮಿಜಿ ಕದವನ್ನು ಮುಚ್ಚಿ ತಂಬೂರಿ ಮೀಟುತ್ತ ಹಾಡಲುಪಕ್ರಮಿಸಿದರು. ಹಾಡು ಮುಗಿದ ಮೇಲೆ ಸಂಗೀತದಮೇಲೆ ದೀರ್ಘವಾಗಿ ಸಂಭಾಷಣೆ ಜರುಗಿತು. ಸ್ವಾಮಿ ಶಿವಾನಂದರು ಅವರನ್ನು ''ಪಾಶ್ಚಾತ್ಯ ಸಂಗೀತ ಹೇಗಿರುತ್ತದೆ'' ಎಂದು ಕೇಳಿದರು.

ಸ್ವಾಮಿಜಿ:— ಓ! ಅದು ತುಂಬಾ ಚೆನ್ನಾಗಿರುತ್ತದೆ. ನಮ್ಮಲ್ಲಿ ಇಲ್ಲದ ಸಾಮರಸ್ಯದ ಪರಾಕಾಷ್ಠತೆ ಅದರಲ್ಲಿದೆ. ನುರಿತಿಲ್ಲದ ನಮ್ಮ ಕಿವಿಗೆ

ಅದು ಇಂಪಾಗಿ ಕೇಳುವುದಿಲ್ಲ. ಅದಕ್ಕೇ ನಾವು ಅದನ್ನು ಇಷ್ಟಪಡುವುದಿಲ್ಲ. ಆ ಸಂಗೀತಗಾರರು ನರಿಗಳಂತೆ ಕೂಗುವರೆಂದೆನ್ನಿಸುವುದು. ನನಗೂ ಮೊದಲು ಇದೇ ಬಗೆಯ ಅಭಿಪ್ರಾಯವಿತ್ತು. ಆದರೆ ಯಾವಾಗ ನಾನು ಗಮನವಿಟ್ಟು ಆ ಸಂಗೀತವನ್ನು ಕೇಳತೊಡಗಿದೆನೊ ಮತ್ತು ಸೂಕ್ಷ್ಮ ವಾಗಿ ಅಭ್ಯಾಸಮಾಡತೊಡಗಿದೆನೊ, ಆಗ ನಾನು ಅದನ್ನು ಹೆಚ್ಚುಹೆಚ್ಚು ಅರ್ಥಮಾಡಿಕೊಳ್ಳತೊಡಗಿದೆ. ಸಂಪೂರ್ಣವಾಗಿ ಅನುರಕ್ತನಾದೆ. ಹೀಗೆ ಎಲ್ಲಾ ಕಲೆಗಳೂ ಕೂಡ. ಮಹಾಪರಿಷ್ಕೃತವಾದ ತೈಲಚಿತ್ರವನ್ನು ಪ್ರಾಸಂಗಿಕವಾಗಿ ನೋಡಿದಾಗ ನಮಗೆ ಅದರ ಸೌಂದರ್ಯ ಎಲ್ಲಿದೆಯೆಂದು ಗ್ರಹಿಸಲಾಗುವುದಿಲ್ಲ. ಅದೂ ಅಲ್ಲದೆ ಒಂದು ನಿರ್ದಿಷ್ಟಗುರಿಯವರೆಗೆ ಕಣ್ಣು ಪಳಗಿದಹೊರತು ಒಂದು ಕಲಾಕೃತಿಯ ಆಳವಾದ ಪ್ರತಿಭೆಯನ್ನು ಅದರ ಸೂಕ್ಷ್ಮತಮ ರಚನ ಮತ್ತು ಸಂಯೋಜನೆಗಳನ್ನು ಮೆಚ್ಚಲಾಗುವುದಿಲ್ಲ. ನಮ್ಮ ನಿಜವಾದ ಸಂಗೀತ ಕೀರ್ತನೆ ಮತ್ತು ದ್ರೌಪದ್‌ದಲ್ಲದೆ ಉಳಿದುವು ಮುಸಲ್ಮಾನ ಪದ್ಧತಿ ಪ್ರಕಾರ ಮಾರ್ಪಟ್ಟು ಹಾಳಾಗಿಹೋಗಿವೆ. ಚಿಕ್ಕದಾದ ಮತ್ತು ಲಘುವಾದ ತಪ್ಪು ಹಾಡುಗಳನ್ನು ಮೂಗಿನಲ್ಲಿ ಹಾಡಿ ಹುಚ್ಚು ಹುಚ್ಚಾಗಿ ಒಂದು ಸ್ವರದಿಂದ ಮತ್ತೊಂದು ಸ್ವರಕ್ಕೆ ಮಿಂಚಿನಂತೆ ತಾರಾಡಿದ ಮಾತ್ರಕ್ಕೇ ಅದು ಸಂಗೀತ ಪ್ರಪಂಚದಲ್ಲಿ ಮಹತ್ವಪೂರಿತವಾದುದೆಂದು ತಿಳಿದಿರುವೆಯೇನು? ಖಂಡಿತ ಅಲ್ಲ. ಪ್ರತಿಯೊಂದು ರಾಗವನ್ನು ಎಲ್ಲಾ ಸ್ವರದಲ್ಲಿ ಸಂಪೂರ್ಣ ಬಾರಿಸಿದ ಹೊರತು ಸಂಗೀತ ಶಾಸ್ತ್ರವೆಲ್ಲಾ ಹಾಳಾಗಿಹೋಗುವುದು. ಚಿತ್ರಕಲೆಯಲ್ಲಿ ಪ್ರಕೃತಿಯ ಸಂಪರ್ಕವನ್ನಿಟ್ಟುಕೊಂಡು ನೀನು ಅದನ್ನು ಎಷ್ಟೊಂದು ಕಲಾಸೌಂದರ್ಯವುಳ್ಳದ್ದಾಗಿ ಬೇಕಾದರೂ ಮಾಡಬಹುದು. ಹೀಗೆ ಮಾಡುವುದರಿಂದ ಯಾವ ಹಾನಿಯೂ ಇಲ್ಲ. ಪರಿಣಾಮ ಕೂಡ ಒಳ್ಳೆಯದೆ ಆಗುವುದು. ಅದರಂತೆಯೆ ಸಂಗೀತದಲ್ಲಿ ಶಾಸ್ತ್ರರೀತಿಯಲ್ಲಿದ್ದು, ನಿನ್ನ ಕೌಶಲ್ಯವನ್ನು ಎಷ್ಟು ಬೇಕಾದರೂ ತೋರಿಸಬಹುದು. ಕಿವಿಗೂ ಅದು ಹಿತಕರವಾಗಿರುವುದು. ಮಹಮ್ಮದೀಯರು ಅನೇಕ ಬಗೆಯ ರಾಗ ರಾಗಿಣಿಗಳನ್ನು ಇಂಡಿಯಾಕ್ಕೆ ಬಂದ ಮೇಲೆ ತೆಗೆದುಕೊಂಡರು. ಆದರೆ ಅವರು ತಪ್ಪ ಸಂಗೀತದ ಮೇಲೆ ತಮ್ಮ ವೈಶಿಷ್ಟ್ಯದ ಮುದ್ರೆಯನ್ನೊತ್ತಿದರು. ಅದಕ್ಕೇ ಸಂಗೀತಶಾಸ್ತ್ರವೆಲ್ಲ ಹಾಳಾಗಿಹೋಯಿತು.

ಪ್ರಶ್ನೆ:—ಏಕೆ ಮಹರಾಜ್? ಯಾರಿಗೆ ತಾನೆ ತಪ್ಪ ಸಂಗೀತದ

ಮೇಲೆ ಅಭಿಲಾಷೆಯಿಲ್ಲ?

ಸ್ವಾಮಿಜಿ:— ಜೀರುಂಡೆಯ ಜೀರೆಂಬುವ ಶಬ್ದ ಕೂಡ ಕೆಲವರಿಗೆ ತುಂಬಾ ಇಷ್ಟ. ಸಂತಾಲರಿಗೆ ಅವರ ಸಂಗೀತವೇ ಎಲ್ಲಾ ಸಂಗೀತಕ್ಕಿಂತಲೂ ಉತ್ತಮವೆನ್ನಿಸುವುದು. ಒಂದು ಸ್ವರ ಇನ್ನೊಂದು ಸ್ವರದಮೇಲೆ ಅಷ್ಟು ಬೇಗ ಪರಂಪರೆಯಾಗಿ ಬಂದುಬಿದ್ದರೆ ಸಂಗೀತದ ಮಧುರತೆಯನ್ನೇ ನಾಶ ಮಾಡುವುದಲ್ಲದೆ ಅಪಸ್ವರವನ್ನು ಕೂಡ ಉಂಟುಮಾಡುವುದೆಂಬುದು ನಿನಗೆ ಅರ್ಥವಾಗುವುದಿಲ್ಲ ಎಂದು ಕಾಣುತ್ತದೆ. ಸಂಗೀತದಲ್ಲಿ ಏಳು ಸ್ವರಗಳ ಪರಿವರ್ತನೆ ಮತ್ತು ಸಂಯೋಗಗಳು ಯಾವುದಾದರೊಂದು ಬಗೆಯ ಅಥವಾ ಬಗೆಬಗೆಯ ರಾಗ ರಾಗಿಣಿಗಳನ್ನು ಉಂಟುಮಾಡುತ್ತವೆಂಬುದು ನಿನಗೆ ಗೊತ್ತಿಲ್ಲವೆ, ಈಗ ತಪ್ಪದಲ್ಲಿ, ಒಂದು ಸಂಪೂರ್ಣ ರಾಗವನ್ನು ತೇಲಿಸಿ ಹೇಳಿ, ಹೊಸ ರಾಗ ಉತ್ಪತ್ತಿ ಮಾಡಿದಾಗ ಎಲ್ಲಕ್ಕಿಂತ ಹೆಚ್ಚಾಗಿ ಧ್ವನಿಯನ್ನು ನಡುಗಿಸಿ ಸ್ವರದಿಂದ ಸ್ವರಕ್ಕೆ ಬದಲಾಯಿಸುತ್ತಾ ತೀವ್ರ ಮಟ್ಟಕ್ಕೆ ಎತ್ತಿದಾಗ, ರಾಗವು ಹೇಗೆ ತಾನೆ ಅಖಂಡವಾಗಿರುವುದು? ಜೊತೆಗೆ ಕೇವಲ ಪರಿಣಾಮವನ್ನುಂಟುಮಾಡಲು ತೇಲಿಸಿ ಮತ್ತು ಲಘುವಾಗಿ ಎಳೆಯುವುದನ್ನು ಈ ಬಗೆ ಧಾರಾಳವಾಗಿ ಉಪಯೋಗಿಸುವುದರಿಂದ ಸಂಗೀತದ ಶೈಲಿಯೇ ಸಂಪೂರ್ಣವಾಗಿ ಹಾಳಾಗುವುದು. ಹಾಡನ್ನು ಭಾವಪೂರ್ವಕವಾಗಿ ಅದರ ಅರ್ಥ ತಿಳಿಯುವಂತೆ ಹಾಡುವುದು ಈ ತಪ್ಪ ರೂಢಿಗೆ ಬಂದಾಗಿನಿಂದ ಸಂಪೂರ್ಣವಾಗಿ ಕಣ್ಮರೆಯಾಗಿದೆ. ಈಗಿನ ಕಾಲದಲ್ಲಿ ನಾಟಕ ಮಂದಿರಗಳನ್ನು ಉತ್ತಮಗೊಳಿಸುವುದರಿಂದ ಕೊಂಚಮಟ್ಟಿಗೆ ನಿಜವಾದ ಕಲೆ ಊರ್ಜಿತಗೊಳ್ಳುತ್ತಿದೆ. ಆದರೆ ಮತ್ತೊಂದು ಕಡೆ ಎಲ್ಲಾ ರಾಗ ಮತ್ತು ರಾಗಿಣಿಗಳ ಮೇಲಿನ ಗೌರವವೂ ಹೆಚ್ಚು ಹೆಚ್ಚಾಗಿ ಗಾಳಿಗೆ ತೂರಿಬಿಟ್ಟಂತಾಗಿದೆ.

ಅದರಂತೆಯೇ ದೃಪದ್ ಹಾಡುಗಾರಿಕೆಯಲ್ಲಿ ಪ್ರವೀಣರಾದವರಿಗೆ ಈ ತಪ್ಪವನ್ನು ಕೇಳುವುದಕ್ಕೆ ತುಂಬಾ ಕಷ್ಟವಾಗುತ್ತದೆ. ಆದರೆ ನಮ್ಮ ಸಂಗೀತದಲ್ಲಿ ಆರೋಹಣ ಅವರೋಹಣ ಚೆನ್ನಾಗಿರುವುದು. ಫ್ರೆಂಚರು ಮೊದಲು ಈ ವೈಶಿಷ್ಟ್ಯವನ್ನು ಕಂಡುಹಿಡಿದು ಶ್ಲಾಘಿಸಿದರು, ಅದನ್ನು ತಮ್ಮ ಸಂಗೀತದಲ್ಲೂ ಅನುಸರಿಸಲು ಆಚರಣೆಗೆ ತರಲು ಪ್ರಯತ್ನಿಸಿದರು. ಅವರು ಈ ರೀತಿ ಮಾಡಿದ ಮೇಲೆ ಇಡೀ ಯೂರೋಪು ಅದರಲ್ಲಿ ಸಂಪೂರ್ಣ ಪ್ರಾವೀಣ್ಯತೆ ಪಡೆದಿದೆ.

ಪ್ರಶ್ನೆ:—ಮಹಾರಾಜ್, ಅವರ ಸಂಗೀತ ಎಲ್ಲಕ್ಕಿಂತ ಹೆಚ್ಚಾಗಿ ಯುದ್ಧೋಚಿತವಾದುದಾಗಿದೆ. ಈ ಗುಣ ನಮ್ಮಲ್ಲಿ ಸಂಪೂರ್ಣವಾಗಿ ಲಯವಾಗಿದೆ.

ಸ್ವಾಮಿಜಿ:—ಇಲ್ಲ ಇಲ್ಲ ನಮ್ಮಲ್ಲೂ ಅದು ಇದೆ. ವೀರರಸ ಸಂಗೀತ ಸಾಮರಸ್ಯದಲ್ಲಿ ತುಂಬಾ ಆವಶ್ಯಕ. ನಮ್ಮಲ್ಲಿ ಸಾಮರಸ್ಯ ವಿಲ್ಲದಿರುವುದು ಶೋಚನೀಯ. ಅದಕ್ಕೇ ಅದು ಹೆಚ್ಚಾಗಿ ಕಾಣುವುದಿಲ್ಲ. ನಮ್ಮ ಸಂಗೀತವು ಪರಿಶ್ರಮದಿಂದ ಅಭಿವೃದ್ಧಿ ಹೊಂದುತ್ತಿತ್ತು. ಆದರೆ ಮಹಮ್ಮದೀಯರು ಬಂದಾಗ ಅವರು ಅದನ್ನು ಎಷ್ಟರ ಮಟ್ಟಿಗೆ ತಮ್ಮ ವಶವಡಿಸಿಕೊಂಡರೆಂದರೆ ಸಂಗೀತ ವೃಕ್ಷ ಇನ್ನು ಮುಂದಕ್ಕೆ ಬೆಳೆಯಲಾರದೆ ಹೋಯಿತು. ಪಾಶ್ಚಾತ್ಯರ ಸಂಗೀತದಲ್ಲಿರಬೇಕಾದ ದುಃಖಭಾವ ಮತ್ತು ವೀರಭಾವ ಎರಡೂ ಅಲ್ಲಿದೆ. ಆದರೆ ನಮ್ಮ ಪೂರ್ವದ ಸೋರೆ ಬುರುಡೆಯ ಸಂಗೀತದ ಉಪಕರಣ ಕೊಂಚವೂ ಉತ್ತಮವಾಗಿಲ್ಲ.

ಪ್ರಶ್ನೆ:—ರಾಗ ಮತ್ತು ರಾಗಿಣಿಗಳಲ್ಲಿ ಯಾವುದು ವೀರರಸ ಪ್ರಧಾನವಾದದ್ದು ?

ಸ್ವಾಮಿಜಿ:—ಪ್ರತಿಯೊಂದು ರಾಗದಲ್ಲೂ ಸರಿಯಾಗಿ ಸ್ವರ ಕೂಡಿಸಿದರೆ ಮತ್ತು ಉಪಕರಣಗಳನ್ನು ತಕ್ಕಂತೆ ಶೃತಿಮಾಡಿದರೆ ವೀರರಸವನ್ನು ತರಬಹುದು. ಕೆಲವು ರಾಗಿಣಿಗಳಲ್ಲಿ ಕೂಡ ವೀರಭಾವ ತರಬಹುದು.

ಊಟದ ವೇಳೆಯಾದ್ದರಿಂದ ಸಂಭಾಷಣೆ ಮುಕ್ತಾಯವಾಯಿತು. ಊಟವಾದಮೇಲೆ ಸ್ವಾಮಿಜಿ ಕಲ್ಕತ್ತೆಯಿಂದ ಮಠಕ್ಕೆ ರಾತ್ರೆ ತಂಗಲು ಬಂದಿದ್ದ ಅತಿಥಿಗಳಿಗೆ ಸರಿಯಾದ ವ್ಯವಸ್ಥೆ ಆಗಿದೆಯೆ ಎಂದು ವಿಚಾರಿಸಿ ನಂತರ ಮಲಗುವ ಕೋಣೆಗೆ ಹೋದರು.

೬

ಹೊಸಮಠವನ್ನು ಕಟ್ಟಿ ಆಗಲೇ ಎರಡು ವರುಷಗಳು ಆಗಿತ್ತು. ಎಲ್ಲಾ ಸ್ವಾಮಿಗಳೂ ಮಠದಲ್ಲೇ ವಾಸಿಸುತ್ತಿದ್ದರು. ಆಗ ಒಂದು ದಿನ ಬೆಳಿಗ್ಗೆ ನಾನು ನನ್ನ ಗುರುವನ್ನು ಸಂದರ್ಶಿಸಲು ಅಲ್ಲಿಗೆ ಬಂದೆ. ನನ್ನನ್ನು ನೋಡಿ ಸ್ವಾಮಿಜಿ ಮುಗುಳುನಗೆ ನಕ್ಕು ನನ್ನ ಯೋಗಕ್ಷೇಮವನ್ನು ವಿಚಾರಿಸಿ ಆದಮೇಲೆ "ಇಂದು ನೀನು ಇಲ್ಲೇ ಇರುವೆ ಅಲ್ಲವೆ?" ಎಂದು ಕೇಳಿದರು. ನಾನು "ನಿಸ್ಸಂದೇಹವಾಗಿ" ಎಂದೆ. ಇನ್ನೂ ಏನೇನೋ

ವಿಚಾರಗಳನ್ನು ಕೇಳಿದ ಬಳಿಕ ನಾನು ಸ್ವಾಮಿಜಿಯನ್ನು "ನಮ್ಮ ಹುಡುಗರ ವಿದ್ಯಾಭ್ಯಾಸದ ವಿಚಾರವಾಗಿ ನಿಮ್ಮ ಅಭಿಪ್ರಾಯವೇನು?" ಎಂದು ಕೇಳಿದೆ.

ಸ್ವಾಮಿಜಿ:—"ಗುರುಕುಲವಾಸ" ಗುರುವಿನೊಡನೆ ವಾಸಿಸುವುದು.

ಪ್ರಶ್ನೆ:—ಹೇಗೆ?

ಸ್ವಾಮಿಜಿ:—ಹಿಂದಿನಂತೆಯೆ ಇರಬೇಕು. ಈ ವಿದ್ಯಾಭ್ಯಾಸದ ಜೊತೆಗೆ ಪಾಶ್ಚಾತ್ಯ ವಿಜ್ಞಾನ ಶಾಸ್ತ್ರವನ್ನೂ ಕಲಿಸಬೇಕು. ಇವೆರಡೂ ಆವಶ್ಯಕ.

ಪ್ರಶ್ನೆ:—ಏಕೆ ಈಗಿನ ವಿಶ್ವವಿದ್ಯಾನಿಲಯದ ಪದ್ಧತಿಯಲ್ಲಿ ಯಾವ ನ್ಯೂನತೆ ಇದೆ?

ಸ್ವಾಮಿಜಿ:—ಅದೆಲ್ಲ ಲೋಪದೋಷಗಳ ಕಂತೆ. ಅದು ಗುಮಾಸ್ತರನ್ನು ಉತ್ಪತ್ತಿ ಮಾಡುವ ಯಂತ್ರವಲ್ಲದೆ ಮತ್ತೇನೂ ಅಲ್ಲ. ಇಷ್ಟೇ ಆಗಿದ್ದರೆ ಗ್ರಹಚಾರಕ್ಕೆ ನಾನೆಷ್ಟೋ ಕೃತಜ್ಞನಾಗಿರುತ್ತಿದ್ದೆ. ಇಷ್ಟೇ ಅಲ್ಲ. ಜನರು ಹೇಗೆ ನಂಬಿಕೆ ಮತ್ತು ಶ್ರದ್ಧಾಹೀನರಾಗುತ್ತಿದ್ದಾರೆಂಬುದನ್ನು ನೋಡು. ಅವರು ಗೀತೆಯು ಕೇವಲ ಒಂದು ಭಾಗವೆಂದೂ ವೇದಗಳೆಲ್ಲಾ ಗ್ರಾಮ್ಯ ಹಾಡುಗಳೆಂದೂ ಕಂಠೋಕ್ತವಾಗಿ ಹೇಳುತ್ತಿದ್ದಾರೆ. ಭರತಖಂಡದ ಹೊರಗಡೆ ಇರುವ ವಸ್ತುಗಳು, ಜನಾಂಗಗಳ ವಿಚಾರದಲ್ಲೆಲ್ಲಾ ಪಾರಂಗತರಾಗಲು ಇಚ್ಛಿಸುವರು. ಆದರೆ ಅವರನ್ನು ಪೂರ್ವಿಕರ ಏಳು ಸಂತತಿಗಳ ಹೆಸರನ್ನು ಕೇಳು. ಅದುಕೂಡ ಅವರಿಗೆ ಗೊತ್ತಿರುವುದಿಲ್ಲ. ಇನ್ನು ಹದಿನಾಲ್ಕು ಸಂತತಿ ಪಾಡೇನು!

ಪ್ರಶ್ನೆ:—ಆದರೆ ಅದರಿಂದೇನಾಗುವುದು? ಅವರ ಪೂರ್ವಿಕರ ವಂಶಾವಳಿಯ ಹೆಸರು ಅವರಿಗೆ ಗೊತ್ತಿಲ್ಲದಿದ್ದರೇನಂತೆ?

ಸ್ವಾಮಿಜಿ:—ಹಾಗೆ ಯೋಚಿಸಬೇಡ. ಯಾವ ಜನಾಂಗಕ್ಕೆ ಅವರದೇ ಆದ ಇತಿಹಾಸವಿಲ್ಲವೋ ಅದಕ್ಕೆ ಈ ಜಗತ್ತಿನಲ್ಲಿ ಯಾವ ಸ್ಥಾನವೂ ಇಲ್ಲ. ಯಾರು "ನಾನು ಕುಲೀನ ಮನೆತನದವನು" ಎಂದು ಭಾವಿಸುವಷ್ಟು ಹೆಮ್ಮೆ ಮತ್ತು ನಂಬಿಕೆ ಹೊಂದಿರುವವನು ಎಂದಾದರೂ ಕೆಟ್ಟವನಾಗ ಬಲ್ಲನೆಂದು ನಂಬುವೆಯೇನು? ಅದು ಹೇಗೆ ಸಾಧ್ಯ? ಅವನಲ್ಲಿರುವ ಶ್ರದ್ಧೆಯೇ ಅವನ ಎಲ್ಲಾ ಕೆಲಸಗಳು ಮತ್ತು ಯೋಚನೆಗಳನ್ನೆಲ್ಲಾ ಎಷ್ಟರ ಮಟ್ಟಿಗೆ ನಿಗ್ರಹಿಸುವುದೆಂದರೆ ಅವನು ಕೆಟ್ಟ ಕೆಲಸವನ್ನು ಮಾಡುವುದಕ್ಕಿಂತ

ಪ್ರಾಣವನ್ನಾದರೂ ಬಿಡುವನು. ಆದ್ದರಿಂದ ಜನಾಂಗದ ಇತಿಹಾಸ ಆ ಜನಾಂಗವನ್ನು ಸರಿಯಾದ ನಿಗ್ರಹದಲ್ಲಿಟ್ಟು ಅದು ಹೀನಗತಿಗೆ ಬರದಂತೆ ತಡೆಯುವುದು. ನನಗೆ ಗೊತ್ತು, ನೀನು "ಆದರೆ ನಮಗೆ ಅಂತಹ ಇತಿಹಾಸ ವಿಲ್ಲವಲ್ಲ!" ಎಂದು ಹೇಳಬಹುದು. ಇಲ್ಲ, ಯಾರು ನಿನ್ನಂತೆ ಯೋಚಿಸು ವರೋ ಅಂತಹವರಿಗೆ ಖಂಡಿತವಾಗಿಯೂ ಇಲ್ಲ. ನಿಮ್ಮ ವಿಶ್ವವಿದ್ಯಾ ನಿಲಯದ ದೊಡ್ಡ ಪಂಡಿತರ ದೃಷ್ಟಿಯಿಂದಲೂ ಏನೂ ಇಲ್ಲ. ಅಲ್ಲದೆ ಯಾರು ಒಮ್ಮೆ ಪಾಶ್ಚಾತ್ಯದೇಶಗಳಲ್ಲಿ ಅವಸರವಸರವಾಗಿ ಪ್ರಯಾಣ ಮಾಡಿ ಐರೋಪ್ಯಶೈಲಿಯ ಉಡುಪನ್ನು ಧರಿಸಿ "ನಮ್ಮಲ್ಲಿ ಏನೂ ಇಲ್ಲ, ನಾವು ಅನಾಗರಿಕರು" ಎಂದು ಘಂಟಾಘೋಷವಾಗಿ ಹೇಳುವರೊ ಅವರೂ ಕೂಡ ಹೀಗೆಯೆ ಆಲೋಚಿಸುವರು. ಇತರ ದೇಶಗಳಿಗಿರುವಂತಹ ಇತಿ ಹಾಸ ನಮಗಿಲ್ಲವೆಂಬುದೇನೊ ನಿಜ. ನಾವು ಅಕ್ಕಿಯನ್ನು ತಿನ್ನುತ್ತೇ ವೆಂದುಕೊಳ್ಳೋಣ. ಆಂಗ್ಲೇಯನು ಅವನ್ನು ತಿನ್ನುವುದಿಲ್ಲ. ಈ ಕಾರಣ ದಿಂದ ಅವರೆಲ್ಲಾ ಉಪವಾಸದಿಂದ ಸಾಯುವರೆಂದೂ, ನಿರ್ನಾಮ ವಾಗುವರೆಂದೂ ಊಹಿಸುವೆಯೇನು? ತಮ್ಮ ದೇಶದಲ್ಲಿ ಏನು ಸಿಗು ವುದೊ, ಯಾವುದನ್ನು ಸುಲಭವಾಗಿ ಉತ್ಪತ್ತಿ ಮಾಡಬಹುದೊ, ಯಾವುದು ಅವರ ದೇಹಸ್ಥಿತಿಗೆ ಅನುಗುಣವಾಗುವುದೋ ಅದನ್ನು ತಿಂದು ಸುಖವಾಗಿ ಜೀವಿಸುವರು. ಅದರಂತೆಯೆ ನಾವೂ ಕೂಡ ನಮಗೆ ಯಾವ ಬಗೆಯ ಇತಿಹಾಸವಿರಬೇಕೊ ಅದೇ ಬಗೆಯ ಇತಿಹಾಸವನ್ನು ಹೊಂದಿ ದ್ದೇವೆ. ನಮ್ಮ ಕಣ್ಣನ್ನು ಮುಚ್ಚಿಕೊಂಡು "ಅಯ್ಯೋ! ನಮಗೆ ಇತಿ ಹಾಸವೇ ಇಲ್ಲ" ಎಂದು ಕೂಗಿದರೆ ಇತಿಹಾಸವು ನಿರ್ಮೂಲವಾಗುವು ದೇನು? ಯಾರಿಗೆ ಕಣ್ಣುಗಳಿವೆಯೊ ಅವರು ಇಲ್ಲಿ ಉಜ್ವಲ ಇತಿಹಾಸ ವನ್ನು ನೋಡುವರು. ಈ ಶಕ್ತಿಯಿಂದಲೆ ಜನಾಂಗವು ಇನ್ನೂ ಜೀವಂತ ವಾಗಿರುವುದೆಂದು ತಿಳಿದಿರುವರು. ಆದರೆ ಆ ಇತಿಹಾಸವನ್ನು ಪರಿಷ್ಕರಿಸಿ ಬರೆಯಬೇಕು. ಪಾಶ್ಚಾತ್ಯ ಶಿಕ್ಷಣದಿಂದ ಆಧುನಿಕಯುಗದಲ್ಲಿ ನಮ್ಮ ವರು ಆರ್ಜಿಸಿರುವ ಆಲೋಚನಾ ಮಾರ್ಗ ಮತ್ತು ಅದನ್ನು ಅರ್ಥಮಾಡಿ ಕೊಳ್ಳಲು ತಕ್ಕಂತೆ ಅದನ್ನು ತಿದ್ದಿ ಪುನಃ ಹೇಳಬೇಕು.

ಪ್ರಶ್ನೆ:—ಅದನ್ನು ಹೇಗೆ ಮಾಡಬೇಕು?

ಸ್ವಾಮಿಜಿ:—ಅಷ್ಟೊಂದು ದೊಡ್ಡ ವಿಷಯವನ್ನು ಈಗ ಮಾತ್ರ ಮಾಡಲು ಸಮಯವಿಲ್ಲ. ಆದರೂ, ಅದನ್ನು ತರಬೇಕಾದರೆ ನಮ್ಮ ಪೂರ್ವ

ಸಂಸ್ಥೆಗಳಾದ "ಗುರು ಕುಲ" ಪದ್ಧತಿಯೇ ಮುಂತಾದ ವಿದ್ಯಾಕೇಂದ್ರ ಗಳನ್ನು ತೆರೆಯಬೇಕು. ವೇದಾಂತದೊಡನೆ ಕೂಡಿರುವ ಪಾಶ್ಚಾತ್ಯ ವಿಜ್ಞಾನ, ಬ್ರಹ್ಮಚರ್ಯವೇ ಆಸರೆಯಾದ ಧ್ಯೇಯ ಮತ್ತು ನಮ್ಮ ಆತ್ಮ ದಲ್ಲಿ ದೃಢವಾದ ಶ್ರದ್ಧೆ ಮತ್ತು ನಂಬಿಕೆ–ಇವು ನಮಗೆ ಬೇಕಾಗಿರುವುದು. ನಮಗೆ ಬೇಕಾದ ಮತ್ತೊಂದೇನೆಂದರೆ ಈಗಿನ ವಿದ್ಯಾಭ್ಯಾಸದ ಪದ್ಧತಿ ಯನ್ನು ತೊಡದುಹಾಕಬೇಕು. ಒಬ್ಬ ಮನುಷ್ಯನಿಗೆ ಯಾರೋ ಕತ್ತೆ ಯನ್ನು ಚೆನ್ನಾಗಿ ಸದೆ ಬಡಿದರೆ ಅದು ಕುದುರೆಯಾಗುವುದೆಂದು ಹೇಳಲು ಅವನು ಹಾಗೆಯೇ ಮಾಡಿದನು. ಇದೇ ನಮ್ಮ ಹುಡುಗರಿಗೆ ವಿದ್ಯೆ ಕಲಿಸುವ ಶಿಕ್ಷಣ ಪದ್ಧತಿಯ ಗುರಿಯೂ ಆಗಿದೆ. ಆದ್ದರಿಂದ ಈ ಶಿಕ್ಷಣ ಪದ್ಧತಿ ಅಳಿಸಿಹೋಗಬೇಕು.

ಪ್ರಶ್ನೆ:—ನೀವು ಹೀಗೆ ಹೇಳಿದುದರ ಅರ್ಥವೇನು?

ಸ್ವಾಮಿಜಿ:— ನೋಡು, ಯಾರೂ ಯಾರಿಗೂ ಬೋಧಿಸಲಾರರು. ಉಪಾಧ್ಯಾಯ ತಾನು ಬೋಧಿಸುತ್ತಿರುವೆನೆಂದು ತಿಳಿದು ಎಲ್ಲವನ್ನೂ ಹಾಳು ಮಾಡುವನು. ಅದಕ್ಕೇ ವೇದಾಂತ ಹೇಳುವುದು–ಮನುಷ್ಯನಲ್ಲಿಯೇ ಎಲ್ಲಾ ಜ್ಞಾನವೂ ಇದೆ–ಚಿಕ್ಕ ಹುಡುಗನಲ್ಲಿ ಕೂಡ ಇದು ಇದೆ–ಅದನ್ನು ಜಾಗ್ರತಗೊಳಿಸುವುದು ಮಾತ್ರ ಆವಶ್ಯಕ. ಇಷ್ಟು ಮಾತ್ರ ಉಪಾಧ್ಯಾಯನ ಕೆಲಸ. ನಮ್ಮ ಹುಡುಗರಿಗೆ ತಮ್ಮ ಕೈ ಕಾಲು ಕಿವಿ ಕಣ್ಣು ಮುಂತಾದುವುಗಳ ಸರಿಯಾದ ಉಪಯೋಗವನ್ನು ಕಲಿಸಿಕೊಡುವುದು ಮಾತ್ರ ನಮ್ಮ ಕೆಲಸ. ಉಳಿದುವೆಲ್ಲಾ ಸುಲಭವಾಗುವುದು. ಆದರೆ ಧರ್ಮವೇ ಎಲ್ಲದರ ಮೂಲ. ಧರ್ಮವೇ ಅನ್ನ. ಉಳಿದುವೆಲ್ಲಾ ವ್ಯಂಜನದಂತೆ. ಕೇವಲ ಪಲ್ಯವನ್ನೇ ತಿನ್ನುತ್ತಿದ್ದರೆ ಅಜೀರ್ಣವಾಗುವುದು. ಬರೇ ಅನ್ನವನ್ನೇ ತಿಂದರೂ ಅಜೀರ್ಣ ವಾಗುವುದು. ನಮ್ಮ ಉಪಾಧ್ಯಾಯರುಗಳು ನಮ್ಮ ಹುಡುಗರನ್ನು ಗಿಳಿಗಳನ್ನಾಗಿ ಮಾಡುತ್ತಿದ್ದಾರೆ. ಅನೇಕ ವಿಷಯಗಳನ್ನು ಕಂಠ ಪಾಠಮಾಡುವಂತೆ ಮಾಡಿ ಅವರ ಮೆದುಳನ್ನು ನಾಶಗೊಳಿಸುತ್ತಿದ್ದಾರೆ. ಒಂದು ದೃಷ್ಟಿಯಿಂದ ನೋಡಿದರೆ, ಈ ವಿಶ್ವವಿದ್ಯಾನಿಲಯದ ಪದ್ಧತಿಯ ಸುಧಾರಣೆಯಾಗಬೇಕೆಂದು ಸಲಹೆಮಾಡಿದ ವೈಸರಾಯರಿಗೆ ಕೃತಜ್ಞ ರಾಗಿರಬೇಕು. ಏಕೆಂದರೆ ಇದರಿಂದ ಉಚ್ಚಶಿಕ್ಷಣ ಪದ್ಧತಿ ಕಾರ್ಯತಃ ತೆಗೆದುಹಾಕಲ್ಪಟ್ಟಂತೆಯೆ–ದೇಶಕ್ಕೆ ಇದರಿಂದ ಕೊಂಚ ಉಸಿರಾಡಲವ ಕಾಶ ಸಿಕ್ಕಿ ಕೊಂಚ ನೆಮ್ಮದಿಯಾಗುವುದು. ಅಯ್ಯೊ ದೇವರೆ! ಈ ಪದ

ವೀಧರರ ಪಟ್ಟಕ್ಕಾಗಿ ಎಷ್ಟೊಂದು ರೋಷಾವೇಶ, ಗಲಿಬಿಲಿ! ಕೊಂಚ ದಿನ ಗಳಲ್ಲಿಯೇ ಎಲ್ಲಾ ತಣ್ಣಗಾಯಿತು! ಇಷ್ಟೆಲ್ಲಾ ಆದಮೇಲೆ ಅವರು ಏನನ್ನು ಕಲಿಯುವುದು–ನಮ್ಮ ಧರ್ಮ, ನಮ್ಮ ನಡೆನುಡಿಗಳೆಲ್ಲಾ ಕೆಟ್ಟದ್ದು, ಪಾಶ್ಚಾತ್ಯರು ಹೊಂದಿರುವುದೆಲ್ಲಾ ಒಳ್ಳೆಯದು ಎಂಬುದನ್ನು ಕಲಿಯುವ ರಲ್ಲವೆ! ಕೊನೆಗೆ ಅವರು ಉಪವಾಸದಿಂದ ಪಾರಾಗಲಾರರು. ಈ ಉಚ್ಚ ಶಿಕ್ಷಣ ಇದ್ದರೆಷ್ಟು ಹೋದರೆಷ್ಟು? ಜನರು ತಾವು ಕೆಲಸಮಾಡಿ ತಮ್ಮ ಅನ್ನವನ್ನು ಸಂಪಾದಿಸುವಂತಹ ಕೈಗಾರಿಕಾ ಕಲೆಗಳ ವಿದ್ಯಾಭ್ಯಾಸವನ್ನು ಕಲಿತರೆ ಎಷ್ಟೋ ವಾಸಿ. ಕೆಲಸಕ್ಕಾಗಿ ಅಲೆಯುತ್ತಾ ವ್ಯರ್ಥವಾಗಿ ಕಾಲ ಕಳೆಯುವುದು ತಪ್ಪುವುದು.

ಪ್ರಶ್ನೆ:— ಹೌದು. ಮಾರ್ವಾಡಿಗಳೂ ಹಾಗೆಯೆ! ಅವರು ಯಾರಿಂದಲೂ ಕೆಲಸಮಾಡಿಸಿಕೊಳ್ಳುವುದಿಲ್ಲ. ಮುಕ್ಕಾಲು ಪಾಲು ಮಂದಿ ಯಾವುದಾದರೊಂದು ವ್ಯಾಪಾರದಲ್ಲಿ ನಿರತರಾಗಿರುವರು.

ಸ್ವಾಮಿಜಿ:— ಎಂತಹ ಹುಚ್ಚುಮಾತು! ಅವರು ನಮ್ಮ ದೇಶ ವನ್ನು ಹಾಳುಮಾಡುವುದರಲ್ಲಿರುವರು. ಅವರಿಗೆ ತಮ್ಮ ಹಿತದೃಷ್ಟಿಯ ಅರ್ಥ ಕೂಡ ಆಗಿಲ್ಲ. ನೀವು ಎಷ್ಟೋ ವಾಸಿ. ಏಕೆಂದರೆ ಕೈಗಾರಿಕೆಯ ಕಡೆಗೆ ಹೆಚ್ಚು ಗಮನಕೊಡುವಿರಿ. ಅವರು ತಮ್ಮ ವ್ಯಾಪಾರಕ್ಕಾಗಿ ಹಾಕುವ ಹಣ ಮತ್ತು ಅವರಿಗೆ ಬರುವ ಅಲ್ಪ ಬಡ್ಡಿಯ ಹಣವೆಲ್ಲವನ್ನೂ ಕಾರ್ಖಾನೆ ಕೈಗಾರಿಕಾ ಸ್ಥಳಗಳಿಗೆ ಸರಿಯಾಗಿ ಉಪಯೋಗಿಸಿದರೆ ಆ ಯೂರೋಪಿ ಯನ್ ಜನರು ಆ ಹಣವನ್ನು ಹೊಂದಿ ಆ ವ್ಯಾಪಾರದ ಮುಕ್ಕಾಲು ಭಾಗ ಲಾಭವನ್ನು ಪಡೆದು ತಮ್ಮ ಜೇಬನ್ನು ತುಂಬಿಸಿಕೊಳ್ಳುವಂತೆ ಮಾಡು ವುದು ತಪ್ಪಿ ನಮ್ಮ ದೇಶದ ಅಭಿವೃದ್ಧಿಗೆ ಸಹಾಯ ಮಾಡುವುದಲ್ಲದೆ ಅವರಿಗೆ ಅಧಿಕವಾದ ಲಾಭವುಂಟಾಗುವುದು. ಕಾಬೂಲಿಗಳು ಮಾತ್ರ ಕೆಲಸಕ್ಕಾಗಿ ಕೊಂಚವೂ ಗಮನ ಕೊಡುವುದಿಲ್ಲ–ಅವರಲ್ಲಿ ಸ್ವಾತಂತ್ರ್ಯದ ಕೆಚ್ಚು ಅಸ್ಥಿಗತವಾಗಿದೆ. ಅವರಲ್ಲಿ ಯಾರಿಗಾದರೂ ಕೆಲಸಕ್ಕೆ ಸೇರಲು ಕೇಳು ಮುಂದೇನಾಗುವುದೆಂದು ಗೊತ್ತಾಗುವುದು!

ಪ್ರಶ್ನೆ:—ಸರಿ, ಮಹರಾಜ್, ಉಚ್ಚ ಶಿಕ್ಷಣವನ್ನು ತೆಗೆದು ಹಾಕಿದ ಪಕ್ಷಕ್ಕೆ ಜನರು ಹಿಂದಿನಷ್ಟೇ ಮೂಢರಾಗಿ ಉಳಿಯುವರಲ್ಲವೆ?

ಸ್ವಾಮಿಜಿ:—ಎಂತಹ ತಿಳಿಗೇಡಿತನ! ಸಿಂಹವು ನರಿಯಾಗಲು ಸಾಧ್ಯವೆ? ನೀನೇನು ಹೇಳುತ್ತಿರುವೆ? ಅನಾದಿಕಾಲದಿಂದಲೂ ಯಾವ

ನಾಡಿನ ಮಕ್ಕಳು ಇಡೀ ಪ್ರಪಂಚಕ್ಕೆ ಜ್ಞಾನವನ್ನು ಕೊಟ್ಟು ಪೋಷಿಸಿದ್ದಾರೊ ಅಂಥವರು ಲಾರ್ಡ್ ಕರ್ಜನ್ ಉಚ್ಚ ಶಿಕ್ಷಣವನ್ನು ತೆಗೆದುಹಾಕಿದ್ದರಿಂದ ದಡ್ಡರಾಗಲು ಸಾಧ್ಯವೇನು?

ಪ್ರಶ್ನೆ:—ಆದರೆ ಆಂಗ್ಲೇಯರು ನಮ್ಮ ದೇಶಕ್ಕೆ ಬರುವ ಮೊದಲು ನಮ್ಮ ದೇಶ ಹೇಗಿತ್ತು, ಈಗ ಹೇಗಿದೆ ಎಂದು ಯೋಚಿಸಿ.

ಸ್ವಾಮಿಜಿ:—ಪ್ರೌಢ ವಿದ್ಯಾಭ್ಯಾಸ ಎಂದರೆ ಕೇವಲ ಭೌತ ಶಾಸ್ತ್ರಗಳ ವ್ಯಾಸಂಗ ಮತ್ತು ನಾವು ನಿತ್ಯ ಬಳಸುವ ವಸ್ತುಗಳನ್ನು ಯಂತ್ರದಿಂದ ತಯಾರಿಸುವುದು ಇಷ್ಟೇ ಏನು? ಜೀವನದ ಸಮಸ್ಯೆಗಳನ್ನು ಬಿಡಿಸುವುದು ಹೇಗೆ ಎಂಬುದನ್ನು ಕಂಡುಹಿಡಿಯುವುದು ಪ್ರೌಢ ಶಿಕ್ಷಣದಿಂದಾಗುವ ಉಪಯೋಗ. ಈ ಯೋಚನೆಯೇ ಆಧುನಿಕ ನಾಗರಿಕ ಜಗತ್ತನ್ನು ಗಾಢವಾದ ಆಲೋಚನೆಯಲ್ಲಿ ಮುಳುಗಿಸಿದೆ. ಆದರೆ ನಮ್ಮ ದೇಶೀಯರು ಸಾವಿರಾರು ವರುಷಗಳ ಹಿಂದೆಯೇ ಈ ಸಮಸ್ಯೆಯನ್ನು ಬಗೆಹರಿಸಿದ್ದರು

ಪ್ರಶ್ನೆ:—ಆದರೆ ನಿಮ್ಮ ವೇದಾಂತವೂ ಇನ್ನೇನು ಕಣ್ಮರೆಯಾಗುವುದರಲ್ಲಿತ್ತು?

ಸ್ವಾಮಿಜಿ:—ಹಾಗಿದ್ದಿರಬಹುದು. ಕಾಲದ ಬಹಿಃಪ್ರವಾಹದಲ್ಲಿ ವೇದಾಂತ ಜ್ಯೋತಿ ಆಗಾಗ್ಗೆ ಆರಿಹೋಗುವುದರಲ್ಲಿದೆಯೊ ಎಂಬಂತೆ ತೋರುವುದು. ಹೀಗೆ ಆದಾಗ ಭಗವಂತನೇ ಮಾನವ ಶರೀರದಲ್ಲಿ ಅವತಾರ ಮಾಡಬೇಕಾಗುವುದು. ಅವನು ಧರ್ಮಕ್ಕೆ ಎಷ್ಟುಮಟ್ಟಿಗೆ ಜೀವವನ್ನು ಶಕ್ತಿಯನ್ನು ತುಂಬುವನೆಂದರೆ ಅದು ಪುನಃ ಕೊಂಚಕಾಲ ತಡೆಯುಲಶಕ್ಯವಾದ ಚೈತನ್ಯದಿಂದ ಕೂಡಿ ಪ್ರವಹಿಸುವುದು. ಆ ಜೀವಕಳೆ ಮತ್ತು ಸತ್ತ್ವ ಪುನಃ ಅದಕ್ಕೆ ಬರುವುದು.

ಪ್ರಶ್ನೆ:—ಮಹರಾಜ್, ಭರತಖಂಡ ಉಳಿದ ಜಗತ್ತಿಗೆಲ್ಲಾ ಉದಾರವಾಗಿ ಜ್ಞಾನದಾನ ಮಾಡಿರುವುದಕ್ಕೆ ಯಾವ ಆಧಾರವಿದೆ?

ಸ್ವಾಮಿಜಿ:—ಇತಿಹಾಸವೇ ಇದಕ್ಕೆ ಸಾಕ್ಷಿ. ಪ್ರಪಂಚದಲ್ಲಿರುವ ಎಲ್ಲಾ ಆತ್ಮೋನ್ನತಿಯ ಭಾವನೆಗಳಿಗೂ ಎಲ್ಲಾ ಬಗೆಯ ಜ್ಞಾನದ ಶಾಖೆಗಳಿಗೂ ಮೂಲ ಭರತಖಂಡ ಎಂದು ಯೋಗ್ಯ ವಿಚಾರಣೆಯಿಂದ ಗೊತ್ತಾಗಿದೆ.

ಉತ್ಸಾಹದಿಂದ ಪ್ರಜ್ವಲಿಸುತ್ತಾ ಸ್ವಾಮಿಜಿ ಈ ವಿಚಾರವಾಗಿ ದೀರ್ಘವಾಗಿ ಮಾತನಾಡಿದರು. ಅವರ ಆರೋಗ್ಯ ಆಗ ತುಂಬಾ

ಕೆಟ್ಟಿತ್ತು. ಅಲ್ಲದೆ ಬೇಸಿಗೆಯ ತೀವ್ರದೆಸೆಯಿಂದ ಅವರಿಗೆ ತುಂಬಾ ಬಾಯಾರಿಕೆಯಾಗಿ ನೀರನ್ನು ಆಗಾಗ್ಗೆ ಕುಡಿಯುತ್ತಿದ್ದರು. ಕಡೆಗೆ ಅವರು "ಪ್ರಿಯ ಸಿಂಗ್ ದಯವಿಟ್ಟು ಮಂಜಿನ ನೀರನ್ನು ತೆಗೆದುಕೊಂಡು ಬಾ. ಎಲ್ಲವನ್ನೂ ನಿನಗೆ ವಿಶದವಾಗಿ ತಿಳಿಸುವೆ" ಎಂದರು. ಶೀತಲವಾದ ನೀರನ್ನು ಕುಡಿದಾದಮೇಲೆ ಪುನಃ ಪ್ರಾರಂಭಿಸಿದರು.

ಸ್ವಾಮಿಜಿ:—ನಮ್ಮದೇ ಆಗಿರುವ ಅನೇಕ ಬಗೆಯ ಜ್ಞಾನದ ಶಾಖೆಗಳನ್ನೆಲ್ಲಾ ಪರದೇಶೀಯರ ಅಂಕೆಯಿಂದ ವಿಮುಕ್ತರಾಗಿ ಕಲಿಯಬೇಕು. ಜೊತೆಗೆ ಆಂಗ್ಲ ಭಾಷೆ ಮತ್ತು ಪಾಶ್ಚಾತ್ಯ ವಿಜ್ಞಾನವನ್ನೂ ಕಲಿಯಬೇಕು. ಇದೇ ನಮಗೆ ಈಗ ಬೇಕಾಗಿರುವುದು. ನಮಗೆ ಕೈಗಾರಿಕಾ ಶಿಕ್ಷಣ ಆವಶ್ಯಕ ಮತ್ತು ಯಾವುದರಿಂದ ಕೈಗಾರಿಕೆಗಳ ಬೆಳವಣಿಗೆಯಾಗುವುದೋ ಯಾವುದರಿಂದ ಜನರು ಉದ್ಯೋಗಕ್ಕೆ ಹುಡುಕಿಕೊಂಡು ಅಲೆಯುವುದರ ಬದಲು ತಮಗೆ ಸಾಕಾಗುವಷ್ಟನ್ನು ಸಂಪಾದಿಸಿ ಕಷ್ಟಕಾಲಕ್ಕೆ ಕೊಂಚ ಉಳಿಸುವಷ್ಟನ್ನು ಸಂಪಾದಿಸಬಹುದೊ ಅಂತಹ ಶಿಕ್ಷಣ ಆವಶ್ಯಕ.

ಪ್ರಶ್ನೆ:—ಅಂದು ತಾವು ಸಂಸ್ಕೃತಸಮಿತಿಯ ಶಾಲೆಯ ವಿಚಾರವಾಗಿ ಏನನ್ನು ಹೇಳತೊಡಗಿದ್ದಿರಿ?

ಸ್ವಾಮಿಜಿ:—ನೀನು ಉಪನಿಷತ್ತಿನ ಕಥೆಗಳನ್ನು ಓದಿಲ್ಲವೆ? ನಾನು ಸತ್ಯಕಾಮನ ವಿಚಾರವಾಗಿ ಹೇಳುವೆ. ಅವನು ತನ್ನ ಗುರುವಿನ ಬಳಿಗೆ ಬ್ರಹ್ಮಚರ್ಯೆಯ ಜೀವನ ನಡೆಸಲು ಹೋದನು. ಗುರು ಅವನ ವಶಕ್ಕೆ ಕೆಲವು ಹಸುಗಳನ್ನು ಕೊಟ್ಟು ಅವನನ್ನು ಅವುಗಳೊಡನೆ ಕಾಡಿಗೆ ಕಳುಹಿಸಿದನು. ಅನೇಕ ತಿಂಗಳು ಕಳೆದುವು. ಸತ್ಯಕಾಮ ಹಸುಗಳಸಂಖ್ಯೆ ಇಮ್ಮಡಿಯಾದುದನ್ನು ನೋಡಿ ಗುರುವಿನ ಬಳಿಗೆ ಹಿಂತಿರುಗಬೇಕೆಂದು ಯೋಚಿಸಿದನು. ದಾರಿಯಲ್ಲಿ ಹೋರಿಗಳಲ್ಲೊಂದು, ಬೆಂಕಿ ಮತ್ತು ಇತರ ಪ್ರಾಣಿಗಳು ಅವನಿಗೆ ಪರಬ್ರಹ್ಮನ ವಿಚಾರವಾಗಿ ಕೆಲವು ಸಲಹೆಗಳನ್ನು ಕೊಟ್ಟುವು. ಶಿಷ್ಯ ಹಿಂತಿರುಗಿದಾಗ ಗುರು ಶಿಷ್ಯನ ಮುಖವನ್ನು ಒಮ್ಮೆ ನೋಡಿದ ಕ್ಷಣವೆ ಶಿಷ್ಯನಿಗೆ ಪರಬ್ರಹ್ಮನ ಜ್ಞಾನದ ಅರಿವಾಗಿದೆ ಎಂದು ತಿಳಿಯಿತು. ಈಗ ಈ ಕಥೆ ನಮಗಾವ ನೀತಿಯನ್ನು ಬೋಧಿಸುವುದೆಂದರೆ ನಿಜವಾದ ವಿದ್ಯಾಭ್ಯಾಸವನ್ನು ಪ್ರಕೃತಿಯೊಡನೆ ಬೆರೆತು ಜೀವಿಸುವುದರಿಂದ ಪಡೆಯಬಹುದು ಎಂದು.

ಈ ರೀತಿಯಾಗಿ ಜ್ಞಾನವನ್ನು ಪಡೆಯಬೇಕು. ಇಲ್ಲದಿದ್ದರೆ ಒಬ್ಬ

ಪಂಡಿತನ ಶಾಲೆಯಲ್ಲಿ ಶಿಕ್ಷಣ ಪಡೆಯುವುದರಿಂದ ನೀನು ನಿನ್ನ ಇಡೀ ಜೀವನವನ್ನು ಕಳೆದರೂ ಒಬ್ಬ ಮಾನವ ಕಪಿಯಂತಾಗುವೆ. ಯಾರ ಶೀಲ ಅಗ್ನಿಯಂತೆ ಉಜ್ವಲವಾಗಿದೆಯೋ ಅಂತಹವರೊಡನೆ ಬಾಲ್ಯದಿಂದಲೂ ಜೀವಿಸಬೇಕು. ಮಹತ್ವಪೂರಿತವಾದ ಉಪದೇಶದ ಜೀವಂತ ದೃಷ್ಟಾಂತವು ಯಾವಾಗಲೂ ನಮ್ಮ ಮುಂದಿರಬೇಕು. ಸುಳ್ಳು ಹೇಳುವುದು ಪಾಪಕರ ಎಂದು ಸುಮ್ಮನೆ ಓದಿದರೆ ಏನೂ ಪ್ರಯೋಜನವಿಲ್ಲ. ಪ್ರತಿಯೊಬ್ಬ ಹುಡುಗನೂ ಅಖಂಡ ಬ್ರಹ್ಮಚರ್ಯ ಸಾಧನೆಯ ಶಿಕ್ಷಣ ಹೊಂದಬೇಕು. ನಂತರವೇ ನಂಬಿಕೆ ಮತ್ತು ಶ್ರದ್ಧೆ ಬರುವುದು. ಇಲ್ಲದಿದ್ದಲ್ಲಿ ಯಾರು ನಂಬಿಕೆ ಶ್ರದ್ಧಾಹೀನರಾಗಿರುವರೊ ಅವರು ಸುಳ್ಳನ್ನು ಏಕೆ ಹೇಳಬಾರದು? ನಮ್ಮ ದೇಶದಲ್ಲಿ ಜ್ಞಾನವಿನಿಯೋಗ ಯಾವಾಗಲೂ ತ್ಯಾಗಜೀವಿಗಳ ಮೂಲಕ ಆಗಿದೆ. ಆಮೇಲೆ ಬಂದ ಪಂಡಿತರು ಜ್ಞಾನವನ್ನೆಲ್ಲಾ ತಾವೇ ಸ್ವಾಧೀನಪಡಿಸಿಕೊಂಡು ಅವು ಕೇವಲ ಶಾಲೆಯಲ್ಲಿ ಮಾತ್ರ ಕೊನೆಗಾಣುವಂತೆ ಮಾಡಿ ದೇಶವನ್ನು ನಾಶದ ಸ್ಥಿತಿಗೆ ತಂದಿರುವರು. ಎಲ್ಲಿಯವರೆಗೆ ತ್ಯಾಗಿಗಳು ಜ್ಞಾನ ಪ್ರಸಾರ ಮಾಡುತ್ತಿದ್ದರೋ ಅಲ್ಲಿಯವರೆಗೂ ಭರತಖಂಡ ಎಲ್ಲಾ ಬಗೆಯ ಒಳ್ಳೆಯ ಸಿರೀಕ್ಷೆಗಳನ್ನೂ ಹೊಂದಿತ್ತು.

ಪ್ರಶ್ನೆ:—ಮಹರಾಜ್, ನೀವು ಹೇಳಿದುದರ ಅರ್ಥವೇನು? ಇತರ ದೇಶಗಳಲ್ಲಿ ಸನ್ಯಾಸಿಗಳೇ ಇಲ್ಲ. ಆದರೆ ನೋಡಿ ಅವರ ವಿದ್ಯಾಶಕ್ತಿಯಿಂದ ಭರತಖಂಡ ಅವರ ಪಾದದೆಡೆ ಬಿದ್ದಿದೆ.

ಸ್ವಾಮಿಜಿ:—ಹುಚ್ಚುಚ್ಚಾಗಿ ಮಾತನಾಡ ಬೇಡ. ಸ್ನೇಹಿತನೆ, ನಾನು ಹೇಳುವುದನ್ನು ಕೇಳು. ತನ್ನ ಮಕ್ಕಳಿಗೆ ಜ್ಞಾನ ಪ್ರಸಾರ ಮಾಡುವ ಕಾರ್ಯ ತ್ಯಾಗಿಗಳ ಹೆಗಲ ಮೇಲೆ ಪುನಃ ಬೀಳುವವರೆಗೂ, ಭರತ ಖಂಡ ಇತರರ ಪಾದುಕೆಗಳನ್ನು ತನ್ನ ತಲೆಯಮೇಲೆ ಎಂದೆಂದೂ ಹೊರಬೇಕಾಗುವುದು. ಒಬ್ಬ ಅವಿದ್ಯಾವಂತನಾದ ಆದರೆ ತ್ಯಾಗಿಯಾದ ಹುಡುಗ ನಿಮ್ಮ ದೊಡ್ಡ ದೊಡ್ಡ ವಯಸ್ಸಾದ ಪಂಡಿತರ ತಲೆಯನ್ನೆಲ್ಲಾ ತಿರುಗಿಸಿಬಿಟ್ಟದ್ದನ್ನು ನೀನು ತಿಳಿದಿಲ್ಲವೆ? ದಕ್ಷಿಣೇಶ್ವರದಲ್ಲಿ ಒಮ್ಮೆ ವಿಷ್ಣು ದೇವಾಲಯದ ಅರ್ಚಕನಾಗಿದ್ದ ಬ್ರಾಹ್ಮಣನು ವಿಗ್ರಹದ ಕಾಲೊಂದನ್ನು ಮುರಿದುಬಿಟ್ಟನು. ಪಂಡಿತರನ್ನೆಲ್ಲಾ ಅವರ ಅಭಿಪ್ರಾಯಗಳನ್ನು ಕೇಳಲು ಸಭೆ ಸೇರಿಸಿತ್ತು. ಅವರು ಹಳೆಯ ಗ್ರಂಥ ಮತ್ತು ಓಲೆಗರಿಯ ಪುಸ್ತಕಗಳನ್ನೆಲ್ಲಾ ತಿರುವಿಹಾಕಿ ಶಾಸ್ತ್ರ ಪ್ರಕಾರ ಭಿನ್ನವಾದ ವಿಗ್ರಹವು ಪೂಜಾರ್ಹ

ವೆಲ್ಲವೆಂದು ನಿರ್ಧರಿಸಿ, ಹೊಸ ವಿಗ್ರಹ ಪ್ರತಿಷ್ಠಾಪನೆಯಾಗಬೇಕೆಂದು ಹೇಳಿದರು. ಪರಿಣಾಮನಾಗಿ ದೊಡ್ಡ ಕೋಲಾಹಲವೆದ್ದಿತು. ಕಡೆಗೆ ಶ್ರೀ ರಾಮಕೃಷ್ಣರನ್ನು ಕರೆಸಿದರು. ಅವರು ಎಲ್ಲವನ್ನೂ ಕೇಳಿ ನಂತರ "ಗಂಡ ಹೆಳವನಾದನೆಂದು ಹೆಂಡತಿಯಾದವಳು ಅವನನ್ನು ತ್ಯಜಿಸುವಳೇನು!" ಎಂದು ಕೇಳಿದರು. ಮುಂದೇನಾಯಿತು? ಪಂಡಿತರೆಲ್ಲಾ ಸ್ತಂಭೀಭೂತರಾದರು. ಅವರ ಶಾಸ್ತ್ರದ ಭಾಷ್ಯ ಟೀಕೆಗಳು ಎಲ್ಲ ಈ ಒಂದು ಸರಳವಾದ ಮಾತಿನ ಮುಂದೆ ನಿಲ್ಲಲಾರದೆಹೋಯಿತು. ಅದು ನಿಜವಾಗಿದ್ದರೆ ಶ್ರೀ ರಾಮಕೃಷ್ಣರು ಭೂಮಿಗೇಕೆಬರಬೇಕಾಗಿತ್ತು ಕೇವಲ ಪುಸ್ತುಕ ಪಾಂಡಿತ್ಯಕ್ಕೆ ಅವರೇಕೆ ಪ್ರೋತ್ಸಾಹ ಕೊಡುತ್ತಿರಲಿಲ್ಲ? ಅವರು ತಮ್ಮೊಡನೆ ತಂದ ನವ ಶಕ್ತಿ ಶಿಕ್ಷಣ ವಿದ್ಯಾಭ್ಯಾಸದಲ್ಲೆಲ್ಲಾ ತುಂಬಬೇಕು. ನಂತರವೇ ನಿಜವಾದ ಕೆಲಸಮಾಡಬಹುದು.

ಪ್ರಶ್ನೆ:—ಆದರೆ ಅದನ್ನು ಮಾಡುವುದಕ್ಕಿಂತ ಹೇಳುವುದು ಸುಲಭ.

ಸ್ವಾಮಿಜಿ:—ಅದು ಸುಲಭವಾಗಿದ್ದಿದ್ದರೆ ಶ್ರೀ ರಾಮಕೃಷ್ಣರು ಬರುವ ಆವಶ್ಯಕತೆಯೇನಿತ್ತು? ಪ್ರತಿಯೊಂದು ಪಟ್ಟಣದಲ್ಲಿಯೂ ಹಳ್ಳಿಯಲ್ಲಿಯೂ ಮಠವನ್ನು ಸ್ಥಾಪಿಸುವುದೇ ನೀವೀಗ ಮಾಡಬೇಕಾದ ಕೆಲಸ. ನೀನು ಅದನ್ನು ಮಾಡಬಲ್ಲೆಯಾ? ಕಡೆಯಪಕ್ಷ ಕೊಂಚವನ್ನಾದರೂ ಮಾಡು. ಕಲ್ಕತ್ತೆಯ ಮಧ್ಯ ಭಾಗದಲ್ಲಿ ದೊಡ್ಡ ಮಠವನ್ನು ಪ್ರಾರಂಭಿಸು. ಒಬ್ಬ ವಿದ್ಯಾವಂತನಾದ ಸಾಧು ಅವರ ಮೇಲ್ವಿಚಾರಕನಾಗಲಿ. ಅವನ ಕೈ ಕೆಳಗೆ ಪ್ರಾಯೋಗಿಕ ವಿಜ್ಞಾನ, ಕಲೆ ಮುಂತಾದುವುಗಳನ್ನು ಬೋಧಿಸಲು ಶಾಖೆಗಳಿರಲಿ. ಪ್ರತಿಯೊಂದು ಶಾಖೆಗೂ ಒಬ್ಬ ಪ್ರತ್ಯೇಕ ಸನ್ಯಾಸಿ ಅದರ ನಿರ್ವಾಹಕನಾಗಿರಲಿ.

ಪ್ರಶ್ನೆ:—ನಿಮಗೆ ಅಂತಹ ಸಾಧುಗಳೆಲ್ಲಿ ಸಿಗುವರು?

ಸ್ವಾಮಿಜಿ:—ನಾವು ಅವರನ್ನು ಮಾಡಬೇಕು, ಸೃಷ್ಟಿಮಾಡಬೇಕು. ಆದ್ದರಿಂದಲೇ ಪ್ರಜ್ವಲಿಸುವ ದೇಶಭಕ್ತಿ ಮತ್ತು ತ್ಯಾಗದಿಂದ ಕೂಡಿದ ಯುವಕರು ಬೇಕಾಗಿದೆ ಎಂದು ನಾನಾವಾಗಲೂ ಹೇಳುವೆ ಯಾರು ತ್ಯಾಗಿಗಳಷ್ಟು ಬೇಗ ಪೂರ್ಣವಾಗಿ ಒಂದು ವಿಷಯವನ್ನು ತಿಳಿಯಬಲ್ಲರು?

ಕೊಂಚಹೊತ್ತು ಮೌನವಾಗಿದ್ದು ಸ್ವಾಮಿಜಿ "ಸಿಂಗ್‌ಜಿ ನಮ್ಮ ದೇಶಕ್ಕೆ ಮಾಡಬೇಕಾದ ಕೆಲಸಗಳು ಹೇರಳವಾಗಿದೆ. ನಿಮ್ಮಂತಹ ಸಾವಿ

ಠಾರು ಮಂದಿ ಬೇಕಾಗಿದ್ದಾರೆ. ಕೇವಲ ಮಾತಿನಿಂದೇನು ಪ್ರಯೋಜನ? ದೇಶ ಎಂತಹ ಶೋಚನೀಯಾವಸ್ಥೆಗಿಳಿದಿದೆ ಎಂಬುದನ್ನು ನೋಡು. ಈಗ ಏನನ್ನಾದರೂ ಮಾಡು! ನಮ್ಮ ಚಿಕ್ಕ ಹುಡುಗರಿಗೆ ಯೋಗ್ಯವಾಗಿರುವ ಒಂದು ಪುಸ್ತಕ ಕೂಡ ಈಗ ನಮ್ಮಲ್ಲಿಲ್ಲ.

ಪ್ರಶ್ನೆ:—ಏಕೆ ಚಿಕ್ಕ ಹುಡುಗರಿಗೆ ಈಶ್ವರ ಚಂದ್ರ ವಿದ್ಯಾಸಾಗರರ ಹಲವಾರು ಪುಸ್ತಕಗಳಿವೆಯಲ್ಲ?

ನಾನು ಇದನ್ನು ಹೇಳಿದ ಕೂಡಲೇ ಸ್ವಾಮಿಜಿ ಗಹಗಹಿಸಿ ನಕ್ಕು "ಹೌದು, ಅಲ್ಲಿ ನೀನು ಈಶ್ವರ ನಿರಾಕಾರ ಚೈತನ್ಯಸ್ವರೂಪನು. ದುವಲನು ತುಂಬಾ ಒಳ್ಳೆಯ ಬುದ್ಧಿವಂತನಾದ ಹುಡುಗ" ಮುಂತಾಗಿ ಓದುವೆ. ಅದರಿಂದೇನೂ ಪ್ರಯೋಜನವಿಲ್ಲ. ರಾಮಾಯಣ ಮಹಾ ಭಾರತ ಉಪನಿಷತ್ತು ಮುಂತಾದುವುಗಳಿಂದ ಚಿಕ್ಕ ಕಥೆಗಳನ್ನು ಆರಿಸಿ ಬಂಗಾಳಿ ಮತ್ತು ಇಂಗ್ಲೀಷಿನಲ್ಲಿ ಸಣ್ಣ ಪುಸ್ತಕಗಳನ್ನು ಮಾಡಬೇಕು. ಅದರಲ್ಲಿ ಸರಳವಾದ ಸುಲಭ ಶೈಲಿ ಇರಬೇಕು. ಇವುಗಳನ್ನು ನಮ್ಮ ಚಿಕ್ಕ ಹುಡುಗರಿಗೆ ಓದಲು ಕೊಡಬೇಕು.

ಅಷ್ಟು ಹೊತ್ತಿಗೆ ಹನ್ನೊಂದು ಗಂಟೆಯ ವೇಳೆಯಾಗಿತ್ತು. ಆಕಾಶವು ಇದ್ದಕ್ಕಿದ್ದಂತೆಯೇ ಮೇಘದಿಂದಾವೃತವಾಗಿ ತಂಗಾಳಿ ಬೀಸತೊಡಗಿತು. ಸ್ವಾಮಿಜಿಗೆ ಮಳೆಯ ಸೂಚನೆಯನ್ನು ನೋಡಿ ತುಂಬಾ ಆನಂದ ವಾಯಿತು. ಅವರು ಎದ್ದುನಿಂತು "ಸಿಂಗ್‌ಜಿ, ಗಂಗಾತೀರದಲ್ಲಿ ನಾವೆಲ್ಲಾ ಸುತ್ತಾಡಿಕೊಂಡು ಬರುವ ನಡೆ" ಎಂದರು. ನಾವು ಹಾಗೇ ಮಾಡಿದೆವು. ಕಾಳಿದಾಸನ ಮೇಘದೂತದ ಅನೇಕ ಶ್ಲೋಕಗಳನ್ನು ಅವರು ಹಾಡಿದರು. ಆದರೆ ಮೊದಲಿನಿಂದ ಕೊನೆಯವರೆಗೂ ಅವರ ಮನಸ್ಸಿನಲ್ಲಿ ಪ್ರವಹಿಸುತ್ತಿದ್ದ ಒಂದು ಆಲೋಚನೆಯ ಅಂತಃಪ್ರವಾಹ ವೆಂದರೆ ಭರತಖಂಡದ ಕಲ್ಯಾಣ. ಅವರು "ಇಲ್ಲಿನೋಡು ಸಿಂಗ್‌ಜಿ, ನೀನು ಒಂದು ಕೆಲಸವನ್ನು ಮಾಡಬಲ್ಲೆಯಾ! ನಮ್ಮ ಹುಡುಗರು ಮದುವೆ ಮಾಡಿಕೊಳ್ಳುವುದನ್ನು ಕೊಂಚ ಕಾಲದವರೆಗೆ ನಿಲ್ಲಿಸ ಬಲ್ಲೆಯಾ?" ಎಂದರು.

ನಾನು ಹೇಳಿದೆ "ಸರಿ ಮಹಾರಾಜ್, ಬಾಬುಗಳಂತಹವರೆ ಅದಕ್ಕೆ ವಿರೋಧವಾಗಿ ಮದುವೆಯನ್ನು ಎಷ್ಟು ಸುಲಭವಾಗಿ ಮಾಡ ಬಹುದೆಂದು ಅನೇಕ ಸಾಧನೆಗಳನ್ನು ಪ್ರಯತ್ನಿಸುತ್ತಿದ್ದಾರೆ—ಎಂದ ಮೇಲೆ

ನಾವು ಮಾಡಲು ಹೇಗೆ ಸಾಧ್ಯ.''

ಸ್ವಾಮಿಜಿ:—ಆ ವಿಚಾರವಾಗಿ ನಿನ್ನ ತಲೆಯನ್ನು ಕೆಡಿಸಿಕೊಳ್ಳಬೇಡ. ಕಾಲಪ್ರವಾಹವನ್ನು ತಡೆಯಬಲ್ಲವರಾರು? ಈ ಬಗೆಯ ಚಳುವಳಿಗಳೆಲ್ಲಾ ಕೊನೆಗೆ ತಣ್ಣಗಾಗುವುವು ಅಷ್ಟೆ. ಮದುವೆಗಳು ದುಬಾರಿಯಾದಷ್ಟೂ ದೇಶಕ್ಕೆ ಒಳ್ಳೆಯದಾಗುವುದು. ಪರೀಕ್ಷೆಯನ್ನು ಎಷ್ಟು ಅವಸರದಲ್ಲಿ ಮುಗಿಸಿ ತಕ್ಷಣ ಮದುವೆ ಮಾಡಿಕೊಳ್ಳುವರು! ಯಾರೂ ಅವಿವಾಹಿತರು ಉಳಿಯುವುದೇ ಇಲ್ಲವೇನೊ ಎನ್ನಿಸುವುದು. ಪುನಃ ಮುಂದಿನ ವರುಷ ಅದೇ ಸ್ಥಿತಿ!

ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಪುನಃ ಸ್ವಾಮಿಜಿ "ನನಗೆ ಕೆಲವು ಮಂದಿ ಅವಿವಾಹಿತ ಪದವೀಧರರು ಸಿಕ್ಕಿದರೆ ನಾನು ಅವರನ್ನು ಜಪಾನಿಗೆ ಕಳುಹಿಸಿ ಅವರು ಅಲ್ಲಿಯ ಕೈಗಾರಿಕಾ ಶಿಕ್ಷಣ ಪಡೆಯುವಂತೆ ವ್ಯವಸ್ಥೆ ಮಾಡುವೆ. ಅವರು ಹಿಂತಿರುಗಿ ಬಂದಾಗ ಭರತಖಂಡದ ಉನ್ನತಿಗಾಗಿ ಅವರು ತಮ್ಮ ಜ್ಞಾನವನ್ನೆಲ್ಲಾ ಉಪಯೋಗಿಸಬಹುದು. ಹೀಗೆ ಮಾಡಿದರೆ ಎಂತಹ ಹಿತವಾಗುವುದು!''

ಪ್ರಶ್ನೆ:—ಏಕೆ ಮಹರಾಜ್, ನಾವು ಇಂಗ್ಲೆಂಡಿಗೆ ಹೋಗುವುದಕ್ಕಿಂತ ಜಪಾನಿಗೆ ಹೋಗುವುದೊಳ್ಳೆಯದೆ?

ಸ್ವಾಮಿಜಿ:—ಖಂಡಿತವಾಗಿ! ನನ್ನ ಅಭಿಪ್ರಾಯದಲ್ಲಿ ನಮ್ಮ ದೇಶದ ಎಲ್ಲಾ ಶ್ರೀಮಂತರೂ ಬುದ್ಧಿವಂತರೂ ಒಮ್ಮೆ ಜಪಾನಿಗೆ ಹೋಗಿ ಬಂದರೆ ಅವರೆಲ್ಲರ ಕಣ್ಣುಗಳೂ ತೆರೆಯುವುವು.

ಪ್ರಶ್ನೆ:—ಹೇಗೆ?

ಸ್ವಾಮಿಜಿ:—ಜಪಾನಿನಲ್ಲಿ ನಾವು ಜ್ಞಾನದ ಸಮೀಕರಣವನ್ನು ನೋಡುತ್ತೇವೆ. ನಮ್ಮಲ್ಲಿರುವಂತೆ ಅದರ ಅಜೀರ್ಣತೆಯನ್ನಲ್ಲ. ಅವರು ಐರೋಪ್ಯರಿಂದ ಎಲ್ಲವನ್ನೂ ತೆಗೆದುಕೊಂಡಿದ್ದಾರೆ. ಆದರೆ ಅದೇ ಕಾಲದಲ್ಲಿ ಜಪಾನೀಯರಾಗಿಯೆ ಉಳಿದಿದ್ದಾರೆ. ಐರೋಪ್ಯರಾಗಿಲ್ಲ. ನಮ್ಮ ದೇಶದಲ್ಲಾದರೋ ಪಾಶ್ಚಾತ್ಯನಾಗಿ ಬಿಡಬೇಕೆಂಬ ತೀವ್ರಹುಚ್ಚು ಪ್ಲೇಗಿನಂತೆ ನಮ್ಮನ್ನು ಹಿಡಿದುಕೊಂಡಿದೆ.

ನಾನು "ಮಹರಾಜ್—ನಾನು ಕೆಲವು ಜಪಾನರ ತೈಲಚಿತ್ರಗಳನ್ನು ನೋಡಿರುವೆ. ಅವರ ಕಲೆಗೆ ಬೆರಗಾಗದೆ ಇರುವವರಾರೂ ಇಲ್ಲ. ಅದನ್ನು ನೋಡಿದಾಗ ತಕ್ಷಣ ಅವರದೇ ಆದದ್ದೇನೋ ಅಲ್ಲಿದೆ ಎಂದೆನ್ನಿಸುವುದು.''

ಸ್ವಾಮಿಜಿ:—ನಿಜ ನಿಜ. ಅವರ ಕಲೆಯಿಂದಲೇ ಅವರು ಅಷ್ಟೊಂದು ದೊಡ್ಡ ಜನಾಂಗವಾಗಿರುವುದು. ಅವರೂ ನಮ್ಮಂತೆಯೇ ಏಷಿಯಾ ಖಂಡದವರು ಎಂಬುದು ನಿನಗೆ ಗೊತ್ತಿಲ್ಲವೆ? ನಾವು ಬಹುಮಟ್ಟಿಗೆ ಎಲ್ಲ ವನ್ನೂ ಕಳೆದುಕೊಂಡಿದ್ದರೂ ಇನ್ನೂ ನಮ್ಮಲ್ಲಿ ಏನುಳಿದಿದೆಯೊ ಅದೂ ಕೂಡ ಅದ್ಭುತವಾದುದು. ಏಷ್ಯಾಖಂಡದವನ ಜೀವಾತ್ಮ ಕಲೆಯೊಡನೆ ಹೆಣೆದುಕೊಂಡಿದೆ. ಯಾವ ವಸ್ತುವಿನಲ್ಲಿ ಕಲಾ ಕೌಶಲವಿಲ್ಲವೊ ಅಂತಹ ವಸ್ತುವನ್ನು ಏಷ್ಯಾದವನೆಂದಿಗೂ ಉಪಯೋಗಿಸುವುದೇ ಇಲ್ಲ. ನಮಗೆ ಕಲೆ ಧರ್ಮದ ಒಂದು ಅಂಗವಾಗಿದೆಯೆಂಬುದನ್ನು ನೀನು ತಿಳಿಯೆಯಾ? ಶುಭಕಾರ್ಯಗಳಾಗುವ ಸಂದರ್ಭಗಳಲ್ಲಿ ನೆಲ ಮತ್ತು ಗೋಡೆಗಳನ್ನು ಅಕ್ಕಿ ಹಿಟ್ಟನ್ನು ನಾದಿ ಅದರಿಂದ ಚಿತ್ರಗಳನ್ನು ಬರೆದು ಸಿಂಗರಿಸುವ ಸ್ತ್ರೀಯನ್ನು ನಾವು ಎಷ್ಟು ಶ್ಲಾಘಿಸುತ್ತೇವೆ. ಶ್ರೀ ರಾಮಕೃಷ್ಣರೆ ಎಂತಹ ದೊಡ್ಡ ಶಿಲ್ಪಿಗಳು.

ಪ್ರಶ್ನೆ:—ಆಂಗ್ಲೇಯ ಕಲೆ ಕೂಡ ಚೆನ್ನಾಗಿದೆ. ಅಲ್ಲವೆ?

ಸ್ವಾಮಿಜಿ:—ನೀನೆಂತಹ ಹುಚ್ಚ! ಆದರೆ ಈ ರೀತಿಯ ಅಭಿಪ್ರಾಯವೇ ನಮ್ಮಲ್ಲಿ ಎಲ್ಲೆಲ್ಲೂ ಬಳಕೆಯಲ್ಲಿರಬೇಕಾದರೆ ನಿನ್ನನ್ನು ದೂರಿ ಏನು ಪ್ರಯೋಜನ? ಅಯ್ಯೋ! ದೇಶ ಇಂತಹ ಅವಸ್ಥೆಗಿಳಿದಿದೆ! ಜನರು ತಮ್ಮಲ್ಲಿರುವ ಚಿನ್ನವನ್ನೇ ಹಿತ್ತಾಳೆಯಂತೆ ನೋಡುವರು. ಪರದೇಶೀಯರ ಹಿತ್ತಾಳೆಯೆ ಚಿನ್ನ ಇವರಿಗೆ! ಆಧುನಿಕ ವಿದ್ಯಾಭ್ಯಾಸದಿಂದ ಉದ್ಭವಿಸಿದ ಯಕ್ಷಿಣಿ ಇದು. ಯೂರೋಪಿಯನ್ನರಿಗೆ ಏಷ್ಯಾದ ಸಂಪರ್ಕ ವಾದಂದಿನಿಂದ ಅವರು ತಮ್ಮ ಜೀವನದಲ್ಲಿಯೂ ಕಲೆಯನ್ನು ಬೆಳಸಿಕೊಳ್ಳ ತೊಡಗಿದ್ದಾರೆಂದು ತಿಳಿ.

ನಾನು:—ಮಹಾರಾಜ್, ಇತರರು ನೀವು ಹೀಗೆ ಮಾತನಾಡು ತ್ತಿರುವುದನ್ನು ನೋಡಿದರೆ ನೀವು ದುಃಖ ಪರ್ಯವಸಾನ ದೃಷ್ಟಿಯಿಂದ ನೋಡುವಿರೆಂದು ತಿಳಿದುಕೊಳ್ಳುವರು.

ಸ್ವಾಮಿಜಿ:—ಸಹಜ! ಕೊಚ್ಚೆಯ ಜಾಡಿನಲ್ಲೇ ಹೋಗುವವನನ್ನು ನೋಡಿ ಅವರು ಮತ್ತೇನು ತಿಳಿಯಬೇಕು? ಪ್ರತಿಯೊಂದನ್ನೂ ನನ್ನ ಕಣ್ಣುಗಳ ಮೂಲಕ ನಿನಗೆ ತೋರಿಸಬಲ್ಲೆನಾದರೆ ಎನ್ನಿಸುತ್ತಿದೆ! ಅವರ ಕಟ್ಟಡಗಳನ್ನು ನೋಡು, ಅವೆಷ್ಟು ಸಾಧಾರಣ, ಭಾವರಹಿತವಾಗಿವೆ! ಆ ಸರ್ಕಾರಿ ಕಟ್ಟಡಗಳನ್ನು ನೋಡು. ಅವುಗಳನ್ನು ಸುಮ್ಮನೆ ಹೊರಗಡೆ

ಯಿಂದ ನೋಡಿದರೆ ಅವುಗಳಲ್ಲಿ ಒಂದೊಂದೂ ಯಾವ ಭಾವವನ್ನು ಸೂಚಿಸುತ್ತವೆಂದೇನಾದರೂ ಹೇಳಬಲ್ಲೆಯಾ? ಇಲ್ಲ. ಏಕೆಂದರೆ ಅವೆಲ್ಲಾ ಸಂಕೇತ ರಹಿತವಾಗಿವೆ. ಮತ್ತೆ, ಪಾಶ್ಚಾತ್ಯರ ಉಡುಪನ್ನು ನೋಡು. ದೇಹಕ್ಕೆ ಬಹುಮಟ್ಟಿಗೆ ಬಿಗಿಯಾಗಿ ತೊಡಿಸುವ ಬಿಗಿ ಅಂಗಿ, ನೆಟ್ಟಗಿರುವ ಷರಾಯಿ ಇವೆಲ್ಲಾ ನಮ್ಮ ಅಭಿಪ್ರಾಯದ ಪ್ರಕಾರ ಕೊಂಚವೂ ಮರ್ಯಾದೆಯ ಚಿಹ್ನೆಯಲ್ಲ. ಅಲ್ಲವೆ? ಓ! ಅದರಲ್ಲಿ ಎಂತಹ ಸೌಂದರ್ಯ! ಈಗ ನಮ್ಮ ತಾಯ್ನಾಡಿನ ಮೂಲೆ ಮೂಲೆಗೂ ಒಮ್ಮೆ ಹೋಗಿ ನೋಡು, ನಮ್ಮ ಕಟ್ಟಡಗಳನ್ನು ನೋಡಿದಕೂಡಲೇ ಅವುಗಳ ಭಾವ ಮತ್ತು ಅದರಲ್ಲಿರುವ ಕಲೆಯು ಅರ್ಥವನ್ನು ಕೊಡುವುವೋ ಇಲ್ಲವೊ ಎಂದು. ಗಾಜಿನ ಲೋಟ ಅವರು ನೀರು ಕುಡಿಯಲು ಉಪಯೋಗಿಸುವ ಪಾತ್ರೆ. ನಮ್ಮ ದಾದರೋ ಲೋಹದ ಹೂಜಿ. ಇವೆರಡರಲ್ಲಿ ಯಾವುದು ಕಲಾಕುಶಲತೆ ಯುಳ್ಳದ್ದು? ನಮ್ಮ ಹಳ್ಳಿಗಳಲ್ಲಿರುವ ರೈತರ ಮನೆಗಳನ್ನು ನೋಡಿರು ವೆಯಾ?

ನಾನು:—ಹೌದು, ನಿಸ್ಸಂದೇಹವಾಗಿ.

ಸ್ವಾಮಿಜಿ:—ಅವುಗಳಲ್ಲಿ ನೀನು ಏನನ್ನು ನೋಡಿದೆ.

ನನಗೆ ಏನು ಹೇಳಬೇಕೆಂದು ತೋಚದಾಯಿತು. ಆದಾಗ್ಗೂ ನಾನು "ಮಹರಾಜ್, ಅಂಗಳ ಮತ್ತು ನೆಲವನ್ನು ನಿತ್ಯವೂ ಸಾರಿಸುವುದರಿಂದ ಅವು ಯಾವ ನ್ಯೂನತೆಯೂ ಇಲ್ಲದೆ ಚೊಕ್ಕಟವಾಗಿವೆ" ಎಂದೆ.

ಸ್ವಾಮಿಜಿ:—ನೀನು ಅವರು ಬತ್ತವನ್ನು ಇಡುವ ಕಣಜವನ್ನು ನೋಡುವೆಯಾ? ಅವರಲ್ಲಿ ಎಂತಹ ಕಲೆ ಇದೆ! ಅವರ ಮಣ್ಣಿನ ಗೋಡೆ ಗಳ ಮೇಲೂ ಕೂಡ ಎಂತಹ ವಿವಿಧ ತೈಲ ಚಿತ್ರಗಳಿವೆ! ನೀನು ಪಶ್ಚಿಮದ ಕಡೆ ಹೋಗಿ ಅವರಲ್ಲಿ ಕೆಳಗಣವರ್ಗದವರು ಹೇಗೆ ಜೀವಿಸುವರೆಂಬುದನ್ನು ನೋಡು. ನಿನಗೆ ಉತ್ತರಕ್ಷಣದಲ್ಲಿಯೇ ವ್ಯತ್ಯಾಸ ಗೊತ್ತಾಗುವುದು. ಪಾಶ್ಚಾತ್ಯ ಎಲ್ಲವನ್ನೂ ಉಪಯೋಗದ ದೃಷ್ಟಿಯಿಂದ ನೋಡುವನು. ಅವರ ಧ್ಯೇಯ ಅದು. ನಾವು ಎಲ್ಲೆಲ್ಲೂ ಕಲೆಯನ್ನು ಹುಡುಕುವೆವು. ಪಾಶ್ಚಾತ್ಯ ವಿಧ್ಯಾಭ್ಯಾಸದಿಂದ ನಮ್ಮ ಸುಂದರ ಹೂಜಿಗಳು ತ್ಯಜಿಸಲ್ಪಟ್ಟು ಆ ಸ್ಥಳವನ್ನು ಗಾಜಿನ ಲೋಟಾಗಳು ಆಕ್ರಮಿಸಿವೆ. ಹೀಗೆ ಈ ಉಪಯುಕ್ತ ತೆಯ ಭಾವನೆ ಯಾವ ಮಟ್ಟಕ್ಕೆ ನಮ್ಮನ್ನು ಎಷ್ಟರಮಟ್ಟಗೆ ವ್ಯಾಪಿಸಿದೆ ಯೆಂದರೆ ಅದು ಕುಚೋದ್ಯವಾಗಿ ಪರಿಣಮಿಸಿದೆ. ನಮಗೆ ಈಗ

ಬೇಕಾಗಿರುವುದು ಕಲೆ ಮತ್ತು ಉಪಯುಕ್ತತೆ ಇವುಗಳ ಸಂಯೋಗ. ಜಪಾನು ಅದನ್ನು ಬಹುಬೇಗ ಮಾಡಿದೆ. ಅದಕ್ಕೇ ಅದು ಅಷ್ಟು ಪ್ರಚಂಡ ವೇಗದಲ್ಲಿ ಮುಂದುವರಿಯಿತು. ಈಗ ಜಪಾನೀಯರು ತಮ್ಮ ಸರದಿಯಲ್ಲಿ ಪಾಶ್ಚಾತ್ಯರಿಗೆ ಕಲಿಸುತ್ತಾರೆ.

ಪ್ರಶ್ನೆ:—ಮಹರಾಜ್, ಪ್ರಪಂಚದಲ್ಲಿ ಯಾವ ಜನಾಂಗ ತುಂಬಾ ಅಂದವಾಗಿ ಉಡುಪನ್ನು ಧರಿಸುವುದು.

ಸ್ವಾಮಿಜಿ:—ಆರ್ಯರು ಧರಿಸುವರು. ಐರೋಪ್ಯರೂ ಕೂಡ ಇದನ್ನು ಒಪ್ಪಿಕೊಳ್ಳುವರು. ಅವರ ಉಡುಪು ಹೇಗೆ ಆಕರ್ಷಕ ಚಿತ್ರದಂತೆ ಸುರುಳಿ ಬಳಸಿಕೊಂಡಿರುವುದು. ಮುಕ್ಕಾಲು ಪಾಲು ಜನಾಂಗಗಳ ರಾಜಯೋಗ್ಯ ವಾದ ಉಡುಪುಗಳು ಆರ್ಯರನ್ನು ಅನುಕರಣೆಮಾಡುವುದು– ಅವುಗಳನ್ನು ಸುತ್ತಿಕೊಂಡಿರುವಂತೆ ಮಾಡಲು ಇದೇ ರೀತಿ ಯತ್ನಿಸಿದ್ದಾರೆ. ಆ ಉಡುಪು ಗಳು ತಮ್ಮ ಜನಾಂಗದ ಉಡುಪಿನೊಡನೆ ಪ್ರತ್ಯೇಕ ವ್ಯತ್ಯಾಸ ಹೊಂದಿವೆ.

ಅದಿರಲಿ ಸಿಂಗ್‌ಜಿ, ಆ ಐರೋಪ್ಯ ಶರಟುಗಳನ್ನು ಧರಿಸುವ ದರಿದ್ರ ಪದ್ಧತಿಯನ್ನು ಬಿಟ್ಟುಬಿಡು.

ಪ್ರಶ್ನೆ:—ಏಕೆ ಮಹರಾಜ್?

ಸ್ವಾಮಿಜಿ:—ಏಕೆಂದರೆ ಪಾಶ್ಚಾತ್ಯರು ಅವನ್ನು ಒಳ ಉಡುಪಿಗೆ ಉಪಯೋಗಿಸುವರು. ಅವುಗಳನ್ನು ಹೊರಗೆ ಹಾಕಿಕೊಳ್ಳುವುದನ್ನು ಸ್ವಲ್ಪವೂ ಇಚ್ಛಿಸುವುದಿಲ್ಲ. ಬಂಗಾಲಿಗಳು ಹೀಗೆ ಮಾಡುವುದು ಎಂತಹ ತಪ್ಪು! ಯಾರು ಯಾವುದನ್ನು ಬೇಕಾದರೂ ಹಾಕಿಕೊಳ್ಳಬಹುದು, ಉಡುಪಿಗೆ ಲಿಖಿತ ನಿಯಮವೇನೂ ಇಲ್ಲ, ಅನುಸರಿಸಲು ಪೂರ್ವೀಕರ ಶೈಲಿಯೂ ಇಲ್ಲವೇನೊ ಎಂಬಂತೆ! ನಮ್ಮ ಜನರಿಗೆ ಕೀಳು ಜಾತಿಯ ಜನರು ಮುಟ್ಟಿದ ಆಹಾರ ಸೇವಿಸಿದರೆ ಜಾತಿ ಕೆಟ್ಟುಹೋಗುವದು. ಇದೇ ನಿಯಮವನ್ನೇ ಉಡುಪನ್ನು ಧರಿಸಿದಾಗಲೂ ಪರಿಪಾಲಿಸಿದರೆ ಸರಿ. ನಮ್ಮ ಮಾದರಿಯಂತೆಯೇ ಯಾವುದಾದರೊಂದು ರೀತಿಯಲ್ಲಿ ನಿನ್ನ ಉಡುಪನ್ನು ಮಾರ್ಪಡಿಸಿಕೊಳ್ಳುವುದಿಲ್ಲವೇಕೆ? ಐರೋಪ್ಯರ ಶರಟು, ಕೋಟುಗಳನ್ನು ಇಚ್ಛಿಸುವುದರಲ್ಲಿ ಯಾವ ಪುರುಷಾರ್ಥ ಇದೆ?

ಇಷ್ಟು ಹೊತ್ತಿಗೆ ಮಳೆ ಬರಲಾರಂಭವಾಯಿತು. ಊಟದ ಘಂಟೆಯೂ ಬಾರಿಸಿತು. ನಾವು ಇತರರೊಡನೆ ಪ್ರಸಾದ ಸ್ವೀಕಾರ ಮಾಡಲು ಹೋದೆವು. ಊಟಮಾಡುತ್ತಿರುವಾಗ ಮಧ್ಯೆ ಸ್ವಾಮಿಗಳು

"ಬಲವರ್ಧಿಯಾಗುವ ಆಹಾರವನ್ನು ಸೇವಿಸಬೇಕು. ಹೊಟ್ಟೆಯನ್ನು ಬರೇ ತುಂಬಾ ಅನ್ನ ಊಟಮಾಡಿ ತುಂಬಿಸಿಕೊಳ್ಳುವುದು ಸೋಮಾರಿ ತನಕ್ಕೆ ಮೂಲ" ಎಂದರು. ಕೊಂಚ ಹೊತ್ತಿನ ಮೇಲೆ ಪುನಃ "ಜಪಾನೀಯರನ್ನು ನೋಡು. ಬೇಳೆ ಸಾರಿನೊಡನೆ ಅವರು ಅನ್ನವನ್ನು ದಿನಕ್ಕೆ ಎರಡು ಅಥವಾ ಮೂರು ಬಾರಿ ತೆಗೆದುಕೊಳ್ಳುವರು. ಆದರೆ ಎಂಥಹ ಬಲಿಷ್ಠರೂ ಕೂಡ ಊಟದ ವೇಳೆ ಜಾಸ್ತಿಯಾಗಿದ್ದರೂ ಒಂದೊಂದು ಬಾರಿಯೂ ಕಮ್ಮಿಯೇ ಊಟ ಮಾಡುವರು. ಅವರಲ್ಲಿ ಶ್ರೀಮಂತರು ನಿತ್ಯವೂ ಮಾಂಸ ಸೇವಿಸುವರು. ನಾವು ದಿನಕ್ಕೆರಡು ಬಾರಿ ಮೂಗಿಗೆ ಬರುವವರೆಗೂ ಊಟ ಮಾಡುವೆವು. ಅಷ್ಟೊಂದು ಅನ್ನವನ್ನು ಜೀರ್ಣಿಸಿಕೊಳ್ಳುವ ಹೊತ್ತಿಗೇ ನಮ್ಮಲ್ಲಿ ಶಕ್ತಿಯೆಲ್ಲಾ ಕರಗಿಹೋಗುವುದು.

ಪ್ರಶ್ನೆ :—ಬಡವರಾದ ನಾವು, ಬಂಗಾಳಿಗಳು, ಮಾಂಸ ತಿನ್ನುವುದು ಸಾಧ್ಯವೆ ?

ಸ್ವಾಮಿಜಿ :—ಏಕೆ ಸಾಧ್ಯವಿಲ್ಲ? ನೀವು ಕೊಂಚ ಕೊಂಚ ಖಂಡಿತವಾಗಿಯೂ ತಿನ್ನಲು ಸಾಧ್ಯ. ದಿನಕ್ಕೆ ಅರ್ಧ ಪೌಂಡು ಬೇಕಾದಷ್ಟು ಆಯಿತು. ನಿಜವಾದ ದೋಷವೇ ಸೋಮಾರಿತನ. ಇದೇ ನಮ್ಮ ಬಡತನಕ್ಕೆ ಮೂಲ. ಒಬ್ಬ ವಾಣಿಜ್ಯ ಸಂಸ್ಥೆಯ ಮೇಲಧಿಕಾರಿ ಯಾರೊಡನೆಯೊ ಅಸಮಾಧಾನಗೊಂಡು ಅವನ ಸಂಬಳವನ್ನು ಕಡಿಮೆ ಮಾಡಿದ ಎಂದಿಟ್ಟುಕೊಳ್ಳೋಣ. ಅಥವಾ ಒಂದು ಸಂಸಾರದಲ್ಲಿ ಸಂಪಾದಿಸುತ್ತಿದ್ದ ಮೂರು ನಾಲ್ಕು ಮಂದಿ ಮಕ್ಕಳಲ್ಲಿ ಒಬ್ಬ ಸತ್ತುಹೋದ ಎಂದಿಟ್ಟುಕೊಳ್ಳೋಣ. ಅವರೇನು ಮಾಡುವರು ? ಅವರು ತಕ್ಷಣ ಮಕ್ಕಳಿಗೆ ಕೊಡುತ್ತಿದ್ದ ಹಾಲನ್ನು ಕೊಂಚ ಕಡಿಮೆ ಮಾಡುವರು ಇಲ್ಲವೆ, ಒಂದು ಹೊತ್ತು ಊಟ ಮಾಡಿ ರಾತ್ರಿ ಕೊಂಚ ಅರಳು ಹಿಟ್ಟನ್ನು ತಿಂದು ಮಲಗುವರು.

ಪ್ರಶ್ನೆ :—ಈ ಸಂದರ್ಭದಲ್ಲಿ ಅವರು ಇನ್ನೇನು ಮಾಡಲು ಸಾಧ್ಯ ?

ಸ್ವಾಮೀಜಿ :—ಏಕೆ ? ಅವರು ಇನ್ನೂ ಶ್ರಮಪಟ್ಟು, ತಮ್ಮ ಅಂತಸ್ತಿಗೆ ತಕ್ಕಂತೆ ಊಟವನ್ನು ಸಂಪಾದಿಸಲಾರರೆ ? ಹರಟೆ ಹೊಡೆಯುವ ಸ್ಥಳಕ್ಕೆ ಹೋಗಲೇಬೇಕು, ಸೋಮಾರಿಯಾಗಿ ಕಾಲಕಳೆಯಲೇ ಬೇಕು ! ಓ ! ತಾವೆಷ್ಟು ಕಾಲ ವ್ಯರ್ಥ ಮಾಡುತ್ತಿರುವೆವೆಂಬುದು ಅವರಿಗೆ ಗೊತ್ತಾಗಿದ್ದಿದ್ದರೆ !

೭

ಒಮ್ಮೆ ಸ್ವಾಮಿಜಿ ಕಲ್ಕತ್ತೆಯಲ್ಲಿ ಬಲರಾಮಬಾಬುಗಳ ಮನೆಯಲ್ಲಿ ಇದ್ದಾಗ ನಾನು ಅವರನ್ನು ಕಾಣಲು ಹೋದೆ. ಜಪಾನ್ ಮತ್ತು ಅಮೆರಿಕಾ ದೇಶಗಳ ಮೇಲೆ ದೀರ್ಘ ಸಂಭಾಷಣೆಯಾದ ನಂತರ ನಾನು ಅವರನ್ನು "ಸ್ವಾಮಿಜಿ, ನಿಮಗೆ ಪಾಶ್ಚಾತ್ಯರಲ್ಲಿ ಎಷ್ಟುಮಂದಿ ಶಿಷ್ಯರಿದ್ದಾರೆ?" ಎಂದು ಕೇಳಿದೆ.

ಪ್ರಶ್ನೆ :—ಎರಡು ಅಥವಾ ಮೂರು ಸಾವಿರವೆ?

ಸ್ವಾಮಿಜಿ :— ಬಹುಶಃ ಅದಕ್ಕಿಂತ ಹೆಚ್ಚು ಇರಬಹುದು.

ಪ್ರಶ್ನೆ :—ಅವರೆಲ್ಲಾ ನಿಮ್ಮಿಂದ ಮಂತ್ರದೀಕ್ಷೆ ಪಡೆದಿದ್ದಾರೆಯೇ?

ಸ್ವಾಮಿಜಿ :— ಹೌದು.

ಪ್ರಶ್ನೆ :—ನೀವು ಅವರಿಗೆ ಪ್ರಣವ ಮಂತ್ರವನ್ನು ಉಚ್ಚಾರಮಾಡಲು ಅಪ್ಪಣೆಕೊಟ್ಟಿರಾ?

ಸ್ವಾಮಿಜಿ :— ಹೌದು.

ಪ್ರಶ್ನೆ:—ನೀವು ಹೇಗೆ ಕೊಟ್ಟಿರಿ ಮಹಾರಾಜ್? ಶಾಸ್ತ್ರಗಳಲ್ಲಿ ಬ್ರಾಹ್ಮಣರು ಹೊರತು ಮತ್ತಾವ ಶೂದ್ರರಿಗೂ ಪ್ರಣವ ಮಂತ್ರೋಚ್ಚಾರಣೆಗೆ ಅಧಿಕಾರವಿಲ್ಲ ಎಂದು ಹೇಳಿದೆ. ಅಲ್ಲದೆ ಪಾಶ್ಚಾತ್ಯರು ಶೂದ್ರರು ಕೂಡ ಅಲ್ಲ ಮ್ಲೇಚ್ಛರು.

ಸ್ವಾಮಿಜಿ :— ನಾನು ಮಂತ್ರದೀಕ್ಷೆ ಕೊಟ್ಟಿರುವವರು ಬ್ರಾಹ್ಮಣರಲ್ಲವೆಂಬುದು ನಿನಗೆ ಹೇಗೆ ಗೊತ್ತು?

ಪ್ರಶ್ನೆ:— ಭರತಖಂಡದ ಹೊರಗಡೆ ಯವನರು ಮ್ಲೇಚ್ಛರ ನಾಡಿನಲ್ಲಿ ನಿಮಗೆ ಬ್ರಾಹ್ಮಣರು ಹೇಗೆ ಸಿಗುವರು?

ಸ್ವಾಮಿಜಿ :—ನನ್ನ ಶಿಷ್ಯರೆಲ್ಲಾ ಬ್ರಾಹ್ಮಣರು! ಬ್ರಾಹ್ಮಣರ ಹೊರತು ಮತ್ತಾರಿಗೆ ಪ್ರಣವಕ್ಕೆ ಹಕ್ಕಿಲ್ಲವೆಂಬುದನ್ನು ನಾನು ಖಂಡಿತ ಒಪ್ಪುತ್ತೇನೆ. ಆದರೆ ಬ್ರಾಹ್ಮಣನ ಮಗ ಯಾವಾಗಲೂ ಬ್ರಾಹ್ಮಣನೇ ಆಗಿರಬೇಕಾದ ಆವಶ್ಯಕತೆಯಿಲ್ಲ. ಅವನು ಹಾಗೆ ಆಗುವುದು ಬಹುಮಟ್ಟಿಗೆ ಶಕ್ಯವಿದ್ದರೂ, ಅವನು ಬ್ರಾಹ್ಮಣನಾಗದೆ ಇರಬಹುದು. ಬಾಗಾಬಜಾರಿನ ಅಘೋರ ಚಕ್ರವರ್ತಿಗಳ ಸೋದರಳಿಯ ಒಬ್ಬ ಜಾಡಮಾಲಿಯಾದನೆಂದೂ ಅವನ ಅಂಗೀಕರಿಸಿದ ಜಾತಿ ಪ್ರಕಾರ ಎಲ್ಲಾ ಕೀಳ್ಗೆಲಸಗಳನ್ನು ಪ್ರತ್ಯಕ್ಷವಾಗಿ

ಮಾಡುತ್ತಿದ್ದನೆಂಬುದನ್ನು ನೀನು ಕೇಳಲಿಲ್ಲವೆ? ಅವನು ಬ್ರಾಹ್ಮಣನ ಮಗನಲ್ಲವೇನು?

ಬ್ರಾಹ್ಮಣ ಜಾತಿ ಮತ್ತು ಬ್ರಾಹ್ಮಣ್ಯ ಗುಣಗಳು ಎರಡೂ ಭಿನ್ನ ವಾದ ವಿಷಯಗಳು. ಭರತಖಂಡದಲ್ಲಿ ಜಾತಿಯಿಂದ ಬ್ರಾಹ್ಮಣರೆಂದು ನಿಷ್ಕರ್ಷಿಸುವರು. ಪಶ್ಚಿಮದಲ್ಲಿ ಬ್ರಾಹ್ಮಣ್ಯ ಗುಣಗಳಿಂದ ಬ್ರಾಹ್ಮಣ ರೆಂದು ಗುರುತಿಸಬೇಕು. ಸತ್ತ್ವ ರಜಸ್ಸು ತಮಸ್ಸುಗಳೆಂಬ ಮೂರು ಗುಣಗಳಿರುವಂತೆಯೇ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂದು ತೋರಿ ಸಲು ಗುಣಗಳಿವೆ. ಬ್ರಾಹ್ಮಣ ಅಥವಾ ಕ್ಷತ್ರಿಯ ಯೋಗ್ಯವಾದ ಗುಣ ಗಳು ದೇಶದಿಂದ ಕಣ್ಮರೆಯಾಗುತ್ತಲಿವೆ. ಆದರೆ ಪಶ್ಚಿಮದಲ್ಲಿ ಅವರು ಕ್ಷತ್ರಿಯ ಪದವಿ ಪಡೆದಿದ್ದಾರೆ. ಅವರ ಮುಂದಿನ ಮೆಟ್ಟಲೇ ಬ್ರಾಹ್ಮಣ ಪದವಿ. ಆ ಪದವಿಗರ್ಹತೆ ಪಡೆದಿರುವವರೂ ಅಲ್ಲಿ ಅನೇಕರಿದ್ದಾರೆ.

ಪ್ರಶ್ನೆ:— ಹಾಗಾದರೆ ನೀವು ಯಾರು ಸಾತ್ತ್ವಿಕ ಸ್ವಭಾವವುಳ್ಳ ವರೋ ಅವರನ್ನು ಬ್ರಾಹ್ಮಣರೆಂದು ಕರೆಯುವಿರಿ?

ಸ್ವಾಮಿಜಿ:—ಹಾಗೆಯೆ ಸರಿ. ಸತ್ತ್ವ ರಾಜಸ ತಾಮಸ ಗುಣಗಳಲ್ಲಿ ಯಾವುದಾದರೊಂದು ಕೊಂಚ ಹೆಚ್ಚು ಕಡಿಮೆ ಪ್ರತಿಯೊಬ್ಬ ಮನುಷ್ಯ ನಲ್ಲಿಯೂ ಇರುವ ಹಾಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ಗುಣ ಗಳೂ ಕೂಡ ಪ್ರತಿಯೊಬ್ಬ ಮನುಷ್ಯನಲ್ಲಿಯೂ ಹೆಚ್ಚು ಕಡಿಮೆ ಅಂತರ್ಗತ ವಾಗಿರುವುದು. ಆದರೆ ಆಗಾಗ ಅವನಲ್ಲಿ ಈ ಗುಣಗಳಲ್ಲಿ ಯಾವುದಾದ ರೊಂದು ವ್ಯತ್ಯಾಸಹೊಂದುವ ಪ್ರಮಾಣದಲ್ಲಿ ಪ್ರಬಲವಾಗಿರುವುದು. ಅದರಂತೆಯೇ ಆವಿರ್ಭಾವನೆ ಹೊಂದುವುದು. ಒಬ್ಬ ಮನುಷ್ಯನ ವಿವಿಧ ಹವ್ಯಾಸಗಳನ್ನು ತೆಗೆದುಕೊಳ್ಳಿ. ಉದಾಹರಣೆಗೆ ಅವನು ಮತ್ತೊಬ್ಬನಲ್ಲಿ ಸಂಬಳಕ್ಕಾಗಿ ದುಡಿಯುತ್ತಿರುವುದು. ಅವನು ಆಗ ಶೂದ್ರ ಪದವಿಯಲ್ಲಿರು ವನು. ಯಾರು ತನ್ನ ಸ್ವಂತಲಾಭಕ್ಕಾಗಿ ವ್ಯಾಪಾರದ ವ್ಯವಹಾರದಲ್ಲಿ ತೊಡಗಿದ್ದಾನೊ ಅವನು ವೈಶ್ಯ. ತಪ್ಪನ್ನು ಸರಿಪಡಿಸಲು ಯಾರು ಯುದ್ಧ ಮಾಡುವನೋ ಅವನಲ್ಲಿ ಕ್ಷತ್ರಿಯ ಗುಣಗಳು ಹೊರಬೀಳುವುವು. ಯಾವಾಗ ಅವನು ದೇವರ ಧ್ಯಾನಾಸಕ್ತನಾಗುವನೋ ಅಥವಾ ದೇವರ ವಿಷಯಕ್ಕೆ ಸಂಬಂಧಪಟ್ಟ ಸಂಭಾಷಣೆಯಲ್ಲಿ ಕಾಲಕಳೆಯುವನೋ ಆಗ ಅವನು ಬ್ರಾಹ್ಮಣ. ಸಹಜವಾಗಿ ಒಂದು ಜಾತಿಯಿಂದ ಮತ್ತೊಂದು ಜಾತಿಗೆ ಬದಲಾಯಿಸುವುದು ಖಂಡಿತ ಶಕ್ಯ. ಇಲ್ಲದಿದ್ದಲ್ಲಿ ವಿಶ್ವಾಮಿತ್ರ

ಹೇಗೆ ಬ್ರಾಹ್ಮಣ ನಾಗುತ್ತಿದ್ದ? ಪರಶುರಾಮ ಹೇಗೆ ಕ್ಷತ್ರಿಯನಾಗು ತ್ತಿದ್ದ?

ಪ್ರಶ್ನೆ:—ನೀವು ಹೇಳುವುದು ಯತಾರ್ಥವೆನ್ನಿಸುವುದು. ಆದರೆ ನಮ್ಮ ಪಂಡಿತರು, ಕುಲಗುರುಗಳೇಕೆ ನಮಗೆ ಇವನ್ನೇ ಬೋಧಿಸುವುದಿಲ್ಲ.

ಸ್ವಾಮಿಜಿ:—ನಮ್ಮ ದೇಶಕ್ಕುಂಟಾಗಿರುವ ಮಹಾ ಕೆಡಕುಗಳಲ್ಲಿ ಇದೂ ಒಂದು. ಸದ್ಯಕ್ಕೆ ಈ ವಿಷಯವನ್ನು ಇಲ್ಲಿಗೇ ನಿಲ್ಲಿಸೋಣ.

ಇಲ್ಲಿ ಸ್ವಾಮಿಜಿ ಪಾಶ್ಚಾತ್ಯರ ಕಾರ್ಯಪ್ರವೃತ್ತಿಯು ಸ್ಫೂರ್ತಿಯನ್ನು ಅತಿಶಯವಾಗಿ ಬಣ್ಣಿಸಿ ಅವರು ಧರ್ಮವನ್ನು ತೆಗೆದುಕೊಂಡಾಗ ಕೂಡ ಅದೇ ಸ್ಫೂರ್ತಿಯನ್ನೇ ಹೇಗೆ ತೋರುವರೆಂಬುದನ್ನೂ ವಿವರಿಸಿದರು.

ನಾನು:—ನಿಜ, ಮಹರಾಜ್, ಅವರು ಧರ್ಮವನ್ನು ಸಾಧನೆ ಮಾಡುವಾಗ ಬಹುಬೇಗ ಅದರ ಆಧ್ಯಾತ್ಮಿಕ ಮತ್ತು ಮಾನಸಿಕ ಶಕ್ತಿ ವಿಕಾಸಗೊಳ್ಳುವುದೆಂದು ಕೇಳಿದ್ದೇನೆ. ಅಂದು ಸ್ವಾಮಿ ಶಾರದಾನಂದರು ತಮ್ಮ ಪಾಶ್ಚಾತ್ಯ ಶಿಷ್ಯನೊಬ್ಬನು ಬರೆದಿದ್ದ ಪತ್ರವೊಂದನ್ನು ತೋರಿಸಿದರು. ಕೇವಲ ನಾಲ್ಕು ತಿಂಗಳಲ್ಲೇ ಆ ಬರಹಗಾರನು ಸಾಧನೆ ಮಾಡಿ ತನ್ನ ಲ್ಲುಂಟಾದ ವಿಶೇಷ ಆಧ್ಯಾತ್ಮಿಕ ಬೆಳವಣಿಗೆಗಳನ್ನು ವಿವರಿಸಿದ್ದನು.

ಸ್ವಾಮಿಜಿ:—ಆದ್ದರಿಂದ ನೀನೇ ನೋಡು! ಪಶ್ಚಿಮದಲ್ಲಿ ಬಾಹ್ಮಣ ರಿದ್ದಾರೆಯೊ ಇಲ್ಲವೊ ಎಂದು ನಿನಗೆ ಈಗ ಅರ್ಥವಾಗಲಿದೆ? ನಮ್ಮಲ್ಲೂ ಬ್ರಾಹ್ಮಣರಿದ್ದಾರೆ. ಅವರು ತಮ್ಮ ತೀವ್ರ ದಬ್ಬಾಳಿಕೆಯಿಂದ ದೇಶವನ್ನು ತೀರ ಅಧೋಗತಿಗೆ ಇಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ಸಹಜವಾಗಿ ಅವರಲ್ಲಿದ್ದುದೂ ಕ್ರಮೇಣ ಮಾಯವಾಗುತ್ತಿದೆ. ಗುರು ಶಿಷ್ಯನಿಗೆ ಮಂತ್ರ ದೀಕ್ಷೆ ಕೊಡುತ್ತಾನೆ. ಆದರೆ ಅವನಿಗೆ ಅದೇ ಒಂದು ವ್ಯಾಪಾರವಾಗಿ ಹೋಗಿದೆ. ಮತ್ತು ಈಗಿನ ಕಾಲದಲ್ಲಿ ಗುರು ಶಿಷ್ಯರ ಮಧ್ಯೆ ಇರುವ ಸಂಬಂಧ ಎಷ್ಟು ವಿಸ್ಮಯಕರವಾಗಿದೆಯೊ! ಪ್ರಾಯಶಃ ಗುರುವಿಗೆ ಮನೆ ಯಲ್ಲಿ ತಿನ್ನಲು ಏನೇನೂ ಇರುವುದಿಲ್ಲ. ಹೆಂಡತಿ ಇದನ್ನು ಅವನ ಲಕ್ಷ್ಯಕ್ಕೆ ತಂದು "ದಯಮಾಡಿ, ನಿಮ್ಮ ಶಿಷ್ಯರ ಬಳಿಗೆ ಮತ್ತೊಮ್ಮೆ ಹೋಗಿ. ನೀವು ದಿನವೆಲ್ಲ ಪಗಡೆಯಾಡುತ್ತಿದ್ದರೆ ನಮ್ಮ ಹಸಿವು ಇಂಗುವುದೇನು?" ಎನ್ನುವಳು. ಬ್ರಾಹ್ಮಣ ಉತ್ತರ ಕೊಡುತ್ತಾ ಹೇಳುವನು "ಸರಿ. ನಾಳೆ ಬೆಳಿಗ್ಗೆ ನನಗೆ ಜ್ಞಾಪಿಸು. ನನ್ನ ಶಿಷ್ಯನೊಬ್ಬನಿಗೆ ಅದೃಷ್ಟ ಕುಲಾಯಿ ಸಿದೆಯೆಂದು ಕೇಳಿದೆ. ಅದೂ ಅಲ್ಲದೆ ನಾನವನಬಳಿಗೆ ಬಹುಕಾಲ

ದಿಂದಲೂ ಹೋಗೇ ಇಲ್ಲ.'' ಎನ್ನುವನು. ಇದೇ ಬಂಗಾಳದ ಕುಲಗುರುಗಳಿಗೆ ಪ್ರಾಪ್ತವಾಗಿರುವ ಅವಸ್ಥೆ! ಪಶ್ಚಿಮದಲ್ಲಿನ ಪೌರೋಹಿತ್ಯ ಇನ್ನೂ ಇಷ್ಟೊಂದು ಹೀನ ಸ್ಥಿತಿಗಿಳಿದಿಲ್ಲ. ಒಟ್ಟಿನಲ್ಲಿ ಅದು ನಿಮ್ಮ ಜಾತಿಗಿಂತ ಶ್ರೇಷ್ಠವಾದ ಸ್ಥಿತಿಯಲ್ಲಿದೆ.

---

## ಭಾಗ ೩

### ( ಸುರೇಂದ್ರನಾಥ ಸೇನ್ )

೧

**ವರ್ಷ:— ಕ್ರಿ. ಶ. ೧೮೯೮ ನೇ ಜನವರಿ ೨೨**

ಕಲ್ಕತ್ತೆಯ ರಮಾಕಾಂತ ಬೋಸ್ ಬೀದಿಯಲ್ಲಿ ೫೭ನೇ ನಂಬರ್ ಮನೆಯ ಬಲರಾಮಬಾಬುಗಳ ಮನೆಯಲ್ಲಿ ಸ್ವಾಮಿಗಳು ಇದ್ದಾಗ ನಾನು ಒಂದುದಿನ ಬೆಳಿಗ್ಗೆ ಹೊತ್ತಿಗೆ ಮುಂಚೆಯೇ ಸ್ವಾಮಿಗಳಲ್ಲಿಗೆ ಹೋದೆ. ಕೊಠಡಿಯೆಲ್ಲಾ ಕೇಳುವವರ ಸಂಖ್ಯೆಯಿಂದ ಭರ್ತಿಯಾಗಿತ್ತು. ಸ್ವಾಮಿಗಳು ಹೀಗೆ ಹೇಳುತ್ತಿದ್ದರು: ''ನಮಗೆ ಶ್ರದ್ಧೆಬೇಕು, ನಮ್ಮಲ್ಲಿ ನಮಗೆ ನಂಬಿಕೆ ಇರಬೇಕು. ಶಕ್ತಿಯೇ ಜೀವನ. ದುರ್ಬಲತೆಯೇ ಮರಣ. ನಾವೆಲ್ಲಾ ಆತ್ಮ ಅಜೇಯರು, ಮುಕ್ತರು ಪವಿತ್ರರು, ಸ್ವಭಾವತಃ ಪರಿಶುದ್ಧರು. ನಾವು ಎಂದಾದರೂ ಪಾಪಮಾಡಲು ಸಾಧ್ಯವೆ? ಖಂಡಿತ ಇಲ್ಲ. ಇಂತಹ ಶ್ರದ್ಧೆ ಆವಶ್ಯಕ. ಇಂತಹ ಶ್ರದ್ಧೆ ನಮ್ಮನ್ನು ಮಾನವರನ್ನಾಗಿ ಮಾಡುವುದು, ನಮ್ಮನ್ನು ದೇವತೆಗಳನ್ನಾಗಿ ಮಾಡುವುದು. ಈ ಶ್ರದ್ಧೆಯ ಭಾವನೆಯನ್ನು ಕಳೆದುಕೊಂಡಿದ್ದರಿಂದಲೇ ದೇಶ ಅಧೋಗತಿಗಿಳಿದಿದೆ.''

ಪ್ರಶ್ನೆ :—ನಾವು ಹೇಗೆ ಈ ಶ್ರದ್ಧೆಯನ್ನು ಕಳೆದುಕೊಂಡೆವು?

ಸ್ವಾಮಿಜಿ:—ನಮ್ಮ ಬಾಲ್ಯದಿಂದಲೆ ನಿಷೇಧ ಶಿಕ್ಷಣ ಹೊಂದಿದ್ದೇವೆ. ನಾವು ಕೇವಲ ಅನಾಮಧೇಯರು ಎಂಬುದನ್ನು ಕಲಿತಿದ್ದೇವೆ. ನಮ್ಮ ದೇಶದಲ್ಲಿ ಮಹಾತ್ಮರು ಎಂದಾದರೂ ಉದಿಸಿದ್ದರೆಂದು ಕೇಳುವುದು ಕೂಡ ಅತಿ ವಿರಳ. ಯಾವ ವಾಸ್ತವಿಕತೆಯನ್ನೂ ನಮಗೆ ಕಲಿಸಿಲ್ಲ.

ನಿಮ್ಮ ಕೈಕಾಲುಗಳನ್ನು ಹೇಗೆ ಉಪಯೋಗಿಸಬೇಕೆಂಬುದೂ ನಮಗೆ ಗೊತ್ತಿಲ್ಲ. ಆಂಗ್ಲೇಯ ಪೂರ್ವಿಕರ ಅಂಕೆ ಅಂಶಗಳನ್ನು ಕಲಿತು ನಾವು ಪ್ರವೀಣರಾಗುವೆವು. ಆದರೆ ನಮ್ಮ ಪೂರ್ವಿಕರದ್ದೇ ನಮಗೆ ತಿಳಿಯು ದಿರುವುದು ಶೋಚನೀಯವಾಗಿದೆ. ನಾವು ಕೇವಲ ದುರ್ಬಲತೆಯನ್ನು ಕಲಿತಿದ್ದೇವೆ. ನಾವು ಪರಾಜಿತರಾದುದರಿಂದ ನಾವು ದುರ್ಬಲರು, ನಮಗೆ ಯಾವುದರಲ್ಲಿಯೂ ಸ್ವಾತಂತ್ರ್ಯವಿಲ್ಲ ಎಂದು ನಾವು ನಂಬುವಂತೆ ಮಾಡಿ ಕೊಂಡಿದ್ದೇವೆ. ಹೀಗಾದಮೇಲೆ ಇನ್ನು ಶ್ರದ್ಧೆಯನ್ನು ಕಳೆದುಕೊಳ್ಳದೆ ಮತ್ತೇನು? ನಿಜವಾದ ಶ್ರದ್ಧೆಯ ಮನೋಭಾವನೆ ನಮಗೆ ಮತ್ತೊಮ್ಮೆ ಹಿಂತಿರುಗಿ ಬರುವಂತೆ ಮಾಡಬೇಕು. ನಮ್ಮ ಸ್ವಂತ ಆತ್ಮ ಶಕ್ತಿಯಲ್ಲಿ ನಮಗೆ ನಂಬಿಕೆ ಮತ್ತೊಮ್ಮೆ ಜಾಗ್ರತವಾಗಬೇಕು. ಆಗ ಮಾತ್ರ ದೇಶದೆದುರಿಗಿರುವ ಸಮಸ್ಯೆಗಳೆಲ್ಲಾ ಕ್ರಮೇಣ ನಮ್ಮಿಂದಲೇ ಪರಿಹಾರ ವಾಗುವುವು.

ಪ್ರಶ್ನೆ:— ಅದು ಹೇಗೆ ಸಾಧ್ಯ? ನಮ್ಮ ಸಮಾಜವನ್ನು ಆವರಿಸಿ ರುವ ಅಸಂಖ್ಯಾತ ಹಾನಿಗಳೆಲ್ಲಾ ಹೇಗೆ ತಾನೆ ಕೇವಲ ಶ್ರದ್ಧೆಯಿಂದ ಪರಿ ಹಾರವಾಗುವುದು? ಅದೂ ಅಲ್ಲದೆ ದೇಶದಲ್ಲಿ ಅನೇಕ ಪ್ರಬಲವಾದ ದೋಷಗಳಿವೆ. ಅದನ್ನು ಅಳಿಸಲು ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಮತ್ತು ಇನ್ನೂ ಇತರ ಅನೇಕ ದೇಶಭಕ್ತ ಸಂಸ್ಥೆಗಳು ಬ್ರಿಟಿಷ್ ಸರಕಾರಕ್ಕೆ ಮನವಿಗಳನ್ನು ಕಳುಹಿಸಿ ಸತತವಾದ ಹೋರಾಟ ನಡೆಸುತ್ತಿದ್ದಾರೆ. ಅವರ ಬೇಡಿಕೆಗಳನ್ನು ತಿಳಿಯಪಡಿಸಲು ಯಾವುದು ಉತ್ತಮವಾದ ಹಾದಿ? ಇಲ್ಲಿ ಶ್ರದ್ಧೆ ಈ ವಿಷಯಕ್ಕೂ ಏನು ಸಂಬಂಧ?

ಸ್ವಾಮಿಜಿ:— ಹೇಳು, ಅವು ಯಾರ ಬೇಡಿಕೆಗಳು, ನಿಮ್ಮವೋ ಅಥವಾ ನಿಮ್ಮ ಪ್ರಭುಗಳದ್ದೊ? ನಿಮ್ಮದಾಗಿದ್ದರೆ, ನಿಮ್ಮ ರಾಜರು ಅವನ್ನು ಒದಗಿಸುವರೋ ಅಥವಾ ನೀವೇ ಅದನ್ನು ನಿಮಗಾಗಿ ಮಾಡು ವಿರೊ?

ಪ್ರಶ್ನೆ:— ಆದರೆ ತನ್ನ ಪ್ರಜೆಗಳ ಇಷ್ಟಾರ್ಥಗಳನ್ನು ನೆರವೇರಿಸು ವುದು ರಾಜರ ಕರ್ತವ್ಯ. ರಾಜರಿಂದಲ್ಲದೆ ಮತ್ತಾರಿಂದ ನಾವು ಇದನ್ನು ನಿರೀಕ್ಷಿಸಬೇಕು?

ಸ್ವಾಮಿಜಿ:— ಭಿಕ್ಷುಕನ ಬೇಡಿಕೆಗಳೆಂದೂ ಪರಿಪೂರ್ಣವಾಗುವು ದಿಲ್ಲ. ಸರ್ಕಾರ ನಿಮಗೆ ಬೇಕಾದುದನ್ನೆಲ್ಲಾ ಕೊಡುವುದೆಂದಿಟ್ಟುಕೊಳ್ಳೋಣ.

ಜರೂರಾದ ಕೆಲಸಗಳನ್ನು ನೋಡಿಕೊಳ್ಳುವವರಾರು? ಆದ್ದರಿಂದ ಮನುಷ್ಯರನ್ನು ಮೊದಲು ನಿರ್ಮಾಣಮಾಡು. ಪೌರುಷವಂತರಾದ ಮನುಷ್ಯರು ನಮಗೀಗ ಬೇಕಾಗಿರುವುದು. ಶ್ರದ್ಧೆಯಿಲ್ಲದಿದ್ದಲ್ಲಿ ಅಂತಹ ಮನುಷ್ಯರನ್ನು ಮಾಡಲು ಹೇಗೆ ಸಾಧ್ಯ?

ಪ್ರಶ್ನೆ:— ಆದರೆ, ಮಹಾಶಯ, ಬಹುಮಂದಿಗೆ ಈ ಅಭಿಪ್ರಾಯವಿಲ್ಲ.

ಸ್ವಾಮಿಜಿ:— ನೀನು ಹೇಳುವ 'ಬಹುಮಂದಿ' ಯೆಲ್ಲ ಮುಖ್ಯವಾಗಿ ದಡ್ಡರು. ಸಾಧಾರಣ ಬುದ್ಧಿಯುಳ್ಳ ಜನರು ಸೇರಿದ್ದಾರೆ. ತಮ್ಮಷ್ಟಕ್ಕೆ ತಾವೇ ಯೋಚಿಸುವಂತಹ ಬುದ್ಧಿಯುಳ್ಳವರು ಎಲ್ಲಾ ಕಡೆಯಲ್ಲಿಯೂ ಎಲ್ಲೋ ಅತ್ಯಲ್ಪ ಮಂದಿ ಮಾತ್ರ. ಕೆಲಸದ ಎಲ್ಲಾ ಇಲಾಖೆಗಳಲ್ಲಿಯೂ, ಎಲ್ಲೆಡೆಯಲ್ಲಿಯೂ ಈ ಬುದ್ಧಿವಂತರಾದ ಮನುಷ್ಯರೇ ನಾಯಕರು. ಬಹುಮತೀಯರು ದಾರದಂತೆ ಈ ನಾಯಕರು ಎಳೆದ ಕಡೆ ಹೋಗುತ್ತಾರೆ. ಇದೂ ಒಳ್ಳೆಯದೆ. ಏಕೆಂದರೆ ಈ ನಾಯಕರ ಹೆಜ್ಜೆಯನ್ನೇ ಅನುಸರಿಸುವುದರಿಂದ ಎಲ್ಲವೂ ಸರಿಯಾಗಿ ಆಗುವುದು. ಯಾರು ಇನ್ನೊಬ್ಬರಿಗೆ ತಲೆಬಾಗುವುದಕ್ಕಿಂತ ತಾವು ಮೇಲ್ಮಟ್ಟದಲ್ಲಿರುವೆವೆಂದು ಯೋಚಿಸುವರೊ ಅಂಥವರು ಮೂಢರು. ತಮ್ಮ ಅಭಿಪ್ರಾಯದಂತೆಯೇ ನಡೆದು ತಮ್ಮ ಸರ್ವನಾಶಕ್ಕೆ ತಾವೇ ಕಾರಣರಾಗುವರು. ಸಮಾಜ ಸುಧಾರಣೆಯ ವಿಷಯ ನೀನು ಮಾತನಾಡುವೆಯಲ್ಲವೆ? ಆದರೆ ನೀನೇನು ಮಾಡುತ್ತೀಯೆ? ನಿನ್ನ ಸಮಾಜ ಸುಧಾರಣೆ ಎಂಬುದರ ಅರ್ಥ ವಿಧವಾವಿವಾಹ ಇಲ್ಲವೇ ಸ್ತ್ರೀಯರ ದಾಸ್ಯ ವಿಮೋಚನೆ ಅಥವಾ ಅಂಥದೇ ಮತ್ತೇನೋ; ಅಷ್ಟೇ ಅಲ್ಲವೆ? ಅಲ್ಲದೆ ಇದೂ ಕೂಡ ಎಲ್ಲೋ ಕೆಲವು ಮತದವರಿಗೆ ಮಾತ್ರ ಅನ್ವಯಿಸುವಂಥದು. ಇಂತಹ ಸುಧಾರಣೆಯ ಯೋಜನೆಯಿಂದ ಕೆಲವರಿಗೆ ಖಂಡಿತನಾಗಿಯೂ ಒಳ್ಳೆಯದಾಗಬಹುದು. ಆದರೆ ಇಡೀ ಜನಾಂಗಕ್ಕೆ ಇದರಿಂದ ಯಾವ ಉಪಯೋಗವಿದೆ? ಇದು ಸುಧಾರಣೆ ಎನ್ನಿಸಿಕೊಳ್ಳುವುದೇ ಅಥವಾ ಸ್ವಾರ್ಥತೆಯ ಒಂದು ರೂಪವೊ? – ಹೇಗಾದರೂ ಮಾಡಿ ನಿನ್ನ ಕೋಣೆಯನ್ನು ಶುಚಿಮಾಡಿದರಾಯಿತು. ಉಳಿದವರ ಪಾಡು ಇನ್ನೂ ಕೆಟ್ಟರೂ ಚಿಂತೆಯಿಲ್ಲ.

ಪ್ರಶ್ನೆ:—ಹಾಗಾದರೆ ನೀವು ಹೇಳುವುದು ಸಮಾಜಸುಧಾರಣೆಯ ಅಗತ್ಯವೇ ಇಲ್ಲವೆಂದೆ?

ಸ್ವಾಮಿಜಿ :—ಯಾರು ಹಾಗೆ ಹೇಳಿದ್ದು ? ನಿಸ್ಸಂದೇಹವಾಗಿ ಅದರ ಆವಶ್ಯಕತೆಯಿದೆ. ನೀವು ಮಾತನಾಡುವ ಸಮಾಜ ಸುಧಾರಣೆಗಳಲ್ಲಿ ಮುಕ್ಕಾಲೆಲ್ಲಾ ಬಡಜನ ಮತ್ತು ಸಾಮಾನ್ಯರಿಗೆ ಸಂಬಂಧಪಟ್ಟಿರುವುದಿಲ್ಲ. ರಲ್ಲಿ ನೀವು ಕೂಗಾಡುತ್ತಿರುವ ವಿಧವಾ ವಿವಾಹ, ಸ್ತ್ರೀ ಸ್ವಾತಂತ್ರ್ಯ ಮುಂತಾದುವುಗಳೆಲ್ಲಾ ಈಗಾಗಲೇ ಬಳಕೆಯಲ್ಲಿವೆ. ಈ ಕಾರಣದಿಂದ ಅವರು ಈ ವಿಷಯಗಳನ್ನೆಲ್ಲಾ ಸುಧಾರಣೆಗಳೆಂದು ತಿಳಿಯುವುದೇ ಇಲ್ಲ. ನಾನೀಗ ಕೇಳುತ್ತಿರುವುದು ಈ ಶ್ರದ್ಧೆಯ ಅಭಾವವೇ ನಮಗುಂಟಾಗಿರುವ ಹಾನಿಗೆಲ್ಲಾ ಕಾರಣ. ಇನ್ನೂ ಹಾನಿಯನ್ನುಂಟುಮಾಡುತ್ತಿರುವುದು. ನನ್ನ ಚಿಕಿತ್ಸಾ ಕ್ರಮವೇನೆಂದರೆ ರೋಗದ ಕಾರಣಗಳನ್ನೆಲ್ಲಾ ಬೇರುಸಹಿತ ಕಿತ್ತೊಗೆಯಬೇಕು. ಅವುಗಳನ್ನು ಹಾಗೇ ಅಡಗಿಸಿದರೆ ಪ್ರಯೋಜನವಿಲ್ಲ. ನಮಗೆ ಅನೇಕ ವಿಧವಾದ ಸುಧಾರಣೆಗಳು ಬೇಕು. ಇದನ್ನು ನಿರಾಕರಿಸುವಷ್ಟು ದಡ್ಡರಾರಿದ್ದಾರೆ? ಉದಾಹರಣೆಗೆ ಭರತಖಂಡಕ್ಕೆ ಅಂತರ್ಜಾತೀಯ ವಿವಾಹ ಪದ್ಧತಿ ಆವಶ್ಯಕ- ಇದಿಲ್ಲದೆ ಹಿಂದೂ ಮತ ದಿನ ದಿನಕ್ಕೆ ದುರ್ಬಲವಾಗುತ್ತಿದೆ.

ಅಂದು ಸೂರ್ಯಗ್ರಹಣವಾದುದರಿಂದ ಈ ಪ್ರಶ್ನೆಗಳನ್ನೆಲ್ಲಾ ಕೇಳುತ್ತಿದ್ದ ಸಭ್ಯಗೃಹಸ್ಥನು ಸ್ವಾಮಿಜಿಗೆ ಪ್ರಣಾಮಮಾಡಿ, "ನಾನು ಗಂಗಾನದಿಗೆ ಸ್ನಾನಕ್ಕೆ ತೆರಳಬೇಕು. ಖಂಡಿತ ನಾನು ಇನ್ನೊಂದುದಿನ ಬರುವೆ" ಎಂದು ಹೇಳಿ ಹೋದನು.

೨

**ವರ್ಷ :— ಕ್ರಿ. ಶ. ೧೮೯೮ ಜನವರಿ ೨೩**

ಸಂಜೆಯಾಗಿತ್ತು. ಬಾಗ್‌ಬಜಾರಿನ ಬಲರಾಮ ಬಾಬುಗಳ ಮನೆಯಲ್ಲಿ ರಾಮಕೃಷ್ಣಸಂಸ್ಥೆಯ ವಾರದಸಭೆಯ ಸಂದರ್ಭ. ಸ್ವಾಮಿ ತುರಿಯಾನಂದ ಸ್ವಾಮಿ ಯೋಗಾನಂದ ಸ್ವಾಮಿ ಪ್ರೇಮಾನಂದ ಮತ್ತಿತರರು ಮಠದಿಂದ ಬಂದಿದ್ದರು. ಸ್ವಾಮಿಜಿ ವರಾಂಡದಲ್ಲಿ ಪೂರ್ವಾಭಿಮುಖವಾಗಿ ಆಸನಾರೂಢರಾಗಿದ್ದರು. ವರಾಂಡದ ಪೂರ್ವ ದಕ್ಷಿಣ ಮತ್ತು ಉತ್ತರ ಭಾಗಗಳೆಲ್ಲಾ ಜನರಿಂದ ಕಿಕ್ಕಿರಿದಿದ್ದಿತು. ಸ್ವಾಮಿಜಿ ಕಲ್ಕತ್ತೆಯಲ್ಲಿದ್ದಾಗ ಪ್ರತಿದಿನವೂ ಹೀಗೆ ಆಗುತ್ತಿತ್ತು.

ಸಭೆಗೆ ಬಂದಿದ್ದವರಲ್ಲಿ ಅನೇಕರಿಗೆ ಸ್ವಾಮಿಜಿ ಬಹುಚೆನ್ನಾಗಿ

ಹಾಡುವರೆಂದು ತಿಳಿದಿದ್ದಿತು. ಅವರಿಂದ ಹಾಡಿಸಲು ಅವರೆಲ್ಲಾ ಅಪೇಕ್ಷಿಸುತ್ತಿದ್ದರು. ಅದನ್ನು ತಿಳಿದು ಮಾಸ್ಟರ್ ಮಹಾಶಯರು ತಮ್ಮ ಬಳಿಯಲ್ಲಿದ್ದ ಕೆಲವು ಸಭ್ಯ ಗೃಹಸ್ಥರಿಗೆ ಸ್ವಾಮಿಜಿಯನ್ನು ಹಾಡಲು ಕೇಳುವಂತೆ ಪಿಸುಗುಟ್ಟಿದರು. ಆದರೆ ಸ್ವಾಮಿಜಿ ಅವರ ಅಭಿಲಾಷೆಯನ್ನು ಅರಿತು ನಸುನಗುತ್ತಾ ಕೇಳಿದರು, "ಮಾಸ್ಟರ್ ಮಹಾಶಯ, ನಿಮ್ಮಲ್ಲೇ ಏನನ್ನು ಕುರಿತು ಹೀಗೆ ಪಿಸುಗುಟ್ಟಿಕೊಳ್ಳುತ್ತಿರುವಿರಿ? ದಯವಿಟ್ಟು ಹೇಳಿ." ಮಾಸ್ಟರ್ ಮಹಾಶಯರ ಪ್ರಾರ್ಥನೆಯಂತೆ ಸ್ವಾಮಿಜಿ ತಮ್ಮ ಇಂಪಾದ ಕಂಠದಿಂದ ಹಾಡಲುಪಕ್ರಮಿಸಿದರು—"ಪ್ರೇಮ ಮಾತೆ ಶ್ಯಾಮಾಳನ್ನು ನಿನ್ನ ಹೃದಯದಲ್ಲಿ ಪ್ರೇಮಪೂರ್ವಕವಾಗಿ ಎಚ್ಚರಿಕೆಯಿಂದ ನೋಡಿಕೊ" . . . . ವೀಣೆಯನ್ನಾರೋ ನುಡಿಸುವರೊ ಎಂಬಂತಿತ್ತು! ಮುಕ್ತಾಯವಾದ ಮೇಲೆ, ಅವರು ಮಾಸ್ಟರ್ ಮಹಾಶಯರಿಗೆ "ಈಗ ನಿನಗೆ ತೃಪ್ತಿಯಾಯಿತೆ? ಇನ್ನು ಸಾಕು, ಹೆಚ್ಚಿಗೆ ಹಾಡುವುದಿಲ್ಲ. ಇಲ್ಲದಿದ್ದರೆ ಅದರ ಪರವಶತೆಯಲ್ಲೆ ನಾನು ಸಂಪೂರ್ಣವಾಗಿ ಮೈಮರೆಯುವೆ. ಅಲ್ಲದೆ ಪಾಶ್ಚಾತ್ಯ ದೇಶದಲ್ಲಿ ಉಪನ್ಯಾಸ ಮಾಡಿ ಮಾಡಿ ನನ್ನ ಧ್ವನಿ ಒಡೆದು ಹೋಗಿದೆ. ನನ್ನ ಧ್ವನಿ ಕೊಂಚ ಚೆನ್ನಾಗಿಯೇ ಕಂಪಿಸುತ್ತದೆ" ಎಂದರು.

ನಂತರ ಸ್ವಾಮಿಜಿ ತಮ್ಮ ಬ್ರಹ್ಮಚಾರಿ ಶಿಷ್ಯನೊಬ್ಬನನ್ನು ಮುಕ್ತಿಯ ವಿಷಯವನ್ನು ಕುರಿತು ಮಾತನಾಡುವಂತೆ ಹೇಳಿದರು. ಹಾಗೆಯೆ ಬ್ರಹ್ಮಚಾರಿ ಎದ್ದುನಿಂತು ಕೊಂಚ ಹೊತ್ತು ಮಾತನಾಡಿದ. ಇನ್ನೂ ಕೆಲವರು ಹಾಗೇ ಮಾಡಿದರು. ನಂತರ ಸ್ವಾಮಿಜಿ ಆಗ ಮಾತನಾಡಿದ ವಿಷಯದ ಮೇಲೆ ಚರ್ಚಿಸಲು ಕರೆದರು. ತಮ್ಮ ಒಬ್ಬ ಗೃಹಸ್ಥ ಭಕ್ತನೊಬ್ಬನನ್ನು ಅದನ್ನು ಮೊದಲು ಪ್ರಾರಂಭಿಸಲು ಹೇಳಿದರು. ಆದರೆ ಅವನು ಅದ್ವೈತ ಮತ್ತು ಜ್ಞಾನವನ್ನು ಸಮರ್ಥಿಸಹೋಗಿ ದ್ವೈತ ಮತ್ತು ಭಕ್ತಿಗೆ ಕೀಳು ಸ್ಥಳವನ್ನು ನಿರ್ದೇಶಿಸಹೋದದ್ದರಿಂದ ಸಭಿಕರಲ್ಲೊಬ್ಬರು ಅದನ್ನು ಪ್ರತಿಭಟಿಸಿದರು. ಇಬ್ಬರೂ ಎದುರಾಳಿಗಳೂ ತಮ್ಮ ತಮ್ಮ ಅಭಿಪ್ರಾಯವನ್ನೇ ಮುಂದಿಟ್ಟುಕೊಂಡು ಅವನ್ನು ಸ್ಥಿರಪಡಿಸಲು ಪ್ರಯತ್ನಿಸಲು ಅಲ್ಲೊಂದು ನಿಜವಾದ ವಾಗ್ಯುದ್ಧವೇ ಪ್ರಾರಂಭವಾಯಿತು. ಸ್ವಾಮಿಜಿ ಕೊಂಚ ಹೊತ್ತು ಇದನ್ನು ವೀಕ್ಷಿಸುತ್ತಿದ್ದರು. ಅವರು ಬರಬರುತ್ತಾ ಗಂಭೀರವಾಗಲಾರಂಭಿಸಲು ಸ್ವಾಮಿಜಿ ಅವರಿಗೆ

ಮುಂದೆ ಹೇಳುವಂತೆ ಹೇಳಿ ಸುಮ್ಮನಿರಿಸಿದರು :

"ವಾದ ಮಾಡುವಾಗ ಏಕೆ ಉದ್ವಿಗ್ನರಾಗಿ ಎಲ್ಲವನ್ನೂ ಹಾಳು ಮಾಡುವಿರಿ ? ಇಲ್ಲಿ ಕೇಳಿ ! ಶ್ರೀರಾಮಕೃಷ್ಣರು ನಿಜವಾದ ಜ್ಞಾನ ನಿಜವಾದ ಭಕ್ತಿ ಎರಡೂ ಒಂದೇ ಎಂದು ಹೇಳುತ್ತಿದ್ದರು. ಭಕ್ತಿ ಸೂತ್ರದ ಪ್ರಕಾರ ದೇವರು "ಪ್ರೇಮಮಯನು". ನಾವು ಅವನನ್ನು "ನಾನು ದೇವರನ್ನು ಪ್ರೀತಿಸುತ್ತೇನೆ" ಎಂದು ಕೂಡ ಹೇಳಲಾರೆವು. ಏಕೆಂದರೆ ಅವನು ಸಂಪೂರ್ಣ ಪ್ರೇಮ ಸ್ವರೂಪನು. ಅವನಿಂದ ಹೊರಗೆ ಪ್ರೇಮವೇ ಇಲ್ಲ. ನಾವು ಅವನನ್ನು ಪ್ರೀತಿಸುವುದಕ್ಕಾಗಿ ನಮ್ಮ ಹೃದಯದಲ್ಲಿ ಹೊಂದಿರುವ ಪ್ರೇಮವೂ ಕೂಡ ಅವನೇ. ಇದೇ ರೀತಿಯಲ್ಲಿ, ದೇವರಿಡೆಗೆ ನಮ್ಮನ್ನು ಸೆಳೆಯುವ ಯಾವ ಆಕರ್ಷಣೆಯೇ ಆಗಲಿ, ಮನೋಪ್ರವೃತ್ತಿಯೇ ಆಗಲಿ ಎಲ್ಲಾ ಅವನೇ ಆಗಿದ್ದಾನೆ. ಕಳ್ಳನು ಕದಿಯುವಾಗ, ಸೂಳೆ ತನ್ನ ದೇಹವನ್ನು ವ್ಯಭಿಚಾರಕ್ಕೆ ಮಾರಿಕೊಳ್ಳುವಾಗ, ತಾಯಿ ಮಗುವನ್ನು ಪ್ರೀತಿಸುವಾಗ – ಇವೆಲ್ಲದರಲ್ಲಿಯೂ ದೇವರಿರುವನು. ಅವನು ಸರ್ವವ್ಯಾಪಿ. ಜ್ಞಾನ ಸೂತ್ರದ ಪ್ರಕಾರ ಕೂಡ ಎಲ್ಲೆಡೆಯಲ್ಲಿಯೂ ದೇವರನ್ನು ನಾವು ಸಾಕ್ಷಾತ್ಕರಿಸಿಕೊಳ್ಳಬಹುದು. ಜ್ಞಾನ ಮತ್ತು ಭಕ್ತಿಯ ಸಮನ್ವಯತೆ ಇಲ್ಲಿದೆ. ಯಾವಾಗ ದೈವೀಭಾವದಲ್ಲಿ ಸಂಪೂರ್ಣವಾಗಿ ತನ್ಮಯರಾಗುವೆವೊ ಎಂದರೆ, ಸಮಾಧಿ ಸ್ಥಿತಿಯನ್ನು ಪಡೆಯುವೆವೊ ಆಗ ಮಾತ್ರ ಈ ದ್ವೈತ ಭಾವ ಅಳಿಸಿಹೋಗುವುದು. ದೇವರು ಭಕ್ತ ಎಂಬ ಭಿನ್ನತೆ ಮಾಯವಾಗುವುದು. ಭಕ್ತಿಯನ್ನು ವಿವರಿಸುವ, ಧರ್ಮಗ್ರಂಥದಲ್ಲಿ ಐದು ಬೇರೆ ಬೇರೆ ವಿಧವಾದ ಸಂಬಂಧಗಳನ್ನು ಹೇಳಿವೆ. ಇವುಗಳಲ್ಲಿ ಯಾವುದಾದರೊಂದು ಮಾರ್ಗವನ್ನನುಸರಿಸಿದರೂ ದೇವರನ್ನು ಪಡೆಯಬಹುದು. ಇದರ ಜೊತೆಗೆ ಇನ್ನೊಂದನ್ನೂ ಸೇರಿಸಬಹುದು – ಅದೇ ದೇವರಲ್ಲಿ ತಾನು ಐಕ್ಯ ಎಂದು ಧ್ಯಾನಮಾಡುವುದು. ಹೀಗೆ ಭಕ್ತರು ಅದ್ವೈತಿಗಳನ್ನು 'ಭಕ್ತರೆಂದೂ ಆದರೆ ದೇವರಲ್ಲಿ ಐಕ್ಯರಾದವರೆಂದು ಕರೆಯಬಹುದು. ಎಲ್ಲಿಯವರೆಗೆ ಮಾಯಾ ಜಗತ್ತಿನ ಎಲ್ಲೆಯೊಳಗೆ ಇರುವೆವೊ ಅಲ್ಲಿಯವರೆಗೂ ದ್ವೈತಭಾವ ನಿಸ್ಸಂದೇಹವಾಗಿ ಇದ್ದೇ ಇರುವುದು. ದೇಶ – ಕಾಲ – ಕಾರಣ ಅಥವಾ ನಾಮರೂಪಗಳೇ ಮಾಯೆಯೆನ್ನುವುದು. ಯಾವಾಗ ಈ ಮಾಯೆಯನ್ನು ಮೀರಿಹೋಗುವೆವೊ ಆಗ ಮಾತ್ರ ಈ ಏಕತ್ವ ಸಾಕ್ಷಾತ್ಕಾರವಾಗುವುದು. ಆಗ ಮಾನವ

ದ್ವೈತಿಯೂ ಅಲ್ಲ ಅದ್ವೈತಿಯೂ ಅಲ್ಲ. ಅವನಿಗೆ ಎಲ್ಲವೂ ಒಂದೆ. ಭಕ್ತ ಮತ್ತು ಜ್ಞಾನಿಗಳ ಮಧ್ಯೆ ನಮಗೆ ಕಾಣಬರುವ ಈ ಭಿನ್ನತೆಯೆಲ್ಲ ಪೂರ್ವ ಭಾವಿಯಾದ ಅವಸ್ಥೆ. ಒಬ್ಬ ದೇವರನ್ನು ಹೊರಗಡೆ ನೋಡುವನು. ಮತ್ತೊಬ್ಬ ಒಳಗಡೆ ಕಾಣುವನು. ಆದರೆ ಮತ್ತೊಂದು ವಿಷಯ – ಶ್ರೀ ರಾಮಕೃಷ್ಣರು ಹೇಳುತ್ತಿದ್ದರು – ಭಕ್ತಿಯ ಮತ್ತೊಂದು ಅವಸ್ಥೆ ಪರಾಭಕ್ತಿ ಎಂದರೆ ಮುಕ್ತಿಗಳಿಸಿದ ಮೇಲೆ ಅದ್ವೈತಾವಸ್ಥೆಯಲ್ಲಿ ಊರ್ಜಿತವಾದ ಮೇಲೆ ದೇವರನ್ನು ಪ್ರೀತಿಸುವುದು. ಇದೊಂದು ಅಸಂಗತೋಕ್ತಿಯಂತೆ ಕಾಣಬಹುದು. ಮುಕ್ತಿಯನ್ನು ಗಳಿಸಿದ ಮೇಲೂ ಭಕ್ತಿಭಾವವನ್ನುಳಿಸಿ ಕೊಳ್ಳಬೇಕೆ ಬಯಸಬೇಕೆ ಎಂಬ ಪ್ರಶ್ನೆ ಏಳಬಹುದು. ಇದಕ್ಕೆ ಉತ್ತರ "ಮುಕ್ತ ಅಥವಾ ಬಂಧನರಹಿತನು ಎಲ್ಲಾ ನಿಯಮಗಳಿಗೂ ಅತೀತನು." ಅವನ ವಿಷಯದಲ್ಲಿ ಯಾವ ನಿಯಮವನ್ನು ಅಳವಡಿಸಲಾಗುವುದಿಲ್ಲ. ಆದ್ದರಿಂದ ಅವನ ವಿಷಯವಾಗಿ ಯಾವ ಪ್ರಶ್ನೆಯೂ ಏಳುವುದಿಲ್ಲ. ಮುಕ್ತನಾದ ಮೇಲೂ ಕೆಲವರು ಕೇವಲ ತಮ್ಮ ಸ್ವಂತ ಇಚ್ಛೆಯಿಂದ ಅದರ ಸವಿಯನ್ನು ಭಕ್ತರಾಗುಳಿಯುವರು ಅನುಭವಿಸಲು"

ಪ್ರಶ್ನೆ:— ತಾಯಿಗೆ ಮಗುವಿನಲ್ಲಿರುವ ಪ್ರೇಮದಲ್ಲಿ ದೇವರಿರಬಹುದು. ಆದರೆ, ಮಹಾಶಯ, ಕಳ್ಳರಲ್ಲಿ, ಸೂಳೆಯಲ್ಲಿ ಅವರ ಸಹಜ ಪಾಪಪ್ರವೃತ್ತಿಗಳಲ್ಲೂ ದೇವರಿದ್ದಾನೆಂದರೆ ಈ ಅಭಿಪ್ರಾಯ ನಿಜವಾಗಿಯೂ ದಿಗ್‌ಭ್ರಮೆ ಹಿಡಿಸುವುದು. ಹೀಗಾದ ಪಕ್ಷಕ್ಕೆ, ದೇವರು ಈ ಜಗತ್ತಿನಲ್ಲಿ ಪುಣ್ಯಕ್ಕೆ ಎಷ್ಟು ಜವಾಬ್ದಾರನೋ ಪಾಪಕ್ಕೂ ಅಷ್ಟೇ ಜವಾಬ್ದಾರನೆಂದು ಅರ್ಥವಾಗುವುದು.

ಸ್ವಾಮಿಜಿ:— ಪೂರ್ಣ ಸಾಕ್ಷಾತ್ಕಾರ ಸ್ಥಿತಿಯಲ್ಲಿ ಈ ಬಗೆಯ ಜ್ಞಾನ ಬರುವುದು. ಆಗ ನಾವು ಎಲ್ಲಿ ಪ್ರೇಮದ ಆವಿರ್ಭಾವನೆ ನೋಡಿದರೂ ಆಕರ್ಷಣೀಯವಾದುವನ್ನು ನೋಡಿದರೂ ಅವೆಲ್ಲಾ ಪರಮಾತ್ಮನೆಂದು ಗೊತ್ತಾಗುವುದು. ಆದರೆ ಈ ಜನ್ಮದಲ್ಲೇ ಆ ಗುರಿಯನ್ನು ನೋಡಿ ಸಾಕ್ಷಾತ್ಕರಿಸಿಕೊಳ್ಳಬೇಕಾದರೆ ಮೊದಲು ಆ ಸ್ಥಿತಿಯನ್ನು ಪಡೆಯಬೇಕು.

ಪ್ರಶ್ನೆ:—ಆದರೂ ದೇವರು ಪಾಪದಲ್ಲಿಯೂ ಇದ್ದಾನೆ ಎಂಬುದನ್ನು ಒಪ್ಪಿಕೊಳ್ಳಬೇಕು!

ಸ್ವಾಮಿಜಿ:—ಇಲ್ಲಿ ನೋಡು, ವಾಸ್ತವಿಕವಾಗಿ, ಒಳ್ಳೆಯದು, ಕೆಟ್ಟುದೆಂಬ ಭಿನ್ನವಸ್ತುಗಳಿಲ್ಲವೇ ಇಲ್ಲ. ಅವು ಕೇವಲ ಸಾಂಪ್ರದಾಯಿಕ

ಪದಗಳು. ಒಂದೇ ವಸ್ತುವನ್ನು ನಾವು ಒಮ್ಮೆ ಕೆಟ್ಟದೆಂದೂ ಮತ್ತೊಮ್ಮೆ ಒಳ್ಳೆಯದೆಂದೂ ನಾವು ಅದನ್ನು ಉಪಯೋಗಿಸಿಕೊಳ್ಳುವರೀತಿಯಲ್ಲಿ ಹೇಳುತ್ತೇವೆ. ಉದಾಹರಣೆಗೆ ದೀಪದ ಬೆಳಕನ್ನು ತೆಗೆದುಕೊ. ಅದು ಉರಿಯುತ್ತಿರುವುದರಿಂದ ನಮಗೆ ನೋಡುವುದಕ್ಕೂ, ಅನೇಕ ಉಪಯುಕ್ತ ವಾದ ಕೆಲಸಗಳನ್ನು ಮಾಡುವುದಕ್ಕೂ ಸಾಧ್ಯ. ಇದು ದೀಪವನ್ನು ಉಪಯೋಗಿಸುವ ಹಲವು ವಿಧಾನಗಳಲ್ಲೊಂದು. ನಾವು ಬೆರಳನ್ನು ದೀಪಕ್ಕೆ ಹಿಡಿದರೆ ಬೆರಳು ಸುಟ್ಟು ಹೋಗುವುದು. ಅದೇ ದೀಪವನ್ನು ಉಪಯೋಗಿಸುವ ಮತ್ತೊಂದು ವಿಧಾನ ಇದು. ಆದ್ದರಿಂದ ಒಂದು ವಸ್ತುವು ಒಳ್ಳೆಯದಾಗುವುದೂ, ಕೆಟ್ಟದಾಗುವುದೂ ಅದನ್ನು ಉಪಯೋಗಿಸುವ ರೀತಿಯಲ್ಲಿದೆ. ಹೀಗೆಯೇ ಸದ್ಗುಣ ದುರ್ಗುಣಗಳೂ ಕೂಡ, ವಿಸ್ತಾರವಾಗಿ ಹೇಳ ಬೇಕಾದರೆ ನಮ್ಮ ಮನಸ್ಸಿನ ಮತ್ತು ದೇಹದ ಸ್ವಭಾವಿಕ ಶಕ್ತಿಯನ್ನು ಯೋಗ್ಯರೀತಿಯಲ್ಲಿ ಉಪಯೋಗಿಸಿದರೆ ಅದು ಸದ್ಗುಣವೆನ್ನಿಸಿಕೊಳ್ಳುವುದು. ಅಯೋಗ್ಯರೀತಿಯಲ್ಲಿ ಉಪಯೋಗಿಸಿದರೆ, ವ್ಯರ್ಥ ಮಾಡಿದರೆ, ಅದೇ ದುರ್ಗುಣವೆನ್ನಿಸಿಕೊಳ್ಳುವುದು.

ಹೀಗೆ ಪ್ರಶ್ನೆಯಾದ ಮೇಲೆ ಪ್ರಶ್ನೆಗಳು ಹೇಳಲ್ಪಟ್ಟು ಉತ್ತರ ಕೊಡಲಾಯಿತು. ಯಾರೋ ಹೇಳಿದರು "ಒಂದು ಸ್ವರ್ಗೀಯವಸ್ತು ಮತ್ತೊಂದನ್ನು ಆಕರ್ಷಿಸುವ ಕಡೆ ಕೂಡ ದೇವರಿದ್ದಾನೆಂಬ ವಾದ ನಿಜವಾದ ಸಂಗತಿಯಾಗಿರಬಹುದು ಅಥವಾ ಸುಳ್ಳಾಗಿರಬಹುದು. ಆದರೆ ಈ ಉದ್ದೇಶವನ್ನು ತಿಳಿಸುವ ಮನೋಹರವಾದ ಭಾವನೆಯನ್ನು ಯಾರೂ ನಿರಾಕರಿಸಲಾರರು.

ಸ್ವಾಮಿಜಿ:—ಇಲ್ಲ, ನನ್ನ ಪ್ರಿಯ ಮಹಾಶಯರೆ, ಅದು ಕವಿತೆಯಲ್ಲ. ಯಾವಾಗ ಜ್ಞಾನವನ್ನು ಪಡೆಯುವೆವೊ ಆಗ ಅದರ ಸತ್ಯಾಂಶ ಅರಿವಾಗುವುದು.

ಈ ವಿಷಯವಾಗಿ ಸ್ವಾಮಿಜಿ ಮುಂದುವರಿಸಿ ಹೇಳಿದ್ದನ್ನೆಲ್ಲಾ ಕೇಳಿ ನಾನು ಈ ರೀತಿ ಅರ್ಥಮಾಡಿಕೊಂಡೆ: ದೇಹ ಮತ್ತು ಆತ್ಮ ಎರಡೂ ಬಾಹ್ಯ ದೃಷ್ಟಿಯಿಂದ ಭಿನ್ನವಸ್ತುಗಳೆಂದು ಅನ್ನಿಸಿದರೂ ವಾಸ್ತವಿಕವಾಗಿ ಅವೆರಡೂ ಒಂದೇ ವಸ್ತುವಿನ ಎರಡು ರೂಪಗಳು. ಹಾಗೆಯೇ ಈ ಪಂಚ ಭೌತಿಕ ಪ್ರಪಂಚದಲ್ಲಿ ನಮಗೆ ತಿಳಿದಿರುವ ಎಲ್ಲಾ ಬಗೆಯ ವಿಭಿನ್ನ ಶಕ್ತಿಗಳೂ ಒಂದೇ ಶಕ್ತಿಯ ವಿವಿಧ ಆವಿರ್ಭಾವನೆಗಳು. ಆತ್ಮಶಕ್ತಿ ಕಡಿಮೆ ಆವಿ

ಭ್ರಾವನೆಯಾಗಿರುವ ವಸ್ತುವನ್ನು ನಾವು ಜಡವಸ್ತುವೆನ್ನುತ್ತೇವೆ. ಹೆಚ್ಚು ವಿಕಾಸವಾಗಿದ್ದರೆ ಜೀವಂತವೆನ್ನುತ್ತೇವೆ. ಎಲ್ಲಾ ಕಾಲದಲ್ಲಿಯೂ, ಎಲ್ಲಾ ಸ್ಥಿತಿಯಲ್ಲಿಯೂ ಯಾವುದೊಂದು ವಸ್ತುವೂ ಸಂಪೂರ್ಣವಾಗಿ ಜಡವಾಗೇ ಉಳಿಯುವುದಿಲ್ಲ. ಯಾವ ಶಕ್ತಿ ಈ ಭೌತಿಕಪ್ರಪಂಚದಲ್ಲಿ ಆಕರ್ಷಣ ಅಥವಾ ಗುರುತ್ವಾಕರ್ಷಣದಂತೆ ಪ್ರದರ್ಶಿತವಾಗಿದೆಯೋ ಅದೇ ಶಕ್ತಿ ಇನ್ನೂ ಶ್ರೇಷ್ಠವಾದ ಸೂಕ್ಷ್ಮ ಸ್ಥಿತಿಯಲ್ಲಿ ಆತ್ಮಸಾಕ್ಷಾತ್ಕಾರದ ಅತ್ಯುಚ್ಚ ಆಧ್ಯಾತ್ಮಿಕಸ್ಥಿತಿಯಲ್ಲಿ ಪ್ರೇಮ ಮುಂತಾದುವಂತೆ ಭಾಸವಾಗುವುದು.

ಪ್ರಶ್ನೆ:— ಪ್ರತ್ಯೇಕ ವ್ಯಕ್ತಿ ಉಪಯೋಗಿಸುವ ಸಂದರ್ಭದಲ್ಲಿ ಕೂಡ ಈ ಬಗೆಯ ವ್ಯತ್ಯಾಸ ಏಕೆ ಇರಬೇಕು? ತನ್ನ ಸ್ವಾಭಾವಿಕ ಶಕ್ತಿಯನ್ನು ಈ ರೀತಿ ಅಯೋಗ್ಯರೀತಿಯಲ್ಲಿ ಉಪಯೋಗಿಸುವ ಪ್ರವೃತ್ತಿಯಾದರೂ ಮನುಷ್ಯನಿಗೇಕಿರಬೇಕು?

ಸ್ವಾಮಿಜಿ:— ಈ ಪ್ರವೃತ್ತಿ ಅವನ ಪೂರ್ವ ಜನ್ಮದ ಕರ್ಮಫಲದಿಂದ ಪ್ರಾಪ್ತವಾಗುವುದು. ಪ್ರತಿಯೊಂದೂ ಅವನವನ ಕರ್ಮಫಲ. ಆದ್ದರಿಂದ ತನ್ನ ಪ್ರವೃತ್ತಿಗಳನ್ನು ಹಿಡಿತದಲ್ಲಿಟ್ಟುಕೊಂಡು ಅವನ್ನು ಯೋಗ್ಯ ರೀತಿಯಲ್ಲಿ ವ್ಯವಸ್ಥೆಗೊಳಿಸುವುದು ಪ್ರತಿಯೊಬ್ಬ ವ್ಯಕ್ತಿಯ ಕೈಯಲ್ಲೂ ಸಂಪೂರ್ಣವಾಗಿದೆ.

ಪ್ರಶ್ನೆ:—ಪ್ರತಿಯೊಂದೂ ನಮ್ಮ ನಮ್ಮ ಕರ್ಮಫಲಗಳಿಂದರೂ ಅವಕ್ಕೆ ಒಂದು ಆದಿ ಇರಬೇಕಲ್ಲವೆ? ಹಾಗಾದರೆ ಆದಿಯಲ್ಲಿ ನಮ್ಮ ಪ್ರವೃತ್ತಿಗಳು ಏಕೆ ಒಳ್ಳೆಯದಾಗಿ ಅಥವಾ ಕೆಟ್ಟುದಾಗಿ ಇರಬೇಕು?

ಸ್ವಾಮಿಜಿ:—ಒಂದು ಆದಿ ಇದೆ ಎಂದು ನಿನಗೆ ಹೇಗೆ ಗೊತ್ತು? ಸೃಷ್ಟಿಗೆ ಆದಿಯಿಲ್ಲ–ಇದೇ ವೇದಗಳ ಸಿದ್ಧಾಂತ. ದೇವರಿರುವವರೆಗೂ ಸೃಷ್ಟಿಯೂ ಇರುವುದು.

ಪ್ರಶ್ನೆ:—ಸರಿ, ಮಹಾಶಯರೆ, ಈ ಮಾಯೆ ಏಕೆ ಇಲ್ಲಿದೆ? ಅದು ಎಲ್ಲಿಂದ ಬಂತು?

ಸ್ವಾಮಿಜಿ:—ದೇವರ ವಿಷಯವಾಗಿ "ಏಕೆ?" ಎಂದು ಕೇಳುವುದು ತಪ್ಪು. ಯಾರಿಗೆ ಅಪೇಕ್ಷೆ ಇದೆಯೊ ಯಾರು ಅಪೂರ್ಣರೊ ಅವರ ವಿಷಯವಾಗಿ ಹೀಗೆ ಕೇಳಬಹುದು. ಯಾರಿಗೆ ಅಪೇಕ್ಷೆಗಳೇ ಇಲ್ಲವೊ ಯಾರು ಪೂರ್ಣನೊ ಅವನ ವಿಚಾರವಾಗಿ ಏಕೆ? ಎಂಬುದು ಯಾವು

ದಿದೆ? "ಎಲ್ಲಿಂದ ಮಾಯೆ ಬಂದಿತು" ಎಂಬ ಪ್ರಶ್ನೆಯನ್ನೆ ಕೇಳ ಬಾರದು. ಕಾಲದೇಶಕಾರಣವೇ ಮಾಯೆ. ನೀನು, ನಾನು, ಪ್ರತಿ ಯೊಬ್ಬರೂ ಈ ಮಾಯೆಯೊಳಗೆ ಇರುವೆವು. ನೀನು ಮಾಯೆಯ ಆಚೆ ಏನಿದೆ ಎಂದು ಕೇಳುತ್ತಿರುವೆ! ನೀನು ಮಾಯೆಯೊಳಗೆ ಇರಬೇಕಾದರೆ ಈ ಪ್ರಶ್ನೆಯನ್ನು ಹೇಗೆ ಕೇಳುವೆ?

ಪುನಃ ಅನೇಕ ಪ್ರಶ್ನೆಗಳು ಕೇಳಲ್ಪಟ್ಟುವು. ನಂತರ ಸಂಭಾಷಣೆ ಮಿಲ್, ಹ್ಯಾಮಿಲ್ಟನ್, ಹರ್ಬರ್ಟ್ ಸ್ಪೆನ್ಸರ್ ಮುಂತಾದವರ ತತ್ತ್ವ ಸಿದ್ಧಾಂತಗಳಮೇಲೆ ಜರುಗಿತು. ಸ್ವಾಮಿಗಳು ಎಲ್ಲರಿಗೂ ತೃಪ್ತಿಯಾಗು ವಂತೆ ಅವುಗಳಮೇಲೆ ವಿಸ್ತಾರವಾಗಿ ಮಾತನಾಡಿದರು. ಅವರ ವಿಶಾಲ ಪಾಶ್ಚಾತ್ಯ ತತ್ತ್ವಪಾಂಡಿತ್ಯವನ್ನೂ, ಅವರು ತಕ್ಷಣವೇ ಕೊಡುತ್ತಿದ್ದ ಉತ್ತರವನ್ನೂ ನೋಡಿ ಪ್ರತಿಯೊಬ್ಬರೂ ವಿಸ್ಮಿತರಾದರು.

ಅನಂತರ ಸ್ವಲ್ಪಹೊತ್ತು ವಿವಿಧ ವಿಷಯಗಳ ಮೇಲೆ ಸಂಭಾಷಣೆ ಜರುಗಿ ಕೊನೆಗೆ ಸಭೆ ಮುಕ್ತಾಯಗೊಂಡಿತು.

೩

ವರ್ಷ:—ಕ್ರಿ.ಶ. ೧೮೯೮ ನೇ ಜನವರಿ ೨೪

ಶನಿವಾರ ಸ್ವಾಮಿಜಿಯನ್ನು ಪ್ರಶ್ನಿಸಿದ ಸಭ್ಯ ಮನುಷ್ಯನೇ ಪುನಃ ಇಂದೂ ಬಂದಿದ್ದನು. ಅವನು ಮತ್ತೆ ಅಂತರ್ಜಾತೀಯ ವಿವಾಹದ ವಿಷಯವನ್ನೇ ಎತ್ತಿ ಅಂತರ್ಜಾತೀಯ ವಿವಾಹ ಪದ್ಧತಿ ಜನಾಂಗಗಳಲ್ಲಿ ಜಾರಿಗೆ ಬರುವಂತೆ ಮಾಡುವುದು ಹೇಗೆ ಎಂದನು.

ಸ್ವಾಮಿಜಿ:—ಪರಧರ್ಮವನ್ನವಲಂಬಿಸಿದ ಜನಾಂಗದೊಡನೆ ಅಂತರ್ಜ್ಞಾತೀಯ ವಿವಾಹದ ಪದ್ಧತಿಯನ್ನು ನಾನು ಸೂಕ್ತವೆಂದು ಹೇಳುವು ದಿಲ್ಲ. ಈ ವರ್ತಮಾನಕಾಲದಲ್ಲಿಯಾದರೂ ಅದು ನಿಸ್ಸಂದೇಹವಾಗಿ ಸಮಾಜದ ಬಂಧನಗಳನ್ನು ಸಡಿಲ ಮಾಡುತ್ತದೆ. ನಾನಾ ಬಗೆಯ ಹಾನಿಗೆ ಕಾರಣವಾಗುವುದು. ಒಂದೇ ಧರ್ಮವನ್ನವಲಂಬಿಸಿರುವ ಜನ ರಲ್ಲಿ ನಾನು ಈ ಅಂತರ್ಜ್ಞಾತೀಯ ವಿವಾಹಪದ್ಧತಿಯಿರಬೇಕೆಂದು ಸಮರ್ಥಿಸುತ್ತೇನೆ.

ಪ್ರಶ್ನೆ:—ಆಗಲೂ ಕೂಡ ಅದು ತುಂಬಾ ಗಲಿಬಿಲಿಗೆ ಕಾರಣವಾಗು ವುದು. ನನಗೆ ಬಂಗಾಳದಲ್ಲಿ ಹುಟ್ಟಿ ಬೆಳೆದ ಒಬ್ಬ ಮಗಳಿದ್ದಾಳೆಂದೂ

ಅವಳನ್ನು ನಾನು ಒಬ್ಬ ಮರಾಠಿ ಅಥವಾ ಮದ್ರಾಸಿನವನಿಗೆ ಮದುವೆ ಮಾಡುತ್ತೇನೆಂದೂ ಇಟ್ಟುಕೊಳ್ಳೋಣ. ಹುಡುಗಿಗೆ ಗಂಡನ ಭಾಷೆ ಅರ್ಥವಾಗುವುದಿಲ್ಲ. ಅಲ್ಲದೆ ಅವರವರ ನಡೆನುಡಿ ಸಂಪ್ರದಾಯಗಳಲ್ಲಿ ತುಂಬಾ ಭಿನ್ನತೆಯಿದೆ. ಮದುವೆಯಾದ ದಂಪತಿಗಳಿಗಾಗುವ ಎಲ್ಲೋ ಕೆಲವು ತೊಂದರೆಗಳಿವು. ಇನ್ನು ಸಮಾಜವನ್ನು ತೆಗೆದುಕೊಂಡರೆ ಈ ತೊಡಕು ಮತ್ತೂ ಜಟಿಲವಾಗುವುದು.

ಸ್ವಾಮೀಜಿ:—ಈ ಬಗೆಯ ಮದುವೆಗಳು ಹರಡಲು ಇನ್ನೂ ಬಹು ಕಾಲ ಬೇಕು. ಅದೂ ಅಲ್ಲದೆ, ಇದ್ದಕ್ಕಿದ್ದಂತೆಯೇ ಈಗ ಇದಕ್ಕೆ ತೊಡಗು ವುದು ಅಷ್ಟೇನೂ ಹಿತವಲ್ಲ. ಕರ್ಮದ ಒಂದು ರಹಸ್ಯವೇನೆಂದರೆ ಎಲ್ಲಿ ತೀರ ಸ್ವಲ್ಪ ಪ್ರತಿಭಟನೆ ಇದೆಯೋ ಆ ಹಾದಿಯಿಂದ ಮುಂದೆ ಹೋಗ ಬೇಕು. ಆದ್ದರಿಂದ ಮೊದಲು, ತಮ್ಮ ಸ್ವಂತ ಜಾತಿಯವರ ಕ್ಷೇತ್ರ ದಲ್ಲೇ ಈ ಮದುವೆ ರೂಢಿಗೆ ಬರಲಿ. ಉದಾಹರಣೆಗೆ ಬಂಗಾಳದ ಕಾಯಸ್ಥರನ್ನು ತೆಗೆದುಕೊಳ್ಳೋಣ. ಅವರಲ್ಲಿ ಉತ್ತರ ರಾಢ್ರಿ, ದಕ್ಷಿಣ ರಾಢ್ರಿ, ಬಂಗಜ ಮುಂತಾದ ಹಲವು ಒಳಪಂಗಡಗಳಿವೆ. ಅವರು ತಮ್ಮ ತಮ್ಮಲ್ಲೇ ಪರಸ್ಪರ ವಿವಾಹ ಸಂಬಂಧ ಬೆಳೆಸುವುದಿಲ್ಲ. ಈಗ ಈ ಉತ್ತರರಾಢ್ರಿ, ದಕ್ಷಿಣರಾಢ್ರಿಗಳ ಮಧ್ಯೆ ಪರಸ್ಪರ ವಿವಾಹ ನಡೆಯಲಿ. ಸದ್ಯಕ್ಕೆ ಅದು ಸಾಧ್ಯವಿಲ್ಲದೇ ಹೋದರೆ ಬಂಗಾಳಿಗಳು, ದಕ್ಷಿಣರಾಢ್ರಿಗಳು ಇವರ ನಡುವೆ ಈ ಪದ್ಧತಿ ಬರಲಿ. ಹೀಗೆ ಯಾವುದು ಆಗಲೇ ಪ್ರತಿಷ್ಠಿತ ವಾಗಿದೆಯೋ ಮತ್ತು ಯಾವುದನ್ನು ಜಾರಿಗೆ ತರುವುದು ನಮ್ಮ ಕೈಯಲ್ಲೇ ಇದೆಯೋ ಅದನ್ನು ನಾವು ಬೆಳೆಸಬೇಕು. ಸುಧಾರಣೆ ಎಂದರೆ ಸಂಪೂರ್ಣ ವಾಗಿ ಧ್ವಂಸಮಾಡುವುದು ಎಂದರ್ಥವಲ್ಲ.

ಪ್ರಶ್ನೆ:—ಸರಿ, ನೀವು ಹೇಳಿದಂತೆಯೇ ಆಗಲಿ. ಆದರೆ ಅದರಿಂದ ಯಾವ ಹಿತವಾಗುವುದು?

ಸ್ವಾಮೀಜಿ:—ನೀನು ನೋಡುತ್ತಿಲ್ಲವೆ—ನಮ್ಮ ಸಮಾಜದಲ್ಲಿ ನೂರಾರು ವರ್ಷಗಳಿಂದಲೂ ಮದುವೆ ಪ್ರತಿಯೊಂದು ಮತದ ಒಳ ಪಂಗಡಗಳಲ್ಲಿಯೇ ಪರಿಮಿತಿಗೊಂಡು ಎಂತಹ ಅವಸ್ಥೆಗೆ ತಂದಿದೆಯೆಂದರೆ ಮದುವೆ ಎಂದರೆ ಭ್ರಾತೃವರ್ಗದವರು, ಬಂಧುವರ್ಗದವರಿಗೇ ಇದು ಮೀಸಲಾಗಿ ಹೋಗಿದೆ. ಈ ಕಾರಣದಿಂದಲೇ ಜನಾಂಗ ಶಾರೀರಕ ದುರ್ಬಲತೆಯನ್ನು ಹೊಂದುತ್ತಿದೆ. ಪರಿಣಾಮವಾಗಿ ಎಲ್ಲಾ ಬಗೆಯ

ರೋಗರುಜನಗಳು ಮತ್ತು ಇತರ ಕೆಡುಕುಗಳಿಗೂ ಸುಲಭ ಪ್ರವೇಶ ದೊರೆತಿದೆ. ಕೆಲವೇ ಮಂದಿ ವ್ಯಕ್ತಿಗಳ ಸಣ್ಣ ವೃತ್ತದೊಳಗೇ ರಕ್ತಚಲನೆ ಯಾಗಬೇಕಾಯಿತು. ಅದರಿಂದ ರಕ್ತ ಕುಲುಷಿತವಾಗಿದೆ. ಆದ್ದರಿಂದ ಹೊಸದಾಗಿ ಹುಟ್ಟಿದ ಮಕ್ಕಳು ತಮ್ಮ ತಂದೆತಾಯಿಗಳಿಂದ ಹುಟ್ಟುತ್ತಲೇ ಅವರ ದೇಹಪ್ರಕೃತಿಯ ರೋಗಗಳನ್ನು ಪ್ರಿತ್ರಾರ್ಜಿತವಾಗಿ ಹೊಂದುತ್ತಾರೆ. ಹೀಗೆ ರಿಕ್ತರಕ್ತದಿಂದ ಹುಟ್ಟಿದ ಅವರ ದೇಹಗಳಲ್ಲಿ ಯಾವ ರೋಗದ ಸೂಕ್ಷ್ಮ ಕ್ರಿಮಿಗಳನ್ನೂ ತಡೆಗಟ್ಟುವ ಶಕ್ತಿ ಇರುವುದಿಲ್ಲ. ಈ ರೋಗ ಗಳಾದರೊ ಯಾವಾಗಲೂ ಅವರನ್ನು ಬಲಿತೆಗೆದುಕೊಳ್ಳಲು ಕಾದು ಕೊಂಡಿರುತ್ತವೆ. ಈ ಮದುವೆಯ ವೃತ್ತವನ್ನು ವಿಶಾಲವಾಗಿ ಮಾಡುವುದರ ಮೂಲಕ ಮಾತ್ರ ನಾವು ಹೊಸ ಬಗೆಯ ಬೇರೆ ವಿಧವಾದ ರಕ್ತವನ್ನು ನಮ್ಮ ಸಂತಾನಕ್ಕೆ ತುಂಬಬಹುದು. ಆಗ ಅವು ನಮ್ಮ ಈಗಿನ ಕಾಲದ ಅನೇಕ ಬಗೆಯ ರೋಗಗಳು ಮತ್ತು ಅವುಗಳ ಕೆಡಕು ಪರಿಣಾಮಗಳಿಂದ ಪಾರಾಗಬಹುದು.

ಪ್ರಶ್ನೆ:—ಮಹಾಶಯರೆ, ಬಾಲ್ಯವಿವಾಹದ ವಿಚಾರವಾಗಿ ನಿಮ್ಮ ಅಭಿಪ್ರಾಯವೇನೆಂದು ಕೇಳಬಹುದೆ?

ಸ್ವಾಮಿಜಿ:—ಬಂಗಾಳದ ವಿದ್ಯಾವಂತರಲ್ಲಿ ಈ ರೀತಿ ಹುಡುಗರಿಗೆ ಬಹುಬೇಗ ಮದುವೆ ಮಾಡಿಬಿಡುವ ಪದ್ಧತಿ ಕ್ರಮೇಣ ಕಡಿಮೆ ಯಾಗುತ್ತಿದೆ. ಹುಡುಗಿಯರನ್ನು ಕೂಡ ಮುಂಚಿಗಿಂತ ಒಂದೆರಡು ವರ್ಷ ದೊಡ್ಡವರಾದ ಮೇಲೆ ಮದುವೆ ಮಾಡುತ್ತಾರೆ. ಆದರೆ ಬಲಾತ್ಕಾರದಿಂದ– ಹಣದ ಅಭಾವದಿಂದ– ಹೀಗೆ ಆಗುತ್ತಿದೆ. ಅದಕ್ಕೆ ಕಾರಣ ಏನು ಬೇಕಾದರೂ ಇರಲಿ, ಹುಡುಗಿಯ ಮದುವೆ ವಯಸ್ಸು ಈಗಿ ಗಿಂತ ತುಂಬಾ ಹೆಚ್ಚಬೇಕು. ಆದರೆ ಬಡತಂದೆ ಏನು ಮಾಡುವನು? ಹುಡುಗಿ ಕೊಂಚ ಬೆಳೆದರೆ ಸಾಕು ತಾಯಿಯಿಂದ ಹಿಡಿದು ಎಲ್ಲಾ ಬಂಧು ಬಳಗ ನೆರೆಹೊರೆಯ ಹೆಂಗಸರೂ ಒಬ್ಬ ವರನನ್ನು ಹುಡುಕಬೇಕೆಂದು ಯಜಮಾನನ್ನು ಕಾಡಿ ಕೊನೆಗೂ ಅವನು ಹಾಗೆ ಮಾಡುವವರೆಗೆ ಅವನನ್ನು ಸುಮ್ಮನೆ ಬಿಡುವುದಿಲ್ಲ. ಇನ್ನು ನಿಮ್ಮ ಕಪಟ ಪುರೋಹಿತರ ವಿಷಯ ಎಷ್ಟು ಕಡಿಮೆ ಹೇಳಿದರೆ ಅಷ್ಟುವಾಸಿ. ಈಗಿನ ಕಾಲದಲ್ಲಿ ಅವರ ಮಾತನ್ನಾರೂ ಕೇಳುವುದಿಲ್ಲ. ಆದರೂ ಅವರು ತಾವೇ ಆ ನಾಯಕಪಟ್ಟೆ ವನ್ನು ವಹಿಸುವರು. ಹನ್ನೆರಡು ವರ್ಷದ ಹುಡುಗಿಯೊಡನೆ ಮದುವೆ

ಯಾದರೆ ಜುಲ್ಮಾನೆಯಾಗುವುದೆಂದು ಗಂಡಸನ್ನು ಪ್ರತಿಬಂಧಿಸುವ "ವಯಸ್ಸಿನ ಒಪ್ಪಿಗೆಯ ಆಜ್ಞೆ"ಯನ್ನು ರಾಜರು ಹೊರಡಿಸಿದಾಗ ತಕ್ಷಣವೇ ಈ ನಿಮ್ಮ ಧರ್ಮದ ಮಾರ್ಗದರ್ಶಕರೆಲ್ಲಾ ಅದಕ್ಕೆ ವಿರೋಧ ವಾಗಿ ಅಬ್ಬರವನ್ನೆಬ್ಬಿಸಿ "ಅಯ್ಯೋ! ನಮ್ಮ ಧರ್ಮ ಹಾಳಾಯಿತು!" ಎಂದು ಕೂಗಾಡಿದರು. ಹನ್ನೆರಡು ಅಥವಾ ಹದಿಮೂರು ವರುಷದ ಹುಡುಗಿಯನ್ನು ತಾಯಾಗಿಮಾಡುವುದರಲ್ಲಿ ಧರ್ಮದಸಾರ ಹುದುಗಿ ಕೊಂಡಿರುವಂತೆ! ಅದಕ್ಕೇ ನಮ್ಮನ್ನಾಳುವವರೂ "ಎಂತಹ ವಿಚಿತ್ರ! ಇವರದ್ದು ಎಂತಹ ಧರ್ಮ!" ಎಂದು ಸಹಜವಾಗಿ ಯೋಚಿಸುವರು. ಇಂತಹ ಜನರು ರಾಜಕೀಯ ಚಳುವಳಿಯನ್ನು ನಡೆಸುವವರು ಮತ್ತು ರಾಜಕೀಯ ಹಕ್ಕುಗಳಿಗಾಗಿ ತಗಾದೆಮಾಡುವವರು!

ಪ್ರಶ್ನೆ:—ಹಾಗಾದರೆ ನಿಮ್ಮ ಅಭಿಪ್ರಾಯ ಗಂಡಸರು ಹೆಂಗಸರು ವಯಸ್ಸಾದಮೇಲೆ ಮದುವೆಯಾಗಬೇಕೆಂದೆ?

ಸ್ವಾಮಿಜಿ:—ನಿಸ್ಸಂದೇಹವಾಗಿ! ಆದರೆ ಅದರೊಡನೆಯೇ ವಿದ್ಯಾ ಭ್ಯಾಸವನ್ನೂ ಕೊಡಿಸಬೇಕು. ಇಲ್ಲದಿದ್ದಲ್ಲಿ ಅಕ್ರಮ ಭ್ರಷ್ಟತೆ ಎಲ್ಲಾ ತಲೆ ಹಾಕುವುವು. ವಿದ್ಯಾಭ್ಯಾಸವೆಂದರೆ ಈಗಿನ ಕಾಲದಲ್ಲಿರುವ ಪದ್ಧತಿಯಂತಲ್ಲ. ಅನುಷ್ಠಾನಯೋಗ್ಯವಾದ ಶಿಕ್ಷಣ ಕೊಡಿಸಬೇಕು. ಕೇವಲ ಪುಸ್ತಕ ಪಾಂಡಿತ್ಯ ಪ್ರಯೋಜನವಿಲ್ಲ. ಯಾವ ಬಗೆಯ ಶಿಕ್ಷಣದಿಂದ ಶೀಲರೂಪು ಗೊಳ್ಳುವುದೊ, ಮನಶ್ಶಕ್ತಿ ವೃದ್ಧಿಯಾಗುವುದೊ, ಬುದ್ಧಿ ವಿಕಾಸ ಗೊಳ್ಳುವುದೊ ಮತ್ತು ಯಾವುದರಿಂದ ನಮ್ಮ ಸ್ವಂತಕಾಲಮೇಲೆ ನಾವು ನಿಂತುಕೊಳ್ಳಬಲ್ಲೆವೊ ಅಂತಹ ಶಿಕ್ಷಣ ನಮಗೆ ಆವಶ್ಯಕ.

ಪ್ರಶ್ನೆ:—ನಮ್ಮ ಹೆಂಗಸರಿಗೆ ಅನೇಕ ಸುಧಾರಣೆಗಳು ಆವಶ್ಯಕ.

ಸ್ವಾಮಿಜಿ:—ಈ ಬಗೆಯ ಶಿಕ್ಷಣದಿಂದ ಹೆಂಗಸರು ತಮ್ಮ ಸಮಸ್ಯೆ ಗಳನ್ನು ತಾವೇ ಬಗೆಹರಿಸಿಕೊಳ್ಳುವರು. ಅವರು ಮೊದಲಿನಿಂದ ಕಡೆಯ ವರೆಗೂ ಕೇವಲ ಅಸಹಾಯತೆ ಇತರರನ್ನು ಯಾವಾಗಲೂ ನೆಚ್ಚಿಕೊಂಡಿರು ವುದರಲ್ಲಿ ನಿಪುಣರು. ಅದ್ದರಿಂದ ಒಂದು ಕೊಂಚ ಅಪಾಯ ಅಥವಾ ದುರ್ಘಟನೆಯೊದಗಿದರೆ ಸಾಕು ಚೆನ್ನಾಗಿ ಅಳುವುದೊಂದು ಬರುತ್ತದೆ. ಇತರ ವಿಷಯಗಳ ಜೊತಗೆ ಅವರು ಪರಾಕ್ರಮ ಶೌರ್ಯಯನ್ನು ಕಲಿಯ ಬೇಕು. ಈ ವರ್ತಮಾನ ಕಾಲದಲ್ಲಿ ಅವರು ಆತ್ಮರಕ್ಷಣೆಯ ಪಾಠವನ್ನೂ ಕಲಿಯುವುದು ಅತ್ಯಾವಶ್ಯಕವಾಗಿದೆ. ಝಾನ್ಸಿರಾಣಿ ಒಂದು ಹೊಸ

ಆದರ್ಶ. ನಮ್ಮ ಹೆಂಗಸರನ್ನು ಆ ರೀತಿ ತರಬೇತು ಮಾಡಲು ಬಹಳ ಕಾಲ ಹಿಡಿಸುವುದೆಂದೆನ್ನಿಸುವುದು.

ಸ್ವಾಮಿಜಿ:—ಹೇಗಾದರಾಗಲಿ, ನಾವು ಶಕ್ತಿಮೀರಿ ಪ್ರಯತ್ನಿಸಬೇಕು. ನಾವು ಅವರಿಗೆ ಕಲಿಸುವುದೊಂದೇ ಅಲ್ಲ. ನಾವೂ ಕಲಿತುಕೊಳ್ಳಬೇಕು. ಕೇವಲ ಮಕ್ಕಳನ್ನು ಹಟ್ಟಿಸಿದರೇ ತಂದೆಯಾಗುವುದಿಲ್ಲ. ನಮ್ಮ ಹೆಗಲ ಮೇಲೆ ಅತ್ಯಂತ ದೊಡ್ಡ ದೊಡ್ಡ ಜವಾಬ್ದಾರಿಗಳನ್ನು ತೆಗೆದುಕೊಳ್ಳಬೇಕಾಗುತ್ತದೆ. ಸ್ತ್ರೀ ವಿದ್ಯಾಭ್ಯಾಸ ಪ್ರಾರಂಭಿಸಬೇಕು–ನಮ್ಮ ಹಿಂದೂ ಸ್ತ್ರೀಯರಿಗೆ ಪಾತಿವ್ರತ್ಯ ಎಂದರೇನೆಂಬುದು ಚೆನ್ನಾಗಿ ಗೊತ್ತು. ಏಕೆಂದರೆ ಅದು ಅವರ ಪಿತ್ರಾರ್ಜಿತವಾಗಿ ಬಂದುದು. ಈಗ ಮೊಟ್ಟಮೊದಲು, ಅವರಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಈ ಧ್ಯೇಯವನ್ನು ಗಾಢವಾಗಿ ಬೇರೂರುವಂತೆ ಮಾಡಿ. ಇದರಿಂದ ಅವರು ಶುದ್ಧ ಚಾರಿತ್ರವನ್ನು ರೂಢಿಸಿಕೊಳ್ಳಬಹುದು. ಇದರ ಶಕ್ತಿಯಿಂದ ಅವರ ಜೀವನದ ಎಲ್ಲಾ ಹಂತಗಳಲ್ಲಿಯೂ, ಅವರು ಮದುವೆಯಾಗಿರಲಿ ಅಥವಾ ಏಕಾಂಗಿಯಾಗಿರಲಿಚ್ಛಿಸಿದರೆ ಹಾಗೂ ಆಗಲಿ. ಅವರು ತಮ್ಮ ಮಾನಕ್ಕೆ ಧಕ್ಕೆ ಬರುವ ಸಂದರ್ಭ ಬಂದಾಗ, ತಮ್ಮ ಪ್ರಾಣವನ್ನೇ ತ್ಯಾಗಮಾಡಲು ಕೊಂಚವೂ ಹಿಂಜರಿಯುವುದಿಲ್ಲ. ನಮ್ಮ ಧ್ಯೆಯಕ್ಕಾಗಿ ಅದಾವ ಧ್ಯೇಯವೇ ಇರಲಿ, ತಮ್ಮ ಸ್ವಂತ ಜೀವವನ್ನೇ ತ್ಯಾಗಮಾಡುವುದು ಎಂದರೆ ಕಡಿಮೆ ವೀರತ್ವವಾಯಿತೆ? ಈ ಯುಗದ ಆವಶ್ಯಕತೆಯನ್ನು ಸರಿಯಾಗಿ ವೀಕ್ಷಿಸಿದರೆ ಕೆಲವರನ್ನು ಈ ತ್ಯಾಗದ ಧ್ಯೇಯದಲ್ಲಿ ತರಬೇತು ಮಾಡುವುದು ಅನಿವಾರ್ಯವಾಗಿದೆ. ಅವರು ಆ ಜೀವ ಪರ್ಯಂತ ಕನ್ಯೆಯರಾಗೇ ಉಳಿಯುವ ವ್ರತ ತೊಡುವರು. ಪ್ರಾಚೀನ ಸಂಪ್ರದಾಯದಿಂದ ಅವರ ಜೀವರಕ್ತವಾಗಿ ಅಂತರ್ಗತವಾಗಿರುವ ಸತೀತ್ವದ ಶಕ್ತಿಯಿಂದ ಪ್ರಜ್ವಲಿಸುತ್ತಿರುವರು. ಅದರ ಜೊತೆಗೆ ಅವರಿಗೆ ವಿಜ್ಞಾನ ಶಿಕ್ಷಣ ಮುಂತಾದುವನ್ನೂ ಕೊಡಬೇಕು. ಇದರಿಂದ ಅವರಿಗೆ ಉಪಯೋಗವಾಗುವುದಲ್ಲದೆ ಇತರರಿಗೂ ಉಪಯುಕ್ತವಾಗುವುದು. ಇದನ್ನು ತಿಳಿಯುವುದರಿಂದ ಅವರು ಅವುಗಳನ್ನು ಕಲಿಯುವರು ಮತ್ತು ಅವನ್ನು ಮಾಡುವುದರಲ್ಲಿ ಆನಂದಿಸುವರು. ಇಂತಹ ಪವಿತ್ರಾತ್ಮರಾದ ಹಲವು ಬ್ರಹ್ಮಚಾರಿಗಳು, ಬ್ರಹ್ಮಚಾರಿಣಿಯರು ನಮ್ಮ ತಾಯ್ನಾಡಿನ ಕಲ್ಯಾಣಕ್ಕೆ ಈಗ ಅತ್ಯಾವಶ್ಯಕ.

ಪ್ರಶ್ನೆ:—ಇದು ಯಾವ ಬಗೆಯಿಂದ ದೇಶದ ಕಲ್ಯಾಣಕ್ಕೆ ಸಹಕಾರಿ

ಯಾಗುವುದು?

ಸ್ವಾಮಿಜಿ:— ಜನಾಂಗದ ಧ್ಯೇಯವನ್ನು ತಮ್ಮ ನಿದರ್ಶನದಿಂದಲೂ ಪರಿಶ್ರಮದಿಂದಲೂ ಜನರೆದುರಿಗೆ ಇಟ್ಟರೆ ಭಾವಕ್ರಾಂತಿಯುಂಟಾಗುವುದು. ಈಗ ವಸ್ತುಸ್ಥಿತಿ ಹೇಗಿದೆ? ತಾಯ್ತಂದೆಗಳು ಮಗಳಿಗೆ ಒಂಭತ್ತು ವರ್ಷವಾಗಿರಲಿ, ಹತ್ತಾಗಿರಲಿ, ಹೇಗಾದರೂ ಮದುವೆಮಾಡಿ ದಾಟಿಸಬೇಕು! ಅವಳಿಗೆ ಹದಿಮೂರನೆ ವರ್ಷದಲ್ಲೇ ಒಂದು ಮಗುವೂ ಆಗಿ ಬಿಟ್ಟರೆ ಆ ಇಡೀ ಸಂಸಾರದವರ ಆನಂದಕ್ಕೆ ಪಾರವೇ ಇಲ್ಲ! ಈ ಬಗೆಯ ಅಭಿಪ್ರಾಯಗಳೆಲ್ಲ ತಲೆಕೆಳಗಾದರೆ ನಮ್ಮ ಪೂರ್ವದ ಶ್ರದ್ಧೆ ಪುನಃ ಬರುವುದೆಂದು ಕೊಂಚ ಭರವಸೆ ಇದೆ. ಮೇಲೆ ಹೇಳಿದ ಬ್ರಹ್ಮಚರ್ಯ ಸಾಧನೆ ಮಾಡುವವರ ವಿಚಾರವನ್ನಂತೂ ಹೇಳಬೇಕಾದ್ದೆ ಇಲ್ಲ. ಅವರಿಗೆ ತಮ್ಮಲ್ಲೇ ಎಷ್ಟು ಶ್ರದ್ಧೆ ನಂಬಿಕೆಯಿರುವುದೆಂಬುದನ್ನು ಯೋಚಿಸು. ಅವರು ಶ್ರೇಯಸ್ಸಿಗೆ ಎಂತಹ ಶಕ್ತಿಯಾಗುವರು?

ಪ್ರಶ್ನಿಸಿದವನು ಸ್ವಾಮಿಜಿಗೆ ಪ್ರಣಾಮಮಾಡಿ ಹೊರಡಲು ಸಿದ್ಧನಾದನು. ಸ್ವಾಮಿಜಿ ಅವನನ್ನು ಆಗಾಗ್ಗೆ ಬರುವಂತೆ ಹೇಳಿದರು. "ನಿಸ್ಸಂದೇಹವಾಗಿ ಬರುವೆ, ಮಹಾಶಯ" ಎಂದು ಆತನು ಹೇಳಿ "ನನಗೆ ತುಂಬಾ ಸಹಾಯವಾಯಿತು. ಮತ್ತೆಲ್ಲಿಯೂ ಹಿಂದೆ ನಾನು ಕೇಳದೇ ಇದ್ದ ಅನೇಕ ಹೊಸ ವಿಷಯಗಳನ್ನೆಲ್ಲಾ ನಾನು ನಿಮ್ಮಿಂದ ಕೇಳಿದೆ" ಎಂದನು. ಆಗ ಊಟದವೇಳೆಯಾಗಿದ್ದುದರಿಂದ ನಾನೂ ಮನೆಗೆ ಹೋದೆ.

೪

**ವರ್ಷ: ಕ್ರಿ. ಶ. ೧೮೯೮ ನೇ ಜನವರಿ ೨೪**

ಮಧ್ಯಾಹ್ನ ಸ್ವಾಮಿಜಿಯನ್ನು ನೋಡಲು ನಾನು ಪುನಃ ಹೋದೆ. ಅವರ ಸುತ್ತಲೂ ಸುಮಾರು ಮಂದಿ ನೆರೆದಿದ್ದರು. ಶ್ರೀ ಚೈತನ್ಯರ ಅನುಯಾಯಿಗಳಲ್ಲಿ ರೂಢಿಯಲ್ಲಿರುವ ಮಧುರಭಾವ ಅಥವಾ ಭಗವಂತನನ್ನು ಪತಿಯಂತೆ ಭಾವಿಸಿ ಪೂಜಿಸುವ ವಿಷಯವನ್ನು ಕುರಿತು ಮಾತನಾಡುತ್ತಿದ್ದರು. ಅವರು ಆಗಾಗ್ಗೆ ಮಾಡುತ್ತಿದ್ದ ಶಬ್ದದಿಂದ ನಗುವಿನ ಲಹರಿ ಏಳುತ್ತಿತ್ತು. ಯಾರೋ ಟೀಕಿಸಿದರು: "ಭಗವಂತನ ಕಾರ್ಯಗಳನ್ನು ಕುರಿತು ಇಷ್ಟೊಂದು ತಮಾಷೆ ಮಾಡಲು ಏನಿದೆ? ಹಾಗಾದರೆ ಅವನೊಬ್ಬ ದೊಡ್ಡ ಮಹಾತ್ಮನಲ್ಲ.

ಜಗತ್ಕಲ್ಯಾಣಕ್ಕೆ ಅವನೇನೂ ಮಾಡಲಿಲ್ಲವೆಂದು ತಿಳಿದಿರುವಿರೇನು? ''

ಸ್ವಾಮಿಜಿ:—ಯಾರದು! ಹಾಗಾದರೆ, ಪ್ರಿಯ ಮಹಾಶಯ, ನಿಮ್ಮನ್ನು ತಮಾಷೆಮಾಡಲೇನು! ನೀವು ಕೇವಲ ತಮಾಷೆಯನ್ನು ನೋಡುವಿರಿ ಹೌದೇನು? ಮಹಾಶಯ, ಶ್ರೀ ಚೈತನ್ಯರ ಕಾಮಕಾಂಚನ ತ್ಯಾಗದ ಪ್ರಜ್ವಲಿಸುವ ಆದರ್ಶದಲ್ಲಿ ನನ್ನ ಜೀವನವನ್ನು ರೂಪಿಸಿಕೊಳ್ಳ ಬೇಕೆಂದು ನಾನು ಅನುಭವಿಸಿದ ನನ್ನ ಜೀವಾವಧಿಯ ಹೋರಾಟವನ್ನು ನೀವು ಗಮನಿಸುವುದಿಲ್ಲ. ಈ ಧ್ಯೇಯವನ್ನು ಜನ ಸಮುದಾಯದಲ್ಲಿ ಎರೆಯಲು ನಾನು ಪಟ್ಟ ಪರಿಶ್ರಮವನ್ನೂ ಎಣಿಸುವುದಿಲ್ಲ! ಶ್ರೀ ಚೈತನ್ಯರು ಪ್ರಚಂಡ ತ್ಯಾಗಮೂರ್ತಿಗಳು. ಹೆಂಗಸು ಮತ್ತು ಇಂದ್ರಿಯ ಸುಖದ ಅಪೇಕ್ಷೆ ಅವರಿಗೆ ಲವಲೇಶವೂ ಇರಲಿಲ್ಲ. ಆದರೆ ಕಾಲಕ್ರಮೇಣ ಅವರ ಶಿಷ್ಯರು ಸ್ತ್ರೀಯರನ್ನು ತಮ್ಮ ಪಂಥಕ್ಕೆ ಸೇರಲು ಎಡೆಗೊಟ್ಟು ತಾರತಮ್ಯ ಭಾವನೆಯಿಲ್ಲದೆ ದೇವರ ಹೆಸರಿನಲ್ಲಿ ಅವರೊಡನೆ ಕಲೆತು ಎಲ್ಲವನ್ನೂ ಸಂಪೂರ್ಣವಾಗಿ ಹೊಲಸುಮಾಡಿ ಅವ್ಯವಸ್ಥೆಮಾಡಿದರು. ಭಗವಂತನು ತನ್ನ ಜೀವನವನ್ನೇ ದೃಷ್ಟಾಂತವಾಗಿ ತೋರಿದ ಆ ಆದರ್ಶಪ್ರೇಮ ಸಂಪೂರ್ಣವಾಗಿ ಸ್ವಾರ್ಥರಹಿತವಾದುದು. ಇಂದ್ರಿಯಾಸಕ್ತಿ ಲೇಶ ಮಾತ್ರವೂ ಇಲ್ಲ. ಕಾಮರಹಿತವಾದ ಆ ಪ್ರೇಮ ಎಂದಿಗೂ ಜನಸಾಮಾನ್ಯರ ಸ್ವತ್ತಾಗಲಾರದು. ಅನಂತರ ಬಂದ ವೈಷ್ಣವಗುರುಗಳು ತಮ್ಮ ಗುರುದೇವನ ಜೀವನದ ತ್ಯಾಗ ದೃಷ್ಟಿಯನ್ನು ಎತ್ತಿಹಿಡಿದು ಮೊದಲು ಅದಕ್ಕೆ ಪ್ರತ್ಯೇಕವಾದ ಮಹತ್ವವನ್ನು ಕೊಡುವ ಬದಲು ಆತನ ಪ್ರೇಮಾದರ್ಶವನ್ನು ಜನ ಸಮುದಾಯದಲ್ಲಿ ತುಂಬಲು ಉಪದೇಶಿಸಲು ತಮ್ಮ ಉತ್ಸಾಹವನ್ನೆಲ್ಲಾ ನಿಯೋಗಿಸಿದರು. ಪರಿಣಾಮವಾಗಿ ಜನಸಾಮಾನ್ಯರು ಈ ದೈವೀಪ್ರೇಮದ ಉಚ್ಚ ಆದರ್ಶವನ್ನು ರಕ್ತಗತಮಾಡಿಕೊಂಡು ಗ್ರಹಿಸಲಾರದೇ ಹೋದರು. ಸ್ವಾಭಾವಿಕವಾಗಿ ಅದನ್ನು ಸ್ತ್ರೀ ಪುರುಷರ ಮಧ್ಯೆ ಇರುವ ಅತ್ಯಂತ ಕೀಳತರದ ಪ್ರೇಮವಾಗಿ ಮಾರ್ಪಡಿಸಿದರು.

ಪ್ರಶ್ನೆ:—ಆದರೆ, ಮಹಾಶಯ, ಶ್ರೀ ಚೈತನ್ಯರು ಹರಿನಾಮವನ್ನು ಎಲ್ಲರಿಗೂ ಚಂಡಾಲರಿಗೂ ಕೂಡ ಬೋಧಿಸಿದರು. ಹೀಗಿದ್ದ ಪಕ್ಷಕ್ಕೆ ಜನ ಸಾಮಾನ್ಯರಿಗೂ ಇದನ್ನು ಹೊಂದಲು ಏಕೆ ಹಕ್ಕಿರಬಾರದು?

ಸ್ವಾಮಿಜಿ:—ನಾನು ಅವರ ಉಪದೇಶದ ವಿಚಾರ ಮಾತನಾಡುತ್ತಿಲ್ಲ. ಅವರ ಪ್ರೇಮದ ಉಚ್ಚ ಆದರ್ಶವನ್ನು–ಯಾವ ರಾಧಾ ಪ್ರೇಮದಲ್ಲಿ

ಹಗಲೂ ರಾತ್ರಿ ತಮ್ಮ ವ್ಯಕ್ತಿತ್ವವನ್ನೆಲ್ಲಾ ಲೀನಮಾಡಿ ಸಂಪೂರ್ಣವಾಗಿ ತನ್ಮಯರಾಗುತ್ತಿದ್ದರೋ ಅಂತಹ ಉಚ್ಚವಾದ ಆದರ್ಶ ಪ್ರೇಮವನ್ನು ಕುರಿತು ಮಾತನಾಡುತ್ತಿದ್ದೇನೆ.

ಪ್ರಶ್ನೆ :—ಏಕೆ ಅದನ್ನು ಎಲ್ಲರ ಸ್ವತ್ತನ್ನಾಗಿ ಮಾಡಬಾರದು ?

ಸ್ವಾಮಿಜಿ :—ನಮ್ಮ ಜನಾಂಗವನ್ನು ನೋಡು. ಆ ಪ್ರಯತ್ನದ ಪರಿಣಾಮ ಏನಾಗಿದೆ ಎಂಬುದನ್ನು ನೋಡು. ಆ ಪ್ರೇಮ ಪ್ರಸಾರದ ಬೋಧನೆಯಿಂದ ಇಡೀ ಜನಾಂಗವೇ ಸ್ತ್ರೀಲಂಪಟವಾಗಿದೆ–ಸ್ತ್ರೀಜಾತಿ ಯಾಗಿದೆ! ಇಡೀ ಒರಿಸ್ಸಾದೇಶವೇ ಹೇಡಿಗಳ ದೇಶವಾಗಿ ಮಾರ್ಪಟ್ಟಿದೆ. ಬಂಗಾಳ ರಾಧಾಪ್ರೇಮವನ್ನು ನಾನೂರು ವರ್ಷಗಳಿಂದಲೂ ಅನುಸರಿಸಿ ಈಗ ತನ್ನ ಪುರುಷತ್ವದ ಪರಿಜ್ಞಾನವನ್ನೇ ಸಂಪೂರ್ಣವಾಗಿ ಕಳೆದುಕೊಂಡಿದೆ! ಜನ ಕೇವಲ ಅಳುವುದರಲ್ಲಿ, ಪ್ರಲಾಪಿಸುವುದರಲ್ಲಿ ಬಹು ಜಾಣರಾಗಿದ್ದಾರೆ. ಅದೇ ಅವರ ಜನಾಂಗದ ವೈಶಿಷ್ಟ್ಯವಾಗಿ ಬಿಟ್ಟಿದೆ. ಅವರ ಸಾಹಿತ್ಯವನ್ನು ನೋಡಿ, ಜನಾಂಗದ ವಿಚಾರ ಶಕ್ತಿ ಉದ್ದೇಶಗಳ ಖಂಡಿತವಾದ ಸಂಕೇತವದು. ಏಕೆ, ಈ ನಾನೂರುವರ್ಷ ಗಳ ಬಂಗಾಳಿ ಸಾಹಿತ್ಯದ ಹಾಡಿನ ಪಲ್ಲವಿಗಳು ಅದೇ ಬಗೆಯ ರೋದನ ಗೋಳಿನ ಧ್ವನಿಯಿಂದ ಉದ್ರಿಕ್ತವಾಗಿದೆ. ನಿಜವಾದ ವೀರಸ್ಫೂರ್ತಿಯನ್ನು ಪ್ರಚೋದಿಸುವ ಕಾವ್ಯಕ್ಕೆ ಜನ್ಮ ಕೊಡುವುದರಲ್ಲಿ ಅದು ಪೂರ್ಣವಾಗಿ ಸೋತಿದೆ.

ಪ್ರಶ್ನೆ:—ಹಾಗಾದರೆ ನಿಜವಾಗಿ ಆ ಪ್ರೇಮವನ್ನು ಹೊಂದಲು ಅರ್ಹತೆಯುಳ್ಳವರಾರು ?

ಸ್ವಾಮಿಜಿ:—ಎಲ್ಲಿಯವರೆಗೆ ಹೃದಯದಲ್ಲಿ ಕಾಮವಿರುವುದೊ, ಕಾಮದ ಲವಲೇಶವಾದರೂ ಇರುವುದೊ ಅಲ್ಲಿಯವರೆಗೂ ಈ ಪ್ರೇಮ ವಿರುವುದಿಲ್ಲ. ಯಾರು ಮಹಾತ್ಯಾಗಿಗಳೊ, ಮನುಷ್ಯರಲ್ಲಿ ಪ್ರಚಂಡ ಪುರುಷರೊ, ಅಂತಹವರಿಗೆ ಮಾತ್ರ ಈ ದೈವೀ ಪ್ರೇಮಕ್ಕೆ ಹಕ್ಕಿದೆ. ಜನ ಸಮುದಾಯಕ್ಕೆ ಈ ಉಚ್ಚಪ್ರೇಮದ ಆದರ್ಶವನ್ನು ಎತ್ತಿ ಹಿಡಿದರೆ ಅದು ಪರೋಕ್ಷವಾಗಿ ಮನುಷ್ಯರ ಹೃದಯದಲ್ಲಿ ಪ್ರಬಲವಾದ ಪ್ರಾಪಂಚಿಕ ಅನುಕರಣೆಯನ್ನೇ ಉದ್ದೀಪನಗೊಳಿಸುವುದು. ಏಕೆಂದರೆ ನಮ್ಮನ್ನು ಭಗವಂತನ ಪತ್ನಿ ಅಥವಾ ಪ್ರಿಯತಮಳೆಂದು ಯೋಚಿಸುತ್ತಾ ಆತನ ಪ್ರೇಮವನ್ನು ಕುರಿತು ಧ್ಯಾನಮಾಡುವಾಗ ಸಹಜವಾಗಿ ಮನಸ್ಸು

ಮುಕ್ಕಾಲುಪಾಲು ಹೊತ್ತಿಲ್ಲಾ ತನ್ನ ಸ್ವಂತ ಹೆಂಡತಿಯ ವಿಚಾರ ಯೋಚಿಸುವಂತಾಗುವುದು – ಪರಿಣಾಮ ಹೇಳಬೇಕಾದ್ದೆ ಇಲ್ಲ.

ಪ್ರಶ್ನೆ :—ಹಾಗಾದರೆ ಗೃಹಸ್ಥರು ದೇವರನ್ನು ಪ್ರೇಮದ ಹಾದಿಯಲ್ಲಿ ಪತಿ ಅಥವಾ ಪ್ರಿಯತಮನೆಂದೂ ಪೂಜಿಸಿ ತಮ್ಮನ್ನು ಆತನ ಸತಿಯಂತೆ ಭಾವಿಸಿ ಭಗವತ್ಸಾಕ್ಷಾತ್ಕಾರ ಪಡೆಯುವುದು ಅಸಾಧ್ಯವೆ ?

ಸ್ವಾಮಿಜಿ :—ಎಲ್ಲೋ ಕೆಲವರು ವಿನಃ ಸಾಮಾನ್ಯ ಗೃಹಸ್ಥರಿಗೆ ನಿಸ್ಸಂದೇಹವಾಗಿ ಇದು ಅಸಾಧ್ಯ. ಮತ್ತೆ, ಎಲ್ಲಕ್ಕಿಂತ ಹೆಚ್ಚಾಗಿ ಈ ಸೂಕ್ಷ್ಮವಾದ ಹಾದಿಗೇಕೆ ಇಷ್ಟೊಂದು ಪ್ರಾಮುಖ್ಯತೆ ಕೊಡಬೇಕು ? ಈ ಮಧುರ ಭಾವದ ಪ್ರೇಮಾದರ್ಶವನ್ನು ಹೊರತು ದೇವರನ್ನು ಪೂಜಿಸಲು ಮತ್ತಾವ ಬಾಂಧವ್ಯವೂ ಇಲ್ಲವೇನು ? ಇತರ ನಾಲ್ಕು ಮಾರ್ಗಗಳನ್ನೇಕೆ ಅವಲಂಬಿಸಿ ಹೃತ್ಪೂರ್ವಕವಾಗಿ ಭಗವನ್ನಾಮವನ್ನು ಸ್ಮರಿಸಬಾರದು? ಮೊದಲು ನಿಮ್ಮ ಹೃದಯ ತೆರೆಯಲಿ. ಮಿಕ್ಕೆಲ್ಲವೂ ತಮ್ಮಷ್ಟಕ್ಕೆ ತಾವೇ ಹಿಂಬಾಲಿಸುವುವು. ಆದರೆ ಇದೊಂದನ್ನು ಮಾತ್ರ ಖಂಡಿತವಾಗಿ ತಿಳಿ. ಎಲ್ಲಿಯವರೆಗೆ ಕಾಮವಿರುವುದೊ ಅಲ್ಲಿಯವರೆಗೂ ಪ್ರೇಮವಿಲ್ಲ. ಮೊದಲು ಏಕೆ ಕಾಮಾಸಕ್ತಿಗಳನ್ನು ತೊರೆಯಲು ಪ್ರಯತ್ನಿಸಬಾರದು ? ನೀವು "ಅದು ಹೇಗೆ ಸಾಧ್ಯ – ನಾನೊಬ್ಬ ಗೃಹಸ್ಥ" ಎಂದು ಹೇಳುವಿರಿ. ಅಸಂಬದ್ಧತೆ ! ಗೃಹಸ್ಥನಾದ ಮಾತ್ರಕ್ಕೆ ವಿಷಯ ಭೋಗದ ಮೂರ್ತಿಮತ್ತಾಗಿರಬೇಕೇನು ಅಥವಾ ಆ ಜೀವಪರ್ಯಂತ ದೇಹಸಂಬಂಧವನ್ನಿಟ್ಟುಕೊಂಡು ಜೀವಿಸಬೇಕೇನು ? ಕಟ್ಟಕಡೆಗೆ ಗಂಡಸು ಈ ಮಧುರ ಭಾವಸಾಧನೆಗಾಗಿ ತಾನು ಒಬ್ಬ ಹೆಂಗಸಾಗುವುದು ಎಷ್ಟು ಅನುಚಿತ !

ಪ್ರಶ್ನೆ :—ನಿಜ, ಸ್ವಾಮಿಜಿ, ಭಗವಂತನ ನಾಮ ಸಂಕೀರ್ತನೆ ತುಂಬಾ ಸಹಾಯ ಮಾಡುತ್ತದೆ. ಮನಸ್ಸಿನಲ್ಲಿ ಹರ್ಷಭಾವನೆ ಮೂಡುತ್ತದೆ. ನಮ್ಮ ಪುರಾಣಗಳೂ ಹೀಗೆ ಹೇಳುತ್ತವೆ. ಶ್ರೀ ಚೈತನ್ಯ ದೇವನೂ ಜನಸಮುದಾಯಕ್ಕೆ ಇದನ್ನೇ ಬೋಧಿಸಿದ್ದು. ಮೃದಂಗ ಬಾರಿಸುತ್ತಿದ್ದಾಗ ಉಲ್ಲಾಸವಾಗಿ ಎಲ್ಲಿಗೋ ಹೋದಂತೆ ಭಾಸವಾಗಿ ಕುಣಿಯುವ ಹಾಗಾಗುತ್ತದೆ.

ಸ್ವಾಮಿಜಿ :—ಅದು ಸರಿ. ಆದರೆ ಕೀರ್ತನೆ ಎಂದರೆ ಬರೀ ಕುಣಿತವೇ ಎಂದು ಯೋಚಿಸಬೇಡ. ನಿನಗಿಷ್ಟಬಂದರೀತಿಯಲ್ಲಿ ದೇವರ ಮಹಿಮೆಯನ್ನು ಹಾಡುವುದು ಎಂದರ್ಥ. ಈ ರೀತಿ ಪ್ರಚಂಡವಾಗಿ ಭಾವೋದ್ರೇಕ

ವನ್ನುಂಟುಮಾಡುವ ಭಾವನೆ ಮತ್ತು ವೈಷ್ಣವರ ಕುಣಿತ ಇವೆಲ್ಲಾ ಒಳ್ಳೆಯದು ಮತ್ತು ಮನಸ್ಸಿಗೆ ಹಿಡಿಸುವಂಥದು ನಿಜ. ಆದರೆ ಇದರ ಸಾಧನೆಯಿಂದ ಉಂಟಾಗುವ ಅಪಾಯದಿಂದಲೂ ನೀವು ಪಾರಾಗಬೇಕು. ಅಪಾಯ ಇಲ್ಲ, ಇದರ ಪ್ರತಿಕ್ರಿಯೆ ಇದೆ. ಒಂದು ಕಡೆ ಮನಸ್ಸು ಇದ್ದಕ್ಕಿದ್ದಂತೆ ಅತ್ಯುಚ್ಚ ಮಟ್ಟಕ್ಕೆ ಏರುವುದು, ಕಣ್ಣಿನಿಂದ ಕಂಬನಿಯ ಪ್ರವಾಹವೇ ಹರಿಯುವುದು. ತನ್ಮಯಾವಸ್ಥೆಯಲ್ಲಿರುವಂತೆ ತಲೆ ತೂಗಾಡುವುದು. – ಮತ್ತೊಂದು ಕಡೆ ಸಂಕೀರ್ತನ ಮುಕ್ತಾಯವಾದೊಡನೆಯೇ ಈ ಭಾವನೆಗಳ ಸಮುದಾಯ ಅದು ಎಷ್ಟು ಮೇಲಕ್ಕೆ ಹೋಗಿತ್ತೋ ಅಷ್ಟೇ ರಭಸದಿಂದ ಕುಗ್ಗುವುದು, ಸಾಗರದಲ್ಲಿ ಅಲೆ ಎಷ್ಟು ಎತ್ತರಕ್ಕೆ ಹೋಗುವುದೊ ಅಷ್ಟೇ ವೇಗವಾಗಿ ಕೆಳಕ್ಕೂ ಬೀಳುವುದು. ಈ ಪ್ರತಿಕ್ರಿಯೆಯನ್ನು ಎದುರಿಸಿ ನಮ್ಮನ್ನು ನಾವು ತಡೆದುಕೊಳ್ಳುವುದು ಈ ಅವಸ್ಥೆಯಲ್ಲಿ ತುಂಬಾ ಕಷ್ಟ. ಯೋಗ್ಯವಾದ ವಿವೇಕ ಜ್ಞಾನವಿಲ್ಲದಿದ್ದಲ್ಲಿ ಸಹಜವಾಗಿ ಕಾಮ ಮೊದಲಾದ ಕೀಳು ಪ್ರವೃತ್ತಿಗಳಿಗೆ ವಶರಾಗುವೆವು. ನಾನು ಅಮೆರಿಕಾದಲ್ಲಿ ಕೂಡ ಈ ಸ್ಥಿತಿಯನ್ನು ನೋಡಿರುವೆನು. ಅನೇಕರು ಚರ್ಚಿಗೆ ಹೋಗಿ ತುಂಬಾ ಭಕ್ತಿಯಿಂದ ಪ್ರಾರ್ಥಿಸಿ ಉದಾತ್ತಭಾವದಿಂದ ಹಾಡುವರು. ಧರ್ಮೋಪದೇಶವನ್ನು ಕೇಳುವಾಗ ನಿರರ್ಗಳವಾಗಿ ಕಣ್ಣೀರನ್ನೂ ಸುರಿಸುವರು. ಆದರೆ ಚರ್ಚಿನಿಂದೀಚೆಗೆ ಬಂದಮೇಲೆ ಅವರಲ್ಲಿ ದೊಡ್ಡ ಪ್ರತಿಕ್ರಿಯೆಯುಂಟಾಗಿ ಕಾಮ ಪ್ರವೃತ್ತಿಗೆ ವಶರಾಗುವರು.

ಪ್ರಶ್ನೆ:—ಹಾಗಾದರೆ, ಮಹಾಶಯ, ಶ್ರೀ ಕೃಷ್ಣ ಚೈತನ್ಯರು ಉಪದೇಶಿಸಿದ ಯಾವ ಉದ್ದೇಶಗಳು ನಮಗೆ ಸೂಕ್ತವಾಗಿವೆ ಎಂದು ನಮಗೆ ಸಲಹೆ ಕೊಡಿ. ಇದರಿಂದ ನಾವು ತಪ್ಪು ಹೆಜ್ಜೆ ಇಡದಂತಾಗುವುದು.

ಸ್ವಾಮಿಜಿ.—ಜ್ಞಾನದಿಂದ ಹದವಾದ ಭಕ್ತಿಯಿಂದ ದೇವರನ್ನು ಪೂಜಿಸಿ. ಭಕ್ತಿಯೊಡನೆ ವಿಚಾರಜ್ಞಾನವನ್ನೂ ಹೊಂದಿ. ಇದರ ಜೊತೆಗೆ ಶ್ರೀ ಚೈತನ್ಯರಿಂದ ಅವರ ಹೃದಯ, ಎಲ್ಲಾ ಜೀವಿಗಳ ಮೇಲೂ ಅವರಿಗಿದ್ದ ಪ್ರೇಮದುಂಬಿದ ಕರುಣೆ, ದೇವರಿಗಾಗಿ ಅವರಲ್ಲಿ ಪ್ರಜ್ವಲಿಸುತ್ತಿದ್ದ ಉತ್ಸಾಹ ಇವನ್ನು ತೆಗೆದುಕೊಳ್ಳಿ. ಅವರ ತ್ಯಾಗವೇ ನಿಮ್ಮ ಜೀವಿತದ ಧ್ಯೇಯವಾಗಿರಲಿ.

ಪ್ರಶ್ನಿಸಿದವನು ಈಗ ಸ್ವಾಮಿಜಿಗೆ ಕೈ ಜೋಡಿಸಿ ಹೇಳಿದನು: "ಮಹಾಶಯ, ನಾನು ನಿಮ್ಮ ಕ್ಷಮಾಪಣೆ ಕೇಳುತ್ತಿರುವೆ. ನೀವು ಹೇಳು

ವುದು ಸರಿ ಎಂದು ಈಗ ನನಗೆ ಅರ್ಥವಾಯಿತು. ವೈಷ್ಣವರ ಮಧುರ ಭಾವದ ಪ್ರೇಮವನ್ನು ತಮಾಷೆಯಾಗಿ ನೀವು ಟೀಕಿಸುತ್ತಿದ್ದುದನ್ನು ನೋಡಿ ನನಗೆ ಮೊದಲು ನಿಮ್ಮ ಹೇಳಿಕೆಯ ರೀತಿ ಅರ್ಥವಾಗಲಿಲ್ಲ. ಆದ್ದರಿಂದಲೇ ನಾನು ಆಕ್ಷೇಪಣೆ ತೆಗೆದೆ.''

ಸ್ವಾಮಿಜಿ:—ಸರಿ, ಇಲ್ಲಿ ನೋಡು, ನಾವು ಟೀಕಿಸಬೇಕಾಗಿ ಬಂದರೆ ದೇವರನ್ನು, ದೇವತಾ ಮನುಷ್ಯರನ್ನು ಟೀಕಿಸುವುದು ಒಳ್ಳೆಯದು. ನೀನು ನನ್ನನ್ನು ನಿಂದಿಸಿದರೆ ಸಹಜವಾಗಿ ನಾನು ನಿನ್ನಮೇಲೆ ಕೋಪ ಗೊಳ್ಳುವೆ. ನಾನು ನಿನ್ನನ್ನು ಬೈದರೆ ನೀನೂ ಪ್ರತೀಕಾರ ಮಾಡಲಿಚ್ಛಿಸುವೆ. ಅಲ್ಲವೆ? ಆದರೆ ದೇವರು ದೇವತಾಮನುಷ್ಯರು ಎಂದಿಗೂ ಕೇಡಿಗೆ ಕೇಡನ್ನು ಕೊಡುವುದಿಲ್ಲ.

ಆ ಸಭ್ಯಗೃಹಸ್ಥ ಸ್ವಾಮಿಜಿ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಹೊರಟುಹೋದನು. ಸ್ವಾಮಿಜಿ ಕಲ್ಕತ್ತೆಯಲ್ಲಿ ವಾಸಿಸುತ್ತಿದ್ದಾಗ ಹೀಗೆ ಜನರ ಗುಂಪು ಸೇರುವುದು ನಿತ್ಯದ ರೂಢಿಯಾಗಿತ್ತು ಎಂದು ನಾನು ಮೊದಲೇ ಹೇಳಿದ್ದೆ. ಬೆಳಗಿನ ಜಾವದಿಂದ ಹಿಡಿದು ರಾತ್ರೆ ಎಂಟುಗಂಟೆವರೆಗೂ ದಿನದ ಪ್ರತಿಗಂಟೆಯೂ ಜನರು ಅವರನ್ನು ಮುತ್ತಿರುತ್ತಿದ್ದರು. ಇದರಿಂದ ಅವರ ಊಟದ ವೇಳೆ ಸಹಜವಾಗಿ ತುಂಬಾ ಅಸ್ತವ್ಯಸ್ತವಾಯಿತು. ಅನೇಕರು ಈ ಸ್ಥಿತಿಯನ್ನು ತಪ್ಪಿಸಲು ಇಚ್ಛಿಸಿ ಸ್ವಾಮಿಜಿಯನ್ನು ಕೆಲವು ನಿರ್ದಿಷ್ಟ ಗಂಟೆಗಳ ಹೊರತು ಇತರ ವೇಳೆಯಲ್ಲಿ ಮಾತನಾಡಬಾರದೆಂದು ಒತ್ತಿ ಹೇಳಿದರು. ಆದರೆ ಪ್ರೇಮ ಹೃದಯರಾದ ಸ್ವಾಮಿಜಿ ಇತರರ ಸಹಾಯಕ್ಕೆ ಏನುಬೇಕಾದರೂ ಮಾಡಲು ಸಿದ್ಧರಾಗಿದ್ದವರು ಜನರಲ್ಲಿ ಧರ್ಮಕ್ಕಾಗಿ ಇಷ್ಟೊಂದು ತೃಷೆ ಇರುವುದನ್ನು ನೋಡಿ ದಯೆಯಿಂದ ಕರಗಿಹೋಗುತ್ತಿದ್ದರು. ಅವರು ಅನಾರೋಗ್ಯದಿಂದಿದ್ದರೂ ಕೂಡ ಈ ಬಗೆಯ ಯಾವ ಬೇಡಿಕೆಗಳಿಗೂ ಒಪ್ಪಲಿಲ್ಲ. ''ಅವರು ತಮ್ಮ ಮನೆಯಿಂದ ಅಷ್ಟುದೂರ ಇಲ್ಲಿಗೆ ಅಷ್ಟೊಂದು ಶ್ರಮ ಪಟ್ಟು ಬರುತ್ತಾರೆ. ನನ್ನ ದೇಹಸ್ಥಿತಿ ಕೊಂಚ ಕೆಡುವುದೆಂದು ನಾನು ಸುಮ್ಮನೆ ಇಲ್ಲಿ ಕುಳಿತು ಅವರೊಡನೆ ಕೊಂಚವೂ ಮಾತನಾಡದೆ ಇರಲೇನು?'' ಎಂದು ಉತ್ತರ ಕೊಡುತ್ತಿದ್ದರು.

ನಾಲ್ಕು ಘಂಟೆ ಹೊತ್ತಿಗೆ ಮಾತುಕತೆಗಳು ಮುಕ್ತಾಯಗೊಂಡುವು. ಎಲ್ಲೋ ಕೆಲವು ಮಂದಿ ಸಭ್ಯ ಗೃಹಸ್ಥರು ವಿನಃ ಜನಸಮೂಹವೆಲ್ಲಾ

ಚದುರಿತು. ಸ್ವಾಮಿಜಿ ಅವರೊಡನೆ ಇಂಗ್ಲೆಂಡ್ ಅಮೆರಿಕಾ ಮುಂತಾದ ಅನೇಕ ವಿಷಯಗಳನ್ನು ಕುರಿತು ಮಾತನಾಡಿದರು. ಸಂಭಾಷಣೆಯ ನಡುವೆ ಸ್ವಾಮಿಜಿ "ನಾನು ಇಂಗ್ಲೆಂಡಿನಿಂದ ಕಡಲ ಪ್ರಯಾಣದಲ್ಲಿ ಹಿಂತಿರುಗಿ ಬರುವಾಗ ಒಂದು ವಿಸ್ಮಯಕರವಾದ ಸ್ವಪ್ನವನ್ನು ಕಂಡೆ. ನಮ್ಮ ಹಡಗು ಮೆಡಿಟರೇನಿಯನ್ ಸಮುದ್ರವನ್ನು ಹಾಯುತ್ತಿರುವಾಗ, ನನ್ನ ನಿದ್ರೆಯಲ್ಲಿ ಒಬ್ಬ ವೃದ್ಧ ಪೂಜ್ಯ, ನೋಡಲು ಋಷಿಯಂತೆ ತೋರುವ ವ್ಯಕ್ತಿಯೊಬ್ಬ ನನ್ನಮುಂದೆ ನಿಂತು ಹೇಳಿದನು: 'ದಯವಿಟ್ಟು ಬಂದು ನಮ್ಮನ್ನು ಜೀರ್ಣೋದ್ಧಾರಮಾಡು. ಭರತ ಖಂಡದ ಋಷಿಗಳ ಬೋಧನೆಯೆ ಮೂಲವಾಗಿರುವ ಥರಾಪುಟಸ್ ಪಂಥದವರಲ್ಲಿ ನಾನು ಒಬ್ಬನು. ನಾವು ಬೋಧಿಸಿದ ಸತ್ಯ ಮಹೋದ್ದೇಶಗಳನ್ನು ಕ್ರೈಸ್ತರು ಜೀಸಸ್‌ನಿಂದ ಕಲಿತುದೆಂದು ಹೇಳಿದ್ದಾರೆ. ಈ ಸಂಗತಿಯು ಹೊರತು ಜೀಸಸ್ ಎಂಬ ಹೆಸರಿನ ಯಾವ ವ್ಯಕ್ತಿಯೂ ಎಂದೂ ಜನಿಸಿಲ್ಲ. ಈ ವಿಷಯವನ್ನು ಒರೆಹಚ್ಚಿ ನೋಡಲು ಈ ಸ್ಥಳದಲ್ಲಿ ಭೂ ಶೋಧನೆಯನ್ನು ನಡೆಸಿದರೆ ಅನೇಕ ಪ್ರಮಾಣಗಳು ಬೆಳಕಿಗೆ ಬರುವುವು'. ನಾನು 'ಯಾವ ಜಾಗವನ್ನು ಶೋಧಿಸಿದರೆ ನೀವು ಹೇಳುವ ಪ್ರಮಾಣಗಳು ಅವಶೇಷಗಳು ಸಿಗುತ್ತವೆ?' ಎಂದು ಕೇಳಿದೆ. ಆ ಪ್ರಾಚೀನ ಮುಪ್ಪಿನ ವೃದ್ಧ ಟರ್ಕಿಯ ಹತ್ತಿರದ ಒಂದು ಸ್ಥಳದ ಕಡೆ ಕೈ ತೋರಿಸುತ್ತಾ 'ಅಲ್ಲಿ ನೋಡು' ಎಂದನು. ಇದಾದ ಕೂಡಲೇ ನಾನು ನಿದ್ದೆಯಿಂದ ಎದ್ದು, ತಕ್ಷಣವೇ ಹಡಗಿನ ಮೇಲಣ ಅಂತಸ್ತಿಗೆ ಓಡಿಹೋಗಿ ಹಡಗಿನ ನಾಯಕನನ್ನು 'ಈಗ ಹಡಗು ಯಾವ ದೇಶದ ಹತ್ತಿರ ಇದೆ?' ಎಂದು ಕೇಳಿದೆ. ನಾಯಕನು 'ಅಲ್ಲಿ ನೋಡಿ, ಅದೇ ಟರ್ಕಿ ಮತ್ತು ಕ್ರೀಟ್ ದ್ವೀಪ' ಎಂದರು."

ಅದು ಕೇವಲ ಸ್ವಪ್ನವೇ ಅಥವಾ ಆ ದರ್ಶನದಲ್ಲಿ ಏನಾದರೂ ಅರ್ಥವಿದೆಯೆ? ಯಾರಿಗೆ ಗೊತ್ತು!

---

*

# ಭಾಗ ೪

## (ಸುರೇಂದ್ರನಾಥ ದಾಸಗುಪ್ತ)

೧

ಒಂದು ದಿನ ಬೇಲೂರು ಮಠಕ್ಕೆ ಸ್ವಾಮಿಜಿಯನ್ನು ನೋಡಲು ನನ್ನ ಕೆಲವು ವಿಶ್ವವಿದ್ಯಾನಿಲಯದ ಸ್ನೇಹಿತರೊಡನೆ ಹೋದೆ. ನಾವು ಅವರ ಸುತ್ತಲೂ ಕುಳಿತುಕೊಂಡೆವು. ಅನೇಕ ವಿಷಯಗಳಮೇಲೆ ಮಾತು ಕಥೆಯಾಗುತ್ತಿತ್ತು. ಯಾವ ಪ್ರಶ್ನೆಯನ್ನೇ ಆಗಲಿ ಹಾಕಿದ ಮರುಕ್ಷಣ ದಲ್ಲಿಯೇ ತೃಪ್ತಿಕರವಾದ ಉತ್ತರವನ್ನು ಸ್ವಾಮಿಜಿ ಕೊಡುತ್ತಿದ್ದರು. ಇದ್ದಕ್ಕಿದ್ದಂತೆಯೆ ಅವರು ನಮ್ಮ ಕಡೆಗೆ ಬೆರಳು ತೋರಿಸಿ "ನೀವೆಲ್ಲಾ ಅನೇಕ ಬಗೆಯ ಐರೋಪ್ಯ ತತ್ತ್ವಶಾಸ್ತ್ರ, ಕಲೆ ವಿಜ್ಞಾನ ಮುಂತಾದುವನ್ನು ವ್ಯಾಸಂಗ ಮಾಡುತ್ತಿದ್ದೀರಿ. ವಿವಿಧ ಜನಾಂಗಗಳು ದೇಶಗಳ ವಿಷಯವಾಗಿ ಹೊಸ ಹೊಸ ವಿಚಾರಗಳನ್ನು ಕಲಿಯುತ್ತಿದ್ದೀರಿ. ಜೀವನದಲ್ಲಿ ಶ್ರೇಷ್ಠತಮ ಸತ್ಯ ಯಾವುದು ಹೇಳಬಲ್ಲಿರಾ?" ಎಂದು ಕೇಳಿದರು.

ನಾವೆಲ್ಲಾ ಯೋಚಿಸಲಾರಂಭಿಸಿದೆವು. ಅವರು ನಮ್ಮಿಂದ ಏನು ಉತ್ತರವನ್ನು ಅಪೇಕ್ಷಿಸುತ್ತಿರುವರೆಂದು ಗೊತ್ತುಹಿಡಿಯಲಾರದೆ ಹೋದೆವು. ಯಾರಿಂದಲೂ ಉತ್ತರಬಾರದಿರಲು ಅವರು ತಮ್ಮ ಸ್ಫೂರ್ತಿಯುತವಾದ ಭಾಷೆಯಲ್ಲಿ ಹೀಗೆ ಹೇಳಿದರು.

"ಇಲ್ಲಿ ನೋಡಿ–ನಾವೆಲ್ಲಾ ಸಾಯುತ್ತೇವೆ! ಈ ಸತ್ಯವನ್ನು ಯಾವಾಗಲೂ ಮನಸ್ಸಿನಲ್ಲಿಡಿ. ಆಗ ಅಂತರಾತ್ಮ ಜಾಗ್ರತನಾಗುವನು. ಆಗ ಮಾತ್ರ ನಿಮ್ಮಿಂದ ಕ್ಷುದ್ರತನ ಮಾಯವಾಗುವುದು. ಕಾರ್ಯೋನ್ಮುಖ ರಾಗುವಿರಿ. ನಿಮ್ಮ ಮನಸ್ಸು ಮತ್ತು ದೇಹದಲ್ಲಿ ನವಚೈತನ್ಯ ಮೂಡುವುದು. ಮತ್ತು ಯಾರು ನಿಮ್ಮ ಸಂಪರ್ಕಮಾಡುವರೊ ಅವರಿಗೂ ಕೂಡ ನಿಮ್ಮೊಡನಿರುವಾಗ ಏನೋ ಒಂದು ಬಗೆಯ ಆತ್ಮೋನ್ನತಿಯನ್ನು ಪಡೆದಂತೆ ಭಾಸವಾಗುವುದು."

ನಂತರ ನನಗೂ ಸ್ವಾಮಿಜಿಗೂ ಕೆಳಗೆ ಕಂಡಂತೆ ಸಂಭಾಷಣೆ ಜರುಗಿತು.

ನಾನು:—ಆದರೆ, ಸ್ವಾಮಿಜಿ ಸಾವಿನ ಯೋಚನೆ ಬಂದ ಕೂಡಲೇ

ನಮ್ಮ ಉತ್ಸಾಹವೆಲ್ಲಾ ಕುಗ್ಗಿ ನಿರಾಶೆಯಿಂದ ಎದೆಗುಂದುವುದಿಲ್ಲವೆ?

ಸ್ವಾಮಿಜಿ:—ಅದೇನೋ ನಿಜ. ಮೊದಲು ಎದೆಯೊಡೆದಂತಾಗಿ ನಿರಾಶೆ ಮತ್ತು ಗ್ಲಾನಿಕರವಾದ ಆಲೋಚನೆಗಳು ಮನಸ್ಸಿಗೆ ಬರುವುವು. ಆದರೆ ದೃಢವಾಗಿ ನಿಲ್ಲು—ದಿನಗಳು ಅಂತೆಯೇ ಕಳೆಯಲಿ—ನಂತರ? ನಿನ್ನ ಹೃದಯಕ್ಕೆ ನವಶಕ್ತಿ ಬಂದಿದೆ, ಮೃತ್ಯುವಿನ ನಿರಂತರ ಚಿಂತನೆ ನಿನಗೆ ಹೊಸದೊಂದು ಜೀವನವನ್ನೇ ಕೊಡುತ್ತಿದೆ, ಪ್ರತಿಕ್ಷಣದಲ್ಲಿಯೂ ನಿನ್ನ ಮನಶ್ಚಕ್ಷುವಿನ ಮುಂದೆ ಎಲ್ಲಿ ಅಚಿರ, ನೀರಗುಳ್ಳೆಯಂತೆ ನಿಸ್ಸಾರ ಮಾನವನ ವೈಭವ ಎಂಬ ಸತ್ಯ ನಿನ್ನನ್ನು ಹೆಚ್ಚು ಹೆಚ್ಚಾಗಿ ಆಲೋಚನಾ ಮಗ್ನನಾಗುವಂತೆ ಮಾಡುತ್ತಿದೆ. ಎಂದು ನಿನಗೇ ತಿಳಿಯುವುದು. ಕೊಂಚ ತಾಳು! ದಿನಗಳು ತಿಂಗಳು ವರುಷಗಳು ಉರುಳಿಹೋಗಲಿ ನಿನ್ನ ಅಂತಃಸ್ಫೂರ್ತಿ ಸಿಂಹಸದೃಶ ಶಕ್ತಿಯಿಂದ ಜಾಗೃತಿಗೊಂಡಿರುವುದು, ಮತ್ತು ನಿನ್ನ ಅಂತರಂಗಶಕ್ತಿ ಒಂದು ಮಹತ್ತಾದ ಶಕ್ತಿಯಾಗಿ ಮಾರ್ಪಟ್ಟಿರುವುದು. ನಿನಗೇ ಅರಿವಾಗುವುದು! ನಿರಂತರ ಮೃತ್ಯು ಚಿಂತನೆ ಮಾಡು, ಆಗ ನಾನು ಹೇಳುವ ಪ್ರತಿಯೊಂದು ಮಾತಿನ ಸತ್ಯವನ್ನೂ ಅರಿಯುವೆ. ಇನ್ನು ಮಾತಿನ ಮೂಲಕ ನಾನು ಹೆಚ್ಚೇನನ್ನು ಹೇಳಲಿ!

ನನ್ನ ಸ್ನೇಹಿತರಲ್ಲೊಬ್ಬರು ಸ್ವಾಮಿಜಿಯನ್ನು ಮೆತ್ತಗೆ ಹೊಗಳುತ್ತಿದ್ದರು.

ಸ್ವಾಮಿಜಿ:—ನನ್ನನ್ನು ಹೊಗಳಬೇಡಿ. ನಮ್ಮ ಜಗತ್ತಿನಲ್ಲಿ ಹೊಗಳಿಕೆ ತೆಗಳಿಕೆಗೆ ಯಾವ ಬೆಲೆಯೂ ಇಲ್ಲ. ಅವು ಮನುಷ್ಯನನ್ನು ಉಯ್ಯಾಲೆಯಂತೆ ತೂಗಿಸುವುವು. ನನಗೆ ಸಾಕಾದಷ್ಟು ಹೊಗಳಿಕೆ ಬಂದಿದೆ. ದೋಷಾರೋಪಣೆಗಳ ಸುರಿಮಳೆಯನ್ನೂ ನಾನು ಸಹಿಸಿಕೊಳ್ಳಬೇಕಾಯಿತು. ಆದರೆ ಅವುಗಳನ್ನು ಕುರಿತು ಯೋಚಿಸುತ್ತಾ ಹೋದರೆ ಏನು ಬಂದ ಹಾಗಾಯಿತು! ಪ್ರತಿಯೊಬ್ಬರೂ ನಿರಾತಂಕವಾಗಿ ತಮ್ಮ ಕರ್ತವ್ಯಗಳನ್ನು ಮಾಡುತ್ತಾ ಹೋಗಿ. ಕಡೆಯಗಳಿಗೆ ಬಂದಾಗ ನಿನಗಾಗಲಿ ನನಗಾಗಲಿ, ಮತ್ತಾರಿಗೇ ಆಗಲಿ ಎಲ್ಲರಿಗೂ ಹೊಗಳಿಕೆ ತೆಗಳಿಕೆಗಳೆರಡೂ ಒಂದೆ. ನಾವು ಕೆಲಸಮಾಡಲು ಇಲ್ಲಿದ್ದೇವೆ. ಕರೆಬಂದಾಗ ಎಲ್ಲವನ್ನೂ ಬಿಟ್ಟು ಹೊರಡಬೇಕು.

ನಾನು:—ನಾವೆಷ್ಟು ಅಲ್ಪರು, ಸ್ವಾಮಿಜಿ!

ಸ್ವಾಮಿಜಿ:—ನಿಜ! ನೀನು ಸರಿಯಾಗಿ ಹೇಳಿದೆ! ಲಕ್ಷಾಂತರ

ಸೂರ್ಯ ಮತ್ತು ಸೌರವ್ಯೂಹಗಳನ್ನೊಳಗೊಂಡ ಈ ಅಪಾರ ಭೂಮಂಡಲವನ್ನು ಕುರಿತು ಯೋಚಿಸು. ಇವೆಲ್ಲಾ ಯಾವ ಅನಂತ ಅಪರಿಮಿತವಾದ ಶಕ್ತಿಯಿಂದ ಪ್ರಚೋದಿತವಾಗಿ ಆ ಏಕಮಾತ್ರ ಅಗೋಚರನ ಪಾದಗಳನ್ನು ಸ್ಪರ್ಶಿಸಲೋಸುಗ ಓಡುತ್ತಿವೆ ಎಂಬುದನ್ನು ಯೋಚಿಸು. ಮತ್ತೆ ನಾವೆಷ್ಟು ಕ್ಷುದ್ರರು! ದೂಷಣೆ, ತುಚ್ಛತನದ ಲೋಲುಪ್ತಿಯಲ್ಲಿ ಮಗ್ನರಾಗಲು ಸ್ಥಳವೆಲ್ಲಿದೆ? ಪರಸ್ಪರ ಹಗೆತನ ಪ್ರತ್ಯೇಕ ಮನೋಭಾವನೆಯನ್ನು ಬೆಳೆಸಿದರೆ ನಮಗಾಗುವ ಲಾಭವೇನು? ನನ್ನ ಬುದ್ಧಿವಾದವನ್ನು ಕೇಳಿ: ನೀವು ಪ್ರೌಢ ಶಿಕ್ಷಣದಿಂದ ಬಂದ ಮೇಲೆ ಇತರರ ಸೇವೆಗಾಗಿ ನಿಮ್ಮ ಬಾಳನ್ನು ಮೀಸಲಾಗಿಡಿ. ನನ್ನ ಮಾತನ್ನು ನಂಬಿ. ಹಣದಿಂದ ಅಮೂಲ್ಯ ವಸ್ತುಗಳಿಂದ ತುಂಬಿದ ಇಡೀ ಬೊಕ್ಕಸ ನಿಮ್ಮ ಅಧೀನದಲ್ಲಿದ್ದಾಗ ಆಗುವ ಹರ್ಷಕ್ಕಿಂತಲೂ ಅಪಾರವಾದ ಹರ್ಷ ನಿಮಗೆ ಇದರಿಂದ ಉಂಟಾಗುವುದು. ಇತರರನ್ನು ನೀವು ಸೇವಿಸುತ್ತಾ ಹೋದ ಹಾಗೆಲ್ಲಾ ಜ್ಞಾನದ ಹಾದಿಯಲ್ಲೂ ಅಷ್ಟೇ ಮುಂದುವರಿಯುವಿರಿ.

ನಾನು :—ನಾವು ತುಂಬಾ ಬಡವರು ಸ್ವಾಮಿಜಿ!

ಸ್ವಾಮಿಜಿ:—ನಿನ್ನ ಬಡತನದ ಆಲೋಚನೆಗಳನ್ನು ಒಂದು ಕಡೆ ಕಟ್ಟಿಡು. ಯಾವ ಭಾಗದಲ್ಲಿ ನೀನು ಬಡವ! ನಿನ್ನ ಹತ್ತಿರ ಒಂದು ಜೊತೆ ಕೋಚುಬಂಡಿಯಿಲ್ಲ ಸೇವಕರ ತಂಡವಿಲ್ಲ ಎಂದೆ? ಅದರಿಂದೇನು? ನಿನ್ನ ಎದೆರಕ್ತವನ್ನು ಬಸಿದು ಹಗಲೂ ರಾತ್ರಿ ಇತರರ ಸೇವೆಗಾಗಿ ದುಡಿದರೆ ಈ ಜೀವನದಲ್ಲಿ ನಿನಗೆ ಅಸಾಧ್ಯವಾದುದು ಯಾವುದೂ ಇಲ್ಲವೆಂಬುದನ್ನು ನೀನು ಕೊಂಚವೂ ಅರಿಯೆ! ಅಗೊ! ಅಲ್ಲಿ ನೋಡು! ಪವಿತ್ರ ಜೀವನದಿಯು ಮತ್ತೊಂದು ದಡ ನಿನ್ನ ಕಣ್ಣೆದುರಿಗೇ ಪ್ರತ್ಯಕ್ಷವಾಗಿದೆ–ಮೃತ್ಯುವಿನ ತೆರೆ ಮಾಯವಾಗಿದೆ! ಅಮೃತತ್ವದ ಅದ್ಭುತರಾಜ್ಯದ ಉತ್ತರಾಧಿಕಾರಿಗಳು ನೀವು!

ನಾನು :—ಓ! ಸ್ವಾಮಿಜಿ ನಿಮ್ಮ ಮುಂದೆ ಕುಳಿತು ನಿಮ್ಮ ಸ್ಫೂರ್ತಿದಾಯಕ ನುಡಿಗಳನ್ನು ಕೇಳುತ್ತಾ ನಾವೆಷ್ಟು ಆನಂದಿಸುತ್ತಿದ್ದೇವೆ!

ಸ್ವಾಮಿಜಿ:—ನೋಡಿ, ಭರತಖಂಡದಲ್ಲೆಲ್ಲ ಇಷ್ಟು ವರ್ಷಗಳು ನಾನು ಪ್ರಯಾಣಮಾಡಿದಾಗ ಅನೇಕ ಮಹಾತ್ಮರನ್ನು ಸಂದರ್ಶಿಸಿದೆ. ಅವರ ಹೃದಯದಲ್ಲಿ ಪ್ರೇಮ ತುಂಬಿ ತುಳುಕುತ್ತಿತ್ತು. ಅವರ ಪಾದದಡಿ ಕುಳಿತಾಗ ಒಂದು ಮಹಾ ಶಕ್ತಿಯ ಪ್ರವಾಹ ನನ್ನ ಹೃದಯದಲ್ಲಿ

ಸಂಚರಿಸಿದಂತೆ ಭಾಸವಾಗುತ್ತಿತ್ತು. ಅವರ ಸಂಪರ್ಕದಿಂದುದ್ಭವಿಸಿದ ಆ ಪ್ರವಾಹದ ಶಕ್ತಿಯಿಂದ ಮಾತ್ರ ನಾನು ನಿಮಗೆ ನಾಲ್ಕು ಮಾತುಗಳನ್ನು ಹೇಳಿದೆ. ನಾನೇನೋ ಒಬ್ಬ ಮಹಾತ್ಮನೆಂದು ತಿಳಿಯಬೇಡಿ!

ನಾನು :—ಆದರೆ, ಸ್ವಾಮಿಜಿ, ನೀವು ಭಗವತ್ಸಾಕ್ಷಾತ್ಕಾರ ಪಡೆದವರೆಂದು ನಾವೆಲ್ಲಾ ಭಾವಿಸುತ್ತೇವೆ.

ನಾನೀ ಮಾತನ್ನು ಹೇಳಿದ ತಕ್ಷಣವೆ ಸ್ವಾಮಿಜಿ ಮೋಹಮುಗ್ಧಕರ ಕಣ್ಣುಗಳು ಅಶ್ರುಜಲದಿಂದ ತುಂಬಿದವು (ಓ! ಈಗಲೂ ಆ ನೋಟ ಅಚ್ಚಳಿಯದೆ ನನ್ನ ಕಣ್ಣಿಗೆ ಕಟ್ಟಿದಂತಿದೆ). ಪ್ರೇಮದಿಂದ ತುಂಬಿತುಳುಕುತ್ತಿದ್ದ ಹೃದಯದಿಂದ ಸ್ವಾಮಿಜಿ ಮೃದುವಾಗಿ ದಯಾಪೂರಿತ ಧ್ವನಿಯಲ್ಲಿ "ಜ್ಞಾನಿಗಳು ಅರಸುವ ಆ ಜ್ಞಾನದ ಪರಿಪೂರ್ಣತೆ ಆ ಪವಿತ್ರ ಪಾದಗಳಲ್ಲಿದೆ! ಪ್ರೇಮಿಗಳು ಅರಸುವ ಪ್ರೇಮದ ಪೂರ್ಣತೆಯೂ ಆ ಪವಿತ್ರ ಪಾದಗಳಲ್ಲಿದೆ! ಓ! ಹೇಳು, ಸ್ತ್ರೀಪುರುಷರು ಆ ಪವಿತ್ರಪಾದಗಳನ್ನು ಶರಣು ಹೋಗುವರಲ್ಲದೆ ಮತ್ತೆಲ್ಲಿ ಹೋಗುವರು!" ಕೊಂಚ ಹೊತ್ತಿನ ತರುವಾಯ "ಅಯ್ಯೋ! ಪ್ರಪಂಚದಲ್ಲಿ ಜನರು ಈಗ ಮಾಡುತ್ತಿರುವಂತೆ ಹೋರಾಡುತ್ತಾ ಕಾದಾಡುತ್ತಾ ದಿನಗಳನ್ನು ಕಳೆಯುತ್ತಿರುವುದು ಎಂತಹ ತಿಳಿಗೇಡಿತನ! ಆದರೆ ಎಷ್ಟುಕಾಲ ಅವರು ಹೀಗೆ ಇರಬಲ್ಲರು? ಜೀವನದ ಸಂಧ್ಯೆಯಲ್ಲಿ ಎಲ್ಲರೂ ಮನೆಗೆ, ಜಗನ್ಮಾತೆಯ ತೋಳ್ಗಳಿಗೇ ಬರುವರು" ಎಂದರು.



ಬೆಂಗಳೂರು ಪ್ರೆಸ್ ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು.